ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೩೭

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಭವಿಷ್ಯಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

## ಭಾಗ—೩

## ಬ್ರಾಹ್ಮಪರ್ವ—ತೃತೀಯ ಸಂಪುಟ



ಅನುವಾದಕ

ಆಸ್ಥಾನ ವಿದ್ವಾನ್ ಬಿ. ಚನ್ನಕೇಶವಯ್ಯ

ಗೌರ್ನಮೆಂಟ್ ಟ್ರೈನಿಂಗ್ ಕಾಲೇಜ್ ಪಂಡಿತ, ಮೈಸೂರು.



ಮೈಸೂರು

ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್,

೧೯೪೭

॥ ಶ್ರೀ ಗಣೇಶ ಶಾರದಾಗುರುಭ್ಯೋನಮಃ ॥

# ಮುನ್ನುಡಿ

---

ಸ್ವಯಂಪ್ರಕಾಶಕವಾದ ಪರಬ್ರಹ್ಮವಸ್ತುವನ್ನು ಯಾವಹೆಸರಿನಿಂದ ಕರೆಯುಬೇಕೆಂಬುದೂ ಒಂದು ಚರ್ಚಾವಿಷಯವೇ. ಯಾವ ಹೆಸರಿನಿಂದ ಕರೆದರೂ ತಪ್ಪಲ್ಲವೆಂಬುದು ನಿರ್ಧಾರಿತಾಂಶ. ಇದನ್ನೇ ಸಿದ್ಧಾಂತವಾಗಿಟ್ಟುಕೊಂಡು ಅನೇಕ ಪುರಾಣಕಾರರು ತಮಗೆ ತೋರಿದ ಒಂದೊಂದು ಹೆಸರಿನಿಂದ ಎಂದರೆ ಶಿವ, ವಿಷ್ಣು, ಸೂರ್ಯ, ದುರ್ಗಾ, ಮೊದಲಾದ ನಾಮಾಂತರಗಳಿಂದ, ಮೂಲವಸ್ತುವೆನಿಸಿದ ತೇಜೋಮೂರ್ತಿಯನ್ನು ವರ್ಣಿಸಿದರು. ಒಂದೊಂದು ಹೆಸರಿನ ದೇವತಾಉಪಾಸಕರು ಆಯಾದೇವರ ಭಕ್ತರೆಂದೇ ಪ್ರಸಿದ್ಧಿಗೆ ಬಂದರು. ಈ ಸಂದರ್ಭದಲ್ಲಿ ತೋರುವುದೇನೆಂದರೆ: "ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ" ಎಂಬ ಶ್ರುತಿ ವಾಕ್ಯದಂತೆ ಸಕಲ ಜಗತ್ತಿಗೂ ಆತ್ಮಸ್ವರೂಪದಿಂದಿದ್ದು, ಸೃಷ್ಟಿಸ್ಥಿತಿಲಯಾದಿಗಳಿಂದ ಲೋಕವನ್ನೇ ನಡೆಯಿಸುತ್ತಾ, ಚಲನವಲನಾದಿಗಳಿಂದ, ಪ್ರತ್ಯಕ್ಷದೈವವೆನಿಸಿದ ಸೂರ್ಯಪರಮಾತ್ಮನೇ ಜಗತ್ತಿಗೆ ಉಪಾಸ್ಯದೇವತೆಯಾಗಲಿ; "ಸಕಲಸದ್ಗುಣಭರಿತನಾಗಿ ಸರ್ವಾಂತರ್ಯಾಮಿಯಾಗಿರುವ ದೇವರು ಪರೋಕ್ಷದಲ್ಲಿರುವನು" ಎಂದು ಹೇಳುವುದಕ್ಕಿಂತ, "ಇಷ್ಟಾರ್ಥಪ್ರದನೂ ಸ್ವಯಂ ತೇಜೋರೂಪಿಯೂ ಆದ ಸೂರ್ಯನಾರಾಯಣನೇ ಪರಬ್ರಹ್ಮವಸ್ತು; ಆ ದೇವನು ಪ್ರತ್ಯಕ್ಷನಾಗಿಯೇ ತೋರುತ್ತಿರುವನು" ಎಂದು ನಿರೂಪಿಸುವುದು ಸುಲಭವೆನಿಸುವುದು. ಪ್ರತ್ಯಕ್ಷವಾಗಿ ಗೋಚರವಾಗುವ ದೇವತಾ ಸ್ವರೂಪವನ್ನು ಮರೆತು ಪರೋಕ್ಷವಸ್ತುವಿನ ಸ್ಥಿತಿಯನ್ನು ಸಾಧಿಸಲು ಹೊರಡುವುದು ಶ್ರಮವಾದೀತು, ಎಂಬ ಜ್ಞಾನವೊಂದು ಆಪಾತತಃ ತೋರಿಬರುವುದು. ಅದೇರೀತಿ ಇನ್ನೂ ಅನೇಕ ನಿದರ್ಶನಾದಿಗಳಿಂದ ಈ ಪುರಾಣಕಾರರು ಸೂರ್ಯಮಂಡಲಾಂತರ್ವರ್ತಿಯಾಗಿರುವ ಪರಬ್ರಹ್ಮವಸ್ತುವಿಗೆ ಉಪಾಸ್ಯತ್ವವನ್ನೂ, ತನ್ಮೂಲಕ ಐಹಿಕಾಮುಷ್ಮಿಕ ಫಲಪ್ರಾಪ್ತಿಗಳನ್ನೂ, ಈ ಭಾಗದಲ್ಲಿ ಕಲ್ಪಿಸಿ ಅನೇಕ ಸೌರವ್ರತಗಳನ್ನೂ ಉಪಾಸನಾಭೇದಗಳನ್ನೂ, ಉಪಾಸನಾಭೇದದಿಂದ ದೊರಕುವ ಫಲಗಳ ತಾರತಮ್ಯ

ವನ್ನೂ, ಜಹುವಾಗಿ ವಿವರಿಸಿರುವರು. ಸತ್ರಾಜಿತ, ಸಾಂಬ, ಮುಂತಾದ ಸೂರ್ಯ ಭಕ್ತರು, ತಮ್ಮ ಜೀವಿತಕಾಲದಲ್ಲಿ ಸೂರ್ಯೋಪಾಸನೆಯಿಂದ ಹೊಂದಿದ ಅತಿಶಯ ಫಲಗಳನ್ನು ಇಲ್ಲಿ ವಿಶದಪಡಿಸುತ್ತಾ ತ್ರಿಮೂರ್ತ್ಯಾತ್ಮಕನೆನಿಸಿ ಸೃಷ್ಟಿಸ್ಥಿತಿಲಯಾದಿ ಗಳಿಂದ ಜಗತ್ತನ್ನು ಜೆಳೆಯಿಸುವವನೇ ಪ್ರತ್ಯಕ್ಷದೈವವೆನಿಸಿದ ಈ ಸೂರ್ಯನಾರಾಯಣನು, ಎಂಬುವನ್ನು ವಿಶದಪಡಿಸಿರುವರು. "ಆರೋಗ್ಯಂ ಭಾಸ್ಕರಾದಿಚ್ಛೇತ್" ಇತ್ಯಾದಿ ಫಲಶ್ರುತಿಗಳನ್ನು ನಂಬಿ, ಅದರಂತೆ ಕಾಮನಾಭೇದದಿಂದ ಸೂರ್ಯಾರಾಧನೆ ಮಾಡುವ ಭಕ್ತರಿಗೆ ಈಭಾಗವು ಅನೇಕವಿಷಯಗಳನ್ನು ಒದಗಿಸಿ ಕೊಡುವುದಲ್ಲದೆ ಸೂರ್ಯೋ ಪಾಸನಾಮಾರ್ಗವನ್ನೇ ಸರಿಪಡಿಸಿಕೊಡುವುದು.

ಜ್ಯೋತಿಸ್ಸ್ವರೂಪವಾದ ಸೂರ್ಯಮಂಡಲವೇ ಸಕಲ ಗ್ರಹನಕ್ಷತ್ರಗಳಿಗೂ, ಚತು ರ್ದಶಲೋಕಗಳಿಗೂ, ಅಹೋರಾತ್ರಿ ಮುಂತಾದ ಕಾಲನಿಯಮಗಳಿಂದ ಸ್ಫುರಿಸುತ್ತಾ, ಅಗ್ನಿಷ್ಟೋಮವೇ ಮೊದಲಾದ ಸಕಲ ವೇದೋಕ್ತಕರ್ಮಗಳಿಗೂ ಮುಖ್ಯಾಧಾರ ವಾಗಿದೆ, ಎಂಬುದನ್ನು ಖಗೋಳಶಾಸ್ತ್ರಜ್ಞರೂ ಮೀಮಾಂಸಕರೂ ನಿರ್ಧರಪಡಿಸಿರು ವಂತೆಯೇ, ಈ ಪುರಾಣಭಾಗದಲ್ಲಿ ಎಲ್ಲಾ ವಾರ, ತಿಥಿ, ನಕ್ಷತ್ರಗಳಲ್ಲಿಯೂ ಈ ಮಹಾನುಭಾವನು ಬೇರೆಬೇರೆ ಆಕಾರಗಳಿಂದ, ಬೇರೆಬೇರೆ ಶಕ್ತಿಯಿಂದ, ಇದ್ದು ಭಕ್ತರ ಇಷ್ಟಾರ್ಥಗಳನ್ನು ಒದಗಿಸುವನೆಂಬ ಅಂಶವನ್ನು ಸಂಪೂರ್ಣವಾಗಿ ಸಾಧಿಸಿರುವರು. ಆದುದರಿಂದ ಕರ್ಮಮಾರ್ಗಾನುಯಾಯಿಗಳೆನಿಸಿ ತನ್ಮೂಲಕ ಚಿತ್ತಶುದ್ಧಿಯನ್ನು ಪಡೆಯಲು ಇಚ್ಛಿಸುವ ಸಕಲ ಆಸ್ತಿಕಮಹಾಶಯರಿಗೂ, ಈ ಭಾಗವು ಅತ್ಯುಪಯುಕ್ತ ವಾದುದೆಂಬುವನ್ನು ಒತ್ತಿ ಒತ್ತಿ ಹೇಳಬೇಕೆನಿಸುವುದು. ಷಣ್ಮತಗಳಲ್ಲಿ ಒಂದು ಎನಿಸಿ ಅನೇಕ ಜನಾಂಗಗಳನ್ನೊಳಗೊಂಡ ಸೌರಮತದ ಉನ್ನತಿಯಕಾಲದಲ್ಲಿ, ಇಲ್ಲಿ ನಿರೂ ಪಿತಗಳಾಗಿರುವ ಅನೇಕ ವ್ರತನಿಯಮಗಳು ಹೇರಳವಾಗಿ ರೂಢಿಯಲ್ಲಿದ್ದುವೆಂದು ಹೇಳಬಹುದು. ಕಾಲಕ್ರಮದಲ್ಲಿ ತತ್ತ್ವಮಾರ್ಗದ ಬೆಳೆವಣಿಗೆಯಿಂದ, ಆ ಷಣ್ಮತ ಸಂಪ್ರದಾಯಗಳು ಏಕೀಭವಿಸಿ, ಒಂದು ಆಕಾರವನ್ನು ಪಡೆದಂತೆ ಈ ಸೂರ್ಯಾರಾಧನ ಕ್ರಮಗಳೂ ಈಗ ನಮ್ಮ ನಿತ್ಯಕರ್ಮಗಳಲ್ಲಿ ಅಲ್ಪಸ್ವಲ್ಪ ಅಡಕವಾಗಿವೆಯೇ ಹೊರತು ಈ ಭಾಗದಲ್ಲಿ ಹೇಳಿರುವಷ್ಟು ಕ್ರಮಬದ್ಧವಾಗಿಲ್ಲ ಎಂದು, ಐತಿಹಾಸಿಕದೃಷ್ಟಿಯಿಂದ ಹೇಳಬಹುದಾಗಿದೆ.

ಪ್ರಜೆಗಳ ಜ್ಞಾನಭಂಡಾರವನ್ನು ಅಭಿವೃದ್ಧಿಗೊಳಿಸುವ ಮಹೋದ್ದೇಶದಿಂದ **ಇಂತಹ** ಅಮೂಲ್ಯಗ್ರಂಥರತ್ನದ ಪ್ರಕಾಶಕ್ಕೆ ಅವಕಾಶವಿತ್ತ ನಮ್ಮ ಶ್ರೀಮನ್ಮಹಾರಾಜರು **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ.,** ಮಹಾಪ್ರಭುಗಳವರಿಗೂ ಅವರ ಕುಟುಂಬವರ್ಗಕ್ಕೂ ರಾಜವಂಶಾಬುಂಧಿಯಲ್ಲಿ ದಿವ್ಯಮಣಿಯಂತೆ ಆವಿರ್ಭವಿಸಿರುವ **ರಾಜಕುಮಾರೀ ಶ್ರೀ ಗಾಯತ್ರೀ ದೇವಿಯವರಿಗೂ** ಶ್ರೀ ಸೂರ್ಯನಾರಾಯಣನು ದೀರ್ಘಾಯುಸ್ಸನ್ನೂ **ಸಕಲ** ಸನ್ಮಂಗಳಗಳನ್ನೂ ದಯಪಾಲಿಸಿ ಸರ್ವದಾ ಸಲಹುತ್ತಿರಲೆಂದು ಪ್ರಾರ್ಥಿಸುತ್ತೇನೆ.

ಸಜ್ಜನ ವಿಧೇಯ,
**ಬಿ. ಚನ್ನಕೇಶವಯ್ಯ,**
ಆಸ್ಥಾನ ವಿದ್ವಾನ್,
ಗಾ॥ ಟ್ರೈನಿಂಗ್ ಕಾಲೇಜ್ ಪಂಡಿತ.

ವ್ಯಯನಾಮಸಂವತ್ಸರದ
ಮಾಘ ಶುಕ್ಲ ಸಪ್ತಮೀ ಬುಧವಾರ.



## ಶ್ರೀ ಭವಿಷ್ಯಮಹಾಪುರಾಣ ಬ್ರಾಹ್ಮಪರ್ವದ ತೃತೀಯ ಸಂಪುಟದಲ್ಲಿನ

# ವಿಷಯಾನುಕ್ರಮಣಿಕೆ.

---

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

**ನೂರನಲವತ್ತಾರನೆಯ ಅಧ್ಯಾಯ—**

**ಭೋಜ್ಯಾನ್ನ ಅಭೋಜ್ಯಾನ್ನ ವಿಚಾರ.**

(ದಿವ್ಯಸಂಜ್ಞಕರುಪಾಂಕ್ತೇಯರೂ ಮಿಕ್ಕವರು ಅಪಾಂಕ್ತೇಯರೂ ಆಗಲು ಕಾರಣವನ್ನು ಪ್ರಶ್ನಿಸಿದುದಕ್ಕೆ ವಿಚಾರದಲ್ಲಿ ನಡೆದ ಕೃಷ್ಣ ಕೃತವರ್ಮರ ಸಂವಾದ ನಿರೂಪಣದ ಮೂಲಕ ತಿಳಿಸಿದುದು, ಅವ್ಯಂಗರಹಿತತೆ, ದೇವಾರ್ಚನರಹಿತತೆ, ಶೂದ್ರಾನ್ನ ಜೀವನ, ಸಂಸ್ಕಾರಹೀನತೆ, ಜಪಭ್ರಷ್ಟತೆ, ಶಂಖವಿಹೀನತೆ, ಕೇಶಧಾರಿ, ಇಂಥ ಪ್ರಕಾರದವರು ಅಧಮರು, ಸರಿಯಾದ ಭೋಜಕರು ಶ್ರೇಷ್ಠರು. ತೀರ್ಥಪ್ರಸಾದ ವಿಕ್ರಯಮಾಡುವುದು. ನಿವೇದನಕ್ಕೆ ಮುಂಚೆ ಭಕ್ಷಣೆಮಾಡುವುದು. ಇವುಗಳ ಪಾಪ ನೈವೇದ್ಯ ಸೇವನೆ ಯ ಪರಿಶುದ್ಧತೆ.) ೬೨೮—೬೩೪

**ನೂರನಲವತ್ತೇಳನೆಯ ಅಧ್ಯಾಯ—**

**ಸೂರ್ಯಪ್ರಿಯರಾದ ಭೋಜಕಲಕ್ಷಣ.**

(ಅವರು ವರ್ಜ್ಯಮಾಡಬೇಕಾದ ಕಾರ್ಯ. ಅವರು ಆಚರಿಸಬೇಕಾದ ಕರ್ತವ್ಯ. ಎಂಥ ನಡವಳಿಕೆಯವರು ಸೂರ್ಯನಿಗೆ ಅಪ್ರಿಯರು ಎಂಬ ವಿಚಾರ, ಉತ್ತಮ ಭೋಜಕನ ಶ್ರೇಷ್ಠತೆ ೬೩೫—೬೪೩



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಏಕೋನಸಪ್ತತಿತಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

**ಸಪ್ತಮ್ಯಾ ಮುಷಿತೋ ವಿಪ್ರಃ ಸ್ವಪ್ನದರ್ಶನಮುಚ್ಯತೇ ।**
**ಸ್ವಪ್ನೇ ದೃಷ್ಟೇ ಚ ಸಪ್ತಮ್ಯಾಂ ಪುರುಷೋ ನಿಯತವ್ರತಃ ॥ ೧ ॥**

**ಸಮಾಪ್ಯ ವಿಧಿವತ್ಸರ್ವಂ ಜಪಹೋಮಾದಿಕಂ ಕ್ರಮಾತ್ ।**
**ಪೂಜಯಿತ್ವಾ ದಿನೇಶಂ ತು ಯಥಾವಿಭವಮಾತ್ಮನಃ ॥ ೨ ॥**

**ತತಃ ಶಯೀತ ಶಯನೇ ದೇವದೇವಂ ವಿಚಿಂತಯನ್ ।**
**ಸಂಪ್ರಸುಪ್ತೋ ಯದಾ ಪಶ್ಯೇದುದಯಂತಂ ದಿವಾಕರಂ ॥ ೩ ॥**

---

### ಅರವತ್ತೊಂಭತ್ತನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಸಪ್ತಮಿಯಲ್ಲಿ ಬ್ರಾಹ್ಮಣನು ಉಪವಾಸಮಾಡಿ ಸ್ವಪ್ನ ಕಾಣುವುದರ ಫಲವನ್ನು ಹೇಳುವೆನು. ಸಪ್ತಮಿಯಲ್ಲಿ ಪುರುಷನು ಕ್ಲುಪ್ತವಾದ ನಿಯಮಯುಕ್ತನಾಗಿ ನಡೆದುಕೊಳ್ಳಬೇಕು.

೨. ವಿಧಿಯಂತೆ ಕ್ರಮವಾಗಿ ಜಪಹೋಮಾದಿಗಳನ್ನು ಮುಗಿಸಿಕೊಂಡು ತನಗೆ ಸಾಮರ್ಥ್ಯವಿದ್ದ ಮಟ್ಟಿಗೆ ವೈಭವದಿಂದ ವಿಧಿಪ್ರಕಾರವಾಗಿ ಸೂರ್ಯನನ್ನು ಪೂಜೆ ಮಾಡಬೇಕು.

೩. ಹೀಗೆ ಪೂಜಿಸಿ ಪ್ರಸಾದಸೇವನೆಮಾಡಿ ಅನಂತರ ಸೂರ್ಯನನ್ನೇ ಧ್ಯಾನ ಮಾಡುತ್ತಾ ಹಾಸಿಗೆಯಲ್ಲಿ ಮಲಗಬೇಕು. ಸ್ವಪ್ನದಲ್ಲಿ ಸೂರ್ಯನು ಉದಯಿಸುತ್ತಿರು

ಶಕ್ರಧ್ವಜಂ ತಥಾ ಚಂದ್ರಂ ತಸ್ಯ ಸರ್ವಾಃ ಸಮೃದ್ಧಯಃ ।
ದೃಶ್ಯಂಜನಂ ತಥಾ ಶಕ್ತಿ ಸ್ರಗ್ವಿಗೋವೇಣು ನಿಸ್ವನಾನ್ ॥ ೪ ॥

ಶ್ವೇತಾಬ್ಜ ಚಾಮರಾದರ್ಶ ಕನಕಾಸಿಸುತೋದ್ಭವಂ ॥ ೫ ॥

ರುಧಿರಸ್ಯ ಸ್ರುತಿಂ ಸೇಕಂ ಪಾನಂ ಚೈಶ್ವರ್ಯಕಾರಕಂ ।
ಶ್ವೇತಾಯಾಃ ಪಂಚಪೂತಾಯಾ ದರ್ಶನಂ ವೃದ್ಧಿಕಾರಕಂ ॥ ೬ ॥

ಪ್ರಜಾಪತೇಃ ಘೃತಾಕ್ತಸ್ಯ ದರ್ಶನಂ ಪುತ್ರದಂ ಸ್ಮೃತಂ ।
ಶಸ್ತವೃಕ್ಷಾಭಿರೋಹಶ್ಚ ಕ್ಷಿಪ್ರಮೈಶ್ವರ್ಯ ಕಾರಕಃ ॥
ದೋಹನಂ ಮಹಿಷೀ ಸಿಂಹೀ ಗೋಧೇನೂನಾಂ ಸ್ವಕೇ ಮುಖೇ ॥ ೭ ॥

ವೃವನ್ನು ಕಾಣಬಹುದು. ಹೀಗೆ ಕಂಡರೆ ಅವನಿಗೆ ಸರ್ವವಿಧವಾದ ಸಮೃದ್ಧಿಯು ಉಂಟಾಗುವುದು.

೪. ಸ್ವಪ್ನದಲ್ಲಿ ಇಂದ್ರಧ್ವಜವನ್ನೂ, ಚಂದ್ರನನ್ನೂ ನೋಡಿದರೆ ಅವನಿಗೆ ಸರ್ವಸಂಪತ್ತುಗಳೂ ಸಮೃದ್ಧಿಯಾಗಿ ಉಂಟಾಗುವುವು. ಕಣ್ಣಿಗೆ ಕಪ್ಪು ಹಚ್ಚಿಕೊಂಡಂತೆ ಕಂಡರೂ, ಶಕ್ತ್ಯಾಯುಧವನ್ನೂ, ಹಾರ ಧರಿಸಿರುವವನನ್ನೂ, ಗೋವನ್ನೂ ಕಂಡರೂ ಕೊಳಲಿನ ಧ್ವನಿಯನ್ನು ಕೇಳಿದರೂ ಒಳ್ಳೆಯದು.

೫. ಬಿಳಿದಾವರೆ, ಚಾಮರ, ಕನ್ನಡಿ, ಚಿನ್ನ, ಖಡ್ಗ ಇವನ್ನೂ, ಪುತ್ರೋತ್ಪತ್ತಿಯಾದುದೂ, ನೋಡಿದರೆ ಒಳ್ಳೆಯದು.

೬. ರಕ್ತಪಾನ ಮಾಡುವುದನ್ನೂ, ರಕ್ತವು ಸುರಿಯುವುದನ್ನೂ ನೋಡಿದರೂ ತನ್ನ ಮೇಲೆ ರಕ್ತ ಚಿಮುಕಿಸಿದಂತೆ ಕಂಡರೂ ಅವನಿಗೆ ಐಶ್ವರ್ಯವೃದ್ಧಿಯುಂಟಾಗುವುದು. ಸ್ವಪ್ನದಲ್ಲಿ ಐದು ವಿಧದ ಶ್ರೇಷ್ಠವಾದ ನಡಗೆಗಳುಳ್ಳ ಬಿಳಿಯ ಹೆಣ್ಣುಕುದುರೆಯನ್ನು ಕಂಡರೆ ಅವನಿಗೆ ಅಭಿವೃದ್ಧಿಯುಂಟಾಗುವುದು.

೭. ತುಪ್ಪವನ್ನು ತನ್ನ ಶಿಶ್ನಕ್ಕೆ ಲೇಪಿಸಿಕೊಂಡಂತೆ ಕನಸಿನಲ್ಲಿ ಕಂಡರೆ ಪುತ್ರೋತ್ಪತ್ತಿಯಾಗುವುದು. ಶ್ರೇಷ್ಠವಾದ ಮರವನ್ನು ಹತ್ತುತ್ತಿರುವಂತೆ ಕಂಡರೆ ಬೇಗ ಸಂಪತ್ತುಟಾಗುವುದು. ಎಮ್ಮೆ, ಹೆಣ್ಣುಸಿಂಹ, ಎಳಗರುವಿನ ಹಸು ಇವುಗಳ ಮೊಲೆಯನ್ನು ತನ್ನ ಬಾಯಿಗೆ ಕರೆಯುವಂತೆ ಕಂಡರೆ ಒಳ್ಳೆಯದು.

ಧನುಷಾಂ ಚ ಶರಾಣಾಂ ಚ ನಾಭೌ ಚ ದ್ರುತನಿರ್ಗತಿಃ ।
ಅಭಿಹನ್ಯಾತ್ ಸ್ವಯಂ ಖಾದೇತ್ ಸಿಂಹಾನ್ಗಾ ಭುಜಗಾಂಸ್ತಥಾ ॥ ೮ ॥

ಸ್ವಾಂಗಶೀರ್ಷಂ ಹುತವಹೇ ತಸ್ಯ ಶ್ರೀರಗ್ರತಃ ಸ್ಥಿತಾ ।
ರಾಜತೇ ಹೈಮಕೇ ಪಾತ್ರೇ ಯೋ ಭುಂಕ್ತೇ ಪಾಯಸಂ ದ್ವಿಜಃ ॥ ೯ ॥

ಪದ್ಮಪತ್ರೇ ಯಥಾ ವಿಪ್ರಃ ತಸ್ಯ ಜಂತೋರ್ಭಯಂ ಭವೇತ್ ।
ದ್ಯೂತೇ ವಾದೇಽಥವಾ ಯುದ್ಧೇ ವಿಜಯೋ ಹಿ ಸುಖಾವಹಃ ॥ ೧೦ ॥

ಅಗ್ನೇಸ್ತು ಗ್ರಸನಂ ವಿಪ್ರ ಅಗ್ನೇಯಂ ವೃದ್ಧಿಮಾಪ್ನುಯಾತ್ ।
ಗಾತ್ರಸ್ಯ ಜ್ವಲನಂ ವಿಪ್ರ ಶಿರೋವೇಧಶ್ಚ ಭೂತಯೇ ॥ ೧೧ ॥

ಮಾಲ್ಯಾಂಬರಾಣಾಂ ಶುಕ್ಲಾನಾಂ ಶಸ್ತಾನಾಂ ಶುಕ್ಲಪಕ್ಷಿಣಾಂ ।
ಸದಾ ಲಾಭಂ ಪ್ರಶಂಸಂತಿ ತಥಾ ವಿಷ್ಟಾನುಲೇಪನಂ ॥ ೧೨ ॥

---

೮. ಬಿಲ್ಲುಗಳು, ಬಾಣಗಳು ಇವು ಬೆನ್ನಿನಲ್ಲಿ ಹೊಕ್ಕು ತನ್ನ ಹೊಕ್ಕಳಿನಲ್ಲಿ ನುಗ್ಗಿಹೋದಂತೆ ಕಂಡರೂ, ಸಿಂಹಗಳನ್ನು, ಹಸುಗಳನ್ನು, ಹಾವುಗಳನ್ನು ತಾನು ತಿನ್ನುತ್ತಿರುವಂತೆ ಕಂಡರೂ ಕೊಲ್ಲಲ್ಪಡುವನು.

೯. ತನ್ನ ಅಂಗವಾದ ಶಿರಸ್ಸನ್ನು ಕತ್ತರಿಸಿ ಅಗ್ನಿಯಲ್ಲಿ ಹೋಮಮಾಡುವಂತೆ ಕಂಡರೆ ಸಂಪತ್ತು ಪ್ರತ್ಯಕ್ಷವಾಗಿ ಲಭಿಸುವುದು. ಬೆಳ್ಳಿ, ಚಿನ್ನ ಇವುಗಳ ಪಾತ್ರೆಗಳಲ್ಲಿ ಬ್ರಾಹ್ಮಣನು ಪಾಯಸವನ್ನು ತಿನ್ನುವಂತೆ ಕಂಡರೂ,

೧೦. ವಿಪ್ರನು ತಾವರೆ ಎಲೆಯಲ್ಲಿ ಊಟಮಾಡಿದಂತೆ ಕಂಡರೆ ದುಷ್ಟ ಜಂತುಗಳಿಂದ ಭೀತಿಸಂಭವಿಸುವುದು, ಜೂಜು, ವಾಗ್ಯುದ್ಧ (ವಾಗ್ವಾದ) ಯುದ್ಧ ಇವುಗಳಲ್ಲಿ ಜಯವಾದಂತೆ ಕಂಡರೆ ಸುಖವುಂಟು.

೧೧. ಅಯ್ಯಾ ಬ್ರಾಹ್ಮಣನೇ ! ಅಗ್ನಿಯನ್ನು ನುಂಗುತ್ತಿರುವಂತೆ ಕಂಡರೆ ಸುವರ್ಣವೃದ್ಧಿಯಾಗುವುದು. ತನ್ನ ಶರೀರವೇ ಉರಿಯುತ್ತಿರುವಂತೆಯೂ, ತಲೆ ಶೂಲೆ ಬಂದಿರುವಂತೆಯೂ, ಕಂಡರೆ ಐಶ್ವರ್ಯವೃದ್ಧಿಯಾಗುವುದು.

೧೨. ಬಿಳಿಯ ಹೂಮಾಲೆಗಳು, ಬಿಳಿಯ ಬಟ್ಟೆಗಳು, ಪ್ರಶಸ್ತವಾದ ಬಿಳಿಯ ಹಕ್ಕಿಗಳು ಇವು ತಮಗೆ ಲಾಭವಾದಂತೆ ಕಂಡರೆ ಒಳ್ಳೆಯದು. ಮೈಗೆ ಅನುಲೇಪನ ಮಾಡಿಕೊಂಡಂತೆ ಕಂಡರೂ ಒಳ್ಳೆಯದು.

ಸ್ವಾಂಗಸ್ಯ ಕರ್ತನೇ ಕ್ಲೇಷೇ ರಥಯಾನೇ ಪ್ರಜಾಗಮಃ ।
ನಾನಾಶಿರೋ ಬಾಹುತಾ ಚ ಹಸ್ತಾನಿತ್ಯಂ ಚ ಭೂತಯೇ ॥ ೧೩ ॥

ಅಗಮ್ಯಾಗಮನಂ ಚೈವ ಶೋಕಮಧ್ಯಯನಂ ತಥಾ ।
ದೇವ ದ್ವಿಜಜನಾಚಾರ್ಯ ಗುರುವೃದ್ಧಾಸ್ತಪಸ್ವಿನಃ ॥ ೧೪ ॥

ಯದ್ಯದ್ವದಂತಿ ತತ್ಸರ್ವಂ ಸತ್ಯಮೇವ ಹಿ ನಿರ್ದಿಶೇತ್ ।
ಪ್ರಶಸ್ತಂ ದರ್ಶನಂ ಚೈವ ಅಭಿಷೇಕೋ ನೃಪಶ್ರಿಯಾಃ ॥ ೧೫ ॥

ಶಿರಚ್ಛೇದೇನ ರಾಜ್ಯಂ ಸ್ಯಾತ್ ಬಹುಧಾ ಸ್ಫುಟಿತೇನ ತು ।
ರುದಿತಂ ಹರ್ಷಸಂಪ್ರಾಪ್ತ್ಯೈ ರಾಜ್ಯಂ ನಿಗಡಬಂಧನೇ ॥ ೧೬ ॥

---

೧೩. ತನ್ನ ದೇಹದ ಅವಯವವನ್ನು ಕತ್ತರಿಸಿದಂತೆ ಮತ್ತು ಎಸೆದಂತೆ ಕಂಡರೂ, ತಾನು ರಥದಮೇಲೆ ಕುಳಿತುಕೊಂಡಂತೆ ಕಂಡರೂ, ಸಂತಾನವೃದ್ಧಿಯಾಗುವುದು. ತನಗೆ ಅನೇಕ ತಲೆಗಳು, ತೋಳುಗಳು, ಕೈಗಳು, ಇರುವಂತೆ ಕಂಡರೆ ಐಶ್ವರ್ಯ ವೃದ್ಧಿಯಾಗುವುದು.

೧೪. ಗಮಿಸಬಾರದ ಸ್ತ್ರೀಯಲ್ಲಿ ರಮಿಸುವುದು, ದುಃಖಿಸುವುದು, ಓದುವುದು ಇವೆಲ್ಲವನ್ನೂ ಕಾಣುವುದು ಶುಭವಾದುದು. ದೇವತೆಗಳು, ಬ್ರಾಹ್ಮಣರು, ಆಚಾರ್ಯರು, ಗುರುಗಳು, ಮುದುಕರು, ತಪಸ್ವಿಗಳು.

೧೫. ಇವರುಗಳು ಏನೋನೋ ಫಲಹೇಳುತ್ತಿರುವಂತೆ ಕಂಡರೆ ಅವೆಲ್ಲವನ್ನೂ ಸತ್ಯವೆಂದೇ ತಿಳಿಯಬೇಕು. ಸ್ವಪ್ನದಲ್ಲಿ ರಾಜ್ಯಲಕ್ಷ್ಮೀ ಪ್ರಾಪ್ತಿಕಾಲದ (ಪಟ್ಟಾಭಿಷೇಕದ) ದರ್ಶನವು ಶ್ರೇಷ್ಠವಾದ ದರ್ಶನವಾಗಿದೆ.

೧೬. ತನ್ನ ತಲೆ ಕತ್ತರಿಸಿದಂತೆಯೂ ಅನೇಕ ಹೋಳುಗಳಾಗಿ ಒಡೆದಂತೆಯೂ ಕಂಡರೆ ರಾಜ್ಯಲಾಭವಾಗುವುದು. ಸ್ವಪ್ನದಲ್ಲಿ ಅತ್ತಂತೆ ಕಂಡರೆ ಹರ್ಷಪ್ರಾಪ್ತಿಯಾಗುವುದು. ತನ್ನನ್ನು ಸರಪಣಿಗಳಿಂದ ಸಂಕೋಲೆ ಹಾಕಿದಂತೆ ಕಂಡರೆ ರಾಜ್ಯಲಾಭವಾಗುವುದು.

**ತುರಂಗಂ ವೃಷಭಂ ಪದ್ಮಂ ರಾಜಾನಂ ಶ್ವೇತಕುಂಜರಂ ।**
**ಮಹದೈಶ್ವರ್ಯಮಾಪ್ನೋತಿ ಯೋ ಭೀಕಶ್ಚಾಧಿರೋಹತಿ ॥ ೧೭ ॥**

**ಗ್ರಸಮಾನೋ ಗ್ರಹಾಂಸ್ತಾರಾ ಮಹೀಂ ಚ ಪರಿವರ್ತಯನ್ ।**
**ಉನ್ಮೂಲಯನ್ ಪರ್ವತಾಂಶ್ಚ ರಾಜ್ಯಲಾಭಮವಾಪ್ನುಯಾತ್ ॥ ೧೮ ॥**

**ದೇಹಾನ್ನಿಷ್ಕ್ರಾಂತಿ ರಂತ್ರಾಣಾಂ ತೈರ್ವಾ ವೃಕ್ಷಸ್ಯ ವೇಷ್ಟನಂ ।**
**ಪಾತಃ ಸಮುದ್ರ ಸರಿತಾಂ ಐಶ್ವರ್ಯಾಣಿ ಸುಖಾನಿ ಚ ॥ ೧೯ ॥**

**ಉದಧಿಂ ಸರಿತಂ ವಾಪಿ ತೀರ್ತ್ವಾ ಪಾರಂ ಪ್ರಯಾತಿ ಚ ।**
**ಅದ್ರಿಂ ಲಂಘಯತಶ್ಚಾಪಿ ಭವಂತ್ಯರ್ಥಜಯಾಯುಷಃ ॥ ೨೦ ॥**

**ಉಜ್ವಲಾ ಸ್ತ್ರೀ ವಿಶೇದಂಕಂ ಆಶೀರ್ವಾದಪರಾಃ ಸ್ತ್ರಿಯಃ ।**
**ಭವತ್ಯರ್ಥಾಗಮಃ ಶೀಘ್ರಂ ಕ್ರಿಮಿಭಿರ್ಯಧಿ ಭಕ್ಷ್ಯತೇ ॥ ೨೧ ॥**

---

೧೭. ಮಾನವನು ಕುದುರೆ, ಎತ್ತು, ಪದ್ಮಪುಷ್ಪ, ರಾಜ, ಬಿಳಿಯ ಆನೆ ಇವುಗಳ ಮೇಲೆ ಹೆದರದೆ ಹತ್ತಿ ಕುಳಿತಿದ್ದಂತೆ ಕಂಡರೆ ತುಂಬಾ ಐಶ್ವರ್ಯವನ್ನು ಹೊಂದುವನು.

೧೮. ಗ್ರಹಗಳು, ನಕ್ಷತ್ರಗಳು ಇವುಗಳನ್ನು ನುಂಗುತ್ತಿರುವಂತೆಯೂ ಭೂಮಿಯನ್ನು ಉರುಳಿಸುವಂತೆಯೂ, ಪರ್ವತಗಳನ್ನು ಕೀಳುತ್ತಿರುವಂತೆಯೂ ಕಂಡರೆ ರಾಜ್ಯವನ್ನು ಹೊಂದುತ್ತಾನೆ.

೧೯. ಕರುಳನ್ನು ಹೊಟ್ಟೆಯಿಂದ ಬಗೆದಂತೆ ಕಂಡರೂ, ಅದನ್ನೇ ಗಿಡಕ್ಕೆ ಸುತ್ತಿದಂತೆ ಕಂಡರೂ, ಸಮುದ್ರ, ನದಿ ಇವುಗಳಲ್ಲಿ ಬಿದ್ದಂತೆ ಕಂಡರೂ, ಸಂಪತ್ತೂ, ಸುಖವೂ ಲಭಿಸುವುದು.

೨೦. ಸಮುದ್ರ, ನದಿ, ಭಾವಿ ಇವುಗಳನ್ನು ದಾಟಿ ಆಚೆಯ ದಡಕ್ಕೆ ಹೋದಂತೆ ಕಂಡರೂ, ಬೆಟ್ಟವನ್ನು ಹಾರಿದಂತೆ ಕಂಡರೂ, ದ್ರವ್ಯ, ಜಯ, ಆಯುಸ್ಸು ಇವುಗಳು ಲಭಿಸುತ್ತವೆ.

೨೧. ರೂಪವತಿಯಾದ ಸ್ತ್ರೀಯು ತನ್ನ ತೊಡೆಯನ್ನು ಏರಿದಂತೆ ಕಂಡರೂ. ಹುಳುಗಳು ತನ್ನನ್ನು ತಿನ್ನುತ್ತಿರುವಂತೆ ಕಂಡರೂ, ಹೆಂಗಸರೆಲ್ಲರೂ ಆಶೀರ್ವದಿಸುವಂತೆ ಕಂಡರೂ, ಜಾಗ್ರತೆ ದ್ರವ್ಯ ಪ್ರಾಪ್ತಿಯಾಗುವುದು.

ಸ್ವಪ್ನೇ ಸ್ವಪ್ನ ಇತಿ ಜ್ಞಾತಂ ದೃಷ್ಟಪ್ರಕಥನಂ ತಥಾ ।
ಮಂಗಲಾನಾಂ ಚ ಸರ್ವೇಷಾಂ ಶುಭಂ ದರ್ಶನಮೇವ ಚ ॥ ೨೨ ॥

ಸಂಯೋಗಶ್ಚೈವ ಮಾಂಗಲ್ಯೈಃ ಆರೋಗ್ಯಧನಕಾರಕಃ ।
ಐಶ್ವರ್ಯ ರಾಜ್ಯಲಾಭಾಯ ಯಸ್ಮಿನ್ ಸ್ವಪ್ನ ಉದಾಹೃತಃ ॥ ೨೩ ॥

ತೈರ್ದೃಷ್ಟೈ ರೋಗಿಣೋ ರೋಗಾನ್ಮುಚ್ಯಂತೇ ನಾತ್ರ ಸಂಶಯಃ ।
ನ ಸ್ವಪ್ನಂ ಶೋಭನಂ ದೃಷ್ಟ್ವಾ ಸ್ವಪ್ಯಾತ್ ಪ್ರಾತಶ್ಚ ಕೀರ್ತಯೇತ್ ।
ರಾಜಭೋಜಕವಿಪ್ರೇಭ್ಯಃ ಶುಚಿಭ್ಯಶ್ಚ ಶುಚಿರ್ನರಃ ॥ ೨೪ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇ ಪರ್ವಣಿ ಸ್ವಪ್ನದರ್ಶನ ವರ್ಣನಂ ನಾಮ ಏಕೋನಸಪ್ತತಿತಮೋಽಧ್ಯಾಯಃ.

---

೨೨. ತಾನು ಸ್ವಪ್ನಕಾಣುತ್ತಿರುವೆನೆಂಬ ತಿಳಿವಳಿಕೆಯು ಸ್ವಪ್ನದಲ್ಲೇ ಬಂದರೂ, ತನಗಾದ ಸ್ವಪ್ನವನ್ನು ಇತರರಿಗೆ ಹೇಳಿಕೊಳ್ಳುತ್ತಿರುವಂತೆ ಸ್ವಪ್ನದಲ್ಲೇ ಕಂಡರೂ, ವಿವಾಹಾದಿ ಶುಭಕಾರ್ಯಗಳು ಸ್ವಪ್ನದಲ್ಲೇ ನಡೆದಂತೆ ಕಂಡರೂ ಶುಭವು.

೨೩. ಮಂಗಳ ದ್ರವ್ಯಗಳಿಂದ ತನ್ನ ದೇಹಕ್ಕೆ ಸಂಯೋಗವಾದಂತೆ ಕಂಡರೆ ಆರೋಗ್ಯ. ಧನ ಇವು ವೃದ್ಧಿಯಾಗುವುವು. ಈ ಸ್ವಪ್ನದಿಂದ ರಾಜ್ಯಪ್ರಾಪ್ತಿ ಐಶ್ವರ್ಯ ಪ್ರಾಪ್ತಿಯಾದುದಕ್ಕೆ ಎಷ್ಟೋ ಉದಾಹರಣೆಗಳಿವೆ.

೨೪. ಇದುವರೆಗೆ ಸೂಚಿಸಿದಂಥ ಶುಭಸ್ವಪ್ನಗಳಾಗುವುದರಿಂದ ರೋಗಿಗಳ ರೋಗಗಳು ವಾಸಿಯಾಗುತ್ತವೆ. ಶುಭ ಸ್ವಪ್ನ ಕಂಡಮೇಲೆ ಪುನಃ ನಿದ್ರಾಪ್ರಾಪ್ತ ವಾಗುವ ಕಾಲಬರುವವರೆಗೆ ನಿದ್ರಿಸಬಾರದು. ಬೆಳಿಗ್ಗೆ ಎದ್ದು ತಾನು ಕಂಡ ಸ್ವಪ್ನ ವನ್ನು ಹಲವರಿಗೆ ಹೇಳಬೇಕು. ಶುಚಿಯಾದ ಮನುಷ್ಯನು ತನ್ನ ಶುಭಸ್ವಪ್ನವನ್ನು ಶುಚಿರ್ಭೂತರಾದ ರಾಜರಿಗೂ ಭೋಜಕ ಬ್ರಾಹ್ಮಣರಿಗೂ ವಿನಯದಿಂದ ಹೇಳ ಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸ್ವಪ್ನವರ್ಣನವೆಂಬ ಅರವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಸಪ್ತತಿತಮೋಽಧ್ಯಾಯಃ

॥ ಬ್ರಹ್ಮೋವಾಚ ॥

**ತತೋ ಮಧ್ಯಾಹ್ನಸಮಯೇ ಸ್ನಾತಃ ಪ್ರಯತಮಾನಸಃ ।**
**ತತ್ರೈವ ದೇವಾರ್ಚಾ ವಿಧಿವತ್ ಪೂಜಯಿತ್ವಾ ಯಥಾಸುಖಂ ॥ ೧ ॥**

**ಸಮ್ಯಕ್ಕೃತ ಜಪೋ ಮೌನೀ ನರೋ ಹುತಹುತಾಶನಃ ।**
**ನಿಷ್ಕ್ರಮ್ಯ ದೇವಾಯತನಾದ್ಭೋಜಕಾರ್ಾ ಭೋಜಯೇತ್ತತಃ ॥ ೨ ॥**

**ತಥಾ ಪುರಾಣವಿದುಷ ಇತಿಹಾಸವಿದೋ ದ್ವಿಜಾನ್ ।**
**ತಥಾ ವೇದವಿದಶ್ಚೈವ ದಿವ್ಯಾ್ ಭೌಮಾಂಶ್ಚ ಸುವ್ರತ ॥ ೩ ॥**

---

## ಎಪ್ಪತ್ತನೆಯ ಅಧ್ಯಾಯ

೧ ಬ್ರಹ್ಮನು ಹೇಳುತ್ತಾನೆ—ಆಮೇಲೆ ಮಧ್ಯಾಹ್ನ ಕಾಲದಲ್ಲಿ ಸ್ನಾನಮಾಡಿ ಮನಶ್ಶುದ್ಧಿಯಿಂದ ವಿಧಿಪ್ರಕಾರ ದೇವತಾರ್ಚನೆಮಾಡಿ ಸುಖವಾಗಿ ಕುಳಿತುಕೊಂಡವನಾಗಿ,

೨. ಮೌನದಿಂದ ಚೆನ್ನಾಗಿ ಜಪಮಾಡಿಕೊಳ್ಳಬೇಕು, ಔಪಾಸನ ಮೊದಲಾದ ಅಗ್ನಿಶುಶ್ರೂಷೆಯನ್ನು ನೆರವೇರಿಸಿ ಆಮೇಲೆ ಭೋಜಕರೆಂಬ ಸೂರ್ಯಾರ್ಚಕರನ್ನೂ,

೩. ಪುರಾಣಗಳು, ಇತಿಹಾಸಗಳು, ಇವೆಲ್ಲವನ್ನು ಬಲ್ಲವರನ್ನೂ, ವೇದಾಧ್ಯಯನ ಸಂಪನ್ನರಾದ ದಿವ್ಯರು, ಭೌಮರು ಎಂಬ ಬ್ರಾಹ್ಮಣರನ್ನೂ ಕರೆದು ಭೋಜನ ಮಾಡಿಸಬೇಕು.

ರಕ್ತಾನಿ ವಸ್ತ್ರಾಣಿ ತಥಾ ಚ ಗಾವಃ ।
ಸುಗಂಧ ಮಾಲ್ಯಾದಿ ಹವಿಷ್ಯಮನ್ನಂ ।
ಪಯಸ್ವಿನೀ ಚಾಪ್ಯಥ ಭೋಜಕಾಯ ।
ದೇಯಾ ತಥಾನ್ಯ ಪ್ರಿಯಮಾತ್ಮನೋ ಯತ್ ॥ ೪ ॥

ಭವೇದಲಾಭೋ ಯದಿ ಭೋಜಕಾನಾಂ ।
ವಿಪ್ರಾಸ್ತದಾರ್ಹಂತಿ ಜಯೋಪಜೀವಿನಃ ।
ಯೇ ಮಂತ್ರವಿದ್ಬ್ರಾಹ್ಮಣ ಪಾಠಕಾಶ್ಚ ।
ಯೇ ಯೇಽಪಿ ಸಾಮಾಧ್ಯಯನೇಷು ಯುಕ್ತಾಃ ॥ ೫ ॥

ಪ್ರಥಮಂ ಭೋಜಕಾ ಭೋಜ್ಯಾಃ ಪುರಾಣ ವಿದುಷೈಸ್ಸಹ ।
ತೇಷಾಮ್ನೃತೇ ಮಂತ್ರವಿದಃ ತಥಾ ವೇದವಿದೋ ದ್ವಿಜಾಃ ॥ ೬ ॥

ಕೃತ್ವೈವಂ ಸಪ್ತಮಿೀಂ ಸಪ್ತ ನರೋ ಭಕ್ತ್ಯಾ ಸಮನ್ವಿತಃ ।
ಶ್ರದ್ಧಧಾನೋಽನಸೂಯಶ್ಚ ಅನಂತಂ ಪ್ರಾಪ್ನುಯಾತ್ ಸುಖಂ ॥ ೭ ॥

---

೪. ಕೆಂಪು ವಸ್ತ್ರಗಳು, ಹಸುಗಳು, (ತೊಳೆಯದೆ, ಬಸಿಯದೆ, ಅಭಿಘಾರ ಮಾಡಿ ಪಕ್ವಮಾಡಿ ಸಿದ್ಧವಾದ) ಹವಿಷ್ಯಾನ್ನ, ಕರೆಯುವ ಹಸು ಮತ್ತು ತನಗೆ ಇಷ್ಟಬಂದ ಇತರ ವಸ್ತು ಇವನ್ನು ಆ ಭೋಜಕ ಬ್ರಾಹ್ಮಣರಿಗೆ ಕೊಡಬೇಕು.

೫. ಭೋಜಕ ಬ್ರಾಹ್ಮಣರು ಯಾರೂ ದೊರೆಯದಿದ್ದರೆ ಜಯೋಪಜೀವಿಯಾದ ಎಂದರೆ ಪುರಾಣ ವಾಚನದಿಂದ ಉಪಜೀವನಮಾಡುವ ಬ್ರಾಹ್ಮಣರನ್ನು ಭೋಜನಕ್ಕೆ ಕರೆಯಬೇಕು. ಮಂತ್ರಜ್ಞರಾದ ಬ್ರಾಹ್ಮಣ ಪಾಠಕರನ್ನೂ ಸಾಮವೇದಾಧ್ಯಯನ ಮಾಡಿದವರನ್ನೂ ಕರೆದು ಉಪಚರಿಸಬೇಕು.

೬. ಪುರಾಣವಾಚಕರಾದ ವಿಪ್ರರನ್ನೂ ಭೋಜಕ ಬ್ರಾಹ್ಮಣರೊಡನೆ ಕೂರಿಸಿ ಭೋಜನ ಮಾಡಿಸಬೇಕು. ಬಳಿಕ ಮಂತ್ರವೇತ್ತರೂ ವೇದಾಧ್ಯಯನ ಸಂಪನ್ನರೂ ಆದ ಬ್ರಾಹ್ಮಣರಿಗೆ ಭೋಜನವಾಗಬೇಕು.

೭. ಮನುಷ್ಯನು ಭಕ್ತಿಯಿಂದ ಕೂಡಿದವನೂ, ಶ್ರದ್ಧಾಳುವೂ, ಅಸೂಯಾರಹಿತನೂ ಆಗಿ ಪೂರ್ವೋಕ್ತ ಸಪ್ತಮಿೀ ಕಲ್ಪಗಳನ್ನು ಹಿಂದೆ ಹೇಳಿದಂತೆ ಏಳುಬಾರಿ ಆಚರಿಸಿದರೆ ಅವನು ಶಾಶ್ವತಸುಖವನ್ನು ಹೊಂದುವನು.

ದಶಾನಾಮಶ್ವಮೇಧಾನಾಂ ಕೃತಾನಾಂ ಯತ್ಫಲಂ ಲಭೇತ್ ।
ತತ್ಫಲಂ ಸಪ್ತಮೀಸ್ಸಪ್ತ ಕೃತ್ವಾ ಪ್ರಾಪ್ನೋತಿ ಮಾನವಃ ॥ ೮ ॥

ದುಷ್ಪ್ರಾಪಂ ನಾಸ್ತಿ ತಲ್ಲೋಕೇ ಅನಯಾ ಯನ್ನ ಲಭ್ಯತೇ ।
ನ ಚ ರೋಗೋಽಸ್ತ್ಯಸೌ ಲೋಕೇ ಏನಯಾ ಯೋ ನ ಶಾಮ್ಯತಿ ॥ ೯ ॥

ಕುಷ್ಠಾನಿ ಚಾಪಿ ಸರ್ವಾಣಿ ದುರುಚ್ಛೇದ್ಯಾನ್ಯಪಿ ಧ್ರುವಂ ।
ಅಪಯಾಂತಿ ಯಥಾ ನಾಗಾ ಗರುಡಸ್ಯ ಭಯಾರ್ದಿತಾಃ ॥ ೧೦ ॥

ವ್ರತನಿಯಮ ತಪೋಭಿಸ್ಸಪ್ತಮೀಃ ಸಪ್ತ ಏವಂ ।
ವಿಧಿವದಿಹ ಹಿ ಕೃತ್ವಾ ಮಾನವೋ ಧರ್ಮಶೀಲಃ ॥
ಶ್ರುತಧನಸುತಭಾಗ್ಯಾ ರೋಗ್ಯಪುಣ್ಯೈರುಪೇತಃ ।
ವ್ರಜತಿ ತದನುಲೋಕಂ ಶಾಶ್ವತಂ ತಿಗ್ಮರಶ್ಮೇಃ ॥ ೧೧ ॥

---

೮. ಅಲ್ಲದೆ ಹತ್ತು ಅಶ್ವಮೇಧಗಳನ್ನು ಮಾಡಿದರೆ ಯಾವ ಫಲವು ಲಭಿಸುವುದೋ ಅಂತಹ ಫಲವನ್ನು ಈ ಸಪ್ತಸಪ್ತಮೀ ವ್ರತವನ್ನು ಮಾಡಿದ ಮಾನವನು ಹೊಂದುವನು.

೯. ಇದರಿಂದ ಲಭ್ಯವಾಗದಂಥ ವಸ್ತುವೂ, ಹೊಂದಲು ಸಾಧ್ಯವಾಗದ ವಸ್ತುವೂ ಯಾವುದೂ ಇಲ್ಲ. ಈ ಸಪ್ತಮೀ ಕಲ್ಪಾಚರಣೆಯಿಂದ ವಾಸಿಯಾಗದ ರೋಗವಿಲ್ಲ.

೧೦. ವಾಸಿಮಾಡುವುದೇ ಕಷ್ಟವಾದ ಎಲ್ಲ ಬಗೆಯ ಕುಷ್ಠರೋಗಗಳೂ, ಗರುಡನಿಗೆ ಹೆದರಿದ ಸರ್ಪಗಳಂತೆ ನಿಶ್ಚಯವಾಗಿ ಅದೃಶ್ಯವಾಗುತ್ತವೆ. ಇದು ನಿಶ್ಚಯ.

೧೧. ಹೀಗೆ ಏಳುಬಾರಿ ವ್ರತ, ನಿಯಮ, ತಪೋಯುಕ್ತನಾಗಿ ವಿಧಿಯಂತೆ ಸಪ್ತಮೀ ವ್ರತಗಳನ್ನಾಚರಿಸಿದ ಧರ್ಮಶೀಲನಾದ ಮಾನವನು ಶಾಸ್ತ್ರಜ್ಞಾನ, ದ್ರವ್ಯ ಸಂಪತ್ತಿ, ಪುತ್ರರು, ಭಾಗ್ಯ, ಆರೋಗ್ಯ, ಪುಣ್ಯ ಇವುಗಳಿಂದ ಕೂಡಿ ಕಡೆಗೆ ಶಾಶ್ವತವಾದ ಸೂರ್ಯಲೋಕವನ್ನು ಹೊಂದುತ್ತಾನೆ.

ಇಮಂ ವಿಧಿಂ ದ್ವಿಜಶ್ರೇಷ್ಠ ಶ್ರುತ್ವಾ ಕೃತ್ವಾ ಚ ಮಾನವಃ ।
ಸಹಸ್ರರಶ್ಮಿಂ ಚ ವಿಶೇತ್ ನಾತ್ರ ಕಾರ್ಯಾ ವಿಚಾರಣಾ ॥ ೧೨ ॥

ಸುರೈರ್ವಾ ಮುನಿಭಿರ್ವಾಪಿ ಪುರಾಣಜ್ಞೈರಿದಂ ಶ್ರುತಂ ।
ಸರ್ವೇ ತೇ ಪರಮಾತ್ಮಾನಂ ಪೂಜಯಂತಿ ದಿವಾಕರಂ ॥ ೧೩ ॥

ಇದಮಾಖ್ಯಾನಮಾರ್ಷೇಯಂ ಯನ್ಮಯಾಭಿಹಿತಂ ತವ ।
ಸೂರ್ಯಭಕ್ತಾಯ ದಾತವ್ಯಂ ನೇತರಾಯ ಕದಾಚನ ॥ ೧೪ ॥

ಯಶ್ಚೈತಚ್ಛ್ರಾವಯೇ ನ್ನಿತ್ಯಂ ಯಶ್ಚೈತ ಚ್ಛೃಣುಯಾನ್ನರಃ ।
ಸ ಸಹಸ್ರಾರ್ಚಿಷಂ ದೇವಂ ಪ್ರವಿಶೇನ್ನಾತ್ರ ಸಂಶಯಃ ॥ ೧೫ ॥

ಮುಚ್ಯೇತಾರ್ತಸ್ತಥಾ ರೋಗಾತ್ ಶ್ರುತ್ವೇಮಾಮಾದಿತಃ ಕಥಾಂ ।
ಜಿಜ್ಞಾಸುರ್ಲಭತೇ ಕಾಮಾನ್ ಭಕ್ತಸ್ಸೂರ್ಯಗತಿಂ ಲಭೇತ್ ॥ ೧೬ ॥

---

೧೨. ಎಲೈ ಬ್ರಾಹ್ಮಣ ಶ್ರೇಷ್ಠನೇ! ಮನುಷ್ಯನು ಈ ಸಪ್ತಮಿಯ ವಿಧಿಯನ್ನು ಕೇಳಿ ಅದರಂತೆ ಮಾಡಿದರೆ ಸೂರ್ಯಮಂಡಲವನ್ನು ಪ್ರವೇಶಿಸುವನು. ಈ ವಿಷಯದಲ್ಲಿ ವಿಚಾರ ಮಾಡಬೇಕಾಗಿಲ್ಲ.

೧೩. ಪುರಾಣವನ್ನು ತಿಳಿದಿರುವ ದೇವತೆಗಳು ಅಥವಾ ಮುನಿಗಳು ಇವರುಗಳಿಂದ ಇದನ್ನು ಕೇಳಿದರೆ ಹಾಗೆ ಕೇಳಿದವರೆಲ್ಲರೂ ಪರಮಾತ್ಮನಾದ ಸೂರ್ಯನನ್ನು ಖಂಡಿತವಾಗಿ ಪೂಜಿಸುತ್ತಾರೆ.

೧೪. ಈಗ ನಾನು ಹೇಳಿದ ಈ ಪುರಾತನವಾದ ಆಖ್ಯಾನವನ್ನು ಸೂರ್ಯಭಕ್ತನಿಗೆ ಹೇಳಬೇಕೇ ವಿನಾ ಬೇರೆಯವರಿಗೆ ಎಂದಿಗೂ ಹೇಳಲೇಕೂಡದು.

೧೫. ಯಾವನು ಇದನ್ನು ಶ್ರವಣ ಮಾಡಿಸುವನೋ, ಮತ್ತು ಯಾವನು ಇದನ್ನು ಕೇಳುವನೋ, ಅವನು ಸೂರ್ಯದೇವನಲ್ಲಿಯೇ ಐಕ್ಯವಾಗಿ ಸೇರಿಬಿಡುವನು. ಎಂದರೆ ಸೂರ್ಯ ಸಾಯುಜ್ಯವನ್ನು ಪಡೆಯುವನು ಇಲ್ಲಿ ಸಂಶಯವಿಲ್ಲ.

೧೬. ಈ ಕಥೆಯನ್ನು ಆಮೂಲಾಗ್ರವಾಗಿ ಕೇಳಿದವನು ರೋಗದಿಂದ ಬಿಡುಗಡೆ ಹೊಂದುವನು. ಈ ಕಥಾಶ್ರವಣ ಮಾಡಬೇಕೆಂಬದಾಗಿ ನಿಜವಾಗಿ ಇಚ್ಛೆಯುಳ್ಳ ಭಕ್ತನು ತನ್ನ ಇಷ್ಟಾರ್ಥಗಳನ್ನೆಲ್ಲ ಹೊಂದುತ್ತಾನೆ. ಅಲ್ಲದೆ ಸೂರ್ಯಸಾಯುಜ್ಯವನ್ನೂ ಹೊಂದುವನು.

**ಕ್ಷೇಮೇಣ ಗಚ್ಛತೇಽಧ್ವಾನಂ ಯಸ್ತ್ವಿದಂ ಪಠತೇಽಧ್ವನಿ ।**
**ಯೋ ಯಂ ಪ್ರಾರ್ಥಯತೇ ಕಾಮಂ ಸ ತಂ ಪ್ರಾಪ್ನೋತಿ ಚ ಧ್ರುವಂ**
**॥ ೧೭ ॥**

**ಏಕಾಂತಭಾವೋಪಗತ ಏಕಾಂತೇ ಸುಸಮಾಹಿತಃ ।**
**ಪ್ರಾಶ್ನೈತತ್ಪರಮಂ ಗುಹ್ಯಂ ಭೂತ್ವಾ ಸೂರ್ಯರತೋ ನರಃ ॥ ೧೮ ॥**

**ಪ್ರಾಪ್ನೋತಿ ಪರಮಂ ಸ್ಥಾನಂ ಭಾಸ್ಕರಸ್ಯ ಮಹಾತ್ಮನಃ ।**
**ಲಗ್ನಗರ್ಭಾ ಪ್ರಮುಚ್ಯೇತ ಗರ್ಭಿಣೀ ಜನಯೇತ್ಸುತಂ ॥ ೧೯ ॥**

**ವಂಧ್ಯಾ ಪ್ರಸವಮಾಪ್ನೋತಿ ಪುತ್ರಪೌತ್ರಸಮನ್ವಿತಂ ।**
**ಏವ ಮೇತನ್ಮಮಾಖ್ಯಾತಂ ಭಾಸ್ಕರೇಣಾಮಿತೌಜಸಾ ।**
**ಮಯಾಪಿ ತವ ಚಾಖ್ಯಾತಂ ಭಕ್ತ್ಯಾ ಭಾನೋರಿದಂ ದ್ವಿಜ ॥ ೨೦ ॥**

---

೧೭. ಯಾವನು ದಾರಿ ನಡೆಯುವಾಗ ಈ ಆಖ್ಯಾನವನ್ನು ಪಠನಮಾಡುವನೋ ಅವನಿಗೆ ಕ್ಷೇಮವಾಗಿ (ಪ್ರಯಾಣ) ಸಾಗುತ್ತದೆ. ಯಾವ ಯಾವ ಇಷ್ಟವಸ್ತುಗಳನ್ನು ಪ್ರಾರ್ಥಿಸುವನೋ ಅವನು ಅದನ್ನು ನಿಶ್ಚಯವಾಗಿಯೂ ಹೊಂದುತ್ತಾನೆ.

೧೮. ಸಮಾಧಾನ ಯುಕ್ತನಾಗಿ ರಹಸ್ಯಪ್ರದೇಶದಲ್ಲಿ ಕುಳಿತು ಏಕಾಗ್ರಚಿತ್ತದಿಂದ ಈ ಅತಿರಹಸ್ಯವಾದ ಕಥಾಖ್ಯಾನವನ್ನು ಸೂರ್ಯನಲ್ಲಿ ಆಸಕ್ತನಾಗಿ ಕೇಳಿದವನ ಮಹಾತ್ಮನಾದ ಸೂರ್ಯನ ಶ್ರೇಷ್ಠವಾದ ಲೋಕವನ್ನೈದುವನು.

೧೯. ದಿನತುಂಬಿದರೂ ಸುಖಪ್ರಸವವಾಗದೆ ಗರ್ಭವು ಹೊಟ್ಟೆಯೊ-ಗೇ ಸಿಕ್ಕಿಕೊಂಡು ಒದೆದಾಡುವ ಸ್ತ್ರೀಯು ಈ ಸೂರ್ಯಾರಾಧನೆ ಮಾಡಿದರೆ ಆ ಬಾಧೆಯಿಂದ ಬಿಡುಗಡೆ ಹೊಂದುವಳು. ಗರ್ಭವತಿಯು ಸೂರ್ಯ ಪ್ರಾರ್ಥನೆಯಿಂದ ಗಂಡು ಮಗನನ್ನು ಹಡೆಯುವಳು.

೨೦. ಬಂಜೆಯಾದವಳು ಮಕ್ಕಳು ಮೊಮ್ಮಕ್ಕಳಿಂದೊಡಗೂಡಿದ ಸಂತಾನವನ್ನು ಹೊಂದುತ್ತಾಳೆ. ಅಮಿತ ಪರಾಕ್ರಮಿಯಾದ ಸೂರ್ಯನು ನನಗೆ ಹೀಗೆ ಇದನ್ನು ಹೇಳಿದನು. ಅಯ್ಯಾ ಬ್ರಾಹ್ಮಣನೇ! ಸೂರ್ಯನಲ್ಲಿರುವ ಭಕ್ತಿಯಿಂದ ಸೂರ್ಯದೇವನಿಗೆ ಸಂಬಂಧಿಸಿದ ಈ ಕಥೆಯನ್ನು ನಾನು ನಿನಗೆ ಹೇಳಿದ್ದೇನೆ.

ಪೂಜನೀಯಸ್ತ್ವಯಾ ಭಾನುಃ ಸರ್ವಪಾಪೋಪ ಶಾಂತಯೇ ।
ಸ ಹಿ ಧಾತಾ ವಿಧಾತಾ ಚ ಸರ್ವಸ್ಯ ಜಗತೋ ಗುರುಃ ॥ ೨೧ ॥

ಉದ್ಯ ನ್ಯಃ ಕುರುತೇ ನಿತ್ಯಂ ಜಗದ್ವಿತಿಮಿರಂ ಕರೈಃ ।
ದ್ವಾದಶಾತ್ಮಾ ಸ ದೇವೇಶಃ ಪ್ರೀಯತಾಂ ತೇಽದಿತೇಃ ಸುತಃ ॥ ೨೨ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಆದಿತ್ಯಮಾಹಾತ್ಮ್ಯೇ ಸರ್ಷಪ ಸಪ್ತಮೀ ವರ್ಣನಂ ನಾಮ ಸಪ್ತತಿತಮೋಽಧ್ಯಾಯಃ.



೨೧. ಎಲ್ಲ ಪಾಪಗಳು ಪರಿಹಾರವಾಗುವದಕ್ಕಾಗಿ ನೀನು ಸೂರ್ಯನನ್ನು ಪೂಜಿಸಬೇಕು. ಆ ಸೂರ್ಯನು ಸಮಸ್ತ ಜಗತ್ತಿಗೂ (ವಿಧಾತ) ಸೃಷ್ಟಿಕರ್ತನೂ (ಧಾತಾ) ಪೋಷಣಕರ್ತನೂ ಸಮಸ್ತಜಗತ್ತಿಗೂ ಪೂಜ್ಯನೂ ಆಗಿದ್ದಾನೆ.

೨೨. ಆ ಸೂರ್ಯನು ಉದಯಿಸುತ್ತಲೇ ತನ್ನ ಕಿರಣಗಳಿಂದ ಲೋಕದಲ್ಲಿ ಆವರಿಸಿದ್ದ ಅಂಧಕಾರವನ್ನು ಧ್ವಂಸಮಾಡುತ್ತಾನೆ. ಮಿತ್ರಾದಿ ದ್ವಾದಶಾತ್ಮಕನೂ ಅದಿತಿ ಪುತ್ರನೂ ದೇವೇಶನೂ ಆದ ಸೂರ್ಯನು ನಿನ್ನಲ್ಲಿ ಸುಪ್ರೀತನಾಗಲಿ ಎಂದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮ ಪರ್ವದಲ್ಲಿ ಸರ್ಷಪ ಸಪ್ತಮೀ ವರ್ಣನೆಯೆಂಬ ಎಪ್ಪತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಏಕಸಪ್ತತತಿಮೋಽಧ್ಯಾಯಃ

॥ ಬ್ರಹ್ಮೋವಾಚ ॥

ನಾಮಭಿಃ ಸಂಸ್ತುತೋ ದೇವೋ ಯ್ಯೆರರ್ಕಃ ಪರಿತುಷ್ಯತಿ ।
ತಾನಿ ತೇ ಕೀರ್ತಯಿಷ್ಯಾಮ್ಯೇಷ ಯಥಾವದನುಪೂರ್ವಶಃ ॥ ೧ ॥

ನಮಃ ಸೂರ್ಯಾಯ ನಿತ್ಯಾಯ ರವಯೇ ಕಾರ್ಯಭಾನವೇ ।
ಭಾಸ್ಕರಾಯ ಪತಂಗಾಯ ಮಾರ್ತಂಡಾಯ ವಿವಸ್ವತೇ ॥ ೨ ॥

ಆದಿತ್ಯಾಯಾದಿದೇವಾಯ ನಮಸ್ತೇ ರಶ್ಮಿಮಾಲಿನೇ ।
ದಿವಾಕರಾಯ ದೀಪ್ತಾಯ ಅಗ್ನಯೇ ಮಿಹಿರಾಯ ಚ ॥ ೩ ॥

ಪ್ರಭಾಕರಾಯ ಮಿತ್ರಾಯ ನಮಸ್ತೇಽದಿತಿಸಂಭವ ।
ನಮೋ ಗೋಪತಯೇ ನಿತ್ಯಂ ದಿಶಾಂ ಚ ಪತಯೇ ನಮಃ ॥ ೪ ॥

---

## ಎಪ್ಪತ್ತೊಂದನೆಯ ಅಧ್ಯಾಯ

೧-೪. ಬ್ರಹ್ಮನು ಹೇಳುತ್ತಾನೆ—ಯಾವ ಹೆಸರುಗಳ ಮೂಲಕ ಸ್ತುತಿಸಿದರೆ ಸೂರ್ಯನು ಸಂತುಷ್ಟನಾಗುವನೋ ಅವುಗಳನ್ನು ಕ್ರಮವಾಗಿ ಹೇಳುತ್ತೇನೆ ಕೇಳು, ಎಂದು ಈ ಸ್ತೋತ್ರವನ್ನು ಹೇಳಿದನು.—ಸೂರ್ಯಾಯನಮಃ, ನಿತ್ಯಾಯನಮಃ, ರವಯೇನಮಃ, ಭಾನವೇನಮಃ, ಭಾಸ್ಕರಾಯನಮಃ, ಪತಂಗಾಯನಮಃ, ಮಾರ್ತಂಡಾಯನಮಃ, ವಿವಸ್ವತೇನಮಃ, ಆದಿತ್ಯಾಯನಮಃ, ಆದಿ ದೇವಾಯನಮಃ, ರಶ್ಮಿಮಾಲಿನೇನಮಃ, ದಿವಾಕರಾಯನಮಃ, ದೀಪ್ತಾಯನಮಃ, ಅಗ್ನಯೇನಮಃ, ಮಿಹಿರಾಯನಮಃ, ಪ್ರಭಾಕರಾಯನಮಃ, ಮಿತ್ರಾಯನಮಃ, ಅದಿತಿ ಸಂಭವಾಯನಮಃ, ಗೋಪತಯೇನಮಃ, ದಿಶಾಂಪತಯೇನಮಃ, ನಿತ್ಯಾಯನಮಃ.

ನಮೋ ಧಾತ್ರೇ ವಿಧಾತ್ರೇ ಚ ಅರ್ಯಮ್ಣೇ ವರುಣಾಯ ಚ ।
ಪೂಷ್ಣೇ ಭಗಾಯ ಮಿತ್ರಾಯ ಪರ್ಜನ್ಯಾಯಾಂಶವೇ ನಮಃ ॥ ೫ ॥

ನಮೋ ಹಿತಕೃತೇ ನಿತ್ಯಂ ಧರ್ಮಾಯ ತಪನಾಯ ಚ ।
ಹರಯೇ ಹರಿತಾಶ್ವಾಯ ವಿಶ್ವಸ್ಯ ಪತಯೇ ನಮಃ ॥ ೬ ॥

ವಿಷ್ಣವೇ ಬ್ರಹ್ಮಣೇ ನಿತ್ಯಂ ತ್ರ್ಯಂಬಕಾಯ ತಥಾತ್ಮನೇ ।
ನಮಸ್ತೇ ಸಪ್ತಲೋಕೇಶ ನಮಸ್ತೇ ಸಪ್ತಸಪ್ತಯೇ ॥ ೭ ॥

ಏತಸ್ಮೈ ಹಿ ನಮಸ್ತುಭ್ಯಂ ಏಕಚಕ್ರರಥಾಯ ಚ ।
ಜ್ಯೋತಿಷಾಂ ಪತಯೇ ನಿತ್ಯಂ ಸರ್ವಪ್ರಾಣಭೃತೇ ನಮಃ ॥ ೮ ॥

ಹಿತಾಯ ಸರ್ವಭೂತಾನಾಂ ಶಿವಾಯಾರ್ತಿಹರಾಯ ಚ ।
ನಮಃ ಪದ್ಮಪ್ರಬೋಧಾಯ ನಮೋ ವೇದಾದಿಮೂರ್ತಯೇ ॥ ೯ ॥

---

೫ ಧಾತ್ರೇನಮಃ, ವಿಧಾತ್ರೇನಮಃ, ಅರ್ಯಮ್ಣೇನಮಃ, ವರುಣಾಯನಮಃ, ಪೂಷ್ಣೇನಮಃ, ಭಗಾಯನಮಃ, ಮಿತ್ರಾಯನಮಃ, ಪರ್ಜನ್ಯಾಯನಮಃ, ಅಂಶವೇ ನಮಃ.

೬. ನಿತ್ಯಂ ಹಿತಕೃತೇನಮಃ, ಧರ್ಮಾಯನಮಃ, ತಪನಾಯನಮಃ, ಹರಯೇನಮಃ, ಹರಿತಾಶ್ವಾಯನಮಃ, ವಿಶ್ವಸ್ಯಪತಯೇನಮಃ.

೭. ವಿಷ್ಣವೇನಮಃ ಬ್ರಹ್ಮಣೇನಮಃ ನಿತ್ಯಾಯನಮಃ, ತ್ರ್ಯಂಬಕಾಯ ನಮಃ, ಆತ್ಮನೇನಮಃ, ಸಪ್ತಲೋಕೇಶಾಯನಮಃ, ಸಪ್ತಸಪ್ತಯೇನಮಃ.

೮. ಏತಸ್ಮೈನಮಃ, ಏಕಚಕ್ರರಥಾಯನಮಃ, ಜ್ಯೋತಿಷಾಂಪತಯೇನಮಃ ನಿತ್ಯಂ ಸರ್ವಪ್ರಾಣಭೃತೇನಮಃ.

೯. ಸರ್ವಭೂತ ಹಿತಾಯನಮಃ, ಶಿವಾಯನಮಃ, ಆರ್ತಿಹರಾಯನಮಃ, ಪದ್ಮಪ್ರಬೋಧಾಯನಮಃ, ವೇದಾದಿಮೂರ್ತಯೇನಮಃ.

ಕಾಧಿಜಾಯ ನಮಸ್ತುಭ್ಯಂ ನಮಸ್ತಾರಾಸುತಾಯ ಚ ।
ಭೀಮಜಾಯ ನಮಸ್ತುಭ್ಯಂ ಪಾವಕಾಯ ಚ ವೈ ನಮಃ ॥ ೧೦ ॥

ಧಿಷಣಾಯ ನಮೋ ನಿತ್ಯಂ ನಮಃ ಕೃಷ್ಣಾಯ ನಿತ್ಯಶಃ ।
ನಮೋಽಸ್ತ್ವದಿತಿಪುತ್ರಾಯ ನಮೋ ಲಕ್ಷ್ಯಾಯ ನಿತ್ಯಶಃ । ॥ ೧೧ ॥

ಏತಾನ್ಯಾದಿತ್ಯನಾಮಾನಿ ಮಯಾ ಪ್ರೋಕ್ತಾನಿ ವೈ ಪುರಾ ।
ಆರಾಧನಾಯ ದೇವಸ್ಯ ಸರ್ವಕಾಮೇನ ಸುವ್ರತ ॥ ೧೨ ॥

ಸಾಯಂ ಪ್ರಾತಃ ಶುಚಿರ್ಭೂತ್ವಾ ಯಃ ಪಠೇತ್ಸು ಸಮಾಹಿತಃ ।
ಸ ಪ್ರಾಪ್ನೋತ್ಯಖಿಲಾನ್ ಕಾಮಾನ್ ಯಥಾಹಂ ಪ್ರಾಪ್ತವಾನ್ ಪುರಾ ॥ ೧೩ ॥

ಪ್ರಸಾದಾತ್ತಸ್ಯ ದೇವಸ್ಯ ಭಾಸ್ಕರಸ್ಯ ಮಹಾತ್ಮನಃ ।
ಶ್ರೀಕಾಮಃ ಶ್ರೀಯಮಾಪ್ನೋತಿ ಧರ್ಮಾರ್ಥೀ ಧರ್ಮಮಾಪ್ನುಯಾತ್ ॥ ೧೪

---

೧೦. ಕಾಧಿಜಾಯನಮಃ, ತಾರಾಸುತಾಯನಮಃ, ಭೀಮಜಾಯನಮಃ ಪಾವಕಾಯನಮಃ.

೧೧. ಧಿಷಣಾಯನಮಃ, ಕೃಷ್ಣಾಯನಮಃ, ಅದಿತಿಪುತ್ರಾಯನಮಃ, ನಿತ್ಯ ಲಕ್ಷ್ಯಾಯನಮಃ.

೧೨. ಅಯ್ಯಾ ಸುವ್ರತನೇ ! ಸರ್ವವನ್ನೂ ಅಪೇಕ್ಷಿಸುವವನು ಸೂರ್ಯನನ್ನು ಸ್ತುತಿಸುವುದಕ್ಕಾಗಿ ಪೂರ್ವದಲ್ಲಿ ನಾನು ಹೇಳಿದ ಸೂರ್ಯನ ಹೆಸರುಗಳು ಇವು.

೧೩. ಪರಿಶುದ್ಧನಾಗಿ (ಮಡಿಯುಟ್ಟು) ಶಾಂತಮನಸ್ಸಿಂದ ಸಾಯಂಕಾಲ ಪ್ರಾತಃಕಾಲಗಳಲ್ಲಿ ಯಾರು ಈ ಸ್ತೋತ್ರ ಪಠನೆಮಾಡುವರೋ ಅವರಿಗೆ ಸಮಸ್ತ ಇಷ್ಟಾರ್ಥಗಳೂ ಲಭಿಸುತ್ತವೆ. ಇದರಿಂದಲೇ ಪೂರ್ವದಲ್ಲಿ ನಾನು ಸಮಸ್ತವನ್ನೂ ಪಡೆದಿದ್ದೆನು.

೧೪. ಮಹಾತ್ಮನಾದ ಸೂರ್ಯದೇವನ ಅನುಗ್ರಹದಿಂದ ಸಂಪತ್ತನ್ನು ಅಪೇಕ್ಷಿಸುವವನು ಸಂಪತ್ತನ್ನು ಹೊಂದುತ್ತಾನೆ. ಧರ್ಮವನ್ನು ಅಪೇಕ್ಷಿಸುವವನು ಧರ್ಮವನ್ನು ಹೊಂದುತ್ತಾನೆ.

ಆತುರೋ ಮುಚ್ಯತೇ ರೋಗಾತ್ ಬದ್ಧೋ ಮುಚ್ಯೇತ ಬಂಧನಾತ್ ।
ರಾಜ್ಯಾರ್ಥೀ ರಾಜ್ಯಮಾಪ್ನೋತಿ ಕಾಮಾರ್ಥೀ ಕಾಮವಾಪ್ನುಯಾತ್ ॥ ೧೫ ॥

ಏತಜ್ಜಪ್ಯಂ ರಹಸ್ಯಂ ಚ ಸಂಧ್ಯೋಪಾಸನಮೇವ ಚ ।
ಏತೇನ ಜಪಮಾತ್ರೇಣ ನರಃ ಪಾಪಾತ್ ಪ್ರಮುಚ್ಯತೇ ॥ ೧೬ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇ ಪರ್ವಣಿ ಬ್ರಹ್ಮಪ್ರೋಕ್ತ ಸೂರ್ಯನಾಮ ವರ್ಣನಂ ನಾಮ ಏಕಸಪ್ತತಿತಮೋಽಧ್ಯಾಯಃ.



---

೧೫- ರೋಗಗಳಿಂದ ನರಳುವವನು ರೋಗದಿಂದ ಗುಣಹೊಂದುತ್ತಾನೆ. ಸೆರೆಸಿಕ್ಕಿದವನು ಸೆರೆಯಿಂದ ಬಿಡುಗಡೆ ಹೊಂದುತ್ತಾನೆ. ರಾಜ್ಯವನ್ನು ಕಳೆದುಕೊಂಡು ಪುನಃ ರಾಜ್ಯವನ್ನು ಅಪೇಕ್ಷಿಸುವವನು ರಾಜ್ಯವನ್ನು ಪಡೆಯುತ್ತಾನೆ. ಇಷ್ಟಗಳನ್ನು ಕುರಿತುಕೊಂಡವನು ತನ್ನ ಇಷ್ಟಾರ್ಥಗಳನ್ನು ಹೊಂದುತ್ತಾನೆ.

೧೬. ಮೂರು ಸಂಧ್ಯೆಗಳಲ್ಲೂ ಈತನನ್ನು ಉಪಾಸನೆಮಾಡಿ ರಹಸ್ಯವಾಗಿ ಜಪವನ್ನು ಮಾಡಿದವನು ಸಮಸ್ತಪಾಪಗಳಿಂದಲೂ ಮುಕ್ತನಾಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದಲ್ಲಿ ಬ್ರಾಹ್ಮಪರ್ವದಲ್ಲಿ ಬ್ರಹ್ಮನು ಹೇಳಿದ ಸೂರ್ಯನಾಮ ವರ್ಣನೆ ಎಂಬ ಎಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ದ್ವಿಸಪ್ತತಿತಮೋಽಧ್ಯಾಯಃ

॥ ಸುಮಂತುರುವಾಚ ॥

ಇತ್ಥಂ ಬ್ರಹ್ಮವಚೋ ಯೋಗೀ ಶ್ರುತ್ವಾ ರಾಜನ್ ದಿವಾಕರಂ ।
ವ್ಯೋಮರೂಪಂ ಸಮಾರಾಧ್ಯ ಗತಃ ಸೂರ್ಯಸಲೋಕತಾಂ ॥ ೧ ॥

ತಥಾ ತ್ವಮಪಿ ರಾಜೇಂದ್ರ ಪೂಜಯಿತ್ವಾ ವಿಭಾವಸುಂ ।
ಗಮಿಷ್ಯಸಿ ಪರಂ ಸ್ಥಾನಂ ದೇವಾನಾಮಪಿ ದುರ್ಲಭಂ ॥ ೨ ॥

॥ ಶತಾನೀಕ ಉವಾಚ ॥

ಆದ್ಯಂ ಸ್ಥಾನಂ ರವೇಃ ಕುತ್ರ ಜಂಬೂದ್ವೀಪೇ ಮಹಾಮುನೇ ।
ಯತ್ರ ಪೂಜಾಂ ವಿಧಾನೋಕ್ತಾಂ ಪ್ರತಿಗೃಹ್ಣಾತ್ಯಸೌ ರವಿಃ ॥ ೩ ॥

---

## ಎಪ್ಪತ್ತೆರಡನೆಯ ಅಧ್ಯಾಯ

೧-೨. ಸುಮಂತು ಮುನಿವರ್ಯರು ಹೇಳುತ್ತಾರೆ—ಅಯ್ಯಾ, ರಾಜನೇ,! ಯಾಜ್ಞವಲ್ಕ್ಯನು ಬ್ರಹ್ಮನ ಮಾತನ್ನು ಕೇಳಿ ವ್ಯೋಮಸ್ವರೂಪನಾದ ಆ ಸೂರ್ಯನನ್ನು ಆರಾಧಿಸಿ ಸೂರ್ಯಲೋಕವನ್ನು ಹೊಂದಿದನು. ರಾಜೇಂದ್ರನೇ! ನೀನೂ ಹಾಗೆಯೇ ಸೂರ್ಯನನ್ನು ಪೂಜಿಸು. ದೇವತೆಗಳಿಗೂ ದೊರೆಯಲು ಕಷ್ಟವಾಗಿರುವ ಶ್ರೇಷ್ಠವಾದ ಸ್ಥಾನವನ್ನು ಹೊಂದುತ್ತೀಯೆ.

೩. ಅಯ್ಯಾ, ಮಹರ್ಷಿಯೇ! ಜಂಬೂದ್ವೀಪದಲ್ಲಿ ಸೂರ್ಯನು ಮೊದಲು ಯಾವ ಸ್ಥಳದಲ್ಲಿ ಪೂಜಿತನಾದನು. ಯಾವ ಸ್ಥಾನದಲ್ಲಿ ವಿಧಾನೋಕ್ತವಾಗಿ ಪೂಜಿಸಿದರೆ ಅವನು ಪೂಜೆಯನ್ನು ಸ್ವೀಕರಿಸುವನು ?

॥ ಸುಮಂತುರುವಾಚ ॥

ಸ್ಥಾನಾನಿ ತ್ರೀಣಿ ದೇವಸ್ಯ ದ್ವೀಪೇಽಸ್ಮಿನ್ ಭಾಸ್ಕರಸ್ಯ ತು ।
ಪೂರ್ವ ಮಿಂದ್ರವನಂ ನಾಮ ತಥಾ ಮುಂಡೀರಮುಚ್ಯತೇ ॥ ೪ ॥

ಕಾಲಪ್ರಿಯಂ ತೃತೀಯಂ ತು ತ್ರಿಷು ಲೋಕೇಷು ವಿಶ್ರುತಂ ।
ತಥಾನ್ಯದಪಿ ತೇ ವಚ್ಮಿ ಯತ್ಪುರಾ ಬ್ರಹ್ಮಣೋದಿತಂ ॥ ೫ ॥

ಚಂದ್ರಭಾಗಾ ತಟೇ ನಾಮ್ನಾ ಪುರಂ ಯತ್ಸಾಂಬ ಸಂಜ್ಞಿತಂ ।
ದ್ವೀಪೇಽಸ್ಮಿನ್ ಶಾಶ್ವತಂ ಸ್ಥಾನಂ ಯತ್ರ ಸೂರ್ಯಸ್ಯ ನಿತ್ಯತಾ ॥ ೬ ॥

ಪ್ರೀತ್ಯಾ ಸಾಂಬೇ ತು ತತ್ರಾರ್ಕೋ ಜನಸ್ಯಾನುಗ್ರಹಾಯ ಚ ।
ತತ್ರ ದ್ವಾದಶಭಾಗೇನ ಮಿತ್ರೋ ಮೈತ್ರೇಣ ಚಕ್ಷುಷಾ ॥ ೭ ॥

ಅವಲೋಕಯನ್ ಜಗತ್ಸರ್ವಂ ಶ್ರೇಯೋಽರ್ಥಂ ತಿಷ್ಠತೇ ಸದಾ ।
ಪ್ರಯುಕ್ತಾಂ ವಿಧಿವತ್ಪೂಜಾಂ ಗೃಹ್ಣಾತಿ ಭಗವಾನ್ ಸ್ವಯಂ ॥ ೮ ॥

---

೪–೫. ಸುಮಂತು ಮುನಿವರ್ಯರು ಹೇಳುತ್ತಾರೆ—ಈ ಜಂಬೂದ್ವೀಪದಲ್ಲಿ ಸೂರ್ಯನಿಗೆ ಮೂರು ಸ್ಥಾನಗಳಿವೆ. ಇಂದ್ರವನವೆಂಬುದು ಮೊದಲನೆಯದು. ಮುಂಡೀರವನವೆಂಬುದು ಎರಡನೆಯದು. ಕಾಲಪ್ರಿಯಾ ಎಂಬುದು ಮೂರನೆಯದು. ಇವು, ಮೂರೂ ಲೋಕಪ್ರಸಿದ್ಧವಾದುವು. ಬ್ರಹ್ಮನು ಹೇಳಿದ ಮತ್ತೊಂದು ಸ್ಥಳದ ವಿಚಾರವನ್ನು ಹೇಳುತ್ತೇನೆ,

೬–೭. ಚಂದ್ರಭಾಗಾ ನದಿಯ ದಡದಲ್ಲಿ ಸಾಂಬಪುರವೆಂಬ ಹೆಸರುಳ್ಳ ಪಟ್ಟಣವೇ ಈ ದ್ವೀಪದಲ್ಲಿ ಸೂರ್ಯನಿಗೆ ಶಾಶ್ವತ ಸ್ಥಾನ. ಸಾಂಬನಲ್ಲಿ ತನಗೆ ಇದ್ದ ಪ್ರೀತಿಯಿಂದಲೂ ಜನಕ್ಕೆ ಅನುಗ್ರಹ ಮಾಡುವುದಕ್ಕಾಗಿಯೂ ಸೂರ್ಯನು ಅಲ್ಲಿ ತನ್ನ ದ್ವಾದಶ ರೂಪಗಳಲ್ಲಿ ಮೈತ್ರ ಚಕ್ಷುಸ್ಸಿರುವುದರಿಂದ ಮಿತ್ರ ಎಂಬ ಪ್ರಸಿದ್ಧವಾದ ಹೆಸರಿನಿಂದ ಲೋಕವನ್ನೆಲ್ಲಾ ನೋಡುತ್ತಾ ಸರ್ವ ಜಗತ್ತಿನ ಶ್ರೇಯಸ್ಸಿಗಾಗಿ ಆ ಸಾಂಬಪುರದಲ್ಲಿ ಯಾವಾಗಲೂ ನೆಲಸಿರುತ್ತಾನೆ.

೮. ಆ ಸ್ಥಳದಲ್ಲಿ ವಿಧಿಪ್ರಕಾರವಾಗಿ ಮಾಡಿದ ಪೂಜೆಯನ್ನು ಭಗವಂತನು ತಾನೇ ಸ್ವೀಕರಿಸುತ್ತಾನೆ.

॥ ಶತಾನೀಕ ಉವಾಚ ॥

ಕೋಽಯಂ ಸಾಂಬಃ ಸುತಃ ಕಸ್ಯ ಕಸ್ಯ ಪ್ರಿತೋ ದಿವಾಕರಃ ।
ಯಸ್ಯಚಾಯಂ ಸಹಸ್ರಾಂಶುರ್ವರದಃ ಪುಣ್ಯಕರ್ಮಣಃ ॥ ೯ ॥

ಯ ಏತೇ ದ್ವಾದಶಾದಿತ್ಯಾ ವಿರಾಜಂತೇ ಮಹಾಬಲಾ ।
ತೇಷಾಂ ಯೋ ವಿಷ್ಣು ಸಂಜ್ಞಸ್ತು ಸರ್ವಲೋಕೇಷು ವಿಶ್ರುತಃ ॥ ೧೦ ॥

ಇಹಾಸೌ ವಾಸುದೇವತ್ವಮವಾಪ ಭಗವಾನ್ ವಿಭುಃ ।
ತಸ್ಯಾಂ ಸಾಂಬಃ ಸುತೋ ಜಜ್ಞೇ ಜಾಂಬವತ್ಯಾಂ ಮಹಾಬಲಃ ॥ ೧೧ ॥

ಸ ತು ಪಿತ್ರಾ ಭೃಶಂ ಶಪ್ತಃ ಕುಷ್ಠರೋಗಮವಾಪ್ತವಾನ್ ।
ತೇನಾಯಂ ಸ್ಥಾಪಿತಃ ಸೂರ್ಯಃ ಸ್ವನಾಮ್ನಾ ಚ ಪುರಂ ಕೃತಂ ॥ ೧೨ ॥

---

೯. ಶತಾನೀಕ ರಾಜನು ಕೇಳುತ್ತಾನೆ–ಸೂರ್ಯನು ಯಾರಿಗೆ ಪ್ರೀತನಾದನೋ ಆ ಸಾಂಬನು ಯಾರ ಮಗನು? ಪುಣ್ಯಕರ್ಮನಾದ ಯಾವನಿಗೆ ಈ ಸಹಸ್ರಾಂಶುವು ಪ್ರತ್ಯಕ್ಷನಾದನೋ ಅವನು ಯಾರು ?

೧೦. ಸುಮಂತು ಮುನಿವರ್ಯರು ಹೇಳುತ್ತಾರೆ—ಮಹಾ ಬಲಶಾಲಿಗಳಾದ ಯಾವ ದ್ವಾದಶಾದಿತ್ಯರು ಉಂಟೋ ಅವರಲ್ಲಿ ವಿಷ್ಣು ಎಂಬ ಹೆಸರಿನವನೊಬ್ಬನು ಪ್ರಸಿದ್ಧನಾಗಿದ್ದಾನೆ. ಆ ಪೂಜ್ಯಸ್ವಾಮಿಯಾದ ವಿಷ್ಣುವೇ ಕೃಷ್ಣ (ವಾಸುದೇವ)ನಾಗಿ ಲೋಕದಲ್ಲಿ ಪ್ರಸಿದ್ಧನಾಗಿದಾನೆ. ಆ ವಾಸುದೇವನ ಪತ್ನಿಯಾದ ಜಾಂಬವತಿಯಲ್ಲಿ ಮಹಾ ಬಲಶಾಲಿಯಾದ ಸಾಂಬನು ಪುತ್ರನಾಗಿ ಜನಿಸಿದನು.

೧೧. ಅವನು ತಂದೆಯ ಕ್ರೂರವಾದ ಶಾಪದಿಂದ ಕುಷ್ಠರೋಗವನ್ನು ಹೊಂದಿದನು. ಆಗ ತನ್ನ ಹೆಸರಿನಿಂದಲೇ ಒಂದು ಪಟ್ಟಣವನ್ನು ಕಟ್ಟಿಸಿದನು. ಅದು ಸಾಂಬ ಪುರವೆಂದು ಪ್ರಸಿದ್ಧವಾಯಿತು. ಅಲ್ಲಿ ಒಂದು ದೇವಾಲಯವನ್ನು ನಿರ್ಮಿಸಿ ಅಲ್ಲಿ ಸೂರ್ಯನನ್ನು ಪ್ರತಿಷ್ಠಿಸಿದನು.

೧೨–೧೩. ಶತಾನೀಕರಾಜನು ಕೇಳುತ್ತಾನೆ—ಯಾವ ಕಾರಣಕ್ಕಾಗಿ ತಂದೆಯಾದ ಕೃಷ್ಣನು ತನ್ನ ಮಗನಾದ ಸಾಂಬನನ್ನೇ ಶಪಿಸಿದನು? ಅಯ್ಯಾ, ಬ್ರಾಹ್ಮಣನೇ!

॥ ಶತಾನೀಕ ಉವಾಚ ॥

ಶಪ್ತಃ ಕಸ್ಮಿನ್ನಿಮಿತ್ತೇsಸೌ ಪಿತ್ರಾಚೈವಾತ್ಮಸಂಭವಃ ।
ನಾಲ್ಪಂ ಹಿ ಕಾರಣಂ ವಿಪ್ರ ಯೇನಾಸೌ ಶಪ್ತವಾನ್ ಸುತಂ ॥ ೧೩ ॥

॥ ಸುಮಂತುರುವಾಚ ॥

ಶೃಣುಷ್ವಾವಹಿತೋ ರಾಜನ್ ತಸ್ಯ ಯಚ್ಛಾಪಕಾರಣಂ ।
ದುರ್ವಾಸಾ ನಾಮ ಭಗವಾನ್ ರುದ್ರಸ್ಯಾಂಶಸಮುದ್ಭವಃ ॥ ೧೪ ॥

ಅಟಮಾನಃ ಸ ಭಗವಾನ್ ತ್ರೀನ್ ಲೋಕಾನ್ ಪ್ರಚಚಾರಹ ।
ಅಥಪ್ರಾಪ್ತೋ ದ್ವಾರವತೀಂ ಮಧುಸಂಜ್ಞೋಚಿತಾಂ ಪುರಾ ॥ ೧೫ ॥

ಸಮಾಗತಂ ಋಷಿಂ ದೃಷ್ಟ್ವಾ ಸಾಂಬೋ ರೂಪೇಣ ಗರ್ವಿತಃ ।
ಪಿಂಗಾಕ್ಷಂ ಕ್ಷುಧಿತಂ ರೂಕ್ಷಂ ವಿರೂಪಂ ಸುಕೃಶಂ ತಥಾ ॥ ೧೬ ॥

ಅನುಕಾರಾಸ್ಪದಂ ಚಕ್ರೇ ದರ್ಶನೇ ಗಮನೇ ತಥಾ ।
ದೃಷ್ಟ್ವಾ ತಸ್ಯ ಮುಖಂ ಸಾಂಬೋ ವಕ್ರಂ ಚಕ್ರೇ ತಥಾತ್ಮನಃ ॥ ೧೭ ॥

---

ಕೃಷ್ಣಪರಮಾತ್ಮನು ತನ್ನ ಮಗನನ್ನು ಶಪಿಸಬೇಕಾದರೆ ಅದು ಸ್ವಲ್ಪ ಕಾರಣಕ್ಕಿರಲಾರದು, ಎಂದನು.

೧೪. ಸುಮಂತುಮುನಿವರ್ಯರು ಹೇಳುತ್ತಾರೆ—ಅಯ್ಯಾ ರಾಜನೇ! ಅವನಿಗೆ ಶಾಪ ಬಂದುದರ ಕಾರಣವನ್ನು ಹೇಳುತ್ತೇನೆ ಗಮನವಿಟ್ಟು ಕೇಳು.

೧೫. ಭಗವಂತನಾದ ರುದ್ರನ ಅಂಶದಿಂದ ದುರ್ವಾಸನೆಂಬವನು ಹುಟ್ಟಿದನು. ಆ ದುರ್ವಾಸನು ಪ್ರಪಂಚವನ್ನೆಲ್ಲಾ ಸುತ್ತುತ್ತಾ ತ್ರಿಲೋಕವನ್ನೂ ಸಂಚರಿಸಿದನು. ಸಂಚಾರ ಕ್ರಮದಲ್ಲಿ ಮಧು ಎಂದು ನಾಮಕ್ಕೆ ಅರ್ಹವಾದ ದ್ವಾರವತೀ ಪಟ್ಟಣಕ್ಕೆ ಬಂದನು.

೧೬. ತಾನೇ ಸುಂದರನು ಎಂಬ ಹೆಮ್ಮೆಯಿಂದ ಕೂಡಿದ ಈ ಸಾಂಬನು, ಹಳದಿಯ ಕಣ್ಣುಳ್ಳವನೂ, ಹಸಿದು ಬಂದಿರುವವನೂ, ಒರಟಾಗಿ ಕಾಣುವವನೂ, ವಿಕಾರ ರೂಪದಿಂದ ಕೂಡಿವವನೂ, ಕಂಗೆಟ್ಟಿದ್ದವನೂ ಆದ ಆ ದುರ್ವಾಸನನ್ನು ನೋಡಿದನು.

೧೭. ನೋಟದಲ್ಲಿಯೂ, ನಡಗೆಯಲ್ಲಿಯೂ ಅವನನ್ನು ಅನುಕರಿಸಿ ಅಣಕಿಸಿದನು. ಅಯ್ಯಾ ಕುರುಕುಲೋದ್ಭವನೇ! ಆ ದುರ್ವಾಸನ ಮುಖವನ್ನು ನೋಡಿ ಸಾಂಬನು ಯೌವನದಿಂದ ಗರ್ವಪಟ್ಟು ತನ್ನ ಮುಖವನ್ನು ಸೊಟ್ಟಾಗಿ ಮಾಡಿದನು.

ಮುಖಂ ಕುರುಕುಲಶ್ರೇಷ್ಠ ಗರ್ವಿತೋ ಯೌವನೇನ ತು ।
ಅಥ ಕ್ರುದ್ಧೋ ಮಹಾತೇಜಾ ದುರ್ವಾಸಾ ಋಷಿಸತ್ತಮ ॥ ೧೮ ॥

ಸಾಂಬಂ ಚೋವಾಚ ಭಗವಾನ್ ವಿಧುನ್ವನ್ ಮುಖಮಾತ್ಮನಃ ।
ಯಸ್ಮಾದ್ವಿರೂಪಂ ಮಾಂ ದೃಷ್ಟ್ವಾ ಸ್ವಸ್ಯ ರೂಪೇಣ ಗರ್ವಿತಃ ॥ ೧೯ ॥

ಗಮನೇ ದರ್ಶನೇ ಮಹ್ಯಂ ಅನುಕಾರಂ ಸಮಾಚರಃ ।
ತಸ್ಮಾತ್ತ್ವ ಕುಷ್ಠರೋಗಿತ್ವಂ ಅಚಿರಾತ್ವಂ ಗಮಿಷ್ಯಸಿ ॥ ೨೦ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೆ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ
ಸಾಂಬಾಯ ದುರ್ವಾಸಸಾ ಶಾಪವಿಸರ್ಜನಂ
ನಾಮ ದ್ವಿಸಪ್ತತಿತಮೋಽಧ್ಯಾಯಃ.



---

೧೮. ಮಹಾ ತೇಜಸ್ವಿಯೂ, ಋಷಿ ಶ್ರೇಷ್ಠನೂ ಆದ ದುರ್ವಾಸಋಷಿಯು ಇದನ್ನು ನೋಡಿ ಕೋಪಿಸಿಕೊಂಡು ತನ್ನ ಮುಖವನ್ನು ಕೊಡವಿ ಸಾಂಬನನ್ನು ಕುರಿತು

೧೯. "ನಿನ್ನ ಸೌಂದರ್ಯದಿಂದ ನೀನು ಗರ್ವಹೊಂದಿ ನನ್ನ ವಿಕಾರ ರೂಪನ್ನೂ ನನ್ನ ನಡಗೆಯನ್ನೂ ಮಾತನ್ನೂ ಅಣಕಿಸಿದೆ.

೨೦. ಈ ಕಾರಣದಿಂದ ನಿನಗೆ ಕೂಡಲೇ ಕುಷ್ಠರೋಗವು ಪ್ರಾಪ್ತವಾಗುವುದು" ಎಂದು ಶಾಪವಿತ್ತನು.

ಇಲ್ಲಿಗೆ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ
ಸಾಂಬನಿಗೆ ದುರ್ವಾಸನು ಶಾಪ ಕೊಟ್ಟುದು ಎಂಬ
ಎಪ್ಪತ್ತೆರಡನೇ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ತ್ರಿಸಪ್ತತಿತಮೋಽಧ್ಯಾಯಃ

---

॥ ಸುಮಂತುರುವಾಚ ॥

ಏತಸ್ಮಿನ್ನೇವ ಕಾಲೇ ತು ನಾರದೋ ಭಗವಾನ್ ಋಷಿಃ ।
ಬ್ರಹ್ಮಣೋ ಮಾನಸಃ ಪುತ್ರಃ ತ್ರಿಷು ಲೋಕೇಷು ವಿಶ್ರುತಃ ॥ ೧ ॥

ಸರ್ವಲೋಕಚರಃ ಸೋಽಥ ಅಟಮಾನಃ ಸಮಂತತಃ ।
ವಾಸುದೇವಂ ಸ ವೈ ದ್ರಷ್ಟುಂ ನಿತ್ಯಂ ದ್ವಾರವತೀಂ ಪುರೀಂ ॥ ೨ ॥

ಆಯಾತಿ ಋಷಿಭಿಃ ಸಾರ್ಧಂ ಕ್ರೋಧನೋ ಮುನಿಸತ್ತಮಃ ।
ಅಥಾಗಚ್ಛತಿ ತಸ್ಮಿಂಸ್ತು ಸರ್ವೇ ಯದುಕುಮಾರಕಾಃ ॥ ೩ ॥

---

## ಎಪ್ಪತ್ತಮೂರನೆಯ ಅಧ್ಯಾಯ

೧-೨. ಬಹ್ಮ ಮಾನಸ ಪುತ್ರನೂ, ತ್ರಿಲೋಕಪ್ರಸಿದ್ಧನೂ, ಪೂಜ್ಯನೂ, ಸರ್ವ ಲೋಕಗಳಲ್ಲೂ ಸಂಚರಿಸುವ ಸ್ವಭಾವವುಳ್ಳವನೂ- ಆದ ನಾರದ ಮಹರ್ಷಿಯು ಲೋಕ ಸಂಚಾರಮಾಡುತ್ತಾ ಕೃಷ್ಣನನ್ನು ಸಂದರ್ಶಿಸಲು ಆಗಾಗ್ಗೆ ದ್ವಾರಕಾಪಟ್ಟಣಕ್ಕೆ ಬರುವ ಪದ್ಧತಿಯನ್ನಿಟ್ಟುಕೊಂಡಿದ್ದನು.

೩. ಕೋಪಶೀಲನಾದ ಆ ಮುನಿಶ್ರೇಷ್ಠನು ಮತ್ತೆ ಕೆಲವು ಋಷಿಗಳೊಡನೆ ಒಂದುಸಲ ದ್ವಾರಕೆಗೆ ಬಂದನು.

**ಪ್ರದ್ಯುಮ್ನ ಪ್ರಭೃತಯೋ ಯೇ ಪ್ರಹ್ವಾಶ್ಚಾವನತಾಃ ಸ್ಥಿತಾಃ ।**
**ಅಭಿವಾದ್ಯರ್ಘ್ಯ ಪದ್ಯಾಭ್ಯಾಂ ಪೂಜಾಂ ಚಕ್ರುಃ ಸಮಂತತಃ ॥ ೪ ॥**

**ಸಾಂಬಸ್ತ್ವವಶ್ಯಭಾವಿತ್ವಾತ್ ತಸ್ಯ ಶಾಪಸ್ಯಕಾರಣಂ ।**
**ಅವಜ್ಞಾಂ ಕುರುತೇ ನಿತ್ಯಂ ನಾರದಸ್ಯ ಮಹಾತ್ಮನಃ ॥ ೫ ॥**

**ರತಃ ಕ್ರೀಡಾಸು ವೈ ನಿತ್ಯಂ ರೂಪಯೌವನ ಗರ್ವಿತಃ ।**
**ಅವಿನೀತಂ ತು ತಂ ದೃಷ್ಟ್ವಾ ಚಿಂತಯಾಮಾಸ ನಾರದಃ ॥ ೬ ॥**

**ಅಸ್ಯಾಹಮವಿನೀತಸ್ಯ ಕರಿಷ್ಯೇ ವಿನಯಂ ಶುಭಂ ।**
**ಏವಂ ಸಂಚಿಂತಯಿತ್ವಾ ತು ವಾಸುದೇವಮಥಾಬ್ರವೀತ್ ॥ ೭ ॥**

**ಇಮಾಃ ಷೋಡಶಸಾಹಸ್ರ್ಯಃ ಸ್ತ್ರಿಯೋ ಯಾದವಸತ್ತಮ ।**
**ಸರ್ವಾಸಾಂ ಹಿ ಸದಾ ಸಾಂಬೇ ಭಾವೋ ದೇವ ಸಮಾಶ್ರಿತಃ ॥ ೮ ॥**

---

೪. ಮಹಾತ್ಮರು ತಮ್ಮ ಪಟ್ಟಣಕ್ಕೆ ಬರಲಾಗಿ ಪ್ರದ್ಯುಮ್ನನೇ ಮುಂತಾದ ಯದುಕುಮಾರರೆಲ್ಲರೂ ಆ ನಾರದ ಋಷಿವರ್ಯರಿಗೆ ನಮ್ರತೆಯಿಂದ, ತಲೆಬಾಗಿ ನಮಸ್ಕರಿಸಿ ಅರ್ಘ್ಯಪಾದ್ಯಾದಿಗಳನ್ನು ಸಮರ್ಪಿಸಿ ಪೂಜಿಸಿದರು.

೫. ಸಾಂಬನಿಗೆ ಶಾಪ ಪ್ರಾಪ್ತವಾಗಬೇಕಾದುದು ಅವನ ಅದೃಷ್ಟದಲ್ಲಿ ಸಂಭವವಾಗಿದ್ದುದರಿಂದ ತನ್ನ ಸೌಂದರ್ಯ, ಪ್ರಾಯ, ಇವುಗಳ ಮದದಿಂದ ಅವನು ಮಹಾತ್ಮರಾದ ನಾರದರಲ್ಲಿ ಯಾವಾಗಲೂ ತಿರಸ್ಕಾರ ತೋರಿಸುತ್ತಾ ತನ್ನ ಆಟಗಳಲ್ಲಿ ಆಸಕ್ತನಾಗಿರುತ್ತಿದ್ದನು.

೬-೭. ಸಾಂಬನ ಈ ಅವಿಧೇಯತೆಯನ್ನು ನೋಡಿ ನಾರದನು ಆಲೋಚಿಸಿ "ನಾನು ಈ ಅವಿಧೇಯನಲ್ಲಿ ಒಳ್ಳೆಯ ವಿಧೇಯತೆನ್ನುಂಟುಮಾಡಬೇಕು" ಎಂದು ಆಲೋಚಿಸಿ ಶ್ರೀ ಕೃಷ್ಣನ ಬಳಿಗೆ ಬಂದು ಹೀಗೆಂದನು.

೮-೯. ಎಲೈ, ಯದವಂಶ ಶ್ರೇಷ್ಠನಾದ ಸ್ವಾಮಿಯೇ! ನಿನ್ನ ಈ ಹದಿನಾರು ಸಾವಿರ ಸ್ತ್ರೀಯರೆಲ್ಲರಿಗೂ ಯಾವಾಗಲೂ ಸಾಂಬನಲ್ಲಿ ಪ್ರಿಯಭಾವವುಂಟಾಗಿದೆ. ಸ್ಥಾವರ ಜಂಗಮವಾದ ಈ ಪ್ರಪಂಚದಲ್ಲಿ ಈ ಸಾಂಬನ ಸೌಂದರ್ಯಕ್ಕೆ ಸಮಾನನಾದ

ರೂಪೇಣಾಪ್ರತಿಮಃ ಸಾಂಬೋ ಲೋಕೇಽಸ್ಮಿನ್ ಸಚರಾಚರೇ ।
ಸದಾ ಹೀಚ್ಛಂತಿ ತಾಸ್ತಸ್ಯ ದರ್ಶನಂ ಚಾಪಿಹಿ ಸ್ತ್ರಿಯಃ ॥ ೯ ॥

ಶ್ರುತ್ವೈವಂ ನಾರದಾದ್ವಾಕ್ಯಂ ಚಿಂತಯಾಮಾಸ ಕೇಶವಃ ।
ಯದೇತನ್ನಾರದೇನೋಕ್ತಾದನ್ಯದತ್ರ ತು ಕಿಂಭವೇತ್ ॥ ೧೦ ॥

ವಚನಂ ಶ್ರೂಯತೇ ಲೋಕೇ ಚಾಪಲ್ಯಂ ಸ್ತ್ರೀಷು ವಿದ್ಯತೇ ।
ಶ್ಲೋಕೌ ಚೇಮೌ ಪುರಾ ಗೀತೌ ಚಿತ್ತಜ್ಞೈಯೋರ್ಷಿತಾಂ ದ್ವಿಜೈಃ ॥ ೧೧ ॥

ಪೌಂಶ್ಚಲ್ಯಾಚ್ಚಲಚಿತ್ತಾಚ್ಚ ನೈಃಸ್ನೇಹ್ಯಾಚ್ಚ ಸ್ವಭಾವತಃ ।
ರಕ್ಷಿತಾಃ ಸರ್ವತೋ ಹ್ಯೇತಾ ವಿಕುರ್ವಂತಿ ಹಿ ಭರ್ತೃಷು ॥ ೧೨ ॥

ನೈತಾ ರೂಪಂ ಪರೀಕ್ಷಂತೇ ನಾಸಾಂ ವಯಸಿ ನಿಶ್ಚಯಃ ।
ಸುರೂಪಂ ವಾ ವಿರೂಪಂ ವಾ ಪುಮಾನಿತ್ಯೇವ ಭುಂಜತೇ ॥ ೧೩ ॥

---

ಸೌಂದರ್ಯವಂತರು ಯಾರೂ ಇಲ್ಲ. ಆದುದರಿಂದ ಆ ಸ್ತ್ರೀಯರೆಲ್ಲಾ ಸರ್ವದಾ ಅವನನ್ನು ನೋಡುವುದಕ್ಕೆ ಆಶೆಪಡುತ್ತಾರೆ ಎಂದನು.

೧೦. ನಾರದರು ಹೇಳಿದ ಈ ಮಾತನ್ನು ಕೇಳಿ ಕೃಷ್ಣನು ತನ್ನಲ್ಲಿ ಹೀಗೆಂದು ಆಲೋಚಿಸಿದನು. ನಾರದರು ಹೇಳಿದ ಹಾಗೆಯೇ ಇರಬೇಕು! ಸ್ತ್ರೀಯರಿಗೆ ಚಾಪಲ್ಯ ತಪ್ಪಿದ್ದೇ ಅಲ್ಲ (ಇದ್ದೇ ಇದೆ) ಎಂದು ಲೋಕದಲ್ಲಿ ಎಲ್ಲರೂ ಹೇಳುವುದನ್ನು ಕೇಳುತ್ತೇವೆ. ಸ್ತ್ರೀಯರ ಮನಸ್ಸು ಹೇಗಿದೆ ಎಂಬುದನ್ನು ತಿಳಿದಂಥ ಬ್ರಾಹ್ಮಣರು ಪೂರ್ವದಲ್ಲೇ (ಎಷ್ಟೋ ಹಿಂದೆ) ಈ ಎರಡು ಶ್ಲೋಕಗಳನ್ನು ಹೇಳಿದ್ದಾರೆ.

೧೧-೧೨ ಹೆಂಗಸರು ಗಂಡಸರಿಂದ ಎಲ್ಲಾ ವಿಷಯಗಳಲ್ಲೂ ರಕ್ಷಣೆ ಹೊಂದಿದವರಾಗಿದ್ದರೂ ವ್ಯಭಿಚಾರದ ನಡವಳಿ, ಚಂಚಲಮನಸ್ಸು, ಸ್ವಭಾವವಾಗಿ ಗಂಡನಲ್ಲಿ ಪ್ರೀತಿಯಿಲ್ಲದಿರುವುದು, ಈ ಮೊದಲಾದುವುಗಳಿಂದ ಇವರು ತಮ್ಮ ಗಂಡಂದಿರ ವಿಷಯದಲ್ಲಿ ವಿರುದ್ಧಸ್ವಭಾವದವರಾಗುವರು.

೧೩. ಪುರುಷರು ಸುಂದರರಾಗಿರುವುದರಿಂದ ಆಸಕ್ತಿ ಹುಟ್ಟುವುದೆಂದು, ಸೌಂದರ್ಯಪರೀಕ್ಷೆಯನ್ನು ಮಾಡುವರೆಂದಾಗಲಿ, ವಯಸ್ಸು, ರೂಪ, ಇವು ತನಗೆ ಅನುರೂಪ್ಯವಾಗಿರುವುದರಿಂದ ಆಸಕ್ತಿಗೆ ಕಾರಣ ಎಂಬ ವ್ಯವಸ್ಥೆಯಿಂದ ವಯಃಪರೀಕ್ಷೆ ಮಾಡುವರೆಂದಾಗಲಿ ನಿರ್ಣಯವಿಲ್ಲ. ಸುಂದರನೋ, ಕುರೂಪಿಯೋ ಯಾವನಾದರೂ ಆಗಲಿ ಗಂಡಸಾದರೆ ಸಾಕು ಎಂದು ಸುಖಾನುಭವಮಾಡುವರು.

॥ ಸುಮಂತುರುವಾಚ ॥

ಮನಸಾ ಚಿಂತಯನ್ನೇವಂ ಕೃಷ್ಣೋ ನಾರದಮಬ್ರವೀತ್ ।
ನಹ್ಯಹಂ ಶ್ರದ್ಧಯಾಮ್ಯೇತತ್ ಯದೇತದ್ಭಾಷಿತಂ ತ್ವಯಾ ॥ ೧೪ ॥

ಬ್ರುವಾಣಮೇವಂ ದೇವಂ ತು ನಾರದೋ ವಾಕ್ಯಮಬ್ರವೀತ್ ।
ತಥಾಹಂ ತತ್ಕರಿಷ್ಯಾಮಿ ಯಥಾ ಶ್ರದ್ಧಾಸ್ಯತೇ ಭವಾನ್ ॥ ೧೫॥

ಏವಮುಕ್ತ್ವಾ ಯಯೌ ಸ್ವರ್ಗಂ ನಾರದಸ್ತು ಯಥಾಗತಃ ।
ತತಃ ಕತಿಪಯಾಹೋಭಿಃ ದ್ವಾರಕಾಂ ಪುನರಭ್ಯಗಾತ್ ॥ ೧೬ ॥

ತಸ್ಮಿನ್ನಹನಿ ದೇವೋಽಪಿ ಸಹಾಂತಃಪುರಿಕೈರ್ಜನೈಃ ।
ಅನುಭೂಯ ಜಲಕ್ರೀಡಾಂ ಪಾನಮಾಸೇವತೇ ರಹಃ ॥ ೧೭ ॥

ರಮ್ಯೈರೈವತಕೋದ್ಯಾನೇ ನಾನಾದ್ರುಮವಿಭೂಷಿತೇ ॥ ೧೮ ॥

---

೧೪. ಸುಮಂತುಮುನಿವರ್ಯರು ಮುಂದುವರಿಸಿ—ಕೃಷ್ಣನು ತನ್ನ ಮನಸ್ಸಿನಲ್ಲೇ ಹೀಗೆಲ್ಲಾ ಆಲೋಚಿಸಿ, ನಾರದರನ್ನು ಕುರಿತು "ನೀನು ಹೇಳಿದ ಈ ಮಾತನ್ನು ನಾನು ನಂಬುವುದಿಲ್ಲ" ಎಂದನು.

೧೫. ಕೃಷ್ಣನು ಹೀಗೆ ಹೇಳಿದುದನ್ನು ಕೇಳಿ ನಾರದನು ಮತ್ತೆ ಮತ್ತೆ ಹೇಳತೊಡಗಿ ಈ "ವಿಚಾರವು ನಿನಗೆ ನಂಬಿಕೆ ಹುಟ್ಟುವ ಹಾಗೆ ಮಾಡುತ್ತೇನೆ" ಎಂದು ಹೇಳಿದನು.

೧೬-೧೯. ಬಳಿಕ ಆದಿನ ನಾರದನು ಎಂದಿನಂತೆ ಸ್ವರ್ಗಲೋಕಕ್ಕೆ ಹೋದನು. ಕೆಲವುಕಾಲದ ಮೇಲೆ ಆತನು ಒಂದುದಿನ ಮತ್ತೆ ದ್ವಾರಕಾಪುರಕ್ಕೆ ಬಂದನು. ಆದಿನ ಕೃಷ್ಣಸ್ವಾಮಿಯು ಅಂತಃಪುರದ ಸ್ತ್ರೀಯರೊಡನೆ ಕೂಡಿ ಜಲಕ್ರೀಡೆಯನ್ನು ಮಾಡಿದನು, ರೈವತಪರ್ವತ ಪ್ರಾಂತದೊಂದು ಸುಂದರವಾದ ಉದ್ಯಾನವನವು ಅನೇಕ ಮರಗಳಿಂದ ಅಲಂಕೃತವಾಗಿದ್ದಿತು. ಆ ದ್ರುಮಗಳು ಸರ್ವಋತುಗಳಲ್ಲೂ ಹೂ ಬಿಡುವವುಗಳಾಗಿ ಉದ್ಯಾನವನವೆಲ್ಲಾ ಘಮಘಮಿಸುತ್ತಿತ್ತು ಅರಳಿದ ಕಮಲಗಳ ಗುಂಪುಗಳಿಂದ ಕೂಡಿದ ಕೊಳಗಳಿಂದ ಶೋಭಿಸುತ್ತಿತ್ತು. ಹಂಸ, ಸಾರಸ ಮುಂತಾದ ಪಕ್ಷಿಗಳು

ಸರ್ವರ್ತುಕ ಕುಸುಮೈರ್ನಿತ್ಯಂ ವಾಸಿತೇ ಸರ್ವಕಾನನೇ ।
ನಾನಾ ಫುಲ್ಲಾಂಬುಜವ್ರಾತ ದೀರ್ಘಿಕಾಭಿರಲಂಕೃತೇ ॥
ಹಂಸಸಾರಸ ಸಂಘುಷ್ಟೇ ಚಕ್ರವಾಕೋಪಶೋಭಿತೇ ॥ ೧೯ ॥

ತಸ್ಮಿನ್ ಸ ರಮತೇ ದೇವಃ ಸ್ತ್ರೀಭಿಃ ಪರಿವೃತಸ್ತದಾ ।
ಹಾರನೂಪುರಕೇಯೂರ ರಶನಾದ್ಯೈರ್ವಿಭೂಷಣೈಃ ॥ ೨೦ ॥

ಭೂಷಿತಾನಾಂ ವರಸ್ತ್ರೀಣಾಂ ಚಾರ್ವಂಗೀನಾಂ ವಿಶೇಷತಃ ।
ತಾಭಿಃ ಸಂಪೀಯತೇ ಪಾನಂ ಶುಭಗಂಧಾನ್ವಿತಂ ಶುಭಂ ॥ ೨೧ ॥

ಏತಸ್ಮಿನ್ನಂತರೇ ಬುಧ್ವಾ ಮಧುಪಾನಾತ್ತತಃಸ್ತ್ರಿಯಃ ।
ಉವಾಚ ನಾರದಃ ಸಾಂಬಂ ಸಾಂಬೋತ್ತಿಷ್ಠ ಕುಮಾರಕ ॥ ೨೨ ॥

ತ್ವಾಂ ಸಮಾಹ್ವಯತೇ ದೇವೋ ನ ಯುಕ್ತಂ ಸ್ಥಾತುಮತ್ರ ತೇ ।
ತದ್ವಾಕ್ಯಾರ್ಥಮಬುಧ್ವೈವ ನಾರದೇನಾಥ ಚೋದಿತಃ ॥ ೨೩ ॥

ಗತ್ವಾ ತು ಸತ್ವರಂ ಸಾಂಬಃ ಪ್ರಣಾಮಮಕರೋತ್ಪ್ರಭೋಃ ।
ಸಾಷ್ಟಾಂಗಂ ಚ ಹರೇಃ ಸಾಂಬೋ ವಿಧಿವದ್ವಲ್ಲಭಸ್ಯ ಚ ॥ ೨೪ ॥

---

ಧ್ವನಿಮಾಡುತ್ತಿದ್ದುವು ಜಲಕ್ರೀಡೆಯಾಡಿದ ಬಳಿಕ ಕೃಷ್ಣನು ಏಕಾಂತಸ್ಥಳದಲ್ಲಿ ಪಾನಾಸಕ್ತನಾಗಿ ಕುಳಿತಿದ್ದನು.

೨೦-೨೧ ಅಂಥ ಸ್ಥಳದಲ್ಲಿ ಸ್ವಾಮಿಯು ಸ್ತ್ರೀಯರೊಡನೆ ಕ್ರೀಡಿಸಿ, ಹಾರಗಳು, ಕಾಲ್ಕಡಗ, ವಂಕಿ, ಒಡ್ಯಾಣ ಮುಂತಾದ ಒಡವೆಗಳಿಂದ ಶೃಂಗರಿಸಲ್ಪಟ್ಟ ವಿಶೇಷ ಮನೋಹರವಾದ ಅಂಗಗುಳುಳ್ಳ ಸ್ತ್ರೀಯರಮಧ್ಯದಲ್ಲಿ ಕುಳಿತಿದ್ದನು. ಎಲ್ಲರೂ ಸುವಾಸನಾಯುಕ್ತವಾದ ಶುಭಕರವಾದ ಪಾನೀಯದ್ರವ್ಯವನ್ನು ಕುಡಿಯುತ್ತಿದ್ದರು.

೨೨. ಸ್ವಲ್ಪ ಹೊತ್ತಿನಲ್ಲಿ ಮದ್ಯಪಾನದ ಮದವು ಇಳಿದು ಸ್ತ್ರೀಯರೆಲ್ಲರೂ ಎಚ್ಚರಗೊಂಡರು. ಆಗ ನಾರದನು ಅಲ್ಲೆಲ್ಲೋ ಇದ್ದ ಸಾಂಬನನ್ನು ಕುರಿತು ಕುಮಾರ, ಏಳು ನಿನ್ನ ತಂದೆಯು ನಿನ್ನನ್ನು ಕರೆಯುತ್ತಿದ್ದಾನೆ. ನೀನು ಅದನ್ನು ಅಲಕ್ಷ್ಯಮಾಡಿ ಇಲ್ಲಿರುವುದು ಸರಿಯಲ್ಲ," ಎಂದು ಸೂಕ್ಷ್ಮವಾಗಿ ಹೇಳಿದನು.

೨೩-೨೪. ಈ ವಾಕ್ಯದ ಅರ್ಥವನ್ನು ಸಾಂಬನು ಗ್ರಹಿಸದೇ ಇದ್ದುದರಿಂದ ಆ ಮೇಲೆ ನಾರದರಿಂದ ಪ್ರೇರಿತನಾಗಿ ತಂದೆಯಬಳಿಗೆ ಸರಸರನೆ ಹೋಗಿ ಪ್ರಿಯನೂ ಸ್ವಾಮಿಯೂ ಆದ ತಂದೆಗೆ ಶಾಸ್ತ್ರೋಕ್ತವಿಧಾನದಂತೆ ಸಾಷ್ಟಾಂಗವಾಗಿ ನಮಸ್ಕರಿಸಿದನು.

ಏತಸ್ಮಿನ್ನಂತರೇ ತತ್ರ ಯಾಸ್ತು ವೈ ಸ್ವಲ್ಪಸಾತ್ವಿಕಾಃ ।
ತಂ ದೃಷ್ಟ್ವಾ ಸುಂದರಂ ಸಾಂಬಂ ಸರ್ವಾಶ್ಚುಕ್ಷುಭಿರೇ ಸ್ತ್ರಿಯಃ ॥ ೨೫ ॥

ನ ಸ ದೃಷ್ಟಃ ಪುರಾ ಯಾಭಿರಂತಃಪುರನಿವಾಸಿಭಿಃ ।
ಮದ್ಯದೋಷಾ ತ್ತತಸ್ತಾಸಾಂ ಸ್ಮೃತಿಲೋಪಾತ್ತಥಾ ನೃಪ ॥ ೨೬ ॥

ಸ್ವಭಾವತೋಲ್ಪಸತ್ವಾನಾಂ ಜಘನಾನಿ ವಿಸುಸ್ರುವುಃ ।
ಶ್ರೂಯತೇ ಚಾಪ್ಯಯಂ ಶ್ಲೋಕಃ ಪುರಾಣಪ್ರಥಿತಃ ಕ್ಷಿತೌ ॥ ೨೭ ॥

ಬ್ರಹ್ಮಚರ್ಯೇಪಿ ವರ್ತಂತ್ಯಾ ಸಾಧ್ವ್ಯಾಹ್ಯಪಿ ಚ ಶ್ರೂಯತೇ ।
ಹೃದ್ಯಂ ಹಿ ಪುರುಷಂ ದೃಷ್ಟ್ವಾ ಯೋನಿಃ ಸಂಕ್ಲಿದ್ಯತೇ ಸ್ತ್ರಿಯಾಃ ॥ ೨೮ ॥

ಲೋಕೇ ಹಿ ಶ್ರೂಯತೇ ಹ್ಯೇತತ್ ಮದ್ಯಸ್ಯಾತ್ಯರ್ಥಸೇವನಾತ್ ।
ಲಜ್ಜಾಂ ಮುಂಚಂತಿ ನಿಃ ಶಂಕಂ ಹ್ರೀಮತ್ಯೋಽಹ್ಯಪಿ ಹಿ ಸ್ತ್ರಿಯಃ ॥ ೨೯ ॥

---

೨೫. ತತ್ಕಾಲದಲ್ಲಿ ಮನೋನಿಗ್ರಹಸಾಮರ್ಥ್ಯವು ಸ್ವಲ್ಪವೇ ಇದ್ದ ಸ್ತ್ರೀಯರು ಸುಂದರನೂ, ತರುಣನೂ ಆದ ಸಾಂಬನು ಹಾಗೆ ಬಂದುದನ್ನು ನೋಡುತ್ತಲೆ ಅವರ ಮನಸ್ಸೆಲ್ಲಾ ಕಲಕಿಹೋಯಿತು.

೨೬. ಅಂತಃಪುರನಿವಾಸಿನಿಯರಾಗಿ ಅವನನ್ನು ಈ ಹಿಂದೆ ನೋಡಿಯೇ ಇಲ್ಲದಿದ್ದವರಿಗೆ ಮದ್ಯದೋಷದಿಂದ ಎಚ್ಚರತಪ್ಪಿ ಸ್ವಭಾವತಃ ಮನೋನಿಗ್ರಹಸಾಮರ್ಥ್ಯವೂ ಅತ್ಯಲ್ಪವಾಗಿ ಇದ್ದುದರಿಂದ ಜನನೇಂದ್ರಿಯದಲ್ಲಿ ಸ್ರಾವವು ಉಂಟಾಯಿತು.

೨೭. (ಈ ವಿಚಾರದಲ್ಲಿ ಉಕ್ತವಾಗಿರುವ ಪುರಾಣ ಪ್ರಸಿದ್ಧವಾಗಿರುವ ಈ ಶ್ಲೋಕವನ್ನು ಬಹು ಜನರು ಕೇಳಿದ್ದಾರೆ.)

೨೮-೨೯. ಸ್ತ್ರೀಯರು ಬ್ರಹ್ಮಚರ್ಯದಲ್ಲಿಯೇ (ಪುರುಷ ಸಂಗತಿ ಇಲ್ಲದೆ) ಇದ್ದರೂ ಪತಿವ್ರತೆಯರಾಗಿದ್ದರೂ, ಮನೋಹರನಾದ ಪುರುಷನನ್ನು ನೋಡಿದ ಕೂಡಲೇ ಯೋನಿಯು ಸ್ರವಿಸುವುದು. ಈ ವಿಷಯವು ಜನರ ನಡವಳಿಕೆಯಲ್ಲಿ ಕಾಣುವುದು. ನಿತ್ಯದ ನಡವಳಿಕೆಯಲ್ಲಿ ಬಹು ನಾಚಿಕೆಯುಳ್ಳವರಾಗಿದ್ದರೂ ಮದ್ಯವನ್ನು ಅತಿಯಾಗಿ ಸೇವಿಸುವುದರಿಂದ ಆಗ ನಾಚಿಕೆಯನ್ನು ಬಿಟ್ಟು ನಡೆಯುತ್ತಾರೆ.

ಸಮಾಂಸೈರ್ಭೋಜನೈಃ ಸ್ನಿಗ್ಧೈಃ ಪಾನೈಃ ಸೀಧುಸುರಾಸವೈಃ ।
ಗಂಧೈರ್ಮನೋಜ್ಞೈರ್ವಸ್ತ್ರೈಶ್ಚ ಕಾಮಃ ಸ್ತ್ರೀಷು ವಿಜೃಂಭತೇ ॥ ೩೦ ॥

ಸೀಧುಪ್ರಯುಕ್ತಂ ಶುಕ್ರೇಣ ಸತತಂ ಸಾಧುಹೀಚ್ಛತಾ ।
ಮದ್ಯೋ ನ ಪೇಯಮತ್ಯರ್ಥಂ ಪುರುಷೇಣ ವಿಪಶ್ಚಿತಾ ॥ ೩೧ ॥

ನಾರದೋಽಪ್ಯಥ ತಂ ಸಾಂಬಂ ಪ್ರೇಷಯಿತ್ವಾ ತ್ವರಾನ್ವಿತಃ ।
ಆಜಗಾಮಾಥ ತತ್ರೈವ ಸಾಂಬಸ್ಯಾನುಪದೇ ನ ತು ॥ ೩೨ ॥

ಆಯಾಂತಂ ತಾಶ್ಚ ತಂ ದೃಷ್ಟ್ವಾ ಪ್ರಿಯಂ ಸೌಮನಸಂ ಋಷಿಂ ।
ಸಹಸೈವೋತ್ಥಿತಾಃ ಸರ್ವಾ ಸ್ತ್ರಿಯಸ್ತಂ ಮದವಿಹ್ವಲಾಃ ॥ ೩೩ ॥

ತಾಸಾಮಥೋತ್ಥಿತಾನಾಂ ತು ವಾಸುದೇವಸ್ಯ ಪಶ್ಯತಃ ।
ಭಿತ್ವಾ ವಾಸಾಂಸಿ ಶುಭ್ರಾಣಿ ಪತ್ರೇಷು ಪತಿತಾನಿ ತು ॥ ೩೪ ॥

---

೩೦. ಮಾಂಸಸಹಿತವಾದ ಭೋಜನದಿಂದಲೂ ಮಧ್ಯ ಪ್ರಭೇದವಾದ ಸೀಧು ಸುರಾ, ಆಸವ ಎಂಬ ಬಗೆಬಗೆಯ ಪಾನದ್ರವ್ಯಗಳಿಂದಲೂ ಸುಗಂಧ ದ್ರವ್ಯಗಳು ಇವುಗಳ ಲೇಪನಗಳು ಮನೋಹರವಾದ ಆಭರಣಗಳನ್ನು ವಸ್ತ್ರಗಳನ್ನು ಧರಿಸುವುದು, ಇವುಗಳಿಂದಲೂ ಸ್ತ್ರೀಯರಿಗೆ ಕಾಮವೃದ್ಧಿಯಾಗುವುದು.

೩೧. ತನಗೆ ಒಳ್ಳೆಯದಾಗಬೇಕೆಂದು ಅಪೇಕ್ಷಿಸುವ ವಿದ್ವಾಂಸನಾದ ಪುರುಷನು ಶುಕ್ರ ಎಂದರೆ (ಶುಕ್ರಮಸಿ ಆಜ್ಯಂ) ಜಿಡ್ಡು ಮೊದಲಾದುವುಗಳಿಂದ ಕೂಡಿದ ಮಾದಕದ್ರವ್ಯವನ್ನು ಹೆಚ್ಚಾಗಿ ಪಾನಮಾಡಬಾರದು.

೩೨. ಅನಂತರ ಸಾಂಬನನ್ನು ತ್ವರೆಮಾಡಿಕಳುಹಿಸಿ ಅವನ ಹಿಂದೆಯೇ ತಾನೂ ಅಲ್ಲಿಗೇ ಬಂದನು.

೩೩. ಮದವೇರಿ ಮನಸ್ಸು ಗಲಿಬಿಲಿಯಾಗಿರುವ ಆ ಸ್ತ್ರೀಯರು ತಮಗೆ ಪ್ರಿಯತಮನಾದ ಸಾಂಬನೂ, ದೇವರ್ಷಿಯಾದ ನಾರದನೂ ಬರುತ್ತಿರುವುದನ್ನು ನೋಡಿ ಎಲ್ಲರೂ ಥಟ್ಟನೆ ಎದ್ದು ನಿಂತರು.

೩೪. ಕೃಷ್ಣನು ನೋಡುತ್ತಿರುವಂತೆಯೇ ಎದ್ದು ನಿಂತ ಆಸ್ತ್ರೀಯರ ಶುಭ್ರವಾದ ಬಟ್ಟೆಗಳು ಸಡಿಲವಾಗಿ ಅವರು ಕುಳಿತಿದ್ದ ಸ್ಥಳದಲ್ಲಿ ಎಲೆಗಳಮೇಲೆ ಬಿದ್ದುವು.

ತಾಃ ದೃಷ್ಟ್ವಾ ತು ಹರಿಃ ಕ್ರುದ್ಧಃ ಸರ್ವಾಸ್ತಾಃ ಶಪ್ತವಾನ್ ಸ್ತ್ರಿಯಃ ।
ಯಸ್ಮಾದ್ಗತಾನಿ ಚೇತಾಂಸಿ ಮಾಂ ಮುಕ್ತ್ವಾನ್ಯತ್ರ ಚ ಸ್ತ್ರಿಯಃ ॥ ೩೫ ॥

ತಸ್ಮಾತ್ಪತಿಕೃತಾನ್ ಲೋಕಾನ್ ಆಯುಷೋಂತೇ ನ ಯಾಸ್ಯಥ ॥ ೩೬ ॥

ಪತಿಲೋಕಪರಿಭ್ರಷ್ಟಾಃ ಸ್ವರ್ಗಮಾರ್ಗಾತ್ತಥೈವ ಚ ।
ಭೂತ್ವಾ ಚಾ ಶರಣಾ ಯೂಯಂ ದಸ್ಯುಹಸ್ತಂ ಗಮಿಷ್ಯಥ ॥ ೩೭ ॥

॥ ಸುಮಂತುರುವಾಚ ॥

ಶಾಪದೋಷಾ ತ್ತತ ಸ್ತಸ್ಮಾ ತ್ತಾಃ ಸ್ತ್ರಿಯಃ ಸ್ವರ್ಗತೇ ಹರೌ ।
ಹೃತ್ವಾ ಪಾಂಚನದೈರ್ಶ್ಚೋರೈರರ್ಜುನಸ್ಯ ತು ಪಶ್ಯತಃ ॥
ಅಲ್ಪಸತ್ವಾಸ್ತು ಯಸ್ತ್ವಾಸನ್ಗತಾಸ್ತಾ ದೂಷಣಂ ಸ್ತ್ರಿಯಃ ॥ ೩೮ ॥

ರುಕ್ಮಿಣೀ ಸತ್ಯಭಾಮಾ ಚ ತಥಾ ಜಾಂಬವತೀ ಪ್ರಿಯಾ ।
ನೈತಾ ಗತಾ ದಸ್ಯುಹಸ್ತಂ ಸ್ವೇನ ಸತ್ವೇನ ರಕ್ಷಿತಾಃ ॥ ೩೯ ॥

---

೩೫. ಅದನ್ನು ನೋಡಿ ಕೃಷ್ಣನು ಕೋಪಗೊಂಡು ಆ ಸ್ತ್ರೀಯರನ್ನು ನೋಡಿ “ಎಲೌ” ಸ್ತ್ರೀಯರೇ, ಯಾವ ಕಾರಣದಿಂದ ನಿಮ್ಮಗಳ ಮನಸ್ಸು ನನ್ನನ್ನು ಬಿಟ್ಟು ಅನ್ಯತ್ರ (ಸಾಂಬನಲ್ಲಿ) ಚಲಿಸಿದುವೋ ಆ ಕಾರಣದಿಂದ.

೩೬–೩೭ “ಇಹಲೋಕದಲ್ಲಿ ನಿಮ್ಮ ಆಯಸ್ಸು ಮುಗಿದ ಮೇಲೆ ಸಾಧ್ವೀ ಸ್ತ್ರೀಯರಿಗೆ ಪ್ರಾಪ್ತವಾಗಬೇಕಾದ ಪತಿಲೋಕಗಳು ನಿಮಗೆ ಸಿಕ್ಕದೆಹೋಗಲಿ. ಪತಿಯ ಲೋಕವನ್ನೂ ಸ್ವರ್ಗಮಾರ್ಗವನ್ನೂ ಕಳೆದುಕೊಂಡು ದಿಕ್ಕಿಲ್ಲದವರಾಗಿ ಕಳ್ಳಕಾಕರ ಕೈಗೆ ಸಿಕ್ಕಿ ಕ್ಲೇಶಪಡಿ” ಎಂದು ಶಪಿಸಿದರು.

೩೮. ಸುಮಂತುಮುನಿವರ್ಯರು ಹೇಳುತ್ತಾರೆ—ಕಾಲಕ್ರಮದಲ್ಲಿ ಆ ಕೃಷ್ಣನು ಪರಂಧಾಮವನ್ನು ಐದಲಾಗಿ ಆ ಸ್ತ್ರೀಯರು ತಮಗೆ ಪ್ರಾಪ್ತವಾಗಿದ್ದ-ಶಾಪದೋಷದಿಂದ ಕೃಷ್ಣನ ಆಪ್ತನಾದ ಅರ್ಜುನನು ನೋಡುತ್ತಿರುವ ಹಾಗೆಯೇ ಪಂಚನದ ಪ್ರಾಂತದಿಂದ ಬಂದ ಚೋರರ ಕೈಗೆ ಸಿಕ್ಕಿಬಿದ್ದರು. ಸತ್ವ ಕಡಿಮೆಯಾಗಿದ್ದ ಕೆಲವರು ಸ್ತ್ರೀಯರು ದೂಷಣೆಗೆ ಒಳಗಾದರು. ರುಕ್ಮಿಣೀ, ಸತ್ಯಭಾಮೆ, ಜಾಂಬವತೀ, ಮೊದಲಾದ ಕೃಷ್ಣನ ಕಾಂತೆಯರು ತಮ್ಮ ಸತ್ವಾತಿಶಯದಿಂದ ಕಳ್ಳರ ಕೈಗೆ ಸಿಕ್ಕಲಿಲ್ಲ, ಶಾಪಕ್ಕೊಳಗಾಲಿಲ್ಲ. ತಮ್ಮ ಸತ್ವದಿಂದಲೇ ಸುರಕ್ಷಿತೆಯರಾಗಿದ್ದರು.

ಶಪ್ತ್ವೈವ ತಾಃ ಸ್ತ್ರಿಯಃ ಕೃಷ್ಣಃ ಸಾಂಬಮಪ್ಯಶಪತ್ತತಃ ।
ಯಸ್ಮಾ ದತೀವ ತೇ ಕಾಂತಂ ರೂಪಂ ದೃಷ್ಟ್ವಾ ಇಮಾ ಸ್ತ್ರಿಯಃ ॥ ೪೦ ॥

ಕ್ಷುಬ್ಧಾಃ ಸರ್ವಾ ಯತಸ್ತಸ್ಮಾತ್ ಕುಷ್ಠರೋಗಮವಾಪ್ಸ್ಯಹಿ ।
ತಸ್ಯ ತದ್ವಚನಂ ಶ್ರುತ್ವಾ ಸಾಂಬಃ ಕೃಷ್ಣಸ್ಯ ಭಾರತ ॥ ೪೧ ॥

ಉವಾಚ ಪ್ರಹಸನ್ ರಾಜನ್ ಸಂಸ್ಮರನ್ ಋಷಿಭಾಷಿತಂ ।
ಅನಿಮಿತ್ತಮಹಂ ತಾತ ಭಾವದೋಷವಿವರ್ಜಿತಃ ॥
ಶಶಾಪ ಮಾಮತಿಕ್ರುದ್ಧೋ ದುರ್ವಾಸಾ ನಾನ್ಯಥಾ ಭವೇತ್ ॥ ೪೨ ॥

॥ ಸುಮಂತುರುವಾಚ ॥
ಅಸ್ಮಿನ್ ಶಪ್ತೇಽನಿಮಿತ್ತೋಽಸೌ ಪಿತ್ರಾ ಜಾಂಬವತೀಸುತಃ ।
ಪ್ರಾಪ್ತವಾನ್ ಕುಷ್ಠರೋಗಿತ್ವಂ ವಿರೂಪತ್ವಂ ಚ ಭಾರತ ॥ ೪೩ ॥

---

೪೦. ಕೃಷ್ಣನು ಆ ಸ್ತ್ರೀಯರನ್ನು ಶಪಿಸಿದ ಅನಂತರ ಸಾಂಬನನ್ನು ಕುರಿತು "ನೀನು ಉದ್ದೇಶಪೂರ್ವಕವಾಗಿ ಅತ್ಯಂತ ಮನೋಹರವಾಗುವಂತೆ ರೂಪವನ್ನು ಶೃಂಗರಿಸಿಕೊಂಡು ಇಲ್ಲಿಗೆ ಬಂದೆ. ಅದನ್ನು ನೋಡಿ ಈ ಸ್ತ್ರೀಯರೆಲ್ಲರೂ ಕ್ಷುಬ್ಧರಾದರು. ನೀನು ಹೀಗೆ ಅನುಚಿತವನ್ನು ಮಾಡಿದ್ದರಿಂದ ನಿನಗೆ ಕುಷ್ಠರೋಗವು ಬರಲಿ" ಎಂದು ಶಪಿಸಿದನು.

೪೧. ಅಯ್ಯಾ! ಭರತಕುಲೋತ್ಪನ್ನನಾದ ರಾಜನೇ! ಸಾಂಬನು ಕೃಷ್ಣನ ಈ ಮಾತನ್ನು ಕೇಳಿ ನಗುತ್ತಾ ದುರ್ವಾಸರು ಆಡಿದ್ದ ಮಾತನ್ನು ಜ್ಞಾಪಿಸಿಕೊಂಡು ತಂದೆಯನ್ನು ಕುರಿತು ಹೇಳಿದನು.

೪೨. "ತಂದೆಯೇ! ಶಾಪಕ್ಕೆ ಕಾರಣವಾದ ಯಾವ ದೋಷವೂ ನನ್ನ ಭಾವದಲ್ಲಿ ಇಲ್ಲದೇ ಇದ್ದರೂ ಕ್ರುದ್ಧನಾದ ದುರ್ವಾಸನು ನನ್ನನ್ನು ನಿರ್ನಿಮಿತ್ತವಾಗಿ ಶಪಿಸಿದನು. ಇಷ್ಟೇ ಹೊರತು ಇನ್ನೇನೂ ಇಲ್ಲ" ಎಂದನು.

೪೩. ಸುಮಂತು ಮುನಿವರ್ಯರು ಹೇಳುತ್ತಾರೆ—ಅಯ್ಯಾ ಭರತವಂಶಜನೇ! ಹೀಗೆ ಶಾಪಕ್ಕೆ ಸಾಕಾದಷ್ಟು ನಿಮಿತ್ತವಿಲ್ಲದಿದ್ದರೂ ಜಾಂಬವತೀಪುತ್ರನಾದ ಈ ಸಾಂಬನನ್ನು ಆ ದುರ್ವಾಸರು ಶಪಿಸಲಾಗಿ, ಆ ಶಾಪದಿಂದ ಸಾಂಬನಿಗೆ ಕುಷ್ಠರೋಗವು ಪ್ರಾಪ್ತವಾಗಿ ಅವನ ರೂಪವು ವಿಕಾರವಾಯಿತು.

ಸಾಂಬೇನ ಪುನರಪ್ಯೇವ ದುರ್ವಾಸಾಃ ಕೋಪಿತೋ ಮುನಿಃ ।
ತಚ್ಛಾಪಾನ್ಮುಸಲಂ ಜಾತಂ ಕುಲಂ ಯೇನಾಸ್ಯ ಘಾತಿತಂ ॥ ೪೪ ॥

ಶ್ರುತ್ವಾ ಹ್ಯವಿನಯಾದ್ದೋಷಾನ್ ಸಾಂಬೇನಾಪ್ತಾನ್ ಕ್ಷಮಾಧಿಪ ।
ನಿತ್ಯಂ ಭಾವ್ಯಂ ವಿನೀತೇನ ಗುರುದೇವದ್ವಿಜಾತಿಷು ॥
ಪ್ರಿಯಂ ಚ ವಾಕ್ಯಂ ವಕ್ತವ್ಯಂ ಸರ್ವಪ್ರೀತಿಕರಂ ಪ್ರಭೋ (ವಿಭೋ)
॥ ೪೫ ॥

ಕಿಂ ತ್ವಯಾ ನಶ್ರುತೌ ಶ್ಲೋಕೌ ಯಾವುಕ್ತೌ ವೇಧಸಾ ಪುರಾ ।
ಶೃಣ್ವತೋ ದೇವದೇವಸ್ಯ ವ್ಯೋಮಕೇಶಸ್ಯ ಭಾರತ ॥ ೪೬ ॥

ಯೋ ಧರ್ಮಶೀಲೋ ಜಿತಮಾನರೋಷೋ ।
ವಿದ್ಯಾವಿನೀತೋ ನ ಪರೋಪತಾಪೀ ॥
ಸ್ವದಾರತುಷ್ಟಃ ಪರದಾರವರ್ಜಿತೋ ।
ನ ತಸ್ಯ ಲೋಕೇ ಭಯಮಸ್ತಿ ಕಿಂಚಿತ್ ॥ ೪೭ ॥

---

೪೪. ಸಾಂಬನು ಮತ್ತೊಂದು ವೇಳೆಯಲ್ಲಿ ದುರ್ವಾಸರಿಗೆ ಕೋಪವುಂಟಾಗುವಂತೆ ಮಾಡಿದುದರಿಂದ ಅವರ ಶಾಪಬಲದಿಂದ ಒಂದು ಒನಕೆ ಹುಟ್ಟಿತು. ಅದರಿಂದ ಇವನ ಕುಲವೇ ನಿರ್ಮೂಲವಾಯಿತು.

೪೫. ಅಯ್ಯಾ, ರಾಜನೇ! ಸಾಂಬನ ಈ ಅವಿಧೇಯತೆಯಿಂದ ಅವನಿಗೆ ಉಂಟಾದ ತೊಂದರೆಯನ್ನು ಕೇಳಿದರೆ ; ಗುರುಗಳು, ದೇವರು, ಬ್ರಾಹ್ಮಣರು, ಇವರ ವಿಷಯದಲ್ಲಿ ನಾವು ಯಾವಾಗಲೂ ನಮ್ರತೆಯಿಂದ ನಡೆಯಬೇಕು, ಸರ್ವರಿಗೂ ಪ್ರೀತಿಯನ್ನುಂಟುಮಾಡುವ ಪ್ರಿಯವಾಕ್ಯವನ್ನೇ ಆಡಬೇಕು ಎಂದು ನಿರ್ಧರವಾಗುವುದು

೪೬. ಅಯ್ಯಾ, ಭರತಕುಲೋತ್ಪನ್ನನೇ! ಪೂರ್ವದಲ್ಲಿ ದೇವದೇವನಾದ ಪರಮೇಶ್ವರನು ಕೇಳುತ್ತಿದ್ದಾಗ ಬ್ರಹ್ಮನು ಹೇಳಿದ ಈ ಎರಡು ಶ್ಲೋಕಗಳನ್ನು ನೀನು ಕೇಳಿಲ್ಲವೇ ?

೪೭. ಧರ್ಮಶೀಲನು, ಅಹಂಕಾರ, ಕೋಪ, ಇವನ್ನು ಬಿಟ್ಟಿರತಕ್ಕವನು, ವಿದ್ಯೆ ಕಲಿತು ವಿನಯಶೀಲನಾದವನು, ಪರರನ್ನು ಸಂಕಟಪಡಿಸದವನು, ಪರಸ್ತ್ರೀ ವ್ಯಾಮೋಹವನ್ನು ಬಿಟ್ಟು ತನ್ನ ಸ್ತ್ರೀಯಲ್ಲಿ ನಿರತನಾಗಿರತಕ್ಕವನು ಇಂತಹವನಿಗೆ ಲೋಕದಲ್ಲಿ ಯಾವ ಭಯವೂ ಇಲ್ಲ.

**ನ ತಥಾ ಶೀತಲ ಸಲಿಲಂ ನ ಚಂದನರಸೋ ನ ಶೀತಲಚ್ಛಾಯಾ ।**
**ಪ್ರಹ್ಲಾದಯತಿ ಚ ಪುರುಷಂ ಯಥಾ ಮಧುರಭಾಷಿಣೀ ವಾಣೀ ॥ ೪೮ ॥**

**ತತಃ ಶಾಪಾಭಿಭೂತೇನ ಸಮ್ಯಗಾರಾಧ್ಯ ಭಾಸ್ಕರಂ ।**
**ಸಾಂಬೇನಾಪ್ತಂ ತಥಾರೋಗ್ಯಂ ರೂಪಂ ಚ ಪರಮಂ ಪುನಃ ॥ ೪೯ ॥**

**ರೂಪಮಾಪ್ಯ ತಥಾऽऽರೋಗ್ಯಂ ಭಾಸ್ಕರಾದ್ಧರಿಸೂನುನಾ ।**
**ನಿವೇಶಿತೋ ರವಿರ್ಭಕ್ತ್ಯಾ ಸ್ವನಾಮ್ನಾ ಕ್ಷ್ಮಾಧಿಪೇಶ್ವರ ॥ ೫೦ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಾಂಬಕೃತ ಸೂರ್ಯಾರಾಧನವರ್ಣನಂ ನಾಮ ತ್ರಿಸಪ್ತತಿತಮೋऽಧ್ಯಾಯಃ.**



---

೪೮. ಮಧುರ ಭಾಷಣರೂಪವಾದ ವಾಕ್ಕು ಎಷ್ಟು ಸಂತೋಷಪಡಿಸುವುದೋ ಅಷ್ಟರಮಟ್ಟಿಗೆ ತಣ್ಣೀರು, ಸುಗಂಧದ್ರವ, ತಣ್ಣೆಳಲು, ಇವು ಕೂಡ ಸಂತೋಷಪಡಿಸಲಾರವು

೪೯. ಹಾಗೆ ಶಾಪದಿಂದ ಬವಣೆಗೊಂಡ ಸಾಂಬನು ಸೂರ್ಯನನ್ನು ಚೆನ್ನಾಗಿ ಆರಾಧಿಸಿ ಆರೋಗ್ಯವನ್ನೂ, ಮೊದಲಿನಂತೆ ಸುಂದರವಾದ ರೂಪನ್ನೂ ಪಡೆದುಕೊಂಡನು.

೫೦. ಅಯ್ಯಾ, ರಾಜನೇ! ಕೃಷ್ಣನ ಮಗನಾದ ಸಾಂಬನು ಆ ರೀತಿ ಸೂರ್ಯಾರಾಧನೆಯಿಂದ ರೂಪವನ್ನೂ, ಆರೋಗ್ಯವನ್ನೂ ಹೊಂದಿ ತನ್ನ ಹೆಸರಿನಲ್ಲಿ ಸೂರ್ಯ ಪ್ರತಿಮೆಯೊಂದನ್ನು ಭಕ್ತಿಯಿಂದ ಸ್ಥಾಪಿಸಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಸಾಂಬನು ಮಾಡಿದ ಸೂರ್ಯಾರಾಧನೆಯ ವರ್ಣನೆಯೆಂಬ ಎಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಚತುಸ್ಸಪ್ತತಿತಮೋಽಧ್ಯಾಯಃ

॥ ಶತಾನೀಕ ಉವಾಚ ॥

ಸ್ಥಾಪಿತೋ ಯದಿ ಸಾಂಬೇನ ಸೂರ್ಯಶ್ಚಂದ್ರಸರಿತ್ತಟೇ ।
ತಸ್ಮಾನ್ನಾದ್ಯಮಿದಂ ಸ್ಥಾನಂ ಯಥೈತದ್ಭಾಷತೇ ಭವಾನ್ ॥ ೧ ॥

॥ ಸುಮಂತುರುವಾಚ ॥

ಆದ್ಯಂ ಸ್ಥಾನಮಿದಂ ಭಾನೋಃ ಪಶ್ಚಾತ್ಸಾಂಬೇನ ನಿರ್ಮಿತಂ ।
ವಿಸ್ತರೇಣ ತಥಾದ್ಯಾಸ್ಯ ಕಥ್ಯಮಾನಂ ನಿಬೋಧ ಮೇ ॥ ೨ ॥

ಅತ್ರಾದ್ಯೋ ಲೋಕನಾಥೋಽಸೌ ರಶ್ಮಿಮಾಲೀ ಜಗತ್ಪತಿಃ ।
ಮಿತ್ರತ್ವೇ ಚ ಸ್ಥಿತೋ ದೇವಃ ತಪಸ್ತೇಪೇ ಪುರಾ ನೃಪ ॥ ೩ ॥

---

## ಎಪ್ಪತ್ತನಾಲ್ಕನೆಯ ಅಧ್ಯಾಯ

೧. ಶತನೀಕರಾಜನು ಕೇಳುತ್ತಾನೆ—ಸಾಂಬನು ಚಂದ್ರಭಾಗಾನದೀ ದಡದಲ್ಲಿ ಸೂರ್ಯನನ್ನು ಪ್ರತಿಷ್ಠೆಮಾಡಿದ್ದರೆ ನೀನು ಹೇಳಿದಂತೆ ಈ ಸ್ಥಳವೇ ಮೊದಲನೆಯದಾಗಲಾರದು ಎಂದನು.

೨. ಸುಮಂತುಮುನಿವರ್ಯರು ಹೇಳುತ್ತಾರೆ—ಸೂರ್ಯನು ಮೊದಲು ನೆಲಸಿದ್ದ ಸ್ಥಾನ ಇದೇ, ಸಾಂಬನೂ ಅಲ್ಲೇ ಸ್ಥಾಪಿಸಿದನು. ಈಗ ಅವನ ವಿಚಾರವಾಗಿ ವಿಸ್ತಾರವಾಗಿ ಹೇಳುತ್ತೇನೆ. ವಿಷಯವನ್ನು ಕೇಳು—

೩. ಅಯ್ಯಾ ರಾಜನೇ! ಕಿರಣಸಮೂಹ ಉಳ್ಳವನೂ, ಜಗತ್ಪತಿಯೂ, ಆದ ಈ ಸೂರ್ಯದೇವನು ಪೂರ್ವದಲ್ಲಿ ಮಿತ್ರನೆಂಬ ಸಂಜ್ಞೆಯಿಂದ ಪ್ರಥಮತಃ ಇಲ್ಲಿ ನಿಂತು ತಪಸ್ಸನ್ನು ಆಚರಿಸಿದನು.

ಅನಾದಿನಿಧನೋ ಬ್ರಹ್ಮಾ ನಿತ್ಯಶ್ಚಾಕ್ಷಯ ಏವ ಚ ।
ಸೃಷ್ಟ್ವಾ ಪ್ರಜಾಪತೀನ್ ಬ್ರಹ್ಮಾ ಸೃಷ್ಟ್ವಾ ಚ ವಿವಿಧಾಃ ಪ್ರಜಾಃ ॥ ೪ ॥

ಸಸರ್ಜ ಮುಖತೋ ದೇವಂ ಪೂರ್ವಮಂಬುಜಸಂಭವಂ ।
ಕಂಜಜಸ್ತಂ ತತೋ ವಿಷ್ಣುಂ ವಕ್ಷಸ್ತೋ ನಿರ್ಮಮೇ ನೃಪ ॥ ೫ ॥

ಲಲಾಟಾತ್ ಕುರುಶಾರ್ದೂಲ ನೀರಜಾಕ್ಷಂ ದಿಗಂಬರಂ ।
ಋಭವಃ ಪಾದತಃ ಸರ್ವೇ ಸೃಷ್ಟಾಸ್ತೇನ ಮಹಾತ್ಮನಾ ॥ ೬ ॥

ತತಃ ಶತಸಹಸ್ರಾಂಶುರವ್ಯಕ್ತಃ ಪುರುಷಃ ಸ್ವಯಂ ।
ಕೃತ್ವಾ ದ್ವಾದಶಧಾತ್ಮಾನಮದಿತ್ಯಾಮುದಪದ್ಯತ ॥ ೭ ॥

ಇಂದ್ರೋ ಧಾತಾ ಚ ಪರ್ಜನ್ಯಃ ಪೂಷಾ ತ್ವಷ್ಟಾರ್ಯಮಾ ಭಗಃ ।
ವಿವಸ್ವಾನಂಶುಮಾನ್ ವಿಷ್ಣುಃ ವರುಣೋ ಮಿತ್ರ ಏವ ಚ ॥ ೮ ॥

---

೪. ಉತ್ಪತ್ತಿ, ನಾಶ ಇವುಗಳಿಲ್ಲದೆ ಶಾಶ್ವತನೂ, ಕ್ಷಯಹೊಂದಿಸಲು ಶಕ್ಯನಲ್ಲ ದವನೂ, ಸೃಷ್ಟಿಕರ್ತನೂ, ಆದ ಬ್ರಹ್ಮನು ದಕ್ಷನೇ ಮೊದಲಾದ ಪ್ರಜಾಪತಿಗಳನ್ನು ನಿರ್ಮಿಸಿದನು. ಅವರಿಂದ ವಿಧವಿಧವಾದ ಪ್ರಜೆಗಳು ಉತ್ಪನ್ನರಾದರು.

೫. ಅಯ್ಯಾ ನೃಪನೇ! ಮೊದಲು ದೇವನಾದ ಕಮಲಸಂಭವನನ್ನು ಮುಖ ದಿಂದ ಸೃಷ್ಟಿಸಿದನು. ಅನಂತರ ಹೃದಯದಿಂದ ವಿಷ್ಣುವನ್ನು ನಿರ್ಮಿಸಿದನು.

೬. ಎಲೈ ಕುರುಕುಲಶ್ರೇಷ್ಠನೇ, ಆ ಮೇಲೆ ಕಮಲದಂತೆ ಕಣ್ಣುಳ್ಳ ರುದ್ರ ನನ್ನು ಹಣೆಯಿಂದ ನಿರ್ಮಿಸಿದನು. ಕುರುಕುಲಶ್ರೇಷ್ಠನೇ! ಆ ಮಹಾತ್ಮನ ಪಾದ ದಿಂದ ಋಭುಗಳು ಉತ್ಪತಿಯಾದರು.

೭. ಆ ಮೇಲೆ ಅನಂತಕಿರಣನೂ, ಅವ್ಯಕ್ತನೂ, ಶರೀರದಲ್ಲಿ ವ್ಯಾಪಿಸಿರತಕ್ಕ ವನೂ ಆದ ಸೂರ್ಯನು ತನ್ನನ್ನು ಹನ್ನೆರಡು ಅಂಶವಾಗಿ ಮಾಡಿ ಅದಿತಿಯ ಗರ್ಭದಲ್ಲಿ ಜನಿಸಿದನು.

೮. ಆ ಹನ್ನೆರಡು ಅಂಶಗಳು ಕ್ರಮವಾಗಿ ಇಂದ್ರ, ಧಾತಾ, ಪರ್ಜನ್ಯ, ಪೂಷಾ, ತ್ವಷ್ಟಾ, ಅರ್ಯಮಾ, ಭಗ, ವಿವಸ್ವಾನ್, ಅಂಶುಮಾನ್, ವಿಷ್ಣು, ವರುಣ, ಮಿತ್ರ ಎಂಬ ಈ ಹನ್ನೆರಡು ಹೆಸರುಗಳಿಂದ ಪ್ರಸಿದ್ಧಿಯಾಗಿವೆ.

ಏಭಿರ್ದ್ವಾದಶಭೀರೂಪೈಃ ಆದಿತ್ಯೇನ ಮಹಾತ್ಮನಾ ।
ಕೃತ್ಸ್ನಂ ಜಗದಿದಂ ವ್ಯಾಪ್ತಂ ಮೂರ್ತಿಭಿಸ್ತು ನರಾಧಿಪ ॥ ೯ ॥

ತಸ್ಯ ಯಾ ಪ್ರಥಮಾ ಮೂರ್ತಿಃ ಆದಿತ್ಯಸ್ಯೇಂದ್ರ ಸಂಜ್ಞಿಕಾ ।
ಸ್ಥಿತಾ ಸಾ ದೇವರಾಜತ್ವೇ ದಾನವಾಸುರನಾಶಿನೀ ॥ ೧೦ ॥

ದ್ವಿತೀಯಾ ಚಾಸ್ಯ ಯಾ ಮೂರ್ತಿಃ ನಾಮ್ನಾ ಧಾತೇತಿ ಕೀರ್ತಿತಾ ।
ಸ್ಥಿತಾ ಪ್ರಜಾಪತಿತ್ವೇ ಸಾ ವಿಧಾತ್ರೀ ಸೃಜತೇ ಪ್ರಜಾಃ ॥ ೧೧ ॥

ತೃತೀಯಾ ತಸ್ಯ ಯಾ ಮೂರ್ತಿಃ ಪರ್ಜನ್ಯ ಇತಿ ವಿಶ್ರುತಾ ।
ಕರೇಷ್ವೇವ ಸ್ಥಿತಾ ಸಾ ತು ವರ್ಷತ್ಯಮೃತಮೇವ ಹಿ ॥ ೧೨ ॥

ಚತುರ್ಥೀ ತಸ್ಯ ಯಾ ಮೂರ್ತಿಃ ನಾಮ್ನಾ ಪೂಷೇತಿ ವಿಶ್ರುತಾ ।
ಮಂತ್ರೇಷ್ವವಸ್ಥಿತಾ ಸಾ ತು ಪ್ರಜಾಃ ಪುಷ್ಣಾತಿ ಭಾರತ ॥ ೧೩ ॥

---

೯. ಅಯ್ಯಾ ನರಾಧಿಪನೇ! ಪ್ರಪಂಚವೆಲ್ಲವೂ ಮಹಾತ್ಮನಾದ ಸೂರ್ಯನ ಈ ಹನ್ನೆರಡು ಮೂರ್ತಿಗಳಿಂದ ವ್ಯಾಪ್ತವಾಯಿತು.

೧೦. ಆದಿತ್ಯನ ಅಂಶವಾದ ಇಂದ್ರನೆಂಬ ಸಂಜ್ಞೆಯುಳ್ಳ ಮೊದಲನೆಯ ಮೂರ್ತಿಯು ದಾನವರು, ರಾಕ್ಷಸರು ಇವರ ಸಂಹಾರ ಕಾರ್ಯದಲ್ಲಿ ನಿರತವಾಗಿ ದೇವ ರಾಜ ಎನ್ನಿಸಿಕೊಂಡಿದೆ.

೧೧. ಧಾತಾ ಎಂಬ ಹೆಸರಿನಿಂದ ಕರೆಯಲ್ಪಡುವ ಆದಿತ್ಯನ ಎರಡನೆಯ ಮೂರ್ತಿಯು; ಪ್ರಜಾಪತಿ ಪದವಿಯನ್ನು ಪಡೆದು ವಿಧಾತೃವೆನ್ನಿಸಿ ಪ್ರಜೆಗಳನ್ನು ಸೃಷ್ಟಿಮಾಡುತ್ತದೆ.

೧೨. ಆದಿತ್ಯನ ಮೂರನೆಯ ಮೂರ್ತಿಯ ಹೆಸರು ಪರ್ಜನ್ಯ ಎಂದು ತಿಳಿಯ ಬೇಕು. ಅದು ಸೂರ್ಯಕಿರಣಗಳಲ್ಲಿದ್ದು ಅಮೃತವೃಷ್ಟಿಯನ್ನು ಕರೆಯುವುದು.

೧೩. ಅಯ್ಯಾ ಭರತಕುಲೋತ್ಪನ್ನನೇ! ಆದಿತ್ಯನ ನಾಲ್ಕನೆಯ ಮೂರ್ತಿಯು ಪೂಷಾ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ.

ಮೂರ್ತಿರ್ಯಾ ಪಂಚಮೀ ತಸ್ಯ ನಾಮ್ನಾ ತ್ವಷ್ಟೇತಿ ವಿಶ್ರುತಾ ।
ವನಸ್ಪತಿಷು ಸಾ ನಿತ್ಯಮೋಷಧೀಷು ಚ ವೈ ಸ್ಥಿತಾ ॥ ೧೪ ॥

ಷಷ್ಠೀಮೂರ್ತಿಸ್ತು ಯಾ ತಸ್ಯ ಅರ್ಯಮೇತಿ ಚ ವಿಶ್ರುತಾ ।
ಪ್ರಜಾ ಸಂವರಣಾರ್ಥಂ ಸಾ ಪುರೇಷ್ವೇವ ಸ್ಥಿತಾ ಸದಾ ॥ ೧೫ ॥

ಭಾನೋರ್ಯಾ ಸಪ್ತಮೀ ಮೂರ್ತಿಃ ನಾಮ್ನಾಭಗ ಇತಿ ಸ್ಮೃತಾ ।
ಭೂಮೌ ವ್ಯವಸ್ಥಿತಾ ಸಾ ತು ಕ್ಷ್ಮಾಧರೇಷು ಚ ಭಾರತ ॥ ೧೬ ॥

ಅಷ್ಟಮೀ ಚಾಸ್ಯ ಮೂರ್ತಿರ್ಯಾ ವಿವಸ್ವಾನಿತಿ ಸಂಜ್ಞಿತಾ ।
ಅಗ್ನೌ ವ್ಯವಸ್ಥಿತಾ ಸಾ ತು ಪಚತೇಽನ್ನಂ ಶರೀರಿಣಾಂ ॥ ೧೭ ॥

ನವಮೀ ಚಿತ್ರಭಾನೋರ್ಯಾ ಮೂರ್ತಿರಂಶುರಿತಿ ಸ್ಮೃತಾ ।
ವೀರ ಚಂದ್ರೇ ಸ್ಥಿತಾ ಸಾ ತು ಆಪ್ಯಾಯಯತಿ ವೈ ಜಗತ್ ॥ ೧೮ ॥

---

೧೪. ಆ ಸೂರ್ಯನ ಐದನೆಯ ಮೂರ್ತಿಯ ಹೆಸರನ್ನು ತ್ವಷ್ಟಾ ಎಂದು ತಿಳಿಯಬೇಕು. (ಇದು ಔಷಧಿಗಳಲ್ಲಿಯೂ ಒಂದುಸಾರಿ ಫಲ ಬಿಟ್ಟಕೂಡಲೇ ಕೊನೆಗಾಣಿಸಲ್ಪಡುವ ಸಸ್ಯಗಳು, ಔಷಧಿಗಳು) ವನಸ್ಪತಿಗಳಲ್ಲಿಯೂ, (ಹೂವು ಕಾಣಿಸದೇ ಕಾಯಿತೋರಿಸುವ ಹಲಸು, ಅತ್ತಿ, ಮುಂತಾದ ಜಾತಿಯ ಗಿಡಗಳು ವನಸ್ಪತಿಗಳು) ಯಾವಾಗಲೂ ಇರುತ್ತದೆ.

೧೫. ಅವನ ಆರನೆಯ ಮೂರ್ತಿಯು ಅರ್ಯಮನೆಂಬ ನಾಮದಿಂದ ಪ್ರಸಿದ್ಧ ವಾಗಿದೆ. ಇದು ಪ್ರಜೆಗಳನ್ನು ಆವರಿಸಿಕೊಂಡು ಅವರನ್ನು ಸಂರಕ್ಷಿಸುವುದಕ್ಕಾಗಿ ಯಾವಾಗಲೂ ಪುರ (ದೇಹ) ಗಳಲ್ಲಿ ಇರುತ್ತದೆ.

೧೬. ಅಯ್ಯಾ ಭರತ ವಂಶಜನೇ! ಆ ಸೂರ್ಯನ ಏಳನೆಯ ಮೂರ್ತಿಯ ಹೆಸರು ಭಗನೆಂದು ತಿಳಿಯಬೇಕು ಇದು ಭೂಮಿಯಲ್ಲೂ ಪರ್ವತಗಳಲ್ಲೂ ಇರುತ್ತದೆ.

೧೭. ಸೂರ್ಯನ ಎಂಟನೆಯ ಮೂರ್ತಿಯು ವಿವಸ್ವಾನ್ ಎಂಬ ಸಂಜ್ಞೆಯುಳ್ಳದ್ದು ಇದು ಪ್ರಾಣಿಗಳ ಜಠರಾಗ್ನಿಯಲ್ಲಿ ನೆಲಸಿ ಅವು ತಿಂದ ಆಹಾರವನ್ನು ಅರಗಿಸುತ್ತವೆ.

೧೮. ಅಯ್ಯಾ ವೀರನೆ! ಆ ಚಿತ್ರಭಾನುವಿನ ಒಂಬತ್ತನೆಯ ಮೂರ್ತಿಯು ಅಂಶು ಎಂಬ ಹೆಸರುಳ್ಳದಾಗಿರುವುದು. ಇದು ಚಂದ್ರನಲ್ಲಿ ಸೇರಿಕೊಂಡು ಜಗತ್ತನ್ನು ಆನಂದಗೊಳಿಸುತ್ತದೆ.

**ಮೂರ್ತಿರ್ಯಾ ದಶಮೀ ತಸ್ಯ ವಿಷ್ಣುರಿತ್ಯಭಿಧೀಯತೇ ।**
**ಪ್ರಾದುರ್ಭವತಿ ಸಾ ನಿತ್ಯಂ ಗೀರ್ವಾಣಾರಿವಿನಾಶಿನೀ ॥ ೧೯ ॥**

**ಮೂರ್ತಿಸ್ತ್ವೇಕಾದಶೀ ಯಾ ತು ಭಾನೋರ್ವರುಣಸಂಜ್ಞಿತಾ ।**
**ಸಂಜೀವಯತಿ ಸಾ ಕೃತ್ಸ್ನಂ ಜಗದ್ಧಿ ಸಮುಪಾಶ್ರಿತಾ ॥ ೨೦ ॥**

**ಅಪಾಂ ಸ್ಥಾನಂ ಸಮುದ್ರಸ್ತು ವರುಣೋತ್ರ ಪ್ರತಿಷ್ಠಿತಃ ।**
**ತಸ್ಮಾದ್ವೈ ಪ್ರೋಚ್ಯತೇ ವೀರ ಸಾಗರೋ ವರುಣಾಲಯಃ ॥ ೨೧ ॥**

**ಮೂರ್ತಿರ್ಯಾ ದ್ವಾದಶೀ ಭಾನೋಃ ನಾಮತೋ ಮಿತ್ರಸಂಜ್ಞಿತಾ ।**
**ಲೋಕಾನಾಂ ಸಾ ಹಿತಾರ್ಥಂ ತು ಸ್ಥಿತಾ ಚಂದ್ರಸರಿತ್ತಟೇ ॥ ೨೨ ॥**

**ವಾಯುಭಕ್ಷ್ಯಾ ತಪಸ್ತೇಪೇ ಯುಕ್ತಾ ಮೈತ್ರೇಣ ಚಕ್ಷುಷಾ ।**
**ಅನುಗೃಹ್ಣನ್ ಸದಾ ಭಕ್ತಾನ್ ವರೈರ್ನಾನಾವಿಧೈಸ್ಸದಾ ॥ ೨೩ ॥**

---

೧೯. ಆ ಸೂರ್ಯದೇವನ ಹತ್ತನೆಯ ಮೂರ್ತಿಯು ವಿಷ್ಣು, ಎಂಬ ಹೆಸರುಳ್ಳದ್ದು. ಅದು ಯಾವಾಗಲೂ ದೇವತೆಗಳಿಗೆ ಶತ್ರುಗಳಾದ ರಾಕ್ಷಸರನ್ನು ನಾಶಗೊಳಿಸುತ್ತದೆ.

೨೦. ಆ ಭಾನುವಿನ ಹನ್ನೊಂದನೆಯ ಮೂರ್ತಿಯು ವರುಣ ಎಂಬ ಹೆಸರುಳ್ಳದ್ದಾಗಿ ಸಮಗ್ರಪ್ರಪಂಚಕ್ಕೆ ಆಶ್ರಯಕೊಟ್ಟು ಸಂಜೀವನಗೊಳಿಸುತ್ತದೆ.

೨೧. ಅಯ್ಯಾ ವೀರನೇ! ಸಮುದ್ರವು ನೀರು ನಿಲ್ಲುವ ಸ್ಥಾನ. ಅಲ್ಲಿ ವರುಣನು ನೆಲಸಿರುವನು, ಆ ಜಲಾಭಿಮಾನದೇವತೆಯು ಸಮುದ್ರವಲ್ಲಿರುವುದರಿಂದ ಸಮುದ್ರಕ್ಕೆ ವರುಣಾಲಯವೆಂದು ಹೆಸರುಬಂದಿದೆ.

೨೨. ಸೂರ್ಯನ ಹನ್ನೆರಡನೆಯ ಮೂರ್ತಿಯು ಮಿತ್ರನೆಂಬ ಹೆಸರುಳ್ಳದ್ದು. ಆ ಮೂರ್ತಿಯು ಲೋಕಗಳ ಹಿತಕ್ಕೋಸ್ಕರವಾಗಿ ಚಂದ್ರಭಾಗಾನದಿಯ ದಡದಲ್ಲಿ ನೆಲಸಿರುವುದು.

೨೩. ಆ ಮೂರ್ತಿಯು ಭಕ್ತರಿಗೆ ನಾನಾ ವಿಧವಾದ ವರಗಳನ್ನು ಕೊಟ್ಟು ಯಾವಾಗಲೂ ಅನುಗ್ರಹ ಮಾಡುತ್ತಾ ವಾತಾಹಾರದಿಂದಲೂ ಮೈತ್ರದೃಷ್ಟಿಯಿಂದಲೂ ಕೂಡಿ ಅಲ್ಲಿ ತಪಸ್ಸು ಮಾಡುತ್ತಿದೆ.

ಏವಮಾದ್ಯಮಿದಂ ಸ್ಥಾನಂ ಪುಣ್ಯಂ ಮಿತ್ರಪದಂ ಸ್ಮೃತಂ ।
ತತ್ರ ಮಿತ್ರಃ ಸ್ಥಿತೋ ಯಸ್ಮಾತ್ ತಸ್ಮಾನ್ಮಿತ್ರಪದಂ ಸ್ಮೃತಂ ॥ ೨೪ ॥

ತಥಾರಾಧ್ಯ ಮಹಾಬಾಹೋ ಸಾಂಬೇನಾಮಿತತೇಜಸಾ ।
ತತ್ಪ್ರಸಾದಾತ್ತವಾದೇಶಾತ್ ಪ್ರತಿಷ್ಠಾ ತಸ್ಯ ವೈ ಕೃತಾ ॥ ೨೫ ॥

ಆಭಿರ್ದ್ವಾದಶಭಿಸ್ತೇನ ಭಾಸ್ಕರೇಣ ಮಹಾತ್ಮನಾ ।
ಕೃತ್ಸ್ನಂ ಜಗದಿದಂ ವ್ಯಾಪ್ತಂ ಮೂರ್ತಿಭಿಸ್ತು ನರಾಧಿಪ ॥ ೨೬ ॥

ತಸ್ಮಾದ್ವಂದ್ಯೋ ನಮಸ್ಯಶ್ಚ ದ್ವಾದಶಸ್ವಪಿ ಮೂರ್ತಿಷು ।
ಯೇ ನಮಸ್ಯಂತಿ ಚಾದಿತ್ಯಂ ನರಾ ಭಕ್ತಿಸಮನ್ವಿತಾಃ ॥ ೨೭ ॥

ತೇ ಯಾಸ್ಯಂತಿ ಪರಂ ಸ್ಥಾನಂ ತಿಷ್ಠೇದ್ಯತ್ರಾಂಬುಜೇಶ್ವರಃ ।
ಇತ್ಯೇವಂ ದ್ವಾದಶಾತ್ಮಾನಮಾದಿತ್ಯಂ ಪೂಜಯೇತ್ತು ಯಃ ॥ ೨೮ ॥

---

೨೪. ಇಲ್ಲಿ ಮಿತ್ರನೆಂಬ ಸೂರ್ಯಮೂರ್ತಿ ಇರೋಣದರಿಂದ ಈ ಸ್ಥಾನವು ಸೂರ್ಯನ ದ್ವಾದಶ ನಾಮಗಳಲ್ಲಿ ಒಂದಾದ ಮಿತ್ರ ಎಂಬ ಸಂಜ್ಞೆಯನ್ನು ಹೊಂದಿದ ಪುಣ್ಯಕರವಾದ ಮೊದಲನೆಯ ಸ್ಥಾನವಾಯಿತು.

೨೫. ಎಲೈ ಮಹಾಬಾಹುವೇ, ಅಮಿತ ತೇಜಸ್ಸುಳ್ಳವನಾದ ಸಾಂಬನು ಸೂರ್ಯನನ್ನು ಆರಾಧಿಸಿ ಅವನ ಅನುಗ್ರಹಪಡೆದು ಅವನ ಅಪ್ಪಣೆಯ ಮೇರೆಗೆ ಅಲ್ಲಿ ಅವನ ಮೂರ್ತಿಯನ್ನು ಸ್ಥಾಪಿಸಿದನು.

೨೬. ಅಯ್ಯಾ ನರಾಧಿಪನೇ! ಈ ಪ್ರಕಾರವಾಗಿ ಸೂರ್ಯನು ತನ್ನ ಅಂಶದ ಹನ್ನೆರಡು ಮೂರ್ತಿಗಳಿಂದ ಸಮಸ್ತ ಜಗತ್ತನ್ನೂ ವ್ಯಾಪಿಸಿಕೊಂಡಿರುತ್ತಾನೆ.

೨೭. ಆದ್ದರಿಂದ ಸೂರ್ಯನು ದ್ವಾದಶಮೂರ್ತಿಗಳಲ್ಲಿಯೂ ನಮಸ್ಕಾರಾರ್ಹನೂ ಸ್ತೋತ್ರಾರ್ಹನೂ ಆಗಿದ್ದಾನೆ. ಯಾರು ಭಕ್ತಿಯಿಂದ ದ್ವಾದಶಾತ್ಮಕನಾದ ಆದಿತ್ಯನನ್ನು ನಮಸ್ಕರಿಸುವರೋ

೨೮–೨೯. ಅವರು ಕಮಲೇಶ್ವರನಾದ ಸೂರ್ಯನಿರುವ ಉತ್ಕೃಷ್ಟವಾದ ಲೋಕಕ್ಕೆ ಹೋಗುತ್ತಾರೆ. ಈರೀತಿ ಯಾವನು ದ್ವಾದಶಮೂರ್ತಿಗಳುಳ್ಳ ಸೂರ್ಯ

**ಸ ಮುಕ್ತಃ ಸರ್ವ ಪಾಪೇಭ್ಯೋ ಯಾತಿ ಹೇಲಿ ಸಲೋಕತಾಂ ॥ ೨೯ ॥**

**ಇತಿ ಶ್ರೀ ಭವಿಷ್ಯೇಮಹಾ ಪುರಾಣೇ ಬ್ರಾಹ್ಮೇಪರ್ವಣಿ ಸೂರ್ಯ ದ್ವಾದಶ ಮೂರ್ತಿ ವರ್ಣನಂ ನಾಮ ಚತುಃಸಪ್ತತಿತಮೋಽಧ್ಯಾಯಃ**



---

ನನ್ನು ಪೂಜಿಸುವನೋ ಅವನು ಪಾಪದಿಂದ ಬಿಡುಗಡೆ ಹೊಂದಿ ಸೂರ್ಯ ಸಾಯುಜ್ಯವನ್ನು ಹೊಂದುವನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಬ್ರಾಹ್ಮಪರ್ವದ ಸಪ್ತಮಿಾ ಕಲ್ಪದಲ್ಲಿ ಸೂರ್ಯ ದ್ವಾದಶಮೂರ್ತಿವರ್ಣನೆಯೆಂಬ ಎಪ್ಪತ್ತನಾಲ್ಕನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಪಂಚಸಪ್ತತಿತಮೋಽಧ್ಯಾಯಃ

॥ ಶತಾನೀಕ ಉವಾಚ ॥

ಕಥಂ ಸಾಂಬಃ ಪ್ರಸನ್ನೋಽರ್ಕಂ ಕೇ ನವಾ ಪ್ರತಿಪಾದಿತಃ ।
ಉಗ್ರಂ ಶಾಪಂ ಚ ತಂ ಪ್ರಾಪ್ಯ ಪಿತರಂ ಸ ಕಿಮುಕ್ತವಾನ್ ॥ ೧ ॥

॥ ಸುಮಂತುರುವಾಚ ॥

ಉಕ್ತಮೇವ ಪುರಾ ವೀರ ಯಥಾ ಶಪ್ತಃ ಸ ಯಾದವಃ ।
ಪಿತ್ರಾ ಸಾಂಬೋ ಮಹಾರಾಜ ಹರಿಣಾಂಬುಜಧಾರಿಣಾ ॥ ೨ ॥

ಅಥ ಶಾಪಾಭಿಭೂತಸ್ತು ಸಾಂಬಃ ಪಿತರಮಬ್ರವೀತ್ ।
ವಿನಯಾವನತೋ ಭೂತ್ವಾ ಶಿರಸ್ಯಂಜಲಿಮುದ್ವಹನ್ ॥ ೩ ॥

---

## ಎಪ್ಪತ್ತೈದನೆಯ ಅಧ್ಯಾಯ

೧. ಶತನೀಕರಾಜನು ಪ್ರಶ್ನಿಸುತ್ತಾನೆ—ಸಾಂಬನು ಸೂರ್ಯನ ಅನುಗ್ರಹವನ್ನು ಹೇಗೆ ಹೊಂದಿದನು? ಯಾರು ಸಾಂಬನನ್ನು ಸೂರ್ಯನ ಅನುಗ್ರಕ್ಕೆ ಪಾತ್ರನನ್ನಾಗಿ ಮಾಡಿದರು? ಆ ರೀತಿ ಕ್ರೂರವಾದ ಶಾಪವನ್ನು ಹೊಂದಿದ ಸಾಂಬನು ತಂದೆಯೊಡನೆ ಏನು ಹೇಳಿದನು? ಎಂದು ಕೇಳಿದನು.

೨-೩. ಸುಮಂತುಮುನಿವರ್ಯರು ಹೇಳುತ್ತಾರೆ—ಅಯ್ಯಾ ಶೂರ ಮಹಾರಾಜನೇ! ಕಮಲಹಸ್ತನೂ ತಂದೆಯೂ ಆದ ಕೃಷ್ಣನಿಂದ ಸೂನುವಾದ ಆ ಸಾಂಬನಿಗೆ ಹೇಗೆ ಶಾಪ ಬಂತೆಂಬ ವಿಷಯವನ್ನು ಮೊದಲೇ ಹೇಳಿದ್ದೇನೆ. ಶಾಪದಿಂದ ತಿರಸ್ಕೃತನಾದ ಸಾಂಬನು ಆ ಮೇಲೆ ವಿನಯದಿಂದ ತಲೆ ಬಗ್ಗಿಸಿ ತಲೆಯ ಮೇಲೆ ಎರಡು ಕೈಗಳನ್ನು ಬೊಗಸೆಯಾಗಿ ಜೋಡಿಸಿ ಹಿಡಿದುಕೊಂಡು ತಂದೆಯನ್ನು ಕುರಿತು ಈ ಮಾತನ್ನು ಹೇಳಿದನು.

ಕಿಂ ಮಯೋಪಕೃತಂ ದೇವ ಯೇನ ಶಪ್ತೋಽಸ್ಮ್ಯಹಂ ತ್ವಯಾ ।
ಅಹಂ ತ್ವದಾಜ್ಞಯಾ ದೇವ ತ್ವರಮಾಣೋಽತ್ರ ಆಗತಃ ॥ ೪ ॥

ಕಸ್ಮಾನ್ನಿಪಾತಿತಶ್ಶಾಪೋ ಮಯಿ ತೇಽನಪಕಾರಿಣೀ ।
ನ ವೈ ಜಾನಾಮ್ಯಹಂ ಕಿಂಚಿತ್ ಪ್ರಸೀದ ಜಗತಃಪತೇ ॥ ೫ ॥

ಶಾಪಂ ನಿಯಚ್ಛ ಮೇ ದೇವ ಪ್ರಸಾದಂ ಕುರು ಮೇ ಪ್ರಭೋ ।
ಕಶ್ಮಲೇನಾಭಿಭೂತೋಽಹಂ ಯೇನ ಮುಚ್ಯೇಯ ಕಿಲ್ಬಿಷಾತ್ ॥ ೬ ॥

ತಮುವಾಚ ತತಃ ಕೃಷ್ಣಃ ಸಾಂಬಂ ಬುದ್ಧ್ವಾ ಹ್ಯನಾಗಸಂ ।
ನಾಹಂ ಪುತ್ರ ಪುನಶ್ಶಕ್ತೋ ರೋಗಸ್ಯಾಸ್ಯ ವ್ಯಪೋಹನೇ ॥ ೭ ॥

ಅಸ್ಯಾಯಂ ಜಗತೋ ನಾಥೋ ದ್ವಾದಶಾತ್ಮಾ ದಿವಾಕರಃ ।
ಸಹಸ್ರರಶ್ಮಿರಾದಿತ್ಯಃ ಶಕ್ತಃ ಪುತ್ರ ವ್ಯಪೋಹಿತುಂ ॥ ೮ ॥

---

೪. ಸ್ವಾಮಿಯೇ! ನೀನು ನನಗೆ ಶಾಪಕೊಡುವುದಕ್ಕೆ ಕಾರಣವಾದಂಥ ಏನು ಅಪಕಾರವನ್ನು ನಿನಗೆ ನಾನು ಮಾಡಿದೆನು? ದೇವನೆ, ನೀನು ಹೇಳಿ ಕಳುಹಿಸಿದುದರಿಂದ ನಾನು ಸರಸರನೆ (ತ್ವರೆಪಟ್ಟುಕೊಂಡು) ಇಲ್ಲಿಗೆ ಬಂದೆ.

೫-೬. ನಿನಗೆ ಯಾವ ಅಪಕಾರವನ್ನೂ ಮಾಡದೆ ಇರುವ ನನಗೆ ಏನು ಕಾರಣ ಶಾಪವನ್ನು ಕೊಟ್ಟೆ? ಎಲೈ ಜಗತ್ಪತಿಯೇ! ನಾನೇನನ್ನೂ ಕಂಡವನಲ್ಲ. ನನ್ನಲ್ಲಿ ಪ್ರಸನ್ನನಾಗು. ನೀನು ನನ್ನ ಶಾಪವನ್ನು ತಪ್ಪಿಸಿ ಅನುಗ್ರಹಮಾಡು. ಅಷ್ಟಾದರೆ ಈ ಕಲ್ಮಷವಾದ ಕುಷ್ಠರೋಗದಿಂದ ತಿರಸ್ಕೃತನಾದ ನಾನು ಪಾಪದಿಂದ ಮುಕ್ತನಾದೇನು.

೭. ಸಾಂಬನಲ್ಲಿ ಏನೂ ಅಪರಾಧವಿಲ್ಲವೆಂಬುದನ್ನು ತಿಳಿದು ಕೃಷ್ಣನು ಅವನನ್ನು ಕುರಿತು ಹೇಳಿದನು. "ಪುತ್ರಾ! ಈ ರೋಗವನ್ನು ಹೋಗಲಾಡಿಸಲು ನನಗೆ ಶಕ್ತಿಯಿಲ್ಲ.

೮. " ಈ ಜಗತ್ತಿಗೆ ಒಡೆಯನೂ ದ್ವಾದಶ ರೂಪವುಳ್ಳವನೂ ಸಹಸ್ರಕಿರಣನೂ ಆದ ಆದಿತ್ಯನೊಬ್ಬನೇ ಈ ಶಾಪವನ್ನು ಹೋಗಲಾಡಿಸಲು ಶಕ್ತನಾಗಿದ್ದಾನೆ."

ಜ್ಞಾತಂ ಮಯಾಧುನಾ ಚೈವ ಯಥಾ ತ್ವಂ ನಾರದೇನ ತು ।
ರೋಷಾದ್ವಿಸರ್ಜಿತಃ ಪುತ್ರ ಮತ್ಸಕಾಶಂ ಮಹಾತ್ಮನಾ ॥ ೯ ॥

ತಸ್ಮಾತ್ತಮೇವ ಪೃಚ್ಛ ತ್ವಂ ಪ್ರಸಾದ್ಯ ಋಷಿಸತ್ತಮಂ ।
ಆಖ್ಯಾಸ್ಯತಿ ಸ ತೇ ದೇವಂ ಶಾಪಂ ಯಸ್ತೇಽಪನೇಷ್ಯತಿ ॥ ೧೦ ॥

ಅಥೈತತ್ಸಪಿತುರ್ವಾಕ್ಯಂ ಶ್ರುತ್ವಾ ಜಾಂಬವತೀಸುತಃ ।
ದೀನಃ ಶೋಕಪರೀತಾತ್ಮಾ ತತಃ ಸಂಚಿಂತ್ಯ ಭಾರತ ॥ ೧೧ ॥

ದ್ವಾರವತ್ಯಾಂ ಸ್ಥಿತಂ ವಿಷ್ಣುಂ ಕದಾಚಿದ್ರಷ್ಟುಮಾಗತಂ ।
ವಿನಯಾದುಪಸಂಗಮ್ಯ ಸಾಂಬಃ ಪಪ್ರಚ್ಛ ನಾರದಂ ॥ ೧೨ ॥

ಭಗವನ್ ವೇಧಸಃ ಪುತ್ರ ಸರ್ವಲೋಕಜ್ಞ ಸುವ್ರತ ।
ಪ್ರಸಾದಂ ಕುರು ಮೇ ವಿಪ್ರ ಪ್ರಣತಸ್ಯ ಮಹಾಮತೇ ॥ ೧೩ ॥

---

೯–೧೦. "ಮಹಾತ್ಮನಾದ ನಾರದನು ನಿನ್ನ ಮೇಲಿನ ರೋಷದಿಂದ ನಿನ್ನನ್ನು ನನ್ನ ಬಳಿಗೆ ಕಳುಹಿಸಿದನು ಎಂಬುದು ನನಗೆ ಈಗ ಗೊತ್ತಾಯಿತು. ಆದ್ದರಿಂದ ಆ ಋಷಿವರ್ಯರು ನಿನ್ನಲ್ಲಿ ಪ್ರಸನ್ನರಾಗುವಂತೆ ಮಾಡಿಕೋ. ನಿನ್ನ ಬಾಧೆ ಪರಿಹಾರವಾಗುವುವಕ್ಕೆ ಉಪಾಯವನ್ನು ನೀನೇ ಅವರನ್ನು ಕೇಳು ನಿನ್ನ ಶಾಪ ಪರಿಹಾರವು ಯಾರಿಂದ ಆಗುತ್ತದೆ ಎಂಬುದನ್ನೂ ಅಂಥ ದೇವರು ಯಾರೆಂಬುದನ್ನೂ ಅವರು ನಿನಗೆ ತಿಳಿಸುವರು" ಎಂದು ಹೇಳಿದನು.

೧೧. ಅಯ್ಯಾ ಭರತವಂಶಜನೇ! ಜಾಂಬವತೀಪುತ್ರನಾದ ಆ ಸಾಂಬನು ತಂದೆಯ ಮಾತನ್ನು ಕೇಳಿ ದೈನ್ಯದಿಂದಲೂ, ಶೋಕದಿಂದಲೂ, ವ್ಯಾಪ್ತವಾದ ಮನಸ್ಸುಳ್ಳವನಾಗಿ ಆಲೋಚಿಸುತ್ತಿದ್ದನು.

೧೨. ಒಂದಾನೊಂದು ದಿನ ದ್ವಾರಕೆಯಲ್ಲಿದ್ದ ಕೃಷ್ಣಪರಮಾತ್ಮನನ್ನು ನೋಡಲು ಬಂದಿದ್ದ ನಾರದನನ್ನು ಸಾಂಬನು ಕಂಡು, ವಿನಯದಿಂದ ಸಮೀಪಕ್ಕೆ ಹೋಗಿ ಕೇಳಿದನು.

೧೩–೧೪. "ಬ್ರಹ್ಮನ ಮಾನಸಪುತ್ರನೂ ಸರ್ವಲೋಕ ವೃತ್ತಾಂತವನ್ನು ತಿಳಿದವನೂ, ಮಹಾಮತಿಯೂ, ಒಳ್ಳೆಯ ವ್ರತನಿಯಮಶಾಲಿಯೂ, ಪೂಜ್ಯನೂ,

**ಯೇನ ಮೇ ನೀರುಜಂ ಕಾಯಂ ಕೆಶ್ಮಲಂ ಚ ಪ್ರಣಶ್ಯತಿ ।**
**ತಂ ಯೋಗಂ ಬ್ರೂಹಿ ಮೇ ವಿಪ್ರ ಪ್ರಣತಸ್ಯಾಸ್ಯಸುವ್ರತ　　॥ ೧೪ ॥**

**॥ ನಾರದ ಉವಾಚ ॥**
**ಯಃ ಸ್ತುತ್ಯಃ ಸರ್ವದೇವಾನಾಂ ನಮಸ್ಯಃ ಪೂಜ್ಯ ಏವ ಚ ।**
**ಪೂಜಯಿತ್ವಾ ಶು ತಂ ದೇವಂ ತತೋ ವ್ಯಾಧಿಂ ಪ್ರಹಾಸ್ಯಸಿ　　॥ ೧೫ ॥**

**॥ ಸಾಂಬ ಉವಾಚ ॥**
**ಕಃ ಸ್ತುತ್ಯಃ ಸರ್ವದೇವಾನಾಂ ನಮಸ್ಯಃ ಪೂಜ್ಯ ಏವ ಚ ।**
**ಕಃ ಸರ್ವಗಶ್ಚ ಸರ್ವತ್ರ ಶರಣಂ ಯಂ ವ್ರಜಾಮ್ಯಹಮ್　　॥ ೧೬ ॥**

**ಪಿತೃಶಾಪಾನಲೇನಾಹಂ ದಹ್ಯಮಾನೋ ಮಹಾಮುನೇ ।**
**ಶಾಂತ್ಯರ್ಥಮಸ್ಯ ಕಂ ದೇವಂ ಶರಣಂ ಚ ವ್ರಜಾಮ್ಯಹಂ　　॥ ೧೭ ॥**

---

ಎನಿಸಿದ ದೇವರ್ಷಿಯೇ ! ನಮ್ರನಾದ ನನ್ನಲ್ಲಿ ಅನುಗ್ರಹಮಾಡು. ಅಯ್ಯಾ ವ್ರತ ನಿಯಮಶಾಲಿಯೇ ! ಯಾವ ಯೋಗದಿಂದ ನನ್ನ ಶರೀರವು ರೋಗರಹಿತವಾಗುವುದು ? ಅಂತಹ ಯೋಗವನ್ನು ನೀನು ವಿಧೇಯನಾದ ನನಗೆ ಹೇಳು " ಎಂದನು.

೧೫. ನಾರದರು ಸಾಂಬನಿಗೆ ಹೇಳುತ್ತಾರೆ—ಎಲ್ಲಾ ದೇವತೆಗಳಿಂದಲೂ ಯಾವನು ಹೊಗಳಿಸಿಕೊಳ್ಳುತ್ತಾನೋ ಎಲ್ಲರಿಂದ ನಮಸ್ಕಾರಮಾಡಿಸಿಕೊಳ್ಳಲು ಯಾವನು ಅರ್ಹನೋ ಮತ್ತು ಪೂಜ್ಯನೋ, ಅಂಥ ಸ್ವಾಮಿಯನ್ನು ಪೂಜಿಸಿದರೆ ಈ ನಿನ್ನ ರೋಗವನ್ನು ಹೋಗಲಾಡಿಸಿಕೊಳ್ಳುವೆ.

೧೬. ಸಾಂಬನು ಪ್ರಶ್ನಿಸುತ್ತಾನೆ—ಎಲ್ಲಾ ದೇವತೆಗಳೂ ಯಾರನ್ನು ನಮಸ್ಕರಿಸುತ್ತಾರೆ? ಎಲ್ಲಾ ದೇವತೆಗಳಿಂದ ಹೊಗಳಿಸಿಕೊಳ್ಳಲು ಅರ್ಹನೂ, ಪೂಜ್ಯನೂ, ಸರ್ವವ್ಯಾಪಕನೂ, ಆದ ದೇವನು ಯಾರು ? ನಾನು ಸರ್ವ ವಿಷಯದಲ್ಲಿಯೂ, ರಕ್ಷಕನನ್ನಾಗಿ ಯಾವನನ್ನು ಶರಣು ಹೊಂದಲಿ ?

೧೭. " ಅಯ್ಯಾ ಮಹರ್ಷಿಯೇ ! ತಂದೆಯ ಶಾಪವೆಂಬ ಅಗ್ನಿಯು ನನ್ನನ್ನು ಸಂತಾಪಪಡಿಸುತ್ತಿದೆ. ಅದನ್ನು ಪರಿಹರಿಸಿಕೊಳ್ಳುವುದಕ್ಕಾಗಿ ನಾನು ಯಾವ ದೇವನನ್ನು ಶರಣುಹೊಂದಲಿ " ಎಂದನು.

ಏತಚ್ಛ್ರುತ್ವಾ ತು ಸಾಂಬಸ್ಯ ವಚನಂ ಕರುಣಾವಹಂ ।
ಹಿತ್ವಾ ತು ಕಾಮಜಂ ಕ್ರೋಧಂ ನಾರದೋ ವಾಕ್ಯಮಬ್ರವೀತ್ ॥ ೧೮ ॥

ಸ್ತುತೋ ವಂದ್ಯಶ್ಚ ಪೂಜ್ಯಶ್ಚ ನಮಸ್ಯಶ್ಚೇಡ್ಯ ಏವ ಚ ।
ಭಾಸ್ಕರೋ ಯದುಶಾರ್ದೂಲ ಬ್ರಹ್ಮಾದೀನಾಂ ಸದಾನಘಃ ॥ ೧೯ ॥

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಾಂಬೋಪಾಖ್ಯಾನೇ ಸಾಂಬುಪ್ರತಿ ಕೃಷ್ಣಶಾಪೇ ಸಾಂಬಸ್ಯನಾರದೋಪಸಂಗಮ ವರ್ಣನಂ ನಾಮ ಪಂಚಸಪ್ತತಿತಮೋಽಧ್ಯಾಯಃ.**



---

೧೮ ಅಯ್ಯಾ ರಾಜನೇ! ಕೇಳು ಈ ಪ್ರಕಾರವಾಗಿ ದಯೆ ಹುಟ್ಟಿಸುವಂತಿದ್ದ ಸಾಂಬನ ಮಾತುಗಳನ್ನು ಕೇಳಿ ಅವನನ್ನು ನಿಗ್ರಹಿಸಬೇಕೆಂದು ಮನಸ್ಸಿನಲ್ಲಿ ಉಂಟಾಗಿದ್ದ ಕ್ರೋಧವನ್ನು ಬಿಟ್ಟು ನಾರದನು ಈ ಮಾತನ್ನು ಹೇಳಿದನು.

೧೯. ಯದುಶ್ರೇಷ್ಠನಾದ ಸಾಂಬನೇ! ಕೇಳು ಸೂರ್ಯದೇವನು ಬ್ರಹ್ಮಾದಿಗಳಿಗೆ ಕೂಡ ಸ್ತೋತ್ರಾರ್ಹನೂ ಸರ್ವದಾ ದೋಷರಹಿತನೂ ಆಗಿದ್ದಾನೆ ಎಂದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣ ಬ್ರಾಹ್ಮಪರ್ವದ ಸಾಂಬೋಪಾಖ್ಯಾನದಲ್ಲಿ ನಾರದನು ಸಾಂಬನಿಗೆ ಕೃಷ್ಣಶಾಪ ಪರಿಹಾರೋಪಾಯ ಸೂಚಿಸಿದ್ದು ಯೆಂಬ ಎಪ್ಪತ್ತೈದನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಷಟ್‌ಸಪ್ತತಿತಮೋಽಧ್ಯಾಯಃ

॥ ನಾರದ ಉವಾಚ ॥

ಕದಾಚಿತ್ಪರ್ಯಟನ್ ಲೋಕಾನ್ಸೂರ್ಯಲೋಕ ಮಹಂ ಗತಃ ।
ತತ್ರ ದೃಷ್ಟೋ ಮಯಾ ಸೂರ್ಯಃ ಸರ್ವದೇವೈರ್ಗಣೈರ್ವೃತಃ ॥ ೧ ॥

ಗಂಧರ್ವೈರಪ್ಸರೋಭಿಶ್ಚ ನಾಗೈರ್ಯಕ್ಷೈಶ್ಚ ರಾಕ್ಷಸೈಃ ।
ತತ್ರ ಗಾಯಂತಿ ಗಂಧರ್ವಾ ನೃತ್ಯಂತ್ಯಪ್ಸರಸಸ್ತಥಾ ॥ ೨ ॥

ರಕ್ಷಂತ್ಯುದ್ಗತ ಶಸ್ತ್ರಾಸ್ತ್ರಂ ಯಕ್ಷ ರಾಕ್ಷಸ ಪನ್ನಗಾಃ ।
ಋಚೋ ಯಜೂಂಷಿ ಸಾಮಾನಿ ಮೂರ್ತಿಮಂತೀವ ಸರ್ವಶಃ ॥ ೩ ॥

---

## ಎಪ್ಪತ್ತಾರನೆಯ ಅಧ್ಯಾಯ

೧. ನಾರದರು ಹೇಳುತ್ತಾರೆ—ಎಲೈ ಸಾಂಬನೇ ! ನಾನು ಅನೇಕ ಲೋಕಗಳನ್ನು ಸುತ್ತುತ್ತಾ ಒಂದುಸಲ ಸೂರ್ಯಲೋಕಕ್ಕೆ ಹೋದೆನು. ಅಲ್ಲಿ ಎಲ್ಲಾ ದೇವ ಸಮೂಹಗಳಿಂದಲೂ ಸುತ್ತುವರಿಯಲ್ಪಟ್ಟ ಸೂರ್ಯನನ್ನು ಕಂಡೆನು.

೨. ಅವನ ಸಮ್ಮುಖದಲ್ಲಿ ಗಂಧರ್ವರೂ, ಅಪ್ಸರ ಸ್ತ್ರೀಯರೂ, ಯಕ್ಷರೂ, ರಾಕ್ಷಸರೂ, ನಾಗರೂ, ಮುಂತಾದವರೆಲ್ಲಾ ಇದ್ದರು. ಅಲ್ಲಿ ಗಂಧರ್ವರ ಗಾನವೂ, ಅಪ್ಸಸ್ತ್ರೀಯರ ನರ್ತನವೂ, ಶ್ರೇಷ್ಠವಾಗಿ ಸಾಗುತಿದ್ದಿತು.

೩-೪. ಯಕ್ಷರು, ರಾಕ್ಷಸರು, ಪನ್ನಗರು, ಶಸ್ತ್ರಗಳನ್ನು ಎತ್ತಿ ಹಿಡಿದು ಅವನ ಪೈಗಾವಲಾಗಿದ್ದರು. ಋಗ್ಯಜುಸ್ಸಾಮ ವೇದಗಳ ಅಭಿಮಾನಿಗಳು ಶರೀರಧಾರಿಗಳಾಗಿ

ತತ್ಕೃತೈರ್ವಿವಿಧೈ ಸ್ತೋತ್ರೈಃ ಸ್ತುವಂತಿ ಋಷಯೋ ರವಿಂ ।
ಮೂರ್ತಿಮತ್ಯಃ ಸ್ಥಿತಾಸ್ತತ್ರ ತಿಸ್ರಃ ಸಂಧ್ಯಾಃ ಶುಭಾನನಾಃ ॥ ೪ ॥

ಗೃಹೀತವಜ್ರನಾರಾಚಾಃ ಪರಿವಾರ್ಯ ರವಿಂ ಸ್ಥಿತಾಃ ।
ಅರುಣಾ ವರ್ಣತಃ ಪೂರ್ವಾ ಮಧ್ಯಮಾ ಚೇಂದುಸನ್ನಿಭಾ ॥
ತೃತೀಯಾ ಪದ್ಮಸಂಕಾಶಾ ಸಂಧ್ಯಾಚೈವ ಪ್ರಕೀರ್ತಿತಾ ॥ ೫ ॥

ಆದಿತ್ಯಾ ವಸವೋ ರುದ್ರಾ ಮರುತೋಽಥಾಶ್ವಿನೌ ತಥಾ ।
ತ್ರಿಸಂಧ್ಯಂ ಪೂಜಯಂತ್ಯರ್ಕಂ ತಥಾನ್ಯೇ ಚ ದಿವೌಕಸಃ ॥ ೬ ॥

ಈರಯನ್ ಜಯಶಬ್ದಂ ತು ಇಂದ್ರಸ್ತತ್ರೈವ ತಿಷ್ಠತಿ ।
ಕವಿಸ್ತು ತ್ರ್ಯಂಬಕೋ ದೇವಃ ತ್ರಿಸಂಧ್ಯಂ ಪೂಜಯಂತಿ ವೈ ॥ ೭ ॥

---

ಎಲ್ಲಾ ಕಡೆಯೂ ಇದ್ದರು. ಅವರು ರಚಿಸಿದ ಸ್ತೋತ್ರಗಳಿಂದ ಋಷಿಗಳು ಹೊಗಳು ತ್ತಿದ್ದರು. ಶುಭಮುಖರಾದ ಮೂವರು ಸಂಧ್ಯೆಗಳೂ ಶರೀರಧಾರಿಗಳಾಗಿ ಅಲ್ಲಿ ಇದ್ದರು.

೫. ಇವರೆಲ್ಲಾ ನಾನಾಬಗೆಯ ಆಯುಧಗಳನ್ನು ಹಿಡಿದುಕೊಂಡು ಸೂರ್ಯನ ಸುತ್ತಲೂ ಸುತ್ತುಗಟ್ಟಿಕೊಂಡು ನಿಂತಿರುವರು. ಪೂರ್ವದಿಕ್ಕಿನ ಪ್ರಾತಃಸಂಧ್ಯಾಭಿಮಾನ ದೇವತೆಯು ಪೂರ್ವದಿಕ್ಕಿನಲ್ಲಿ ಕೆಂಬಣ್ಣವಾಗಿಯೂ, ಮಾಧ್ಯಾಹ್ನಿಕಸಂಧ್ಯಾಭಿಮಾನ ದೇವತೆಯು ಮಧ್ಯಭಾಗದಲ್ಲಿ ಚಂದ್ರ ಸಮಾನ ವರ್ಣವಾಗಿಯೂ, ಮೂರನೆಯ ಸಂಧ್ಯಾಭಿಮಾನದೇವತೆ ಕಮಲ ವರ್ಣವುಳ್ಳದ್ದಾಗಿ ಪಶ್ಚಿಮದಲ್ಲಿಯೂ, ಇರುವು ದೆಂದೂ ಹೇಳಿದೆ.

೬. ದ್ವಾದಶಾದಿತ್ಯರೂ ಅಷ್ಟವಸುಗಳೂ ಏಕಾದಶರುದ್ರರೂ ಸಪ್ತಮರುತ್ತು ಗಳೂ, ಹಾಗೂ ಅಶ್ವಿನೀದೇವತೆಗಳೂ ಹಾಗೆಯೇ ಇತರ ದೇವತೆಗಳೂ ಮೂರು ಸಂಧ್ಯೆಗಳಲ್ಲೂ ಸೂರ್ಯನನ್ನು ಪೂಜಿಸುತ್ತಾರೆ.

೭. ಇಂದ್ರನು ಜಯಶಬ್ದವನ್ನು ಹೇಳುತ್ತಾ ಅಲ್ಲಿಯೇ ಸಮೀಪದಲ್ಲಿ ಇರು ತ್ತಾನೆ. ಸರ್ವಜ್ಞನಾದ ಶಿವನು ಮೂರುಸಂಧ್ಯೆಗಳಲ್ಲೂ ಪೂಜಿಸುತ್ತಾನೆ.

ದಿನಾದಾವಂಬುಜಾಕಾರಂ ಪೂಜಯೇದಂಬುಜಾಸನಂ ।
ಚಕ್ರರೂಪಂ ತು ಮಧ್ಯಾಹ್ನೇ ಘೃತಾರ್ಚಿಃ ಪೂಜಯೇತ್ಸದಾ ॥ ೮ ॥

ಪೂಜಯೇ ತ್ಸಗಣಂ ರಾತ್ರೌ ವಿಪುಲಾಜ್ಯಸ್ವರೂಪಿಣಂ ।
ರವಿರ್ಭಕ್ತ್ಯಾ ಸದಾ ದೇವಂ ಕೆಂಜಾರ್ಧಕೃತಶೇಖರ ॥ ೯ ॥

ಸಾರಥ್ಯಂ ಕಾರುತೇ ತಸ್ಯ ಗರುಡಸ್ಯಾಗ್ರಜಃ ಸದಾ ।
ವಹಮಾನೋ ರಥಂ ದಿವ್ಯಂ ಕಾಲಾವಯವ ನಿರ್ಮಿತಂ ॥ ೧೦ ॥

ಹರಿತ್ಯೈಃ ಸಪ್ತಭಿರ್ಯುಕ್ತಂ ಛಂದೋಭಿರ್ವಾಜಿರೂಪಿಭಿಃ ॥ ೧೧ ॥

ದ್ವೇ ಭಾರ್ಯೇ ಪಾರ್ಶ್ವಯೋಸ್ತಸ್ಯ ರಾಜ್ಞೀ ನಿಕ್ಷುಭಸಂಜ್ಞಿತಾ ।
ತಥಾನ್ಯೈರ್ನಾಮಭಿರ್ದೇವಾಃ ಪರಿವಾರ್ಯ ರವಿಂ ಸ್ಥಿತಾಃ ॥ ೧೨ ॥

---

೮. ದಿನದ ಆದಿಭಾಗದಲ್ಲಿ ಕಮಲಾಕಾರನಾಗಿ ಕಮಲಾಸನದಲ್ಲಿರುವ ಸೂರ್ಯನನ್ನು ಪೂಜಿಸಬೇಕು. ನಿತ್ಯವೂ ಮಧ್ಯಾಹ್ನದಲ್ಲಿ ಚಕ್ರರೂಪನಾಗಿ ಘೃತಜ್ವಾಲಾ ಸದೃಶನಾದ ಸೂರ್ಯನನ್ನು ಪೂಜಿಸಬೇಕು.

೯. ಅರ್ಧ ಚಂದ್ರಶೇಖರನಾದ ಪರಮೇಶ್ವರ ಸ್ವರೂಪನೇ! ರಾತ್ರಿಯಲ್ಲಿ ಸಮೃದ್ಧಿಯಾದ ಘೃತಜ್ವಾಲಾ ಸ್ವರೂಪವುಳ್ಳವನಾದ ಸೂರ್ಯನನ್ನು ಗಣಯುಕ್ತನಾಗಿ ಪೂಜಿಸಬೇಕು.

೧೦. ಆ ಸೂರ್ಯನಿಗೆ ಗರುಡನ ಅಣ್ಣನಾದ ಅರುಣನು ಸಾರಥಿಯಾಗಿದ್ದಾನೆ. ಅವನು ಕಾಲಾವಯವಗಳಿಂದ ಎಂದರೆ ಸಂವತ್ಸರ ಮಾಸಾದಿಗಳಿಂದ ನಿರ್ಮಿತವಾದ ರಥವನ್ನು ನಡೆಯಿಸುತ್ತಾನೆ.

೧೧. ಆತನು ಛಂದಸ್ಸುಗಳೆಂಬ ಹಸುರು ಬಣ್ಣದ ಏಳು ಕುದುರೆಗಳಿಂದ ಕೂಡಿದ ಶ್ರೇಷ್ಠವಾದ ರಥವನ್ನು ನಡೆಯಿಸುತ್ತಾನೆ.

೧೨. ಅವನಿಗೆ ರಾಜ್ಞೀ ಮತ್ತು ನಿಕ್ಷುಭಾ ಎಂಬ ಹೆಸರಿನ ಇಬ್ಬರು ಹೆಂಡತಿಯರು ಇರುವರು. ಹಾಗೆಯೇ ಬೇರೆಬೇರೆ ಹೆಸರುಗಳುಳ್ಳ ದೇವತೆಗಳು ಸೂರ್ಯನ ಸುತ್ತ ಸುತ್ತಿಕೊಂಡಿದ್ದಾರೆ.

ಪಿಂಗಲೋ ಲೇಖಕಸ್ತತ್ರ ತಥಾನ್ಯೋ ದಂಡನಾಯಕಃ ।
ರಾಜಾಶ್ರೋಷೌ ಚ ದ್ವೌ ದ್ವಾರೇ ಸ್ಥಿತೌ ಕಲ್ಮಾಷಪಕ್ಷಿಣೌ ॥ ೧೩ ॥

ತತೋ ವ್ಯೋಮ ಚತುಃಶೃಂಗಂ ಮೇರೋಃ ಸದೃಶಲಕ್ಷಣಂ ।
ದಿಂಡಿಸ್ತಥಾಗ್ರತಸ್ತಸ್ಯ ದಿಕ್ಷು ಚಾನ್ಯೇ ಸ್ಥಿತಾಃ ಸುರಾಃ ॥ ೧೪ ॥

ಏವಂ ಸರ್ವಗಮಂ ದೇವಂ ಪ್ರದೀಪ್ತಂ ಜಗತಿ ದ್ವಿಜ ।
ಬ್ರಹ್ಮಾದ್ಯೈಃ ಸಂಸ್ತುತಂ ದೇವಂ ಗೀರ್ವಾಣೈಃ ಋಷಭೋತ್ತಮಂ ॥
ಗ್ರಹೇಶಂ ಭುವನೇಶಾನಮಾದಿತ್ಯಂ ಶರಣಂ ವ್ರಜ ॥ ೧೫ ॥

॥ ಸಾಂಬ ಉವಾಚ ॥

ತತ್ತ್ವತಃ ಶ್ರೋತುಮಿಚ್ಛಾಮಿ ಕಥಂ ಸರ್ವಗತೋ ರವಿಃ ॥ ೧೬ ॥

ಕತಿ ವಾ ರಶ್ಮಯಸ್ತಸ್ಯ ಮೂರ್ತಯಶ್ಚ ಕತಿಸ್ಮೃತಾಃ ।
ಕಾ ರಾಜ್ಞೀ ನಿಕ್ಷುಭಾ ಕಾ ಚ ಕಶ್ಚಾಯಂ ದಂಡನಾಯಕಃ ॥ ೧೭ ॥

---

೧೩. ರಾಜಾ, ಶ್ರೋಷ ಎಂಬ ಇಬ್ಬರು ಒಂದು ಬಾಗಿಲಿನಲ್ಲಿಯೂ ; ಕಲ್ಮಾಷ, ಪಕ್ಷಿ ಇವರು ಎರಡನೇ ಬಾಗಿಲಿನಲ್ಲಿಯೂ ಇರುವರು. ಅಲ್ಲಿ ಪಿಂಗಳನೆಂಬ ಲೇಖಕನೂ ಮತ್ತೊಬ್ಬನು ದಂಡನಾಯಕನೂ ಇರುವರು.

೧೪. ಮೇರುವಿಗೆ ಸದೃಶ ಲಕ್ಷಣವುಳ್ಳ ವ್ಯೋಮವು ನಾಲ್ಕು ಶೃಂಗ ಉಳ್ಳದ್ದಾಗಿದೆ. ಆ ಸೂರ್ಯನ ಮುಂದುಗಡೆ ದಿಂಡಿಯೂ ಮತ್ತು ಇತರ ದೇವತೆಗಳೂ ಇರುವರು.

೧೫. ಹೀಗೆ ಸರ್ವವ್ಯಾಪ್ತನಾಗಿ ಲೋಕದಲ್ಲಿ ಪ್ರಜ್ವಲಿಸುತ್ತಿರುವನೂ, ಬ್ರಹ್ಮನೇ ಮೊದಲಾದ ದೇವತೆಗಳಿಂದ ಹೊಗಳಲ್ಪಡುವವನೂ, ಶ್ರೇಷ್ಠರಲ್ಲಿ ಉತ್ತಮನೂ, ಗ್ರಹಾಧಿಪತಿಯೂ ಲೋಕಾಧೀಶನೂ, ಆದ ಸೂರ್ಯನನ್ನು ಮರೆಹೋಗು ಎಂದನು.

೧೬. ಸಾಂಬನು ಪ್ರಶ್ನಿಸುತ್ತಾನೆ—"ಸೂರ್ಯನು ಹೇಗೆ ಸರ್ವವ್ಯಾಪಕನು ? ಇದರ ನಿಜಸ್ಥಿತಿಯನ್ನು ಕೇಳಬೇಕೆಂದು ನಾನು ತುಂಬಾ ಆಶಿಸುತ್ತೇನೆ."

೧೭. "ಅವನಿಗೆ ಕಿರಣಗಳೆಷ್ಟು? ಅವನ ಮೂರ್ತಿಗಳು ಎಷ್ಟು ? ರಾಜ್ಞಿ ಎಂಬುವಳು ಯಾರು ? ನಿಕ್ಷುಭಾ ಎಂಬವಳು ಯಾರು ? ಅವನ ದಂಡನಾಯಕನು ಯಾರು ?

**ಪಿಂಗಲಶ್ಚಾಪಿ ಕಸ್ತತ್ರ ಕಿಂಚಾಸೌ ಲಿಖತೇ ಸದಾ ।**
**ರಾಜಾಶ್ರೋಷ ಶ್ಚ ಕೌ ತತ್ರ ಕೌ ಚ ಕಲ್ಮಾಷಪಕ್ಷಿಣೌ　　॥ ೧೮ ॥**

**ಕಿಂ ದೈವತ್ಯಂ ಚ ತದ್ವ್ಯೋಮ ಮೇರೋಃಸದೃಶಲಕ್ಷಣಂ ।**
**ಕೋ ದಿಂಡಿರಗ್ರತಸ್ತತ್ರ ಕೇ ದೇವಾ ದಿಕ್ಷು ಯೇ ಸ್ಥಿತಾಃ　　॥ ೧೯ ॥**

**ತತ್ವತೋ ನಿಗಮಶ್ಚೈವ ವಿಸ್ತರೇಣ ವದಸ್ವ ಮಾಂ ।**
**ಯೇನಾಹಂ ತತ್ವತೋ ಜ್ಞಾತ್ವಾ ವ್ರಜಾಮಿ ಶರಣಂ ದ್ವಿಜ　　॥ ೨೦ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮಿಾಕಲ್ಪೇ ಸಾಂಬೋಪಾಖ್ಯಾನೇ ನಾರದಸಾಂಬ ಸಂವಾದೇ ಸೂರ್ಯಪರಿವಾರ ವರ್ಣನಂ ನಾಮ ಷಟ್‌ಸಪ್ತತಿತಮೋಽಧ್ಯಾಯಃ.**



---

೧೮. ಪಿಂಗಳನೆಂಬುವನು ಯಾರು? ಅವನು ಸದಾ ಅಲ್ಲಿ ಬರೆಯುವುದೇನು? ರಾಜಾಶ್ರೋಷ ಇವರು ಯಾರು? ಕಲ್ಮಾಷ ಪಕ್ಷಿ ಇವರು ಯಾರು? ಇವರ ವಿಷಯವೇನು?

೧೯. ಮೇರುವಿಗೆ ಸದೃಶವಾದ ಲಕ್ಷಣವುಳ್ಳ ವ್ಯೋಮಕ್ಕೆ ಅಭಿಮಾನ ದೇವತೆಯು ಯಾವುದು? ಮುಂದುಗಡೆಯಿರುವ ದಿಂಡಿಯು ಯಾರು? ದಿಕ್ಕುಗಳಲ್ಲಿರುವ ದೇವತೆಗಳು ಯಾರು ಯಾರು?

೨೦. ನಿಜಸ್ಥಿತಿಗಳಿಂದಲೂ, ನಿಗಮನಗಳಿಂದಲೂ, (ಪಂಚಾವಯವ ವಾಕ್ಯ ಪದ್ಧತಿ ನಿಗಮನವೆಂಬುದು ಸಿದ್ಧಾಂತವಾಕ್ಯದ ಸ್ಥಾನೀಯವಾಗಿದೆ.) ನನಗೆ ವಿಸ್ತಾರವಾಗಿ ಹೇಳು ಇದನ್ನೆಲ್ಲಾ ನೀನು ಹೇಳಿದರೆ ನಾನು ಅವನ ನಿಜಸ್ಥಿತಿಯನ್ನು ತಿಳಿದು ಅವನ ಮರೆಹೋಗುತ್ತೇನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸಾಂಬೋಪಾಖ್ಯಾನದ ನಾರದಸಾಂಬ ಸಂವಾದದಲ್ಲಿ ಸೂರ್ಯಪರಿವಾರ ವರ್ಣನೆಯೆಂಬ ಎಪ್ಪತ್ತಾರನೇ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಸಪ್ತಸಪ್ತತಿತಮೋಽಧ್ಯಾಯಃ

ನಾರದ ಉವಾಚ

ವಿಸ್ತರೇಣಾನುಪೂರ್ವ್ಯಾಚ ಸೂರ್ಯಂ ನಿಗದತಃ ಶೃಣು ।
ತತಃ ತೇಷಾಂ ಪ್ರವಕ್ಷ್ಯೇಽಹಂ ನಮಸ್ಕೃತ್ಯ ವಿವಸ್ವತೇ ॥ ೧ ॥

ಅವ್ಯಕ್ತಂ ಕಾರಣಂಯತ್ತನ್ನಿತ್ಯಂ ಸದಸದಾತ್ಮಕಂ ।
ಪ್ರಧಾನಂ ಪ್ರಕೃತಿಶ್ಚೇತಿ ಯಮಾಹುಸ್ತತ್ವಚಿಂತಕಾಃ ॥ ೨ ॥

---

## ಎಪ್ಪತ್ತೇಳನೆಯ ಅಧ್ಯಾಯ

೧. ನಾರದರು ಸಾಂಬನಿಗೆ ಹೇಳುತ್ತಾರೆ—ಸೂರ್ಯನಿಗೆ ನಮಸ್ಕರಿಸಿ ಸೂರ್ಯನ ವಿಚಾರವನ್ನು ವಿಸ್ತಾರವಾಗಿಯೂ, ಕ್ರಮವನ್ನು ಅನುಸರಿಸಿಯೂ ಹೇಳುತ್ತೇನೆ. ನನ್ನಿಂದ ಈ ವಿಷಯವನ್ನು ಮೊದಲು ಕೇಳು. ಅನಂತರ ಮಿಕ್ಕ ವಿಚಾರವನ್ನು ಹೇಳುತ್ತೇನೆ.

೨. ವಸ್ತುಸ್ಥಿತಿಯನ್ನು ವಿಚಾರಮಾಡತಕ್ಕವರು ಯಾವನನ್ನು ಅವ್ಯಕ್ತನೆಂದೂ, ಕಾರಣನೆಂದೂ, ನಿತ್ಯನೆಂದೂ, ಸದಸದಾತ್ಮಕನೆಂದೂ—(ಪಾರಮಾರ್ಥಿಕ ಸದ್ರೂಪನಾದ್ದರಿಂದ ಸದಾತ್ಮಕ ಎಂದೂ, ವ್ಯಾವಹಾರಿಕ 'ಸತ್' ಗಳಿಗೆ ಅಧಿಷ್ಠಾನನೂ, ಎಂದರೆ ಪರಮಾರ್ಥ 'ಸತ್' ಅಲ್ಲದ ಪ್ರಾಪಂಚಿಕಗಳಾದ 'ಅಸತ್' ಗಳಿಗೆ ಅಧಿಷ್ಠಾನನಾಗಿರೋಣದರಿಂದ ಅಸದಾತ್ಮಕನೆಂದೂ)—ತತ್ವಜ್ಞರು ಪ್ರಧಾನ ಅಥವಾ ಪ್ರಕೃತಿ ಎಂದೂ ಯಾವುದನ್ನು ಹೇಳುತ್ತಾರೆಯೋ ಅಂತಹ ಪರಬ್ರಹ್ಮವೊಂದಿದೆ. ಅದು ಜಗತ್ತಿಗೆ ಕಾರಣವೂ, ಮಹಾಭೂತವೂ, ಪುರಾತನವೂ ಆಗಿದೆ.

ಗಂಧೈರ್ವರ್ಣೈ ರಸೈರ್ಹೀನಂ ಶಬ್ದಸ್ಪರ್ಶ ವಿವರ್ಜಿತಂ ।
ಜಗದ್ಯೋನಿಂ ಮಹಾಭೂತಂ ಪರಂ ಬ್ರಹ್ಮ ಸನಾತನಂ ॥ ೩ ॥

ನಿಗ್ರಹಂ ಸರ್ವಭೂತಾನಾಂ ಅವ್ಯಕ್ತಮಭವತ್ಕಿಲ ।
ಅನಾದ್ಯಂತಮಜಂ ಸೂಕ್ಷ್ಮಂ ತ್ರಿಗುಣಂ ಪ್ರಭಾವಾಪ್ಯಯಂ ॥ ೪ ॥

ಅನಾಕಾರಮವಿಜ್ಞೇಯಂ ತಮಾಹುಃ ಪುರುಷಂ ಪರಂ ।
ತಸ್ಯಾತ್ಮನಾ ಸರ್ವಮಿದಂ ಜಗದ್ವ್ಯಾಪ್ತಂ ಮಹಾತ್ಮನಃ ॥ ೫ ॥

ತಸ್ಯೇಶ್ವರಸ್ಯ ಪ್ರತಿಮಾ ಜ್ಞಾನವೈರಾಗ್ಯಲಕ್ಷಣಾ ।
ಧರ್ಮೈಶ್ವರ್ಯಕೃತಾ ಬುದ್ಧಿರ್ಬ್ರಾಹ್ಮೀ ತಸ್ಯಾಭಿಮಾನಿನಃ ॥ ೬ ॥

ಅವ್ಯಕ್ತಾಜ್ಜಾಯತೇ ತಸ್ಯ ಮನಸಾ ಯದ್ಯದಿಚ್ಛತಿ ।
ಚತುರ್ಮುಖಸ್ಯ ಬ್ರಹ್ಮತ್ವೇ ಕಾಲತ್ವೇ ಚಾಂತಕೃದ್ಭವೇತ್ ॥ ೭ ॥

---

೩. ಅದು ಗಂಧ, ವರ್ಣ, ರಸಗಳಿಂದಲೂ ಶಬ್ದ ಸ್ಪರ್ಶಗಳಿಂದಲೂ ರಹಿತವಾಗಿದೆ.

೪-೫. ತನ್ನ ಅವ್ಯಕ್ತ ಸ್ವರೂಪವನ್ನು ತಿಳಿಸಿ ವ್ಯಕ್ತವಾಗಿರುವ ಸರ್ವಭೂತಗಳನ್ನೂ ತನ್ನಲ್ಲಿ ಅಡಗಿಸಿಕೊಳ್ಳತಕ್ಕದ್ದಾಗಿ ಪರಬ್ರಹ್ಮವು ಯಾರಿಗೂ ವ್ಯಕ್ತವಲ್ಲದ್ದಾಗಿ ಇದ್ದಿತಲ್ಲವೇ? ಆದಿ ಅಂತ ಇವು ಇಲ್ಲದೆಯೂ, ಜಾತವಲ್ಲದ್ದರಿಂದ ವ್ಯಕ್ತವಲ್ಲದೆಯೂ, ಉತ್ಪತ್ತಿಗೆ ಕಾರಣವಾಗಿಯೂ 'ಅಪ್ಯಯಂ' ಎಂದರೆ ತನ್ನಲ್ಲಿ ಎಲ್ಲವನ್ನೂ ಅಡಗಿಸಿಕೊಳ್ಳತಕ್ಕದ್ದೂ ಆಗಿ ಆಕಾರರಹಿತವೂ, ತಿಳಿಯಲು ಅಸಾಧ್ಯವೂ ಆದ ಅವನನ್ನು ಪರಮಪುರುಷನೆನ್ನುವರು. ಮಹಾತ್ಮನಾದ ಅವನ ಸ್ವರೂಪದಿಂದ ಈ ಜಗತ್ತೆಲ್ಲ ವ್ಯಾಪಿಸಲ್ಪಟ್ಟಿದೆ.

೬. ಆ ಈಶ್ವರಸ್ವರೂಪವು ಜ್ಞಾನ, ವೈರಾಗ್ಯ ಇವುಗಳೇ ಜ್ಞಾಪಕಗಳಾಗಿ ಉಳ್ಳದ್ದು, (ಎಂದರೆ ಇವುಗಳಿಂದ ಜ್ಞಾಪ್ಯವಾದುದು) ಈ ತಿಳಿವಳಿಕೆಯುಳ್ಳ ಮನುಷ್ಯನ ಬುದ್ಧಿಯು ಧರ್ಮವನ್ನು ಸಂಪಾದನೆಮಾಡಿ ಕೊಟ್ಟು ಈಶ್ವರ ಭಾವವನ್ನು ಉಂಟುಮಾಡಿ ಕೊಡುವುದಾದರೆ ಅದು ಬ್ರಾಹ್ಮೀ ಎನಿಸಿಕೊಳ್ಳುತ್ತದೆ.

೭. ಪರಮಪುರುಷನು ಬ್ರಹ್ಮತ್ವವನ್ನು ವಹಿಸಿ ಸೃಷ್ಟಿಕರ್ತೃವಾದಾಗ ಮನಸ್ಸಿನಲ್ಲಿ ಯಾವಯಾವುದನ್ನು ಅಪೇಕ್ಷಿಸುವನೋ ಅದೆಲ್ಲವೂ ಹುಟ್ಟುತ್ತದೆ. ಹಾಗೆಯೇ ಅವನು ನಾಶಕನಾದಾಗ ಎಲ್ಲವೂ ಲಯಹೊಂದುತ್ತವೆ.

ಸಹಸ್ರಮೂರ್ಧಾ ಪುರುಷಃ ತ್ರಿಸ್ರೋವಸ್ಥಾಃ ಸ್ವಯಂಭುವಃ ।
ಸತ್ವಂ ರಜಶ್ಚ ಬ್ರಹ್ಮತ್ವೇ ಕಾಲತ್ವೇ ಚ ರಜಸ್ತಮಃ ॥ ೮ ॥

ಸಾತ್ವಿಕಂ ಪುರುಷತ್ವೇ ಚ ಗುಣವೃತ್ತಂ ಸ್ವಯಂಭುವಃ ।
ಬ್ರಹ್ಮತ್ವೇ ಸೃಜತೇ ಲೋಕಾನ್ ಕಾಲತ್ವೇಚಾಪಿ ಸಂಕ್ಷಿಪೇತ್ ॥ ೯ ॥

ಪುರುಷತ್ವೇ ಉದಾಸೀನಃ ತಿಸ್ರೋವಸ್ಥಾಃ ಪ್ರಜಾಪತೇಃ ।
ತ್ರಿಧಾ ವಿಭಜ್ಯ ಚಾತ್ಮಾನಂ ತ್ರಿಕಾಲಂ ಸಂಪ್ರವರ್ತತೇ ॥ ೧೦ ॥

---

೮. ಪರಮಪುರುಷನು ಸಹಸ್ರ ಶಿರಸ್ಸುಳ್ಳವನು ಎಂದರೆ ಸಮಸ್ತ ಪ್ರಾಣಿಗಳ ಸ್ವರೂಪನಾಗಿರುವುದರಿಂದ ಎಲ್ಲ ಪ್ರಾಣಿಗಳ ಶಿರಸ್ಸುಗಳೂ ಅವನ ಶಿರಸ್ಸುಗಳೇ. ಆ ಸಾವಿರಾರು ಪ್ರಾಣಿಗಳಿಗೆ ಸಾವಿರಾರು ತಲೆಗಳಿರುವುದರಿಂದ ಪರಮಪುರುಷನು ಸಹಸ್ರ ಶಿರಸ್ಸುಳ್ಳವನು. ಪರಬ್ರಹ್ಮನಿಗೆ ಬ್ರಹ್ಮ, ವಿಷ್ಣು, ರುದ್ರ ಎಂಬ ಮೂರು ಅವಸ್ಥೆಗಳುಂಟು. (ಸಾಮಾನ್ಯವಾಗಿ ರಜೋಗುಣಪ್ರಧಾನವಾದಾಗ ಬ್ರಹ್ಮನೆಂದೂ, ಸತ್ವಗುಣ ಪ್ರಧಾನವಾದಾಗ ವಿಷ್ಣುವೆಂದೂ, ತಮೋಗುಣ ಪ್ರಧಾನವಾದಾಗ ರುದ್ರನೆಂದೂ ವ್ಯವಹಾರದಲ್ಲಿ ರೂಢಿಯಿದೆ) ಬ್ರಹ್ಮನಾಗಿ (ಸೃಷ್ಟಿಕರ್ತನಾಗಿ) ಇರುವಾಗ ಸತ್ವ ರಜೋಗುಣಗಳೂ; ನಾಶ ಕರ್ತೃವಾಗತಕ್ಕ ಸಮಯದಲ್ಲಿ ರಜೋ ತಮೋ ಗುಣಗಳೂ ಹೆಚ್ಚಾಗಿರುವುವು.

೯. ಸ್ವಯಂಭುವಾದ ಪರಬ್ರಹ್ಮನ ಪುರುಷತ್ವಕಾಲದಲ್ಲಿ ಸಾತ್ವಿಕ ಗುಣವು ಇರುವುದು. ಎಂದರೆ ಪರಬ್ರಹ್ಮನು ರಜೋಗುಣ ಪ್ರಧಾನದಿಂದ ಚತುರ್ಮುಖ ಬ್ರಹ್ಮತ್ವವನ್ನು ಹೊಂದಿದ ಕಾಲದಲ್ಲಿ ಲೋಕವನ್ನು ಸೃಷ್ಟಿಮಾಡುತ್ತಾನೆ. ಆ ಪರ ಬ್ರಹ್ಮನೇ ನಿಗ್ರಹಿಸುವ ನಿಮಿತ್ತದಿಂದ ಲಯಕರ್ತೃತ್ವ ಹೊಂದಿದ ತಮೋಗುಣ ಪ್ರಧಾನವಾದ ಕಾಲದಲ್ಲಿ ಎಲ್ಲವನ್ನೂ ನಿಗ್ರಹಮಾಡುತ್ತಾನೆ.

೧೦. ಶರೀರದಲ್ಲಿದ್ದುಕೊಂಡು ದರ್ಶನಾದಿ ವ್ಯಾಪಾರ ನಡಸುತ್ತಿರುವ ಕಾಲದಲ್ಲಿ ಪುರುಷನೆನ್ನಿಸಿಕೊಂಡು ಸೃಷ್ಟಿ ಸ್ಥಿತಿ ಲಯಗಳ ವಿಷಯದಲ್ಲಿ ಉದಾಸೀನನಾಗಿರುತ್ತಾನೆ. ಈರೀತಿ ಪರಬ್ರಹ್ಮನ ಮೂರು ಅವಸ್ಥೆಗಳು ಮೂರು ಪ್ರಕಾರಗಳಾಗಿ ವಿಭಾಗಿಸಿಕೊಂಡು ಭೂತ, ಭವಿಷ್ಯದ್ವರ್ತಮಾನ ಎಂಬ ಮೂರು ಕಾಲಗಳಲ್ಲಿಯೂ ಕಾರ್ಯದಲ್ಲಿ ಚೆನ್ನಾಗಿ ಪ್ರವೇಶಿಸುತ್ತವೆ.

**ಸೃಜತೇ ಗ್ರಸತೇ ಚೈವ ವೀಕ್ಷತೇ ಚ ತ್ರಿಭಿಃ ಸ್ವಯಂ ।**
**ಅಗ್ರೇ ಹಿರಣ್ಯಗರ್ಭಸ್ತು ಪ್ರಾದುರ್ಭೂತಃ ಸ್ವಯಂಭುವಃ ॥ ೧೧ ॥**

**ಆದಿತ್ಯಸ್ಯಾದಿದೇವತ್ವಾತ್ ಅಜಾತತ್ವಾ ದಜಃ ಸ್ಮೃತಃ ।**
**ದೇವೇಷು ಸ ಮಹಾರ್ನ್ ದೇವೋ ಮಹಾದೇವಃ ಸ್ಮೃತಸ್ತತಃ ॥ ೧೨ ॥**

**ಸರ್ವೇಶತ್ವಾ ಚ್ಚ ಲೋಕಸ್ಯ ಅಧೀಶತ್ವಾಚ್ಚ ಈಶ್ವರಃ ।**
**ಬೃಹತ್ವಾ ಚ್ಚ ಸ್ಮೃತೋ ಬ್ರಹ್ಮಾ ಭವತ್ವಾದ್ಭವ ಉಚ್ಯತೇ ॥ ೧೩ ॥**

**ಪಾತಿ ಯಸ್ಮಾತ್ಪ್ರಜಾ ಸ್ಸರ್ವಾಃ ಪ್ರಜಾಪತಿರತಃ ಸ್ಮೃತಃ ।**
**ಪುರೇ ಶೇತೇ ಚ ವೈ ಯಸ್ಮಾತ್ತಸ್ಮಾತ್ಪುರುಷ ಉಚ್ಯತೇ ॥ ೧೪ ॥**

**ನೋತ್ಪಾದ್ಯತ್ವಾದಪೂರ್ವತ್ವಾತ್ಸ್ವಯಂಭೂರಿತಿ ವಿಶ್ರುತಃ ॥ ೧೫ ॥**

---

೧೧. ರಜೋಗುಣದ ಉದ್ಬುದ್ಧಸ್ಥಿತಿಯಲ್ಲಿ ಸೃಷ್ಟಿಸುತ್ತಲೂ, ತಮೋಗುಣದ ಉದ್ಬುದ್ಧಸ್ಥಿತಿಯಲ್ಲಿ ನುಂಗುತ್ತ (ನಾಶಮಾಡುತ್ತ) ಲೂ, ಸತ್ವಗುಣದ ಉದ್ಬುದ್ಧ ಸ್ಥಿತಿಯಲ್ಲಿ ಮೇಲ್ವಿಚಾರಣೆ ನೋಡುತ್ತ ರಕ್ಷಿಸುತ್ತಲೂ ಇರುತ್ತಾನೆ. ಹೀಗೆ ಚತುರ್ಮುಖಬ್ರಹ್ಮನಿಗಿಂತ ಮುಂಚೆ ವಿರಾಟ್‌ಪುರುಷನು ವ್ಯಕ್ತನಾದನು.

೧೨. ಆದಿದೇವನಾದುದರಿಂದ ಆದಿತ್ಯನೆಂತಲೂ, ಉತ್ಪನ್ನ ನಲ್ಲದುದರಿಂದ ಅವನಿಗೆ ಅಜನೆಂದೂ ಹೆಸರಾಯಿತು. ದೇವರುಗಳಲ್ಲೆಲ್ಲಾ ಅವನು ದೊಡ್ಡ ದೇವನು. ಆದುದರಿಂದ ಅವನನ್ನು ಮಹಾದೇವನೆನ್ನುವರು.

೧೩. ಸರ್ವೇಶನೂ, ಲೋಕೇಶನೂ ಆದುದರಿಂದ ಅವನು ಈಶ್ವರನೆನಿಸಿ ಕೊಳ್ಳುವನು. ಬೃಹತ್ಪರಿಮಾಣವುಳ್ಳವನಾದುದರಿಂದ ಬ್ರಹ್ಮನೆಂತಲೂ ಜಗತ್ತಿನ ಉತ್ಪತ್ತಿಗೆ ಕಾರಣನಾದುದರಿಂದ ಭವನೆಂತಲೂ ಎನಿಸುವನು.

೧೪. ಎಲ್ಲಾ ಪ್ರಜೆಗಳನ್ನೂ ರಕ್ಷಿಸುವುದರಿಂದ ಅವನು ಪ್ರಜಾಪತಿಯಾದನು. ಎಲ್ಲ ಶರೀರಗಳಲ್ಲೂ ವ್ಯಾಪಕನಾಗಿರುವುದರಿಂದ ಪುರುಷನೆನಿಸುವನು.

೧೫. ಬೇರೆ ಯಾವ ಕಾರಣದಿಂದಲೂ ಉತ್ಪಾದನಮಾಡಲ್ಪಡದವನಾದುದರಿಂದಲೂ, ಅವನಿಗಿಂತ ಪೂರ್ವದಲ್ಲಿ ಯಾರೂ ಇರಲೇ ಇಲ್ಲವಾದುದರಿಂದಲೂ ಸ್ವಯಂಭೂ ಎಂದು ಪ್ರಸಿದ್ಧನಾಗಿದ್ದಾನೆ.

ಹಿರಣ್ಮಾಂಡಗತೋ ಯಸ್ಮಾತ್ ಗ್ರಹೇಶೋ ವೈ ದಿವಸ್ಪತಿಃ ।
ತಸ್ಮಾದ್ಧಿರಣ್ಯಗರ್ಭೋಽಸೌ ದೇವದೇವೋ ದಿವಾಕರಃ ॥ ೧೬ ॥

ಆಪೋ ನಾರಾ ಇತಿಪ್ರೋಕ್ತಾ ಋಷಿಭಿಸ್ತತ್ವದರ್ಶಿಭಿಃ ।
ಅಯನಂ ತಸ್ಯ ತಾ ಆಪಃ ತೇನ ನಾರಾಯಣಃ ಸ್ಮೃತಃ ॥ ೧೭ ॥

ಅರ ಇತ್ಯೇಷ ಶೀಘ್ರಾರ್ಥೋಽ ನಿಪಾತಃ ಕವಿಭಿಃ ಸ್ಮೃತಃ ।
ಆಪ ಏವಾರ್ಣವಾಭೂತ್ವಾ ನ ಶೀಘ್ರಾಸ್ತೇನ ತಾ ನರಾಃ ॥ ೧೮ ॥

ಏಕಾರ್ಣವೇ ಪುರಾ ತಸ್ಮಿನ್ ನಷ್ಟೇ ಸ್ಥಾವರಜಂಗಮೇ ।
ನಾರಾಯಣಾಖ್ಯಃ ಪುರುಷಃ ಸುಷ್ವಾಪ ಸಲಿಲೇ ತದಾ ॥
ಸಹಸ್ರ ಶೀರ್ಷಾ ಸುಮನಾಃ ಸಹಸ್ರಾಕ್ಷಃ ಸಹಸ್ರಪಾತ್ ॥ ೧೯ ॥

---

೧೬. ಆಕಾಶಾಧಿಪತಿಯಾದ ಸೂರ್ಯನು ಹಿರಣ್ಮಯವಾದ ಅಂಡದಲ್ಲಿದ್ದುದರಿಂದ ಗ್ರಹಾಧಿಪತಿಯೂ, ದೇವದೇವೇಶನೂ ಆದ ಆ ದಿವಾಕರನಿಗೆ ಹಿರಣ್ಯಗರ್ಭನೆಂದು ಹೆಸರಾಯಿತು.

೧೭. 'ನಾರಾ' ಎಂದರೆ ಉದಕವೆಂದರ್ಥ. ಇವನು ಉದಕದಲ್ಲಿ (ಸಮುದ್ರದಲ್ಲಿ) ಶಯನ ಮಾಡಿರುವುದರಿಂದ ನಾರವೇ (ಉದಕವೇ) ಅಯನ (ಸ್ಥಾನ) ವಾಯಿತು. ಹೀಗೆ ನಾರವೇ ಅಯನವಾಗಿ ಉಳ್ಳ ಇವನನ್ನು ತತ್ವದರ್ಶಿಗಳಾದ ಋಷಿಗಳು ನಾರಾಯಣನೆಂದು ಹೇಳಿದ್ದಾರೆ.

೧೮. ಅರ ಎಂಬ ಶಬ್ದಕ್ಕೆ ಕವಿಗಳು ಶೀಘ್ರ ಎಂಬರ್ಥವನ್ನು ಹೇಳಿದ್ದಾರೆ ನೀರುಗಳು ಸಮುದ್ರರೂಪವನ್ನು ಹೊಂದಿ ತಮ್ಮ ಪ್ರವಹಿಸುವ ಗುಣದ ಶೀಘ್ರತೆಯನ್ನು ಕಳೆದುಕೊಂಡು ನಿಂತುಬಿಟ್ಟಿರುವುದರಿಂದ ನಾರಾ ಎಂದು ಹೆಸರಾಯಿತು.

೧೯. ಈರೀತಿ ವೇಗವನ್ನು ಕಳೆದುಕೊಂಡ ಜಲದಿಂದ ಕೂಡಿದ ಏಕವಾದ ಅರ್ಣವದಲ್ಲಿ ಚರಾಚರ ವಸ್ತುಗಳೆಲ್ಲವೂ ನಷ್ಟವಾಗಿದ್ದ ಕಾಲದಲ್ಲಿ ನಾರಾಯಣನೆಂಬ ಹೆಸರುಳ್ಳ ಈ ಪುರುಷನು ಸಮುದ್ರದ (ಜಲದ) ಲ್ಲಿ ನಿದ್ರಿಸಿದ್ದನು.

ಸಹಸ್ರಬಾಹುಃ ಪ್ರಥಮಃ ಪ್ರಜಾಪತಿಃ ।
ತ್ರಯೀಪಥೇ ಯಃ ಪುರುಷೋ ನಿಗದ್ಯತೇ ।
ಆದಿತ್ಯವರ್ಣೋ ಭುವನಸ್ಯ ಗೋಪ್ತಾ
ಅಪೂರ್ವ ಏಕಃ ಪುರುಷಃ ಪುರಾಣಃ ॥ ೨೦ ॥

ಹಿರಣ್ಯಗರ್ಭಃ ಪುರುಷೋ ಮಹಾತ್ಮಾ ।
ಸಂಪದ್ಯತೇ ವೈ ತಮಸಃ ಪರಸ್ತಾತ್ ॥ ೨೧ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಾಂಬೋಪಾಖ್ಯಾನೇ ಸೂರ್ಯವರ್ಣನಂ ನಾಮ ಸಪ್ತಸಪ್ತತಿತಮೋಽಧ್ಯಾಯಃ.



---

೨೦-೨೧. ಸಹಸ್ರ ಶಿರಸ್ಸುಳ್ಳವನೂ, ಒಳ್ಳೆಯ ಮನಸ್ಸುಳ್ಳವನೂ, ಸಹಸ್ರ ನೇತ್ರಗಳುಳ್ಳವನೂ, ಸಹಸ್ರ ಪಾದಗಳುಳ್ಳವನೂ, ಸಹಸ್ರ ಬಾಹುಗಳುಳ್ಳವನೂ, ಎಲ್ಲಕ್ಕಿಂತ ಮೊದಲಿನವನೂ, ಪ್ರಜೆಗಳನ್ನು ರಕ್ಷಿಸತಕ್ಕವನೂ, ವೇದಮಾರ್ಗದಲ್ಲಿ ಪುರುಷನೆಂದು ಪ್ರಸಿದ್ಧನಾದವನೂ, ಆದಿತ್ಯನಂತೆ ಇರುವನೆಂದು ವರ್ಣಿಸಲ್ಪಡುವುದರಿಂದ ಆದಿತ್ಯವರ್ಣನೂ, ಲೋಕರಕ್ಷಕನೂ, ತನಗಿಂತ ಪೂರ್ವದಲ್ಲಿ ಯಾರೂ ಇಲ್ಲದಿದ್ದವನೂ, ಪೂರ್ವಕಾಲದಲ್ಲಿಯೇ ಸಿದ್ಧನಾಗಿ ಪುರವೆಂದು ಹೇಳಲ್ಪಡುವ ಶರೀರದಲ್ಲಿ ಚೈತನ್ಯರೂಪನಾಗಿ ವ್ಯಾಪಿಸಿಕೊಂಡಿರುವುದರಿಂದ ಪುರುಷನೂ, ಪುರಾತನನೂ, ಹಿರಣ್ಮಯವಾದ ಅಂಡದಗರ್ಭಸ್ಥನೂ, ಮಹಾತ್ಮನೂ ಆದ, ಪುರುಷನಾಗಿ ತಮಸ್ಸಿಗೆ ದೂರನಾದವನು, ಎಂದರೆ ಅಜ್ಞಾನಿಗಳಿಗೆ ಗೋಚರಿಸದವನೂ ಆಗಿರುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಾಂಬೋಪಾಖ್ಯಾನದಲ್ಲಿ ಸೂರ್ಯವರ್ಣನೆಯೆಂಬ ಎಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಅಷ್ಟಸಪ್ತತಿತಮೋಽಧ್ಯಾಯಃ

---

॥ ನಾರದ ಉವಾಚ ॥

ತುಲ್ಯಂ ಯುಗಸಹಸ್ರಸ್ಯ ನೈಶಂ ಕಾಲಮುಪಾಸ್ಯ ಸಃ ।
ಶರ್ವರ್ಯಂತೇ ಪ್ರಕುರುತೇ ಬ್ರಹ್ಮತ್ವಂ ಸರ್ಗಕಾರಣಾತ್ ॥ ೧ ॥

ಸಲಿಲೇನಾಪ್ಲುತಾಂ ಭೂಮಿಂ ದೃಷ್ಟ್ವಾ ಕಾರ್ಯಂ ವಿಚಿಂತ್ಯ ಸಃ ।
ಭೂತ್ವಾ ಸ ತು ವರಾಹೋ ವೈ ಅಪಃ ಸಂವಿಶತೇ ಪ್ರಭುಃ ॥ ೨ ॥

ಸಂಚಿಂತ್ಯೈವಂ ಸ ದೇವೇಶೋ ಭೂಮೇರುದ್ಧರಣೇ ಕ್ಷಮಃ ।
ಮಹೀಂ ಮಹಾರ್ಣವೇ ಮಗ್ನಾಮುದ್ಧರ್ತುಮುಪಚಕ್ರಮೇ ॥ ೩ ॥

---

## ಎಪ್ಪತ್ತೆಂಟನೆಯ ಅಧ್ಯಾಯ

೧. ಮಾನವರ ಸಾವಿರ ಯುಗಗಳಿಗೆ ದೇವಮಾನದ ಒಂದು ದಿನ. ಆದರಲ್ಲಿ ರಾತ್ರಿಯೆಂಬ ಅರ್ಧ ಸಮಭಾಗವನ್ನು ಅನುಭವಿಸಿ ರಾತ್ರಿ ಮುಗಿದಮೇಲೆ ಸೃಷ್ಟಿಯ ಕಾರ್ಯಕ್ಕೋಸ್ಕರ ಬ್ರಹ್ಮನ ಸ್ವರೂಪವನ್ನು ಪಡೆಯುವನು.

೨. ಭೂಮಿಯೆಲ್ಲವೂ ನೀರಿನಲ್ಲಿ ಮುಳುಗಿರುವುದನ್ನು ನೋಡಿ ಮುಂದೇನು ಮಾಡಬೇಕು ಎಂದು ಯೋಚಿಸಿ, ಆ ಪ್ರಭುವೇ ವರಾಹರೂಪನಾಗಿ ನೀರಿನಲ್ಲಿ ಪ್ರವೇಶಿಸಬೇಕೆಂದು ನಿಶ್ಚಯಿಸಿದನು.

೩. ಭೂಮಿಯನ್ನು ಎತ್ತುವುದರಲ್ಲಿ ಸಮರ್ಥನಾದ ಆ ದೇವೇಶನು ಹಾಗೆ ಆಲೋಚಿಸಿ ಮಹಾಸಮುದ್ರದಲ್ಲಿ ಮುಳುಗಿಹೋಗಿದ್ದ ಭೂಮಿಯನ್ನು ಎತ್ತುವುದಕ್ಕೆ ಉಪಕ್ರಮಿಸಿದನು.

ಉತ್ತಿಷ್ಠತಸ್ತಸ್ಯ ಜಲಾರ್ದ್ರಕುಕ್ಷೇಃ ।
ಮಹಾವರಾಹಸ್ಯ ಮಹೀಂ ವಿದಾರ್ಯ ॥
ವಿಧುನ್ವತೋ ವೇದಮಯಂ ಶರೀರಂ ।
ರೋಮಾಂತರಸ್ಥಾ ಮುನಯೋ ಜಪಂತಿ ॥ ೪ ॥

ಉದ್ಧೃತ್ಯೋರ್ವೀಂ ಸ ಸಲಿಲಾತ್ ಪ್ರಜಾ ಸರ್ಗಮಕಲ್ಪಯತ್ ।
ಮನಸಾ ಜನಯಾಮಾಸ ಪುತ್ರಾನಾತ್ಮಸಮಾನ್ ಶುಭಾನ್ ॥ ೫ ॥

ಭೃಗ್ವಂಗಿರಸಮತ್ರಿಂ ಚ ಪುಲಸ್ತ್ಯಂ ಪುಲಹಂ ಕ್ರತುಂ ।
ಮರೀಚಿಮಥ ದಕ್ಷಂ ಚ ವಸಿಷ್ಠಂ ನವಮಂ ತಥಾ ॥ ೬ ॥

ನವ ಪ್ರಜಾಪತೀನ್ ಸೃಷ್ಟ್ವಾ ತತಸ್ಸ ಪುರುಷೋತ್ತಮಃ ।
ಪ್ರಾದುರ್ಭೂತೋಽದಿತೇಃ ಪುತ್ರಃ ಪ್ರಜಾನಾಂ ಹಿತಕಾಮ್ಯಯಾ ॥ ೭ ॥

ಮರೀಚೇಃ ಕಶ್ಯಪಂ ಪುತ್ರಂ ಯಂ ಬ್ರಹ್ಮಾ ಜನಯಜ್ಞಲೀ ।
ಪ್ರಜಾಪತೀನಾಂ ದಶಮಂ ತೇಜಸಾ ಬ್ರಹ್ಮಣಸ್ಸಮಂ ॥ ೮ ॥

---

೪. ಅನಂತರ ಭೂಮಿಯನ್ನು ಎತ್ತಿಕೊಂಡು ಸಮುದ್ರದಿಂದ ಏಳುವಾಗ ಶರೀರವೆಲ್ಲಾ ನೀರಿನಲ್ಲಿ ನೆನೆಯಲು ವರಾಹರೂಪಿಯಾದ ಪರಮಾತ್ಮನು ತನ್ನ ವೇದಮಯವಾದ ಶರೀರವನ್ನು ಕೊಡಹಿದನು. ಆಗ ಆ ಮಹಾವರಾಹನ ರೋಮಕೂಪಗಳಲ್ಲಿರುವ ಮಹರ್ಷಿಗಳು ವೇದಗಳನ್ನು ಜಪಿಸುತ್ತಿದ್ದರು.

೫. ಸಮುದ್ರದಲ್ಲಿ ಮುಳುಗಿ ಹೋಗಿದ್ದ ಭೂಮಿಯನ್ನು ಜಲದಿಂದ ಮೇಲಕ್ಕೆತ್ತಿ ಅನಂತರ ಪ್ರಜಾಸೃಷ್ಟಿ ಮಾಡಲು ಮನಸ್ಸುಮಾಡಿ ತನಗೆ ಸಮಾನರೆನಿಸಿದ.

೬-೭. ಶುಭಸ್ವರೂಪರಾದ ಒಳ್ಳೆಯ ಮಕ್ಕಳನ್ನು ತನ್ನ ಮನಸ್ಸಿನಿಂದಲೇ ಸೃಷ್ಟಿಸಿದನು. ಭೃಗು, ಅಂಗಿರಸ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ದಕ್ಷ, ಮರೀಚಿ, ವಸಿಷ್ಠ, ಎಂಬ ಈ ಒಂಬತ್ತುಜನ ಪ್ರಜಾಪತಿಗಳನ್ನು ಸೃಷ್ಟಿಸಿ ಆ ಮೇಲೆ ಆ ಪುರುಷೋತ್ತಮನು ಪ್ರಜೆಗಳಿಗೆ ಹಿತವಾಗಬೇಕೆಂಬ ಅಪೇಕ್ಷೆಯಿಂದ ಮರೀಚಿ ಪುತ್ರನೆನಸಿದ ಕಶ್ಯಪನ ಪತ್ನಿಯಾದ ಅದಿತಿಯ ಗರ್ಭದಲ್ಲಿ ಆದಿತ್ಯನೆಂಬ ಹೆಸರಿನಿಂದ ಹುಟ್ಟಿದನು.

೮. ಪರಬ್ರಹ್ಮನು ಮರೀಚಿಬ್ರಹ್ಮನಿಗೆ ಪುತ್ರನಾಗಿ ಕಶ್ಯಪನನ್ನು ಸೃಷ್ಟಿಸಿದನು. ಅವನು ತೇಜಸ್ಸಿನ ವಿಷಯದಲ್ಲಿ ಬ್ರಹ್ಮನಿಗೆ ಸಮಾನನೆನಿಸಿದ ಹತ್ತನೆಯ ಪ್ರಜಾಪತಿಯೆನಿಸಿದನು.

ದಕ್ಷಕನ್ಯಾಽದಿತಿರ್ನಾಮ್ನಾ ಪತ್ನೀ ಸಾ ಕಶ್ಯಪಸ್ಯ ತು ।
ಅಂಡಂ ಸಾ ಜನಯಾಮಾಸ ಭೂರ್ಭುವಃಸ್ವಸ್ತ್ರಿಸಂಯುತಂ ॥ ೯ ॥

ತತ್ರೋತ್ಪನ್ನಃ ಸಹಸ್ರಾಂಶುಃ ದ್ವಾದಶಾತ್ಮಾ ದಿವಾಕರಃ ।
ನವಯೋಜನ ಸಾಹಸ್ರೋ ವಿಸ್ತಾರೋಽಸ್ಯ ಮಹಾತ್ಮನಃ ॥
ವಿಸ್ತಾರಾತ್ರಿಗುಣಶ್ಚಾಸ್ಯ ಪರಿಧಿಸ್ತು ವಿಭಾವಸೋಃ ॥ ೧೦ ॥

ಯಥಾ ಪುಷ್ಪಂ ಕದಂಬಸ್ಯ ಸಮಂತಾತ್ಕೇಸರೈರ್ವೃತಂ ।
ತಥೈವ ತೇಜಸಾಂ ಗೋಲಂ ಸಮಂತಾದ್ರಶ್ಮಿಭಿರ್ವೃತಂ ॥ ೧೧ ॥

ಸಹಸ್ರಶೀರ್ಷೋ ಪುರುಷೋ ಬ್ರಾಹ್ಮಂ ಯೋಗಮುದಾಹರನ್ ।
ತೈಜಸಸ್ಯ ಚ ಗೋಲಸ್ಯ ಸ ತು ಮಧ್ಯೇ ವ್ಯವಸ್ಥಿತಃ ॥ ೧೨ ॥

ಆದತ್ತೇ ಸ ತು ರಶ್ಮೀನಾಂ ಸಹಸ್ರೇಣ ಸಮಂತತಃ ।
ಆಪೋ ನದೀ ಸಮುದ್ರೇಭ್ಯೋ ಹ್ರದಕೂಪೇಭ್ಯ ಏವ ಚ ॥ ೧೩ ॥

---

೯. ಅದಿತಿ ಎಂಬ ಹೆಸರುಳ್ಳ ದಕ್ಷಕನ್ಯೆಯು ಕಶ್ಯಪರ ಪತ್ನಿಯಾಗಿ ಭೂಲೋಕ ಭುವರ್ಲೋಕ ಸುವರ್ಲೋಕಗಳೆಂಬ ಮೂರು ಲೋಕಗಳಿಂದ ಕೂಡಿದ ಬ್ರಹ್ಮಾಂಡ ವನ್ನು ಪ್ರಸುವಿಸಿದಳು.

೧೦. ಹನ್ನೆರಡು ರೂಪವುಳ್ಳವನೂ ಸಹಸ್ರಕಿರಣನೂ ಆದ ಸೂರ್ಯನು ಅಲ್ಲಿ ಹುಟ್ಟಿದನು. ಈ ಮಹಾತ್ಮನ ಅಗಲವು ಎಂದರೆ ವ್ಯಾಸರೇಖೆಯು ಒಂಬತ್ತು ಸಾವಿರ ಯೋಜನಗಳೂ, ಸೂರ್ಯನ ಪರಿಧಿಯು ವ್ಯಾಸದ ಮೂರರಷ್ಟು ಎಂದರೆ ಇಪ್ಪತ್ತೇಳು ಸಾವಿರ ಯೋಜನಗಳೂ ಆಗಿದೆ.

೧೧. ಕದಂಬ ಪುಷ್ಪವು (ಕಸ್ತೂರಿ ಗೊಬ್ಬಳಿಯಂತಹ ಹೂ) ಅರಳಿದಾಗ ಹೇಗೆ ಸುತ್ತಲೂ ಎಲ್ಲಕಡೆಯೂ ಕೇಸರಗಳಿಂದ ಸುತ್ತುವರಿಯಲ್ಪಟ್ಟಿರುವುದೋ ಹಾಗೆಯೇ ಸೂರ್ಯನ ಗೋಳವು ಸುತ್ತಲೂ ಕಿರಣಗಳಿಂದ ಆವರಿಸಲ್ಪಟ್ಟಿದೆ.

೧೨. ಸಹಸ್ರ ಶಿರಸ್ಸುಗಳುಳ್ಳವನಾದ ಪರಮಪುರುಷನು ಬ್ರಾಹ್ಮಯೋಗ ವನ್ನು ಸ್ವೀಕರಿಸಿದವನಾಗಿ ಆ ತೇಜಸ್ಸಿನ ಗೋಳದ ಮಧ್ಯದಲ್ಲಿ ನೆಲಸಿದನು.

೧೩. ಅವನು ತನ್ನ ಸುತ್ತಲೂ ಇರುವ ಸಹಸ್ರ ಕಿರಣಗಳಿಂದ ಮಡುಗಳು, ನದಿ, ಸಮುದ್ರ, ಭಾವಿ, ಕೊಳ ಇವುಗಳಿಂದ ನೀರುಗಳನ್ನು ಎಳೆದು ಕೊಳ್ಳುತ್ತಾನೆ.

**ಸೌರೀ ಪ್ರಭಾ ಯಾ ದೇವಸ್ಯ ಅಸ್ತಂ ಯಾತೇ ದಿವಾಕರೇ ।**
**ಅಗ್ನಿಮಾವಿಶತೇ ರಾತ್ರೌ ತಸ್ಮಾದ್ದೂರಾತ್ಪ್ರಕಾಶತೇ　　॥ ೧೪ ॥**

**ಉದಿತೇ ಚ ತತಸ್ಸೂರ್ಯೇ ತೇಜ ಆಗ್ನೇಯಮಾವಿಶತ್ ।**
**ಪಾದೇನ ತೇಜಸಶ್ಚಾಗ್ನೇಃ ತಸ್ಮಾತ್ಸತಪತೇ ರವಿಃ　　॥ ೧೫ ॥**

**ಪ್ರಕಾಶತ್ವಂ ತಥೋಷ್ಣತ್ವಂ ಸೂರ್ಯೇ ಗ್ನೌ ಚ ಪ್ರಕೀರ್ತಿತೇ ।**
**ಪರಸ್ಪರಾನುಗ್ರವೇಶಾದಾಪ್ಯಾಯೇತೇ ದಿವಾನಿಶಂ　　॥ ೧೬ ॥**

**ವ್ಯಾಪಕತ್ವಂ ಚ ರಶ್ಮೀನಾಂ ನಾಮಾನಿ ಚ ಬೋಧಮೇ ।**
**ಹೇತಯಃ ಕಿರಣಾ ಗಾವೋ ರಶ್ಮಯೋ ಥ ಗಭಸ್ತಯಃ　　॥ ೧೭ ॥**

**ಅಭೀಷವೋ ಘನಂ ಜೋಸ್ರಾ ವಸವೋಥ ಮರೀಚಯಃ ।**
**ನಾಡ್ಯೋ ದೀಧಿತಯಃ ಸಾಧ್ಯಾ ಮಯೂಖಾ ಭಾನವೋಽಂಶವಃ　　॥ ೧೮ ॥**

---

೧೪. ಸೂರ್ಯನು ಮುಳುಗುತ್ತಲೇ ತತ್ಸಂಬಂಧವಾದ ಕಾಂತಿಯು ರಾತ್ರಿಯಲ್ಲಿ ಅಗ್ನಿಯನ್ನು ಸೇರುತ್ತದೆ. ಆದ್ದರಿಂದ ಅದು ದೂರದಿಂದ ಪ್ರಕಾಶಿಸುತ್ತದೆ. ಎಂದರೆ ಹಗಲು ಸೂರ್ಯ ಕಿರಣವು ಮಾಡುವ ಕೆಲಸವನ್ನು ರಾತ್ರಿ, ಅಗ್ನಿಯು ಮಾಡುವುದರಿಂದ ರಾತ್ರಿಯವೇಳೆ ಸೂರ್ಯ ಕಿರಣಗಳು ಅಗ್ನಿಯಲ್ಲಿವೆಯೆಂದು ಹೇಳುವರು.

೧೫. ಪ್ರಾತಃಕಾಲ ಸೂರ್ಯೋದಯವಾಗುತ್ತಲೇ ರಾತ್ರಿಯವೇಳೆ ಅಗ್ನಿಯು ಹೊಂದಿದ್ದ ತೇಜಸ್ಸು ಮತ್ತೆ ಸೂರ್ಯನಲ್ಲೇ ಸೇರುವುದು. ಎಂದರೆ ರಾತ್ರಿಯ ಹೊತ್ತು ಅಗ್ನಿ ಮಾಡುತ್ತಿದ್ದ ಪ್ರಕಾಶನಕಾರ್ಯವನ್ನು ಹಗಲು ಸೂರ್ಯನೇ ಮಾಡುತ್ತಾನೆ. ಅಗ್ನಿಯ ತೇಜಸ್ಸು, ಸೂರ್ಯನ ತೇಜಸ್ಸಿನ ಕಾಲುಭಾಗ ಮಾತ್ರ; ಆದಕಾರಣ ಸೂರ್ಯನು ಪ್ರಜ್ವಲಿಸುತ್ತಾನೆ.

೧೬. ಬೆಳಕು ಕೊಡುವುದು, ಶಾಖ ಕೊಡುವುದು, ಇವೆರಡೂ ಸೂರ್ಯನಲ್ಲಿಯೂ ಅಗ್ನಿಯಲ್ಲಿಯೂ ಇರುವ ಕಾರ್ಯಗಳು. ಇವರು ಒಬ್ಬರಲ್ಲೊಬ್ಬರು ಪ್ರವೇಶಿಸುವುದರಿಂದ ಹಗಲು ರಾತ್ರಿಗಳು ಉಂಟಾಗುವುವು.

೧೭-೧೯. ಕಿರಣಗಳ ಹೆಸರುಗಳನ್ನೂ ಅವುಗಳ ವ್ಯಾಪಕ ಕ್ರಮವನ್ನೂ ಹೇಳುವೆನು ಕೇಳು. ಹೇತಯಃ, ಕಿರಣಾಃ, ಗಾವಃ, ರಶ್ಮಯಃ, ಗಭಸ್ತಯಃ, ಅಭೀಷವಃ, ಘನಂ, ಉಸ್ರಾಃ, ವಸವಃ, ಮರೀಚಯಃ, ನಾಡ್ಯಃ, ದೀಧಿತಯಃ.

ಸಪ್ತಾರ್ಚಯಃ ಸುಪರ್ಣಾಶ್ಚ ಕರಾಃ ಪಾದಾಸ್ತಥೈವ ಚ ।
ಏಷಾಂ ತು ನಾಮ್ನಾಂ ರಶ್ಮೀನಾಂ ಪರ್ಯಾಯಾ ವಿಂಶತಿಃ ಸ್ಮೃತಾ ॥ ೧೯ ॥

ಚಂದನಾದೀನಿ ವಕ್ಷ್ಯಾಮಿ ನಾಮಾನ್ಯೇಷಾಂ ಪೃಥಕ್ ಪೃಥಕ್ ।
ಸಹಸ್ರಂ ತಾತ ಕಥಿತಂ ಶೀತವರ್ಷೋಷ್ಣನಿಃಸ್ರವಂ ॥ ೨೦ ॥

ತೇಷಾಂ ಚತುಃ ಶತಂ ನಾಡ್ಯೋ ವರ್ಷಂತೇ ಚಿತ್ರಮೂರ್ತಯಃ ।
ಚಂದನಾಶ್ಚೈವ ಮಂದಾಶ್ಚಕೋತನಾಮಾನುಮಾಸ್ತಥಾ ॥ ೨೧ ॥

ಅಮೃತಾ ನಾಮ ತೇ ಸರ್ವೇ ರಶ್ಮಯೋ ವೃಷ್ಟಿಹೇತವಃ ।
ಹಿಮೋದ್ವಹಾಸ್ತು ತತ್ರಾನ್ಯೇ ರಶ್ಮಯಃ ತ್ರಿಶತಂ ಸ್ಮೃತಾಃ ॥
ಚಂದ್ರಾಸ್ತೇ ನಾಮತಸ್ಸರ್ವೇ ಪೀತಾಸ್ತೇ ತು ಗಭಸ್ತಯಃ ॥ ೨೨ ॥

ಸೌಮ್ಯೇಶಾಶ್ಚೈವ ವಾಮಾಶ್ಚಹ್ಲಾದಿನೋ ಹಿಮಸರ್ಜನಾಃ ।
ಶುಕ್ಲಾಶ್ಚ ಕಕುಭಶ್ಚೈವ ಗಾವೋ ವಿಶ್ವಭೃತಸ್ತಥಾ ॥ ೨೩ ॥

---

ಸಾಧ್ಯಾಃ, ಮಯೂಖಾಃ, ಭಾನವಃ, ಅಂಶವಃ, ಸಪ್ತಾರ್ಪರ್ಚಯಃ, ಸುಪರ್ಣಾಃ, ಕರಾಃ, ಪಾದಾಃ, ಈ ಇಪ್ಪತ್ತೂ ಕಿರಣಗಳ ಹೆಸರು ಈ ಇಪ್ಪತ್ತಕ್ಕೂ ಇಪ್ಪತ್ತು ಪರ್ಯಾಯ ಪದಗಳು ಇವೆ.

೨೦. ಇವುಗಳಲ್ಲಿ ಚಂದನ ಮುಂತಾದ ಹೆಸರುಗಳನ್ನು ಬೇರೆಬೇರೆಯಾಗಿ ಹೇಳುತ್ತೇನೆ. ಹಿಮವನ್ನೂ, ಮಳೆಯನ್ನೂ, ಉಷ್ಣವನ್ನೂ ಬೀಳುವಂತೆ ಮಾಡುವ ಗುಣವುಳ್ಳವು ಸಹಸ್ರ ಕಿರಣಗಳವೆಯೆಂದು ಹೇಳಲಾಗಿದೆ.

೨೧. ಅವುಗಳಲ್ಲಿ ಚಕ್ರಾಕೃತಿಗಳಾದ ನಾಲ್ಕುನೂರು ನಾಡಿಗಳು ಮಳೆಯನ್ನು ಸುರಿಸುತ್ತವೆ. ಚಂದನಾ, ಮಂದಾ, ಕೋತನಾಮಾ, ಅನುಮಾಃ, ಅಮೃತಾಃ, ಎಂಬ ಹೆಸರಿನ ಕಿರಣಗಳು ವೃಷ್ಟಿಗೆ ಕಾರಣವಾದುವುಗಳಾಗಿವೆ.

೨೨. ಇನ್ನು ಮುನ್ನೂರು ರಶ್ಮಿಗಳು ಹಿಮವನ್ನು ವಹಿಸುವುದೆಂದು ತಿಳಿಯಬೇಕು.

೨೩. ಹಳದಿಯ ಬಣ್ಣವುಳ್ಳ ಆ ಎಲ್ಲಾ ಕಿರಣಗಳೂ ಚಂದ್ರ ಎಂಬ ಹೆಸರುಳ್ಳವುಗಳಾಗಿವೆ. ಸೌಮ್ಯೇಶಾಃ, ವಾಮಾಃ, ಹ್ಲಾದಿನಃ, ಶುಕ್ಲಾಃ, ಕಕುಭಃ,

**ಶುಕ್ಲಾಸ್ತೇ ನಾಮತಸ್ಸರ್ವೇ ತ್ರಿಶತಂ ಘರ್ಮಸರ್ಜನಾಃ ।**
**ಸಮಂ ಬಿಭರ್ತಿ ತೇ ಸರ್ವೇ ಮನುಷ್ಯಾ ದೇವತಾಸ್ತಥಾ ॥ ೨೪ ॥**

**ಮನುಷ್ಯಾನೋಷಧೀಭಿಸ್ತು ಸ್ವಧಯಾ ಚ ಪಿತೄನಪಿ ।**
**ಅಮೃತೇನ ಸುರಾನ್ ಸರ್ವಾನ್ ತ್ರಯಸ್ತ್ರಿಭಿರತರ್ಪಯನ್ ॥ ೨೫ ॥**

**ವಸಂತೇ ಚೈವ ಗ್ರೀಷ್ಮೇ ಚ ಶತೈಃ ಸ ತಪತೇ ತ್ರಿಭಿಃ ।**
**ವರ್ಷಾ ಶರತ್ಸು ಚೈವೇಶಃ ತಪತೇ ಸಂಪ್ರವರ್ಷತೇ ॥ ೨೬ ॥**

**ಹೇಮಂತೇ ಶಿಶಿರೇ ಚೈವ ಹಿಮೋತ್ಸರ್ಗಂ ಚ ಸ ತ್ರಿಭಿಃ ।**
**ಓಷಧೀಷು ಬಲಂ ಚೈವ ಸ್ವಧಾಂ ಚ ಪಿತೃವರ್ಗಕೇ ॥**
**ಅಮರೇಷ್ವಮೃತಂ ಸೂರ್ಯಃ ತ್ರಯಂ ತ್ರಿಷು ನಿಯಚ್ಛತಿ ॥ ೨೭ ॥**

---

ಗಾವಃ, ವಿಶ್ವಭೃತಃ, ಇವೇ ಮುಂತಾದುವು ಹಿಮಸುರಿಸುವ ಈ ಕಿರಣಗಳ ಹೆಸರುಗಳು.

೨೪. ಶುಕ್ಲ ನಾಮಕಗಳಾದ ಮುನ್ನೂರು ಕಿರಣಗಳು ಸೆಕೆಯನ್ನು ಉಂಟು ಮಾಡತಕ್ಕವು. ಇವುಗಳೆಲ್ಲಾ ಮನುಷ್ಯರನ್ನೂ, ದೇವತೆಗಳನ್ನೂ, ಸಮನಾಗಿ ಪೋಷಿಸುತ್ತವೆ.

೨೫. ಮನುಷ್ಯರನ್ನು ಓಷಧಿ (ಧಾನ್ಯಾದಿ) ಗಳಿಂದಲೂ, ಪಿತೃಗಳನ್ನು ಸ್ವಧೆಯಿಂದಲೂ, ದೇವತೆಗಳನ್ನು ಅಮೃತದಿಂದಲೂ, ಹೀಗೆ ಈ (ಹಿಮ ಸರ್ಜನ, ಘರ್ಮ ಸರ್ಜನ, ವೃಷ್ಟಿ ಸರ್ಜನ ಎಂಬ) ಮೂರು ಕಿರಣಗಳೂ ದೇವ, ಪಿತೃ ಮಾನವ ವರ್ಗವನ್ನು ತೃಪ್ತಿಪಡಿಸುವುವು.

೨೬-೨೭. ವಸಂತಋತುವಿನಲ್ಲಿಯೂ, ಗ್ರೀಷ್ಮಋತುವಿನಲ್ಲಿಯೂ, ಸೂರ್ಯನು ಮುನ್ನೂರು ಕಿರಣಗಳಿಂದ ತಪಿಸುತ್ತಾನೆ. ವರ್ಷಋತುವಿನಲ್ಲಿಯೂ, ಶರದೃತುವಿನಲ್ಲಿಯೂ ಕೆಲವು ವೇಳೆ ತಪಿಸುತ್ತಲೂ, ಕೆಲವು ವೇಳೆ ಮಳೆ ಸುರಿಸುತ್ತಲೂ ಇರುವನು. ಹಿಮಂತಋತು ಶಿಶಿರಋತುಗಳಲ್ಲಿ ಹಿಮವನ್ನು ಸುರಿಸುತ್ತಾನೆ. ಹೀಗೆ ಆ ಸೂರ್ಯನು ಮೂರು ವಿಧವಾದ ಕಿರಣಗಳಿಂದ ಓಷಧಿಗಳಲ್ಲಿ ಬಲವನ್ನೂ, ಪಿತೃಗಳಲ್ಲಿ ಸ್ವಧೆಯನ್ನೂ, ದೇವತೆಗಳಲ್ಲಿ ಅಮೃತವನ್ನೂ ಹೀಗೆ ಈ ಮೂರು ಶಕ್ತಿಗಳನ್ನೂ ಮೂವರಲ್ಲಿರುವಂತೆ ನಿಗ್ರಹಿಸುತ್ತಾನೆ.

ಕಾಲೋಗ್ನಿರ್ವತ್ಸರಶ್ಚೈವ ದ್ವಾದಶಾತ್ಮಾ ಪ್ರಜಾಪತಿಃ ।
ತಪತ್ಯೇಷ ಸುರಶ್ರೇಷ್ಠಃ ತ್ರೀನ್ ಲೋಕಾನ್ ಸ ಚರಾಚರಾನ್ ॥ ೨೮ ॥

ಏಷ ಬ್ರಹ್ಮಾ ತಥಾ ವಿಷ್ಣುರೇಷ ಏವ ಮಹೇಶ್ವರಃ ।
ಋಚೋ ಯಜೂಂಷಿ ಸಾಮಾನಿ ಏಷ ಏವ ನ ಸಂಶಯಃ ॥ ೨೯ ॥

ಋಗ್ಭಿಶ್ಚ ಸ್ತೂಯತೇ ಪ್ರಾತಃ ಮಧ್ಯಾಹ್ನೇ ಯಜುಷಾಂ ಗಣೈಃ ।
ಸಾಮಭಿಸ್ತ್ವಪರಾಹ್ಣೇ ತು ಪೂಜ್ಯತೇ ಹಿ ಮಹಾತ್ಮಭಿಃ ॥ ೩೦ ॥

ಪೂಜ್ಯಮಾನಸ್ತು ನಿತ್ಯಂ ವೈ ತಪತ್ಯೇಷ ದಿವಸ್ಪತಿಃ ।
ಸದೈಷ ತೇಜಸಾಂ ರಾಶಿಃ ದೀಪ್ತಿಮಾನ್ ಸರ್ವಲೋಕಗಃ ॥ ೩೧ ॥

ಪಾರ್ಶ್ವೇನ ಸೂರ್ಧ್ವಮಧಶ್ಚೈವ ತಾಪಯತ್ಯೇಷ ಸರ್ವಶಃ ।
ಬ್ರಹ್ಮ ವಿಷ್ಣು ಮಹೇಶಾನ್ಯೈಃ ಪೂಜ್ಯಮಾನಸ್ಸ ನಿತ್ಯಶಃ ॥ ೩೨ ॥

---

೨೮. ಕಾಲ, ಅಗ್ನಿ, ಸಂವತ್ಸರ ಮೊದಲಾದ ನಾಮಾಂತರವುಳ್ಳವನೂ ದ್ವಾದಶಾತ್ಮಕನೂ ಪ್ರಜಾಪತಿಯೂ ಸುರಶ್ರೇಷ್ಠನೂ ಆದ ಸೂರ್ಯನು ಚರಾಚರಗಳಿಂದ ಕೂಡಿದ ಮೂರು ಲೋಕಗಳನ್ನೂ ಈ ಋತುಗಳಲ್ಲಿ ತಪಿಸುತ್ತಾನೆ.

೨೯. ಮತ್ತು ಬ್ರಹ್ಮನೂ, ವಿಷ್ಣುವೂ, ಮಹೇಶ್ವರನೂ, ಋಗ್ವೇದವೂ, ಯಜುರ್ವೇದವೂ, ಸಾಮವೇದವೂ ಇವನೇ ಆಗಿದ್ದಾನೆ. ಇದರಲ್ಲಿ ಸಂಶಯವಿಲ್ಲ.

೩೦. ಪ್ರಾತಃಕಾಲದಲ್ಲಿ ಋಗ್ವೇದದಿಂದಲೂ, ಮಧ್ಯಾಹ್ನದಲ್ಲಿ ಯಜುರ್ವೇದದಿಂದಲೂ, ಅಪರಾಹ್ಣದಲ್ಲಿ ಸಾಮವೇದದಿಂದಲೂ, ಮಹಾತ್ಮರಾದ ತ್ರಿಮೂರ್ತಿಗಳಿಂದ ಸ್ತುತಿಸಲ್ಪಡುತ್ತಾನೆ.

೩೧. ದಿವಸ್ಪತಿ (ಆಕಾಶಾಧಿಪತಿ) ಯೂ, ತೇಜೋರಾಶಿಯೂ ಕಾಂತಿವಂತನೂ ಸರ್ವಲೋಕ ವ್ಯಾಪಕನೂ ಆದ ಸೂರ್ಯನು ಹೀಗೆ ನಿತ್ಯವೂ ಪೂಜಿಸಲ್ಪಡುವನಾಗಿ ತಪಿಸುತ್ತಾನೆ.

೩೨. ಈ ರೀತಿ ನಿತ್ಯವೂ ಬ್ರಹ್ಮ ವಿಷ್ಣು ಈಶ್ವರರಿಂದ ಪೂಜಿಸಲ್ಪಡುವವನಾಗಿ ಇವನು ಮೇಲೆ, ಕೆಳಗೆ, ಪಕ್ಕಗಳಲ್ಲಿ, (ಸುತ್ತಮುತ್ತ) ಎಲ್ಲಾ ಕಡೆಯೂ, ತಪಿಸುತ್ತಾನೆ.

ಯಥಾ ಸರ್ವಗತೋ ವಾಯುರ್ವಹಮಾನಸ್ತು ತಿಷ್ಠತಿ ।
ತದ್ವತ್ಸಹಸ್ರಕಿರಣೋ ಗ್ರಹರಾಜೋ ದಿವಸ್ಪತಿಃ ॥ ೩೩ ॥

ಸೂರ್ಯೋ ಗೋಭಿರ್ಜಗತ್ಕೃತ್ಸ್ನಮಾದೀಪಯತಿ ಸರ್ವಶಃ ।
ತ್ರೀಣಿ ರಶ್ಮಿಶತಾನ್ಯಸ್ಯ ಭೂಲೋಕಂ ದ್ಯೋತಯಂತಿ ವೈ ॥ ೩೪ ॥

ತ್ರೀಣಿತ್ರೀಣಿ ತಥಾ ಚಾನ್ಯೌ ದ್ವೌಲೋಕೌ ತಾಪಯಂತ್ಯುತ ।
ಶತಂ ಚಾಪಿ ಅಧಸ್ತಾತ್ತು ಪಾತಾಲಂ ತಾಪಯಂತ್ಯುತ ॥ ೩೫ ॥

ಇತ್ಯೇತನ್ಮಂಡಲಂ ಶುಕ್ಲಂ ಭಾಸ್ಕರಂ ಹೇಲಿ ಸಂಜ್ಞಿತಂ ।
ನಕ್ಷತ್ರ ಗ್ರಹ ಸೋಮಾನಾಂ ಪ್ರತಿಷ್ಠಾಯೋನಿರೇವ ಚ ॥
ವಿಧು ಋಕ್ಷ ಗ್ರಹಾಸ್ಸರ್ವೇ ವಿಜ್ಞೇಯಾಃ ಸೂರ್ಯಸಂಭವಾಃ ॥ ೩೬ ॥

---

೩೩. ಎಲ್ಲ ಸ್ಥಾನಗಳಲ್ಲಿಯೂ ವ್ಯಾಪಿಸಿದ ವಾಯುವು ಹೇಗೆ ಬೀಸುತ್ತಾ ಇರುತ್ತದೋ ಹಾಗೆಯೇ ಸಹಸ್ರ ಕಿರಣನೂ, ದಿವಸ್ಪತಿಯೂ (ಆಕಾಶಾಧಿಪತಿಯೂ) ಆದ ಸೂರ್ಯನು ಸರ್ವವ್ಯಾಪಕನಾಗಿ ಎಲ್ಲ ಕಡೆಯೂ ತಪಿಸುತ್ತಾನೆ.

೩೪. ಸೂರ್ಯನು ತನ್ನ ಕಿರಣಗಳಿಂದ ಸಮಸ್ತ ಜಗತ್ತನ್ನೂ ಎಲ್ಲ ಕಡೆಯೂ ಪ್ರಕಾಶಪಡಿಸುತ್ತಾನೆ. ಇವನ ಮುನ್ನೂರು ಕಿರಣಗಳು ಭೂಲೋಕವನ್ನು ತಪಿಸುತ್ತವೆ.

೩೫. ಹೀಗೆಯೇ ಭುವರ್ಲೋಕ, ಸುವರ್ಲೋಕ ಎಂಬ ಬೇರೆಬೇರೆ ಎರಡು ಲೋಕಗಳನ್ನೂ ಮುನ್ನೂರು ಮುನ್ನೂರು ಕಿರಣಗಳ ಬೇರೆ ಎರಡು ಗುಂಪುಗಳು ತಾಪಪಡಿಸುತ್ತವೆ. ಇನ್ನು ಒಂದುನೂರು ಕಿರಣವು ಅಧೋಲೋಕವನ್ನೂ ಎಂದರೆ ಪಾತಾಳವನ್ನೂ ತಾಪಪಡಿಸುತ್ತವೆ.

೩೬. ಈ ರೀತಿಯಾಗಿ ಭಾಸ್ವರ (ಶುಕ್ಲ) ರೂಪವುಳ್ಳ, ಈ ಸೂರ್ಯಮಂಡಲವು ಹೇಲಿ ಎಂದು ಸಂಜ್ಞೆಯುಳ್ಳದ್ದು. ಈ ಮಂಡಲರೂಪನಾದ ಸೂರ್ಯನೇ ನಕ್ಷತ್ರಗಳೂ, ಗ್ರಹಗಳೂ, ಸೋಮಲತೆ ಇವಕ್ಕೆಲ್ಲಾ ಕಾರಣನಾಗಿರುವನು. ಚಂದ್ರ ನಕ್ಷತ್ರ ಗ್ರಹಗಳು ಎಲ್ಲವೂ ಸೂರ್ಯನಿಂದಲೇ ಆದುವೆಂದು ತಿಳಿಯಬೇಕು.

ರವೇಃ ಕರಸಹಸ್ರಂ ಯತ್ ಪ್ರಾಙ್ಮಯಾ ಸಮುದಾಹೃತಾ ।
ತೇಷಾಂ ಶ್ರೇಷ್ಠಾಃ ಪುನ ಸ್ಸಪ್ತ ರಶ್ಮಯೋ ಗ್ರಹ ಸಂಜ್ಞಿತಾಃ ॥ ೩೭ ॥

ಸುಷುಮ್ನೋ ಹರಿಕೇಶಶ್ಚ ವಿಶ್ವಕರ್ಮಾ ತಥೈವ ಚ ।
ಸೂರ್ಯಶ್ಚೈವಾಪರೋ ರಶ್ಮಿಃ ನಾಮ್ನಾ ವಿಷ್ಣುರಿತಿ ಸ್ಮೃತಃ ॥ ೩೮ ॥

ಸಸತ್ವಃ ಸರ್ವಬಂಧುಸ್ತು ಸಂಜೀವಯತಿ ವೈ ಜಗತ್ ।
ಸಪ್ತಜಃ ಪ್ರಥಮಸ್ತತ್ರ ಕಂಜಜಶ್ಚ ತಥಾ ಪರಃ ॥ ೩೯ ॥

ತಾರೇಯಶ್ಚಾಪರಸ್ತತ್ರ ಗುರುಸ್ಸುಮನಸಾಂ ತಥಾ ।
ಉಗ್ರಾಹ್ವಃ ಪಂಚಮಸ್ತೇಷಾಂ ಪುತ್ರೋನ್ಯೋ ವನಮಾಲಿನಃ ॥
ಕಃ ಶೇಷಸ್ಸಪ್ತಮಸ್ತೇಷಾಮೇತೇ ವೈ ಸಪ್ತರಶ್ಮಯಃ ॥ ೪೦ ॥

ಆದಿತ್ಯಮೂಲಮಖಿಲಂ ತ್ರೈಲೋಕ್ಯಂ ಸಚರಾಚರಂ ।
ಭವತ್ಯಸ್ಮಾಜ್ಜಗತ್ಸರ್ವಂ ಸ ದೇವಾಸುರಮಾನುಷಂ ॥ ೪೧ ॥

---

೩೭. ಹಿಂದೆ ನಾನು ಉದಹರಿಸಿದ ಸೂರ್ಯನ ಸಹಸ್ರ ಕಿರಣಸಮುದಾಯ ಯಾವುದುಂಟೋ ಅವುಗಳಲ್ಲಿ, ಶ್ರೇಷ್ಠಗಳಾದ ಏಳು ರಶ್ಮಿಗಳು ಗ್ರಹಸಂಜ್ಞೆಯುಳ್ಳವು.

೩೮. ಸುಷುಮ್ನ, ಹರಿಕೇಶ, ವಿಶ್ವಕರ್ಮ, ಸೂರ್ಯ ಎಂಬುವೂ, ಇವು ಗಳಲ್ಲದೆ ವಿಷ್ಣುವೆಂಬ ಇನ್ನೊಂದೂ, ಇವೆಲ್ಲ ಇತರಗಳಾದ ರಶ್ಮಿಗಳೆಂದು ತಿಳಿಯ ಬೇಕು.

೩೯. ಎಲ್ಲರಿಗೂ ಬಂಧುವಾದ ಅವನು ಸಮಸ್ತ ಶಕ್ತಿ ಸಹಿತನಾಗಿದ್ದು ಲೋಕವನ್ನು ಕಾಪಾಡುತ್ತಾನೆ. ಆ ರಶ್ಮಿಗಳಲ್ಲಿ ಸಪ್ತಜ ಎಂಬುದು ಮೊದಲನೆಯದು. ಕಂಜಜ ಎಂಬುದು ಎರಡನೆಯದು.

೪೦. ತಾರೇಯ ಎಂಬುದು ಮೂರನೆಯದು. ದೇವಗುರು ಎಂಬುದು ನಾಲ್ಕನೆಯದು. ಉಗ್ರ ಎಂಬುದು ಐದನೆಯದು. ವನಮಾಲಿಪುತ್ರ ಎಂಬುದು ಆರನೆಯದು. ಶೇಷ ಎಂಬುದು ಏಳನೆಯದು. ಇವೇ ಏಳು ರಶ್ಮಿಗಳು.

೪೧. ಚರ ಅಚರ ಎಂಬಿವುಗಳಿಂದ ಕೂಡಿದ ಮೂರು ಲೋಕಗಳಿಗೂ ಆದಿತ್ಯನೇ ಮೂಲಕಾರಣನು. ದೇವತೆಗಳಿಂದಲೂ, ಅಸುರರಿಂದಲೂ, ಮನುಷ್ಯ ರಿಂದಲೂ ಕೂಡಿದ ಈ ಲೋಕಗಳೆಲ್ಲವೂ ಅವನಿಂದಲೇ ನಿರ್ಮಿತವಾಗುವುವು.

**ರುದ್ರೇಂದ್ರೋಪೇಂದ್ರಚಂದ್ರಾಣಾಂ ವಿಪ್ರೇಂದ್ರ ತ್ರಿದಿವೌಕಸಾಂ ।**
**ಮಹದ್ದ್ಯುತಿಮತಃ ಕೃತ್ಸ್ನಂ ತೇಜೋ ಯತ್ಸಾರ್ವಲೌಕಿಕಂ ॥ ೪೨ ॥**

**ಸರ್ವಾತ್ಮಾ ಸರ್ವಲೋಕೇಶೋ ದೇವದೇವಃ ಪ್ರಜಾಪತಿಃ ।**
**ಸೂರ್ಯ ಏವ ತ್ರಿಲೋಕಸ್ಯ ಮೂಲಂ ಪರಮದೈವತಂ ॥ ೪೩ ॥**

**ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ ।**
**ಆದಿತ್ಯಾಜ್ಜಾಯತೇ ವೃಷ್ಟಿಃ ವೃಷ್ಟೇರನ್ನಂ ತತಃ ಪ್ರಜಾಃ ॥ ೪೪ ॥**

**ಸೂರ್ಯಾತ್ಪ್ರಸೂಯತೇ ಸರ್ವಂ ತಸ್ಮಿನ್ನೇವ ಪ್ರಲೀಯತೇ ।**
**ಭಾವಾಭಾವೌ ತು ಲೋಕಾನಾಂ ಆದಿತ್ಯಾನ್ನಿಃಸೃತೌ ಪುರಾ ॥ ೪೫ ॥**

---

೪೨. ಬೇರೆಬೇರೆ ಲೋಕಗಳಲ್ಲಿರುವ ರುದ್ರ, ಇಂದ್ರ, ಉಪೇಂದ್ರ (ವಿಷ್ಣು), ಚಂದ್ರ, ಬ್ರಾಹ್ಮಣಶ್ರೇಷ್ಠರು, ದೇವತೆಗಳು ಮೊದಲಾದವರಲ್ಲಿ ಹಂಚಿಕೆಯಾಗಿ ಸೇರಿಕೊಂಡಿರುವ ತೇಜೋರಾಶಿಗಳೆಲ್ಲವೂ ಸೂರ್ಯನಲ್ಲಿ ಅಖಂಡವಾಗಿರುವುದು.

೪೩. ಸೂರ್ಯನು ಸರ್ವಾತ್ಮನೂ, ಸರ್ವಲೋಕಗಳಿಗೆ ಒಡೆಯನೂ, ದೇವದೇವನೂ, ಪ್ರಜಾಪತಿಯೂ, ಶ್ರೇಷ್ಠ ದೇವನೂ, ಮೂರು ಲೋಕಗಳಿಗೂ, ಮೂಲ ಕಾರಣನೂ ಆಗಿದ್ದಾನೆ.

೪೪. ವಿಧಿಪ್ರಕಾರವಾಗಿ ಅಗ್ನಿಯಲ್ಲಿ ಹೋಮಮಾಡಿ. ಆಹುತಿಯು ಆದಿತ್ಯನನ್ನು ಸೇರುತ್ತದೆ. ಆ ಸೂರ್ಯನಿಂದ ಮಳೆಯಾಗುವುದು. ಮಳೆ ಹೊಯ್ಯಲಾಗಿ ಧಾನ್ಯಗಳು ಬೆಳೆದು ಪ್ರಾಣಿಗಳ ಆಹಾರವಾಗುವುದು. ಈ ಆಹಾರವೇ ರೇತಸ್ಸಾಗಿ ಪರಿಣಮಿಸಿ ಅದರಿಂದ ಪ್ರಾಣಿ ಶರೀರಗಳು ಏರ್ಪಡುತ್ತವೆ.

೪೫. ಸೂರ್ಯನಿಂದಲೇ ಎಲ್ಲವೂ ಹುಟ್ಟುತ್ತವೆ. ಇವುಗಳೆಲ್ಲಾ ಅವನಲ್ಲಿಯೇ ಲಯವುಂಟಾಗುತ್ತದೆ. ಲೋಕಗಳ ಉತ್ಪತ್ತಿ, ನಾಶಗಳು ಪೂರ್ವದಲ್ಲಿ ಸೂರ್ಯನಿಂದಲೇ ಉಂಟಾದುವು. ಇವು ಧ್ಯಾನಮಾಡತಕ್ಕವರಿಗೆ ಧ್ಯಾನಸ್ವರೂಪವಾಗಿದೆ.

ಏತತ್ತು ಧ್ಯಾನಿನಾಂ ಧ್ಯಾನಂ ಮೋಕ್ಷಶ್ಚಾಪ್ಯೇವ ಮೋಕ್ಷಿಣಾಂ ।
ಅತ್ರ ಗಚ್ಛಂತಿ ನಿರ್ವಾಣಂ ಜಾಯಂತೇsಸ್ಮಾತ್ಪುನಃ ಪ್ರಜಾಃ ॥ ೪೭ ॥

ಕ್ಷಣಾಮುಹೂರ್ತಾ ದಿವಸಾ ನಿಶಾಃ ಪಕ್ಷಾಸ್ತು ನಿತ್ಯಶಃ ।
ಮಾಸಾ ಸಂವತ್ಸರ ಶ್ಚೈವ ಋತವೋ ಥ ಯುಗಾನಿ ಚ ॥
ಅಥಾದಿತ್ಯಮೃತೇ ಹ್ಯೇಷಾಂ ಕಾಲಸಂಖ್ಯಾ ನ ವಿದ್ಯತೇ ॥ ೪೭ ॥

ಕಾಲಾದೃತೇ ನ ನಿಯಮಾ ನಾಗ್ನೇರ್ವಿಹರಣಕ್ರಿಯಾ ।
ಋತೂನಾಮವಿಭಾಗಾಚ್ಚ ಪುಷ್ಪ ಮೂಲಫಲಂ ಕುತಃ ॥ ೪೮ ॥

ಅಭಾವೋ ವ್ಯವಹಾರಾಣಾಂ ಜಂತೂನಾಂ ದಿವಿ ಚೇಹ ಚ ।
ಜಗತ್ಪ್ರತಾಪನಮೃತೇ ಭಾಸ್ಕರಂ ವಾರಿತಸ್ಕರಂ ॥ ೪೯ ॥

---

೪೬. ಮೋಕ್ಷಾಪೇಕ್ಷಿಗಳಿಗೆ ಮೋಕ್ಷಸ್ವರೂಪವಾಗಿಯೂ ಇದೆ. ಇದೇ ಕೈವಲ್ಯವೆಂದೆನಿಸಿಕೊಳ್ಳುವುದು. ಪ್ರಜೆಗಳು ಇದರಿಂದಲೇ ಮತ್ತೆ ಮತ್ತೆ ಹುಟ್ಟುತ್ತಿರುವುದು.

೪೭. ಕ್ಷಣಗಳು, ಮುಹೂರ್ತಗಳು, ಹಗಲು, ರಾತ್ರಿ, ಪಕ್ಷಗಳು, ಮಾಸಗಳು, ಋತುಗಳು, ಅಯನಗಳು, ಸಂವತ್ಸರಗಳು, ಯುಗಗಳು ಇವುಗಳಿಗೆಲ್ಲಾ ಕಾಲವೆಂಬ ವ್ಯವಹಾರವು ಸೂರ್ಯ ಚಲನದಿಂದಲ್ಲದೆ ಬೇರೆ ಯಾವುದರಿಂದಲೂ ನಿರ್ಣಯಕ್ಕೆ ಬರುವುದಿಲ್ಲ.

೪೮. ಈ ಕಾಲನಿರ್ಣಯವಿಲ್ಲದೆ ಇಂಥ ಕೆಲಸವನ್ನು ಇಂಥ ಹೊತ್ತಿನಲ್ಲಿ ಮಾಡಬೇಕೆಂಬ ಕಾರ್ಯ ಕ್ಲುಪ್ತಮಾಡಲು ಆಗುವುದಿಲ್ಲ. ಅಗ್ನಿಕಾರ್ಯ ಮೊದಲಾದುವನ್ನೂ ಕೂಡ ಕಾಲದ ಕ್ಲಿಪ್ತಿಯಿಲ್ಲದೆ ನಿಷ್ಕರ್ಷಿಸುವುದಕ್ಕಾಗುವುದಿಲ್ಲ. ಹಾಗೆಯೇ ಋತುಗಳ ವಿಭಾಗವೂ ನಿರ್ಣಯವಾಗದೇ ಹೋಗುವುದರಿಂದ ಪುಷ್ಪೋತ್ಪತ್ತಿ, ಫಲೋತ್ಪತ್ತಿ ಕಾಲಗಳನ್ನೂ ನಿಷ್ಕರ್ಷೆಮಾಡಲು ಆಗುವುದಿಲ್ಲ.

೪೯. ಜಲಶೋಷಕನೂ ಜಗತ್ಪ್ರತಾಪನೂ ಆದ ಭಾಸ್ಕರನ ಚಲನವಿಲ್ಲದೆ ಹೋದರೆ ಸ್ವರ್ಗದಲ್ಲಿಯಾಗಲಿ, ಭೂಲೋಕದಲ್ಲಿಯಾಗಲಿ, ಅಲ್ಲಿನ ನಿವಾಸಿಗಳಿಗೆ ಭೋಜನ ನಿದ್ರಾದಿ ವ್ಯವಹಾರಗಳೇ ಇಲ್ಲದೇ ಹೋಗುವುದು.

ನಾವೃಷ್ಟ್ಯಾ ತಪತೇ ಸೂರ್ಯೋ ನಾವೃಷ್ಟ್ಯಾ ಪರಿವೇಷ್ಯತೇ ।
ಆದಿತ್ಯಸ್ಯ ಚ ನಾಮಾನಿ ಸಾಮಾನ್ಯಾನೀಹ ದ್ವಾದಶ ॥ ೫೦ ॥

ದ್ವಾದಶೈವ ಪೃಥಕ್ತ್ವೇನ ತಾನಿ ವಕ್ಷ್ಯಾಮ್ಯನೇಕಶಃ ।
ಆದಿತ್ಯಸ್ಸವಿತಾ ಸೂರ್ಯೋ ಮಿಹಿರೋऽರ್ಕಃ ಪ್ರತಾಪನಃ ॥ ೫೧ ॥

ಮಾರ್ತಂಡೋ ಭಾಸ್ಕರೋ ಭಾನುಶ್ಚಿತ್ರಭಾನುರ್ದಿವಾಕರಃ ।
ರವಿ ರ್ವೈ ದ್ವಾದಶಶ್ಚೈವ ಜ್ಞೇಯಸ್ಸಾಮಾನ್ಯನಾಮಭಿಃ ॥ ೫೨ ॥

ವಿಷ್ಣುರ್ಧಾತಾ ಭಗಃ ಪೂಷಾ ಮಿತ್ರೇಂದ್ರೌವರುಣಾರ್ಯಮೌ ।
ವಿವಸ್ವಾನಂಶುಮಾಂಸ್ತ್ವಷ್ಟಾ ಪರ್ಜನ್ಯೋ ದ್ವಾದಶ ಸ್ಮೃತಾಃ ॥ ೫೩ ॥

ಇತ್ಯೇತೇ ದ್ವಾದಶಾದಿತ್ಯಾಃ ಪೃಥಕ್ತ್ವೇನ ಪ್ರಕೀರ್ತಿತಾಃ ।
ಉತ್ತಿಷ್ಠಂತಿ ಸದಾ ಹ್ಯೇತೇ ಮಾಸೈರ್ದ್ವಾದಶಭಿಃ ಕ್ರಮಾತ್ ॥ ೫೪ ॥

---

೫೦-೫೧. ಮತ್ತು ಸೂರ್ಯನು ಮಳೆಯನ್ನು ಸುರಿಸಬೇಕಾಗುವ ಸಂದರ್ಭದಲ್ಲಿ ಪರಿವೇಷವೂ ಕಟ್ಟುವುದಿಲ್ಲ. ಆದಿತ್ಯನಿಗೆ ಹನ್ನೆರಡು ಹೆಸರುಗಳು ಎಂದು ಸಾಮಾನ್ಯವಾಗಿ ಎಲ್ಲರಿಗೂ ತಿಳಿದಿದೆ. ಆ ಹನ್ನೆರಡು ಹೆಸರುಗಳಲ್ಲಿ ಪ್ರತಿಯೊಂದು ನಾಮದ ಸಂಬಂಧವೂ ಇರತಕ್ಕ ಬೇರೆ ಬೇರೆ ಭೇದಗಳನ್ನು ಹೇಳುತ್ತೇನೆ.

೫೨. ಆದಿತ್ಯ, ಸವಿತಾ, ಸೂರ್ಯ, ಮಿಹಿರ, ಅರ್ಕ, ಪ್ರತಾಪನ, ಮಾರ್ತಂಡ, ಭಾಸ್ಕರ, ಭಾನು, ಚಿತ್ರಭಾನು, ದಿವಾಕರ, ರವಿ ಇವು ಸೂರ್ಯನ ಹನ್ನೆರಡು ನಾಮಾಂತರಗಳು.

೫೩-೫೪. ವಿಷ್ಣು, ಧಾತಾ, ಭಗ, ಪೂಷಾ, ಮಿತ್ರ, ಇಂದ್ರ, ವರುಣ, ಅರ್ಯಮಾ, ವಿವಸ್ವಾನ್, ಅಂಶುಮಾನ್, ತ್ವಷ್ಟಾ, ಪರ್ಜನ್ಯ ಈ ವಿಶೇಷ ನಾಮಗಳ ಜೊತೆಗೆ ಸಾಮಾನ್ಯ ನಾಮವೆಂದು ಹೇಳಲ್ಪಡುವ ಆದಿತ್ಯಶಬ್ದವನ್ನು ಪ್ರತಿಯೊಂದಕ್ಕೂ ಸೇರಿಸಿ ಹೇಳಿದರೆ ದ್ವಾದಶಾದಿತ್ಯರೆನಿಸಿದವರ ವಿಶೇಷ ನಾಮವನ್ನು ಹೇಳಿದಂತಾಯ್ತು. ಇವರು ಯಾವಾಗಲೂ ಕ್ರಮವಾಗಿ ತಿಂಗಳಿಗೆ ಒಬ್ಬೊಬ್ಬರಂತೆ ಹನ್ನೆರಡು ತಿಂಗಳಲ್ಲಿಯೂ ಹುಟ್ಟುತ್ತಾರೆ.

ವಿಷ್ಣುಸ್ತಪತಿ ಚೈತ್ರೇ ಚ ವೈಶಾಖೇ ಚಾರ್ಯಮಾ ತಥಾ ।
ವಿವಸ್ವಾನ್ ಜ್ಯೇಷ್ಠಮಾಸೇ ತು ಆಷಾಢೇ ಚಾಂಶುಮಾಂಸ್ತಥಾ ॥ ೫೫ ॥

ಪರ್ಜನ್ಯಃ ಶ್ರಾವಣೇ ಮಾಸಿ ವರುಣಃ ಪ್ರೋಷ್ಠಸಂಜ್ಞಕೇ ।
ಇಂದ್ರಶ್ಚಾಶ್ವಯುಜೇ ಮಾಸಿ ಧಾತಾ ತಪತಿ ಕಾರ್ತಿಕೇ ॥ ೫೬ ॥

ಮಾರ್ಗಶೀರ್ಷೇ ತಥಾ ಮಿತ್ರಃ ಪೌಷೇ ಪೂಷಾ ದಿವಾಕರಃ ।
ಮಾಘೇ ಭಗಸ್ತು ವಿಜ್ಞೇಯಃ ತ್ವಷ್ಟಾ ತಪತಿ ಫಾಲ್ಗುನೇ ॥ ೫೭ ॥

ತೈಶ್ಚ ದ್ವಾದಶಭಿರ್ವಿಷ್ಣೂ ರಶ್ಮೀನಾಂ ದೀಪ್ಯತೇ ಶತೈಃ ।
ದೀಪ್ಯತೇ ಗೋ ಸಹಸ್ರೇಣ ಶತೈಶ್ಚ ತ್ರಿಭಿರರ್ಯಮಾ ॥ ೫೮ ॥

ದ್ವಿಸಪ್ತಕೈರ್ವಿವಸ್ವಾಂಸ್ತು ಅಂಶುಮಾನ್ಪಂಚಕೈಸ್ತ್ರಿಭಿಃ ।
ವಿವಸ್ವಾನಿವ ಪರ್ಜನ್ಯೋ ವರುಣಶ್ಚಾರ್ಯಮಾ ಇವ ॥ ೫೯ ॥

---

೫೫. ಚೈತ್ರಮಾಸದಲ್ಲಿ ವಿಷ್ಣುವೂ (ವಿಷ್ಣುವೆಂಬ ಆದಿತ್ಯನೂ), ವೈಶಾಖ ಮಾಸದಲ್ಲಿ ಅರ್ಯಮನೂ, ಜ್ಯೇಷ್ಠಮಾಸದಲ್ಲಿ ವಿವಸ್ವಂತನೂ, ಆಷಾಢಮಾಸದಲ್ಲಿ ಅಂಶುಮಂತನೂ.

೫೬-೫೭. ಶ್ರಾವಣಮಾಸದಲ್ಲಿ ಪರ್ಜನ್ಯನೂ, ಭಾದ್ರಪದಮಾಸದಲ್ಲಿ ವರುಣನೂ, ಆಶ್ವಯುಜಮಾಸದಲ್ಲಿ ಇಂದ್ರ (ಎಂಬ ಸಂಜ್ಞೆಯುಳ್ಳ ಆದಿತ್ಯ) ನೂ, ಕಾರ್ತಿಕ ಮಾಸದಲ್ಲಿ ಧಾತನೂ, ಮಾರ್ಗಶಿರಮಾಸದಲ್ಲಿ ಮಿತ್ರನೂ, ಪುಷ್ಯಮಾಸದಲ್ಲಿ ಪೂಷನೂ, ಮಾಘಮಾಸದಲ್ಲಿ ಭಗನೂ, ಫಾಲ್ಗುಣಮಾಸದಲ್ಲಿ ತ್ವಷ್ಟನೂ, ಈರೀತಿ ಹನ್ನೆರಡು ತಿಂಗಳಲ್ಲಿಯೂ ಸೂರ್ಯನು ಹನ್ನೆರಡು ಹೆಸರಿನಿಂದ ವ್ಯವಹೃತನಾಗಿ ತಪಿಸುತ್ತಾನೆ.

೫೮-೫೯. ವಿಷ್ಣುವೆಂಬವನು ಹನ್ನೆರಡುನೂರು ಎಂದರೆ ಸಾವಿರದ ಇನ್ನೂರು ರಶ್ಮಿಗಳಿಂದ ಪ್ರಕಾಶಿಸುತ್ತಾನೆ. ಅರ್ಯಮಾ ಎಂಬವನು ಸಾವಿರದ ಮುನ್ನೂರು ರಶ್ಮಿಗಳಿಂದಲೂ, ವಿವಸ್ವಂತನು ಸಾವಿರದ ನಾನೂರು ರಶ್ಮಿಗಳಿಂದಲೂ, ಅಂಶುಮಂತನು ಸಾವಿರದ ಐನೂರು ರಶ್ಮಿಗಳಿಂದಲೂ, ಪರ್ಜನ್ಯನು ವಿವಸ್ವಂತನ ಹಾಗೆಯೇ ಸಾವಿರದ ನಾನೂರು ಕಿರಣಗಳಿಂದಲೂ, ವರುಣನು ಅರ್ಯಮನ ಹಾಗೆ ಸಾವಿರದ ಮುನ್ನೂರು ಕಿರಣಗಳಿಂದಲೂ ಪ್ರಕಾಶಿಸುತ್ತಾರೆ.

ಇಂದ್ರಸ್ತು ದ್ವಿಗುಣೈಃ ಷಡ್ಭಿಃ ಧಾತೈಕಾದಶಭಿಸ್ತಥಾ ।
ಮಿತ್ರವದ್ಭಗವತ್ತ್ವಷ್ಟಾ ಸಹಸ್ರೇಣ ಶತೇನ ಚ ॥ ೬೦ ॥

ಉತ್ತರೋಪಕ್ರಮೇಽರ್ಕಸ್ಯ ವರ್ಧಂತೇ ರಶ್ಮಯಸ್ಸದಾ ।
ದಕ್ಷಿಣೋಪಕ್ರಮೇ ಭೂಯೋ ಹ್ರಸಂತೇ ಸೂರ್ಯರಶ್ಮಯಃ ॥ ೬೧ ॥

ಏವಂ ರಶ್ಮಿಸಹಸ್ರಂ ತು ಸೌರ್ಯ ಲೋಕಾರ್ಥಸಾಧಕಂ ।
ಭಿದ್ಯತೇ ಋತುಮಾಸೈಸ್ತು ಸಹಸ್ರಂ ಬಹುಧಾ ಭೃಶಂ ॥ ೬೨ ॥

ಏವಂ ನಾಮ್ನಾಂ ಚತುರ್ವಿಂಶ ದೇಕ ಸ್ಯೈಷಾ ಪ್ರಕೀರ್ತಿತಾ ।
ವಿಸ್ತರೇಣ ಸಹಸ್ರಂ ತು ಪುನರೇವಂ ಪ್ರಕೀರ್ತಿತಂ ॥ ೬೩ ॥

ಆಸಾಂ ಪರಮಯತ್ನೇನ ಬ್ರುವತೇ ಭಿನ್ನದರ್ಶನಾಃ ।
ತಾಮಸಾ ವೃದ್ಧಿ ಮೋಹಾಚ್ಚ ದೃಷ್ಟಾಂತಾನಿ ಬ್ರುವಂತಿ ಹಿ ॥ ೬೪ ॥

---

೬೦. ಇಂದ್ರನು ಸಾವಿರದ ಇನ್ನೂರು ರಶ್ಮಿಗಳಿಂದಲೂ, ಧಾತನು ಸಾವಿರದ ನೂರು ರಶ್ಮಿಗಳಿಂದಲೂ, ಮಿತ್ರ, ಭಗ, ತ್ವಷ್ಟಾ ಇವರುಗಳು ಪ್ರತಿಯೊಬ್ಬರೂ ಸಾವಿರದ ಒಂದುನೂರು ಕಿರಣಗಳಿಂದಲೂ ತಪಿಸುತ್ತಾರೆ.

೬೧. ಉತ್ತರಾಯಣ ಪ್ರಾರಂಭವಾದ ಮೇಲೆ ರಶ್ಮಿಗಳು ದಿನದಿನಕ್ಕೆ ಹೆಚ್ಚುತ್ತವೆ. ದಕ್ಷಿಣಾಯನ ಪ್ರಾರಂಭದಿಂದ (ಉತ್ತರಾಯಣದ ಕೊನೆಯ ದಿನದಿಂದ) ಸೂರ್ಯರಶ್ಮಿಗಳು ಕುಗ್ಗುವುದಕ್ಕೆ ಪ್ರಾರಂಭವಾಗಿ ದಿನದಿನಕ್ಕೆ ಸ್ವಲ್ಪಸ್ವಲ್ಪದಂತೆ ಕುಗ್ಗುತ್ತವೆ.

೬೨-೬೩. ಈರೀತಿ ಸೂರ್ಯನ ಸಹಸ್ರ ಕಿರಣಗಳೇ ಲೋಕದ ಸಮಸ್ತ ಕಾರ್ಯಗಳೂ ನಡೆಯುವುದಕ್ಕೆ ಸಾಧಕಗಳಾಗಿವೆ. ಈ ಸಹಸ್ರ ಕಿರಣಗಳು ಋತು, ಮಾಸ, ಸಂವತ್ಸರ ಮೊದಲಾದ ಭೇದಗಳಿಂದ ವಿಭಿನ್ನ ವ್ಯವಹಾರವುಂಟಾಗಿದೆ. ಸಾಮಾನ್ಯನಾಮ ಹನ್ನೆರಡು, ವಿಶೇಷನಾಮ ಹನ್ನೆರಡು ಒಟ್ಟು ಈ ಇಪ್ಪತ್ತುನಾಲ್ಕು ಹೆಸರುಗಳೂ ಒಬ್ಬ ಸೂರ್ಯನಿಗೆ ಗೊತ್ತುಮಾಡಲ್ಪಟ್ಟದ್ದು. ಇನ್ನೂ ವಿಸ್ತಾರವಾಗಿ ವಿವರಿಸಿ ವರ್ಣಿಸಿ ಹೇಳಿದರೆ ಸಹಸ್ರ ಪ್ರಕಾರವೆಂದು ವೇದ್ಯವಾಗುವುದು.

೬೪. ಇವುಗಳಲ್ಲಿ ಹಿಂದೆ ಹೇಳಿದುದಕ್ಕಿಂತ ಅನ್ಯಥಾ ಇವೆ ಎಂಬದಾಗಿ ಹೇಳುವವರು ಬೇರೆಬಗೆಯ ಆಲೋಚನೆಯುಳ್ಳ ತಾಮಸಜನರು. ಅಜ್ಞಾನದಿಂದ ಆ ದೃಷ್ಟಾಂತಗಳನ್ನು ಹೇಳುತ್ತಾರೆ.

ಬ್ರಹ್ಮಾಣಂ ಕಾರಣಂ ಕೇಚಿತ್ಕೇಚಿದಾಹುರ್ದಿವಾಕರಂ ।
ಕೇಚಿದ್ಭವಂ ಪರಂತ್ವೇನ ಆಹುರ್ವಿಷ್ಣುಂ ತಥಾಪರೇ ॥ ೬೫ ॥

ಕಾರಣಂ ತು ಸ್ಮೃತಾ ಹ್ಯೇತೇ ನಾನಾರ್ಥೇಷು ನರೋತ್ತಮಾಃ ।
ಏಕಃ ಸತು ಪೃಥಕ್ತ್ವೇನ ಸ್ವಯಂಭೂರಿತಿ ವಿಶ್ರುತಃ ॥ ೬೬ ॥

ವನಮಾಲಿನಮುಗ್ರೇಶಂ ದಿವಿ ಚಕ್ಷುರಿವಾಂತಕಂ ।
ತಂ ಸ್ವಯಂಭೂರಿತಿ ಪ್ರೋಕ್ತಂ ಸ ಸಾವರ್ಣಿ ಮನೌಪಮಂ ॥ ೬೭ ॥

ಯಥಾನುರಜ್ಯತೇ ವರ್ಣೈಃ ವಿವಿಧೈಃ ಸ್ಫಟಿಕೋ ಮಣಿಃ ।
ತಥಾ ಗುಣವಶಾತ್ತಸ್ಯ ಸ್ವಯಂಭೋರನುರಂಜನಂ ॥ ೬೮ ॥

---

೬೫. ಇದಕ್ಕೆ ಬ್ರಹ್ಮನು ಕಾರಣನೆಂದು ಕೆಲವರೂ, ಸೂರ್ಯನು ಕಾರಣನೆಂದು ಕೆಲವರು ಹೇಳುವರು. ಕೆಲವು ಜನರು ಶಿವನು ಉತ್ತಮನೆಂದೂ, ಮತ್ತೆ ಕೆಲವರು ವಿಷ್ಣು ಉತ್ತಮನೆಂದೂ ಹೇಳುತ್ತಾರೆ.

೬೬. ಈ ದೇವಶ್ರೇಷ್ಠರು ಬೇರೆ ಬೇರೆ ಸಂದರ್ಭಗಳಲ್ಲಿ ಶ್ರೇಷ್ಠತೆಯನ್ನು ಹೊಂದಿರಬಹುದು. ಎಂದರೆ ಸೃಷ್ಟಿ ಸಂದರ್ಭದಲ್ಲಿ ಬ್ರಹ್ಮನೂ, ಸ್ಥಿತಿಯಲ್ಲಿ ವಿಷ್ಣುವೂ ಎನಿಸಿ ಆಯಾ ಕಾರ್ಯಕ್ಕೆ ಕಾರಣರೆನ್ನಿಸುತ್ತಾರೆ. ಆ ಪರಬ್ರಹ್ಮನು ಪ್ರತ್ಯೇಕವಾಗಿ ಒಬ್ಬನಾದ ಸ್ವಯಂಭುವಾಗಿದ್ದು ತಾನೇ ಈ ಬ್ರಹ್ಮಾದಿ ರೂಪಗಳನ್ನು ಪಡೆಯುವನೆಂದು ಪ್ರಸಿದ್ಧಿಯಿದೆ.

೬೭. ಅವನೇ ಶೂಲಿಯೆಂದೂ, ವನಮಾಲಿಯೆಂದೂ, ಉಗ್ರೇಶನೆಂದೂ, ಆಕಾಶದ ಕಣ್ಣಾಗಿರುವನೆಂದೂ, ಯಮನೆಂದೂ, ಸ್ವಯಂಭುವೆಂದೂ ಹೇಳಲ್ಪಟ್ಟ ಅವನನ್ನು ನಿರುಪನಾದ ಸಾವರ್ಣಿಯೆಂದೂ ಉಕ್ತವಾಗಿದೆ.

೬೮. ಸ್ಫಟಿಕಮಣಿಯು ಬೇರೆ ಬೇರೆ ಬಣ್ಣದ ವಸ್ತುಗಳ ಸಾನ್ನಿಧ್ಯದಿಂದ ಹೇಗೆ ಬೇರೆ ಬೇರೆ ಬಣ್ಣಗಳನ್ನು ಹೊಂದುತ್ತದೋ ಹಾಗೆಯೇ ಸ್ವಯಂಭುವಾದ ಪರಬ್ರಹ್ಮನಿಗೆ ರಜಸ್ತಮೋಗುಣಗಳ ಸಂಪರ್ಕದಿಂದ ಬೇರೆ ಬೇರೆ ಹೆಸರುಗಳು ಬರುವುವು.

**ಏಕೋ ಭೂತ್ವಾ ಯಥಾ ಮೇಘಃ ಪೃಥಕ್ತ್ವೇನ ಪ್ರತಿಷ್ಠಿತಃ ।**
**ವರ್ಣತೋ ರೂಪತಶ್ಚೈವ ತಥಾ ಗುಣವಶಾತ್ತು ಸಃ ॥ ೬೯ ॥**

**ನಭಸಃ ಪತಿತಂ ತೋಯಂ ಯಾತಿ ಸ್ವಾದಾಂತರಂ ಯಥಾ ।**
**ಭೂಮೇ ರಸವಿಶೇಷಾ ತಥಾ ಗುಣವಶಾತ್ತು ಸಃ ॥ ೭೦ ॥**

**ಯಥೇಂಧನವಶಾದಗ್ನಿರೇಕಸ್ತು ಬಹುಧಾ ಭವೇತ್ ।**
**ವರ್ಣತೋ ರೂಪತಶ್ಚೈವ ತಥಾ ಗುಣವಶಾತ್ತು ಸಃ ॥ ೭೧ ॥**

**ಯಥಾ ದ್ರವ್ಯ ವಿಶೇಷಾಚ್ಚ ವಾಯುರೇಕಃ ಪೃಥಗ್ಭವೇತ್ ।**
**ಸುಗಂಧಿಃ ಪೂತಿಗಂಧಿರ್ವಾ ತಥಾ ಗುಣವಶಾತ್ತು ಸಃ ॥ ೭೨ ॥**

---

೬೯. ಮೇಘವು ಬಣ್ಣದಿಂದಲೂ, ಆಕೃತಿಯಿಂದಲೂ ಒಂದೇ ಆಗಿದ್ದರೂ ಹೇಗೆ ಪೃಥಕ್‌ಸ್ಥಿತಿಯನ್ನು ಹೊಂದಿರುವುದೋ ಹಾಗೆ ಅವನು ಒಬ್ಬನೇ ಆದರೂ ಭಿನ್ನಗುಣಗಳ ಸಂಬಂಧದಿಂದ ಭಿನ್ನರೂಪಗಳನ್ನು ಹೊಂದುವನು. ರಜೋಗುಣ ಸಂಬಂಧದಿಂದ ಬ್ರಹ್ಮನೆನಿಸುವನು. ತಮೋಗುಣ ಸಂಬಂಧಧಿಂದ ರುದ್ರನೆನಿಸುವನು. ಸತ್ವಗುಣ ಸಂಬಂಧದಿಂದ ವಿಷ್ಣುವೆನಿಸುವನು.

೭೦. ಆಕಾಶದಿಂದ ಬಿದ್ದ ನೀರು ಭೂಮಿಯಲ್ಲಿನ ರಸವಿಶೇಷಗಳಿಂದ ಬೇರೆ ಬೇರೆ ರುಚಿಗಳನ್ನು ಹೊಂದುವಂತೆ ಆ ಪರಬ್ರಹ್ಮನು (ಸ್ವಯಂಭು) ಸತ್ವರಜಸ್ತಮೋ ಸತ್ವರಜಸ್ತಮೋಗುಣಗಳ ಸಂಬಂಧದಿಂದ ಬೇರೆ ಬೇರೆ ರೂಪಗಳನ್ನು ಹೊಂದುತ್ತಾನೆ.

೭೧. ಬೆಂಕಿಯು ಒಂದೇ ಆಗಿದ್ದರೂ ಬೇರೆ ಬೇರೆ ಬಗೆಯ ಕಟ್ಟಿಗೆಗಳ ಸಂಬಂಧದಿಂದ ಹೇಗೆ ಬಹು ಪ್ರಕಾರವಾಗಿ ಆಗುವುದೋ ಹಾಗೆಯೇ ಪರಬ್ರಹ್ಮನು ಗುಣಗಳ ಸಂಬಂಧದಿಂದ ಬೇರೆ ರೂಪವನ್ನು ಹೊಂದುತ್ತಾನೆ.

೭೧. ಗಾಳಿಯು ಒಂದೇ ಬಗೆಯಾಗಿದ್ದರೂ ಬಗೆಬಗೆಯ ಪದಾರ್ಥಗಳ ಸಂಬಂಧದಿಂದ ಬೇರೆ ಬೇರೆ ವಾಸನೆಯುಳ್ಳದ್ದಾಗಿ (ಎಂದರೆ ಸುಗಂಧ ವಸ್ತುಸಂಬಂಧ ದಿಂದ ಸುವಾಸನೆಯೂ ದುರ್ಗಂಧ ವಸ್ತುಸಂಬಂಧದಿಂದ ದುರ್ವಾಸನೆಯೂ) ಆಗುವಂತೆ ಸ್ವಯಂಭುವು ಸತ್ವರಜಸ್ತಮೋಗುಣಗಳ ಸಂಬಂಧದಿಂದ ಬೇರೆ ಬೇರೆ ರೂಪ ವಾಗುತ್ತಾನೆ.

ಯಥಾ ವಾ ಗಾರ್ಹಪತ್ಯೋಽಗ್ನಿರನ್ಯತ್ಸಂಜ್ಞಾಂತರಂ ವ್ರಜೇತ್ ।
ದಕ್ಷಿಣಾವಹನೀಯಾದಿ ಬ್ರಹ್ಮಾದಿಷು ತಥಾ ಹ್ಯಸೌ ॥ ೭೩ ॥

ಏಕತ್ವೇ ಚ ಪೃಥಕ್ತ್ವೇ ಚ ಪ್ರೋಕ್ತಮೇತನ್ನಿದರ್ಶನಂ ।
ತಸ್ಮಾದ್ಭಕ್ತಿಃ ಸದಾ ಕಾರ್ಯಾ ದೇವೇಹ್ಯಸ್ಮಿನ್ ದಿವಾಕರೇ ॥ ೭೪ ॥

ಏಷೋಽಂಡಜೋದ್ಭಿಜಶ್ಚೈವ ಏಷ ಸ್ವೇದಜ ಏವ ಚ ।
ರಜಸ್ತಮುಶ್ಚೈಷ ಏವ ಏಷ ಸತ್ವಗುಣಸ್ತಥಾ ॥ ೭೫ ॥

ಏಷ ವೇದಾಶ್ಚ ಯಜ್ಞಾಶ್ಚ ಸರ್ವಂ ಚೈವ ನ ಸಂಶಯಃ ।
ಸೂರ್ಯವ್ಯಾಪ್ತಮಿದಂ ಸರ್ವಂ ಜಗತ್ ಸ್ಥಾವರಜಂಗಮಮ್ ॥ ೭೬ ॥

ಇಜ್ಯಂತೇ ದ್ವಾದಶಾದಿತ್ಯಾ ತಥಾ ಯಾನಾತ್ಮಕೋ ರವಿಃ ।
ಸರ್ವತ್ರ ಸವಿತಾ ದೇವಃ ತನುಭಿರ್ನಾಮಭಿಶ್ಚ ಸಃ ॥ ೭೭ ॥

---

೭೩. ಗಾರ್ಹಪತ್ಯವೆಂಬ ಅಗ್ನಿಯು ಒಂದೇ ಆಗಿದ್ದರೂ ವೇದಿಯ ಆಕೃತಿ ಸಂಬಂಧದಿಂದ ದಕ್ಷಿಣಾಗ್ನಿ, ಆವಹನೀಯ ಎಂಬ ಬೇರೆ ಬೇರೆ ಸಂಜ್ಞೆಗಳನ್ನು ಹೊಂದುವಂತೆ ಸ್ವಯಂಭುವು ನಿರ್ಗುಣವಾಗಿ ಒಂದೇ ಆಗಿದ್ದರೂ ವಿಷ್ಣುಬ್ರಹ್ಮಾದಿಗಳ ಕಾರ್ಯಶಕ್ತಿ ವಿಶಿಷ್ಟನಾಗಿರೋಣದರಿಂದ ಬೇರೆ ಬೇರೆ ಹೆಸರುಗಳನ್ನು ಹೊಂದುತ್ತಾನೆ.

೭೪. ಅವನು ಏಕಸ್ವರೂಪನು ಹೇಗೆ ಎಂಬುದಕ್ಕೂ; ಬೇರೆ ಬೇರೆ (ಭಿನ್ನ) ಸ್ವರೂಪವುಳ್ಳವನು ಹೇಗೆ ಎಂಬುದಕ್ಕೂ ಈ ನಿದರ್ಶಗಳನ್ನು ಕೊಟ್ಟಾಯಿತು. ಆದುದರಿಂದ ಈ ಸೂರ್ಯನಲ್ಲಿ ಯಾವಾಗಲೂ ಭಕ್ತಿಯನ್ನಿಡಬೇಕು.

೭೫. ಇವನು ಅಂಡಜನೆನಿಸುವನು. ಇವನೇ ಸ್ವೇದಜನೂ ಎನಿಸುವನು. ಉದ್ಭಿಜನೆನಿಸುವವನೂ ಇವನೇ. ರಜಸ್ಸು, ತಮಸ್ಸು, ಸತ್ವ ಎಂಬ ಗುಣಸ್ವರೂಪನೂ ಇವನೇ ಆಗಿದ್ದಾನೆ.

೭೬. ವೇದಗಳೂ, ಯಜ್ಞಗಳೂ ಎಲ್ಲವೂ ಇವನೇ ಎಂಬುದರಲ್ಲಿ ಸಂಶಯವಿಲ್ಲ. ಸ್ಥಾವರಜಂಗಮರೂಪಗಳಾದ ಈ ಸರ್ವ ಪ್ರಪಂಚಗಳೂ ಸೂರ್ಯನಿಂದ ವ್ಯಾಪ್ತವಾಗಿವೆ.

೭೭. ದ್ವಾದಶಾದಿತ್ಯರೂ ಪೂಜೆಯನ್ನು ಹೊಂದುತ್ತಾರೆ. ಚಲನಸ್ವಭಾವವುಳ್ಳ ಸೂರ್ಯನೂ ಹಾಗೆಯೇ ಪೂಜೆಯನ್ನು ಹೊಂದುತ್ತಾನೆ.

**ವಸತ್ಯಗ್ನೌ ತಥಾ ವಾತೇ ವ್ಯೋಮ್ನಿ ತೋಯೇ ತಥಾ ವಿಭೋ ।**
**ಏವಂ ವಿಧೋಹ್ಯಯಂ ಸೂರ್ಯಃ ಸದಾ ಪೂಜ್ಯೋ ವಿಜಾನತಾ ॥ ೭೮ ॥**

**ಆದಿತ್ಯಂ ವೇತ್ತಿ ಯಸ್ತ್ವೇವಂ ಸ ತಸ್ಮಿನ್ನೇವ ಲೀಯತೇ ।**
**ಅಪ್ಯೇಕಂ ವೇತ್ತಿ ಯೋನಾಮ ಧಾತ್ವರ್ಥನಿಗಮೈ ರವೇಃ ॥ ೭೯ ॥**

**ಸ ರೋಗೈರ್ವರ್ಜಿತಃ ಸರ್ವೈಃ ಸದ್ಯಃ ಪಾಪಾತ್ಪ್ರಮುಚ್ಯತೇ ।**
**ನ ಹಿ ಪಾಪಕೃತಃ ಸಾಂಬ ಭಕ್ತಿರ್ಭವತಿ ಭಾಸ್ಕರೇ ॥ ೮೦ ॥**

**ತಥಾ ತ್ವಂ ಪರಯಾ ಭಕ್ತ್ಯಾ ಪ್ರಪದ್ಯಸ್ವ ದಿವಾಕರಂ ।**
**ಯೇನ ವ್ಯಾಧಿವಿನಿರ್ಮುಕ್ತಃ ಸರ್ವಾನ್ಕಾಮಾನವಾಪ್ಸ್ಯಸಿ ॥ ೮೧ ॥**

---

೭೮. ಅಯ್ಯಾ ಪ್ರಭುವೇ! ಬಗೆಬಗೆಯ ಶರೀರಗಳಿಂದಲೂ, ಬಗೆಬಗೆಯ ಹೆಸರುಗಳಿಂದಲೂ ಕೂಡಿದ ಆ ಸೂರ್ಯದೇವನು ಅಗ್ನಿಯಲ್ಲಿಯೂ, ವಾಯುವಿನಲ್ಲಿಯೂ, ಆಕಾಶದಲ್ಲಿಯೂ, ಜಲದಲ್ಲಿಯೂ ವಾಸಿಸುತ್ತಾನೆ ಎಂಬ ತಿಳುವಳಿಕೆಯುಳ್ಳವನು ಈ ಬಗೆಯಾಗಿ ಸೂರ್ಯನನ್ನು ಯಾವಾಗಲೂ ಪೂಜಿಸಬೇಕು.

೭೯. ಯಾವನು ಸೂರ್ಯನನ್ನು ಈ ಪ್ರಕಾರ ತಿಳಿಯುತ್ತಾನೆಯೋ ಅವನು ಸೂರ್ಯನಲ್ಲಿಯೇ ಲೀನನಾಗುತ್ತಾನೆ. ಯಾವನು ಸೂರ್ಯನ ಒಂದು ನಾಮವನ್ನಾದರೂ ಧಾತ್ವರ್ಥ ವ್ಯುತ್ಪತ್ತಿಬೋಧಕವಾದ ಶಾಸ್ತ್ರಗಳಿಂದ ಚೆನ್ನಾಗಿ ವಿಮರ್ಶೆ ಮಾಡಿ ತಿಳಿಯುವನೋ ಅವನು ಎಲ್ಲ ರೋಗಗಳಿಂದ ಬಿಡುಗಡೆಹೊಂದಿ ಆಕ್ಷಣವೇ ಪಾಪಗಳಿಂದಲೂ ಬಿಡುಗಡೆಹೊಂದುತ್ತಾನೆ.

೮೦. ಅಯ್ಯಾ ಸಾಂಬನೇ! ಪಾಪಿಗೆ ಸೂರ್ಯನಲ್ಲಿ ಭಕ್ತಿಯು ಹುಟ್ಟುವುದೇ; ಇಲ್ಲ. ಹಾಗೆಂಬುದನ್ನು ನೀನು ತಿಳಿದು ಉತ್ತಮವಾದ ಭಕ್ತಿಯಿಂದ ಸೂರ್ಯನನ್ನು ಭಜಿಸು ಅದರಿಂದ ನೀನು ಎಲ್ಲ ರೋಗಗಳಿಂದಲೂ ಮುಕ್ತನಾಗಿ ಸಕಲ ಇಷ್ಟಾರ್ಥಗಳನ್ನೂ ಹೊಂದುವೆ.

೮೧-೮೩. ಅಯ್ಯಾ ಸಾಂಬನೇ! ನಿನ್ನ ತಂದೆಯಾದ ವಿಷ್ಣುವೂ, ಬ್ರಹ್ಮ, ಹರ ಇವರೂ, ಹೇಗೆ ಸತ್ವರಜಸ್ತಮೋಗುಣಗಳಿಂದ ಬಗೆಬಗೆಯ ರೂಪವನ್ನು ಹೊಂದಿ

**ಯಥಾ ತವ ಪಿತಾ ಸಾಂಬ ಯಥಾ ವೇಧಾ ಯಥಾ ಹರಃ ।**
**ತಥಾ ಗುಣವಶಾತ್ತಸ್ಯ ಸ್ವಯಂಭೋರನುರಂಜನಂ ॥ ೮೨ ॥**

**ಏಕೀಭೂತೋ ಯಥಾಮೇಘಃ ಪೃಥಕ್ ಸರ್ಗ ಸಂಪ್ರತಿಷ್ಠತೇ ।**
**ವರ್ಣತೋ ರೂಪತಶ್ಚೈವ ತಥಾ ಗುಣವಶಾತ್ತು ಸಃ ॥ ೮೩ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ ಸೂರ್ಯಮಹಿಮಾ ವರ್ಣನಂ ನಾಮ ಅಷ್ಟಸಪ್ತತಿತಮೋಽಧ್ಯಾಯಃ.**



---

ವರೋ ಹಾಗೆಯೇ ಸ್ವಯಂಭುವಾದ ಅವನಿಗೂ ಗುಣವಶದಿಂದ ಅನುರಂಜನ ಪ್ರಾಪ್ತವಾಗುತ್ತದೆ.

೮೩. ಒಂದೇ ಆಗಿದ್ದ ಮೇಘವು ಚಲನೆಯಿಂದ ಹೇಗೆ ಬೇರ್ಪಟ್ಟು ಹೊರಡುವುದೋ ಹಾಗೆ ಸೂರ್ಯನೂ ಕೂಡ ಸತ್ವರಜಸ್ತಮೋಗುಣವಶದಿಂದ ಪ್ರಾಪ್ತವಾದ ಶ್ವೇತ, ರಕ್ತ, ನೀಲರೂಪಗಳಿಂದ ವಿಭಿನ್ನತೆಹೊಂದಿ ಪ್ರಯಾಣಮಾಡುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸಪ್ತಮೀಕಲ್ಪದಲ್ಲಿ ಸೂರ್ಯನ ಮಹಿಮೆಯ ವರ್ಣನೆಯೆಂಬ ಎಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಏಕೋನಾಶೀತಿತಮೋಽಧ್ಯಾಯಃ

---

॥ ಸುಮಂತುರುವಾಚ ॥

ಏತಚ್ಛ್ರುತ್ವಾ ತು ಕಾರ್ತ್ಸ್ನ್ಯೇನ ಹೃಷ್ಟೋ ಜಾಂಬವತೀಸುತಃ ।
ಜಾತಕೌತೂಹಲೋ ಭೂಯಃ ಪರಿಪ್ರಪಚ್ಛ ನಾರದಂ ॥ ೧ ॥

॥ ಸಾಂಬ ಉವಾಚ ॥

ಅಹೋ ಸೂರ್ಯಸ್ಯ ಮಾಹಾತ್ಮ್ಯಂ ವರ್ಣಿತಂ ಹರ್ಷವರ್ಧನಂ ।
ಯೇನ ಮೇ ಭಕ್ತಿರುತ್ಪನ್ನಾ ಪರಾ ಹ್ಯಸ್ಮಿನ್ ವಿಭಾವಸೌ ॥ ೨ ॥

ತತೋ ರಾಜ್ಞೀಂ ಮಹಾಭಾಗಾಂ ನಿಕ್ಷುಭಾಂ ಚ ಮಹಾಮುನೇ ।
ದಿಂಡಿನಂ ಪಿಂಗಲಾದೀಂಶ್ಚ ಸರ್ವಾನ್‌ಕಥಯ ಮೇ ಶುಭಾನ್ ॥ ೩ ॥

---

## ಎಪ್ಪತ್ತೊಂಬತ್ತನೆಯ ಅಧ್ಯಾಯ

೧. ಸುಮಂತುಮುನಿವರ್ಯರು ಹೇಳುತ್ತಾರೆ—ಜಾಂಬವತಿಯ ಮಗನಾದ ಸಾಂಬನು ಇದನ್ನು ಪೂರ್ಣವಾಗಿ ಕೇಳಿ ಸಂತೋಷಪಟ್ಟು ಕುತೂಹಲ ಹುಟ್ಟಿದುದ ರಿಂದ ನಾರದರನ್ನು ಪ್ರಶ್ನೆಮಾಡಿದನು.

೨. ಸಾಂಬನು ಹೇಳುತ್ತಾನೆ—ಆಹಾ ! ಸಂತೋಷವೃದ್ಧಿಕರವಾದ ಸೂರ್ಯನ ಮಹಾತ್ಮೆಯನ್ನು ನೀನು ಚೆನ್ನಾಗಿ ವರ್ಣಿಸಿದೆ. ಅದನ್ನು ಕೇಳಿ ಸೂರ್ಯನಲ್ಲಿ ನನಗೆ ಉತ್ಕೃಷ್ಟವಾದ ಭಕ್ತಿಯು ಉತ್ಪನ್ನವಾಯಿತು.

೩. ಓ ಮಹರ್ಷಿಯೇ! ಅತ್ಯದೃಷ್ಟಶಾಲಿಗಳಾದ ರಾಜ್ಞೀ, ನಿಕ್ಷುಭೆ, ದಿಂಡಿ, ಪಿಂಗಳ ಮುಂತಾದವರ ವಿಚಾರವನ್ನೂ ನನಗೆ ಹೇಳು.

॥ ನಾರದ ಉವಾಚ ॥

ಪ್ರಾಗುಕ್ತೇsರ್ಕಸ್ಯ ದ್ವೇ ಭಾರ್ಯೇ ರಾಜ್ಞೀನಿಕ್ಷುಭಸಂಜ್ಞಿತೇ ।
ತಯೋರ್ಹಿರಾಜ್ಞೀ ದ್ಯೌರ್ಜ್ಞೇಯಾ ನಿಕ್ಷುಭಾ ಪೃಥಿವೀ ಸ್ಮೃತಾ ॥ ೪ ॥

ಸೌಮ್ಯ ಮಾಸಸ್ಯ ಸಪ್ತಮ್ಯಾಂ ದ್ಯಾವಾರ್ಕಸ್ಸಹ ಯುಜ್ಯತೇ ।
ಮಾಘ ಕೃಷ್ಣಸ್ಯ ಸಪ್ತಮ್ಯಾಂ ಮಹ್ಯಾಸಹ ಭವೇದ್ರವಿಃ ॥
ಭೂರಾದಿತ್ಯಶ್ಚ ಭಗವಾನ್ ಗಚ್ಛತಃ ಸಂಗಮಂ ತಥಾ ॥ ೫ ॥

ಋತುಸ್ನಾತಾ ಮಹೀ ತತ್ರ ಗರ್ಭಂ ಗೃಹ್ಣಾತಿ ಭಾಸ್ಕರಾತ್ ।
ದ್ಯೌರ್ಜಲಂ ಸೂಯತೇ ಗರ್ಭಂ ವರ್ಷಾಸ್ವಿಹ ಚ ಭೂತಲೇ ॥ ೬ ॥

ತತಸ್ತ್ರೈಲೋಕ್ಯಭೂತ್ಯರ್ಥಂ ಮಹೀ ಸಸ್ಯಾನಿ ಸೂಯತೇ ।
ಸಸ್ಯೋಪಯೋಗಸಂಹೃಷ್ಟಾ ಜುಹ್ವತ್ಯಾಹುತಯೋ ದ್ವಿಜಾಃ ॥ ೭ ॥

---

೪. ನಾರದರು ಹೇಳುತ್ತಾರೆ—ಸೂರ್ಯನಿಗೆ ರಾಜ್ಞಿ, ನಿಕ್ಷುಭೆ ಎಂಬ ಇಬ್ಬರು ಪತ್ನಿಯರೆಂದು ಹಿಂದೆ ಹೇಳಿದೆ. ಅವರಲ್ಲಿ ರಾಜ್ಞೀ ಎಂಬುವಳೇ ಆಕಾಶ. ನಿಕ್ಷುಭೆ ಯೆಂಬುವಳು ಭೂಮಿ ಎಂದು ತಿಳಿಯಬೇಕು.

೫. ಪುಷ್ಯ ಶುದ್ಧ ಸಪ್ತಮಿಯಲ್ಲಿ ಸೂರ್ಯನು ರಾಜ್ಞಿಯೆಂಬ ಪತ್ನಿಯೊಡನೆ ಸೇರುತ್ತಾನೆ. ಮಾಘ ಬಹುಳ ಸಪ್ತಮಿಯದಿನ ಅವನೇ ನಿಕ್ಷುಭೆಯೆಂಬ ಪತ್ನಿಯೊಡನೆ ಸೇರುತ್ತಾನೆ. ನಿಕ್ಷುಭೆಯು ಆದಿತ್ಯನ ಸಂಗಡ ಸೇರುವಕಾಲದಲ್ಲಿ ಎಂದರೆ ಮಾಘ ಬಹುಳ ಸಪ್ತಮಿಯದಿನ ಭೂಮಿಯೇ ಆದಿತ್ಯನ ಸಂಗಡ ಸೇರಿದಂತಾಯಿತು.

೬. ಭೂಮಿಯು ಋತುಸ್ನಾನ ಮಾಡಿದ ಆದಿನ, ಅಲ್ಲಿ ಭಾಸ್ಕರನಿಂದ ಗರ್ಭವನ್ನು ಧರಿಸುತ್ತಾಳೆ, ಸೂರ್ಯನು ಕಿರಣಗಳಿಂದ ಜಲವನ್ನು ಹಬೆಯರೂಪಕ್ಕೆ ತಂದು ಆಕಾಶಕ್ಕೆ ಕಳುಹಿಸುತ್ತಾನೆ. ದ್ಯೌ ರೂಪಳಾದ ರಾಜ್ಞಿಯು ಮೇಘರೂಪವಾಗಿ ತನ್ನಲ್ಲಿ ಸೇರಿದ ಗರ್ಭವನ್ನು ವರ್ಷಾಕಾಲದಲ್ಲಿ ಮಳೆಯ ರೂಪದಿಂದ ಭೂಮಿಗೆ ಪ್ರಸುವಿಸುತ್ತಾಳೆ.

೭. ಮೂರು ಲೋಕದ ಸಂಪತ್ತಿಗೋಸ್ಕರವಾಗಿ ಭೂಮಿಯು ಸಸ್ಯಗಳನ್ನೂ ಪ್ರಸುವಿಸುತ್ತದೆ. ಈ ಸಸ್ಯಗಳಿಂದ ಉತ್ಪನ್ನವಾದ ಧಾನ್ಯಾದಿಗಳನ್ನು ಉಪಯೋಗಿಸಿಕೊಂಡು ಸಂತುಷ್ಟರಾದ ದ್ವಿಜರು ಅಗ್ನಿಯಲ್ಲಿ ಆಹುತಿಯನ್ನು ಹೋಮಮಾಡುತ್ತಾರೆ.

**ಸ್ವಾಹಾ ಸ್ವಧಾಭ್ಯಾಂ ತೃಪ್ತಾಃಸ್ಯುಃ ದೇವಾಶ್ಚ ಪಿತರಸ್ತಥಾ ॥ ೮ ॥**

**ನಿಕ್ಷುಭಾ ಸೂಯತೇ ಯಸ್ಮಾದನ್ನೌಷಧಿ ಸುಧಾಸ್ತಥಾ ।**
**ಮರ್ತ್ಯಾನ್ ಪಿತ್ರ್ಯಾಂಶ್ಚ ದೇವಾಂಶ್ಚ ರಕ್ಷಿತಾ ತೇನ ನಿಕ್ಷುಭಾ ॥ ೯ ॥**

**ಯಥಾ ರಾಜ್ಞೀ ದ್ವಿಧಾ ಭೂತಾ ಯಸ್ಯ ಚೇಯಂ ಸುತಾ ಮತಾ ।**
**ಅಪತ್ಯಾನಿ ಚ ಯಾನ್ಯಸ್ಯಾಃ ತತ್ಸರ್ವಂ ವಚ್ಮ್ಯಶೇಷತಃ ॥ ೧೦ ॥**

**ಮರೀಚಿರ್ಬ್ರಹ್ಮಣಃ ಪುತ್ರೋ ಮರೀಚೇಃ ಕಶ್ಯಪಃ ಸುತಃ ।**
**ತಸ್ಮಾದ್ಧಿರಣ್ಯಕಶಿಪುಃ ಪ್ರಹ್ಲಾದಸ್ತಸ್ಯ ಚಾತ್ಮಜಃ ॥ ೧೧ ॥**

**ಪ್ರಹ್ಲಾದಸ್ಯ ಸುತೋ ನಾಮ್ನಾ ವಿರೋಚನ ಇತಿ ಸ್ಮೃತಃ ।**
**ವಿರೋಚನಸ್ಯ ಭಗಿನೀ ಸಂಜ್ಞಾಯಾ ಜನನೀ ಶುಭಾ ॥ ೧೨ ॥**

**ಹಿರಣ್ಯಕಶಿಪೋಃ ಪೌತ್ರೀ ದಿತೇಃ ಪುತ್ರಸ್ಯ ಸಾ ಸ್ಮೃತಾ ।**
**ಸಾ ವಿಶ್ವಕರ್ಮಣಃ ಪುತ್ರೀ ಪ್ರಾಹ್ಲಾದೀ ಪ್ರೋಚ್ಯತೇ ಬುಧೈಃ ॥ ೧೩ ॥**

---

೮–೧೦. ಸ್ವಾಹಾಕಾರ ಯುಕ್ತವಾದ ಆ ಹೋಮಗಳಿಂದ ದೇವತೆಗಳು ತೃಪ್ತರಾಗುವರು ಸ್ವಧಾಕಾರ ಯುಕ್ತಗಳಾದ ಹೋಮಗಳಿಂದ ಪಿತೃಗಳು ತೃಪ್ತರಾಗುತ್ತಾರೆ. ನಿಕ್ಷುಭೆಯು ತನ್ನಲ್ಲಿ ನಿಕ್ಷಿಪ್ತವಾದ ಗರ್ಭವನ್ನು ಎಂದರೆ ಅನ್ನ, ಅಮೃತ, ಔಷಧಿ ಇವುಗಳನ್ನು ಪ್ರಸವಿಸುತ್ತಾಳೆ. ಅದರಿಂದ ದೇವತೆಗಳು ಪಿತೃಗಳು ಮನುಷ್ಯರು ಇವರುಗಳೆಲ್ಲ ರಕ್ಷಿತರಾಗುವರು. ಈ ನಿಮಿತ್ತದಿಂದ ಭೂಮಿಗೆ ನಿಕ್ಷುಭಾ ಎಂದು ಹೆಸರು ಬಂದಿತು, ಈ ರಾಜ್ಞಿಯು ಯಾರಿಗೆ ಮಗಳಾಗಿ ಹುಟ್ಟಿದಳು ? ಅವಳು ಹೇಗೆ ಎರಡು ರೂಪವನ್ನು ಧರಿಸಿದಳು ? ಅವಳಿಗೆ ಎಷ್ಟು ಮಕ್ಕಳು ಆದುವು ? ಆ ಮಕ್ಕಳು ಯಾರು ಯಾರು ? ಅವೆಲ್ಲವನ್ನೂ ಸಮಗ್ರವಾಗಿ ಹೇಳುತ್ತೇನೆ.

೧೧-೧೨. ಬ್ರಹ್ಮನ ಮಗನು ಮರೀಚಿಯು, ಮರೀಚಿಯ ಮಗನು ಕಶ್ಯಪನು, ಅವನ ಮಗ ಹಿರಣ್ಯಕಶಿಪು. ಅವನ ಮಗ ಪ್ರಹ್ಲಾದ, ವಿರೋಚನನು ಪ್ರಹ್ಲಾದನ ಮಗ, ಈ ವಿರೋಚನನ ತಂಗಿಯೇ ಶುಭಕರಳಾದ ಸಂಜ್ಞೆಯ ತಾಯಿ.

೧೩. ದಿತಿದೇವಿಯ ಮಗನಾದ ಹಿರಣ್ಯಕಶಿಪುವಿಗೆ ಅವಳು ಮಗನ ಮಗಳೆಂದು ತಿಳಿಯಬೇಕು. ಅವಳು ವಿಶ್ವಕರ್ಮನ ಮಗಳೆಂದೂ ಪ್ರಹ್ಲಾದನ ವಂಶದವಳು ಮಾತ್ರ ಎಂದೂ ಕೆಲವರು ಅಭಿಪ್ರಾಯಪಡುತ್ತಾರೆ.

ಅಥ ನಾಮ್ನಾ ಸುರೂಪೇತಿ ಮರೀಚೇರ್ಮಹಿಳಾ ಶುಭಾ ।
ಪತ್ನೀ ಹ್ಯಂಗಿರಸ ಸ್ಸಾ ತು ಜನನೀ ತು ಬೃಹಸ್ಪತೇಃ ॥ ೧೪ ॥

ಬೃಹಸ್ಪತೇ ಸ್ತು ಭಗಿನೀ ವಿಶ್ರುತಾ ಬ್ರಹ್ಮವಾದಿನೀ ।
ಪ್ರಭಾಸಸ್ಯ ತು ಸಾ ಪತ್ನೀ ವಸೂನಾಮಷ್ಟಮಸ್ಯ ತು ॥ ೧೫ ॥

ಪ್ರಾಸೂತ ವಿಶ್ವಕರ್ಮಾಣಂ ಸರ್ವಶಿಲ್ಪಕರಂ ವರಂ ।
ಸ ವೈ ನಾಮ್ನಾ ಪುನ ಸ್ತಕ್ಷಾ ತ್ರಿದಶಾನಾಂ ಚ ವರ್ಧಕಿಃ ॥ ೧೬ ॥

ದೇವಾಚಾರ್ಯಸ್ಯ ತಸ್ಯೇಯಂ ದುಹಿತಾ ವಿಶ್ವಕರ್ಮಣಃ ।
ಸುರೇಣುರಿತಿ ವಿಖ್ಯಾತಾ ತ್ರಿಷು ಲೋಕೇಷು ಭಾಮಿನೀ ॥ ೧೭ ॥

ರಾಜ್ಞೀ ಸಂಜ್ಞಾ ಚ ದ್ಯೌ ತ್ವಾಷ್ಟ್ರೀ ಪ್ರಭಾ ಸೈವ ವಿಭಾವ್ಯತೇ ।
ತಸ್ಯಾಸ್ತು ಯಾ ತನುಚ್ಛಾಯಾ ನಿಕ್ಷುಭಾ ಸಾ ಮಹೀಮಯೀ ॥ ೧೮ ॥

ಸಾ ತು ಭಾರ್ಯಾ ಭಗವತೋ ಮಾರ್ತಂಡಸ್ಯ ಮಹಾತ್ಮನಃ ।
ಸಾಧ್ವೀ ಪತಿವ್ರತಾ ದೇವೀ ರೂಪಯೌವನಶಾಲಿನೀ ॥ ೧೯ ॥

---

೧೩-೧೪. ಸುರೂಪಾ ಎಂಬುವಳು ಮರೀಚಿಯ ಹೆಂಡತಿ, ಅಂಗೀರಸನ ಹೆಂಡತಿಯೇ ಬೃಹಸ್ಪತಿಯ ತಾಯಿ, ಬೃಹಸ್ಪತಿಯ ತಂಗಿಯೂ ಪ್ರಸಿದ್ಧಳಾದ ಬ್ರಹ್ಮವಾದಿನಿ ಆಕೆ ವಿಶ್ವಕರ್ಮನ ತಾಯಿ ಆ ವಿಶ್ವಕರ್ಮನೂ ಅವಳೂ ಎಂಟನೆಯ ವಸ್ತುವಾದ ಪ್ರಭಾಸನ ಹೆಂಡತಿ. ಸರ್ವ ಪ್ರಕಾರದ ಶಿಲ್ಪಕಲಾಕುಶಲನೂ, ಮತ್ತು ಲೋಕದಲ್ಲಿ ಶ್ರೇಷ್ಠನೂಆಗಿದ್ದನು. ಆತ ದೇವಲೋಕದಲ್ಲಿ ಕೆತ್ತನೆಯ ಕೆಲಸಮಾಡುವ ಬಡಗಿಯು.

೧೬-೧೭. ದೇವಶಿಲ್ಪಿಯಾದ ಆ ವಿಶ್ವಕರ್ಮನ ಮಗಳು ಸುರೇಣು ಎಂಬ ಹೆಸರುಳ್ಳವಳು. ಆಕೆ ಮೂರು ಲೋಕದಲ್ಲಿ ಪ್ರಸಿದ್ಧಳಾದ ಹೆಂಗಸು.

೧೮. ರಾಜ್ಞಿಯಾದ ಸಂಜ್ಞೆ ಎಂಬುವಳೇ ದ್ಯೌಃ ಎಂಬುದಾಗಿಯೂ, ಅವಳೇ ತ್ವಷ್ಟೃ (ವಿಶ್ವಕರ್ಮ) ನ ಮಗಳಾದ ಪ್ರಭಾ ಎಂಬದಾಗಿಯೂ ಭಾವಿತಳಾಗಿರುವಳು ಅವಳ ಶರೀರಛಾಯೆಯೇ ಭೂರೂಪಳಾದ ನಿಕ್ಷುಭೆ ಎಂದು ಭಾವಿಸಲ್ಪಡುವುದು.

೧೯. ಮಹಾತ್ಮನೂ ಭಗವಂತನೂ ಆದ ಮಾರ್ತಂಡನಿಗೆ ಸಾಧುಶೀಲೆಯೂ, ಪತಿವ್ರತೆಯೂ, ರೂಪಸಂಪನ್ನೆಯೂ, ಯೌವನವತಿಯೂ ಆದ ಆ ದೇವಿಯೇ ಹೆಂಡತಿಯು.

**ನ ತು ತಾಂ ನರರೂಪೇಣ ಸೂರ್ಯೋ ಭಜತಿ ವೈ ಪುರಾ ।**
**ಆದಿತ್ಯಸ್ಯೇಹ ತದ್ರೂಪಂ ಮಹತಾ ಸ್ವೇನ ತೇಜಸಾ ॥ ೨೦ ॥**

**ಗಾತ್ರೇಷ್ವಪ್ರತಿರೂಪೇಷು ನಾತಿಕಾಂತಮಿವಾಭವತ್ ।**
**ಅನಿಷ್ಪನ್ನೇಷು ಗಾತ್ರೇಷು ಗೋಲಂ ದೃಷ್ಟ್ವಾ ಪಿತಾಮಹಃ ॥ ೨೧ ॥**

**ಮಾರ್ತಶ್ಚ ಭವಚಾಂಡಸ್ತ್ವಂ ಮಾರ್ತಂಡಸ್ತೇನ ಚ ಸ್ಮೃತಃ ।**
**ದೇವಾನಾಂ ತು ಯತಸ್ತ್ವಾದಿಸ್ತೇನಾದಿತ್ಯ ಇತಿ ಸ್ಮೃತಃ ॥ ೨೨ ॥**

**ಅತಃ ಪರಂ ಪ್ರವಕ್ಷ್ಯಾಮಿ ಪ್ರಜಾಸ್ತಸ್ಯ ಮಹಾತ್ಮನಃ ।**
**ತ್ರೀಣ್ಯಪತ್ಯಾನಿ ಸಂಜ್ಞಾಯಾಂ ಜನಯಾಮಾಸ ವೈ ರವಿಃ ॥ ೨೩ ॥**

**ವರ್ಷಾಣಾಂ ತು ಸಹಸ್ರಂ ವೈ ವಸಮಾನಾ ಪಿತುರ್ಗೃಹೇ ।**
**ಭರ್ತುಸ್ಸಮೀಪಂ ಯಾಹೀತಿ ಪಿತ್ರೋಕ್ತಾ ಸಾ ಪುನಃ ಪುನಃ ॥ ೨೪ ॥**

---

೨೦. ಇವಳು ಮನುಷ್ಯರೂಪಳಾದುದರಿಂದ ಸೂರ್ಯನು ಇವಳ ಸಂಗವ ಸೇರಲು ಮನುಷ್ಯನ ರೂಪವನ್ನು ಹೊಂದಬೇಕಾಗಿತ್ತು. ಆದರೆ ಹಾಗೆ ಆಗದೆ ಆದಿತ್ಯನ ಆಕೃತಿಯು ತನ್ನ ಅಪರಿಮಿತ ತೇಜಸ್ಸಿನಿಂದ ಕೂಡಿ ಮನುಷ್ಯರೂಪದವರು ಸಹಿಸಲು ಪ್ರತಿಕೂಲರೂಪವಾಗಿದ್ದುದರಿಂದ ಅಷ್ಟು ಮನೋಹರವಾದಂತಿಲ್ಲ.

೨೧ ಬ್ರಹ್ಮನು ಗೋಳಾಕಾರವಾದ ಸೂರ್ಯನನ್ನು ನೋಡಿ ಅವಯವಗಳು ಸ್ಪಷ್ಟವಾಗಿಲ್ಲದುದರಿಂದ ನೀನು ಮಾರ್ತನೂ, ಅಂಡನೂ ಆಗಿ ಮಾರ್ತಂಡನೆಂಬ ಹೆಸರನ್ನು ಹೊಂದಿ ಪ್ರಸಿದ್ಧನಾಗು.

೨೨. ದೇವತೆಗಳಿಗೆಲ್ಲಾ ಆದಿಭೂತನಾದುದರಿಂದ ಅದಿಯಲ್ಲಿ ಹುಟ್ಟಿದವನು ಎಂಬ ಅರ್ಥದಲ್ಲಿ ಆದಿತ್ಯ ಎಂಬದಾಗಿ ಹೆಸರಾಯಿತೆಂದು ತಿಳಿಯಬೇಕು ಎಂದನು.

೨೩. ಇನ್ನು ಮುಂದೆ ಮಹಾತ್ಮನಾದ ಅವನ ಮಕ್ಕಳವಿಚಾರವನ್ನು ಹೇಳುತ್ತೇನೆ. ಸೂರ್ಯನು ಆ ಸಂಜ್ಞಾದೇವಿಯಲ್ಲಿ ಮೂವರು ಮಕ್ಕಳನ್ನು ಪಡೆದನು. ಅವಳು ಒಂದು ಸಹಸ್ರವರ್ಷಗಳು ತಂದೆಯ ಮನೆಯಲ್ಲೇ ಇದ್ದಳು. ತಂದೆಯು ಆಕೆಯನ್ನು ಗಂಡನ ಸಮೀಪಕ್ಕೆ ಹೋಗು ಎಂದು ಪದೇಪದೇ ಹೇಳಿದನು.

೨೪-೨೫. ಸೂರ್ಯನ ಹೆಂಡತಿಯೂ ಯಶಸ್ವಿನಿಯೂ ಆದ ಆ ಸಂಜ್ಞೆಯು ತಂದೆಯ ಈ ಮಾತಿನಿಂದ ಬೇಸತ್ತು ತನ್ನ ನಿಜರೂಪನ್ನು ಬಿಟ್ಟು ಹೆಣ್ಣುಕುದುರೆಯ

ಆಗಚ್ಛದ್ವಡವಾ ಭೂತ್ವಾ ತ್ಯಕ್ತ್ವಾ ರೂಪಂ ಯಶಸ್ವಿನೀ ।
ಉತ್ತರಾಂಶ್ಚ ಕುರೂನ್ ಗತ್ವಾ ತೃಣಾನ್ಯನುಚಚಾರ ಹ ॥ ೨೫ ॥

ಪಿತುಃ ಸಮೀಪಂ ಯಾ ಭಾರ್ಯಾ ಸಂಜ್ಞಾಯಾ ವಚನೇನ ಸಾ ।
ಸಂಜ್ಞಾಯಾ ಧಾರಯದ್ರೂಪಂ ಛಾಯಾ ಸೂರ್ಯಮುಪಸ್ಥಿತಾ ॥ ೨೬ ॥

ದ್ವಿತೀಯಾಯಾಂ ತು ಸಂಜ್ಞೇಯ ಮಿತಿ ಚಿಂತಯನ್ ।
ಆದಿತ್ಯೋ ಜನಯಾಮಾಸ ಪುತ್ರೌ ಕನ್ಯಾಂ ಚ ರೂಪಿಣೀಂ ॥ ೨೭ ॥

ಪೂರ್ವಜಸ್ಯ ಮನೋಸ್ತುಲ್ಯಾ ಸಾದೃಶ್ಯೇನ ಚ ತಾ ವುಭೌ ।
ಶ್ರುತಶ್ರವಾಶ್ಚ ಧರ್ಮಜ್ಞೋ ಶ್ರುತಕರ್ಮಾ ತ ಥೈವ ಚ ॥ ೨೮ ॥

ಶ್ರುತಶ್ರವಾ ಮನುಸ್ತಾಭ್ಯಾಂ ಸಾವರ್ಣಿಯೋ ಭವಿಷ್ಯತಿ ।
ಶ್ರುತಕರ್ಮಾ ತು ವಿಜ್ಞೇಯೋ ಗ್ರಹೋ ವೈ ಯೋ ಶನೈಶ್ಚರಃ ॥ ೨೯ ॥

---

ರೂಪವನ್ನು ಧರಿಸಿ ಉತ್ತರ ಕುರುದೇಶಕ್ಕೆ ಹೋಗಿ ಅಲ್ಲಿ ಹುಲ್ಲುಮೇಯುತ್ತಾ ಕಾಲ ಹರಣಮಾಡುತ್ತಿದ್ದಳು. ಅವಳ ಛಾಯೆಯು ಸಂಜ್ಞೆಯು ಹೇಳಿಹೋದ ಮಾತಿನ ಪ್ರಕಾರ ತಾನೇ ಸಂಜ್ಞೆಯ ರೂಪವನ್ನು ಧರಿಸಿದವಳಾಗಿ ಸೂರ್ಯನಲ್ಲಿಗೆ ಬಂದುಸೇರಿದಳು.

೨೬–೨೭. ಆದಿತ್ಯನು ಸಂಜ್ಞೆಯಂತೆಯೇ ರೂಪುಳ್ಳ ಅವಳನ್ನು ನಿಜವಾದ ಸಂಜ್ಞಾದೇವಿ ಎಂದೇ ಭಾವಿಸಿ ಅವಳಲ್ಲಿ ಎರಡು ಗಂಡುಮಕ್ಕಳನ್ನು ಸುಂದರಿಯಾದ ಒಂದು ಹೆಣ್ಣುಮಗುವನ್ನೂ ಪಡೆದನು.

೨೮. ಶ್ರುತಶ್ರವ, ಧರ್ಮಜ್ಞನಾದ ಶ್ರುತಕರ್ಮ ಎಂಬ ಹೆಸರಿನ ಆ ಇಬ್ಬರು ಗಂಡು ಮಕ್ಕಳೂ ಒಬ್ಬರನ್ನೊಬ್ಬರು ಹೋಲುವ ಒಂದೇ ಸಮನಾದ ರೂಪವುಳ್ಳವರಾಗಿ ತಮ ಗಿಂತಲೂ ಮೊದಲೇ ಹುಟ್ಟಿದ್ದ ಸೂರ್ಯನಿಂದ ಮನುವಿಗೆ ಸಮಾನರಾಗಿದ್ದರು.

೨೯. ಆ ಇಬ್ಬರಲ್ಲಿ ಶ್ರುತಶ್ರವನೇ ಸಾವರ್ಣಿ ಎಂಬ ಮನುವೆನಿಸಿದನು. ಶ್ರುತ ಕರ್ಮನೇ ಶನೈಶ್ಚರನೆಂಬ ಗ್ರಹವಾದವನು ಎಂದು ತಿಳಿಯಬೇಕು.

**ಕನ್ಯಾ ಚ ತಪತೀ ನಾಮ ರೂಪೇಣಾಪ್ರತಿರೂಪಿಣೀ ।**
**ಸಂಜ್ಞಾ ತು ಪಾರ್ಥಿವೀ ತೇಷಾಮಾತ್ಮಜಾನಾಂ ಯಥಾಕರೋತ್ ॥ ೩೦ ॥**

**ನ ಸ್ನೇಹಂ ಪೂರ್ವಜಾನಾಂ ತು ತಥಾ ಕೃತವತೀ ತು ಸಾ ।**
**ಮನುಸ್ತು ಕ್ಷಮತೇ ತಸ್ಯಾ ಯಮುಸ್ತಸ್ಯಾ ನ ಚಕ್ಷಮೇ ॥ ೩೧ ॥**

**ಬಹುಶೋ ಯಾತ್ಯಮಾನಸ್ತು ಪಿತುಃ ಪತ್ನ್ಯಾ ಸುದುಃಖಿತಃ ।**
**ಸ ವೈ ಬಾಲ್ಯಾಚ್ಚ ಕೋಪಾಚ್ಚ ಭಾವಿನೋರ್ಥಸ್ಯ ವೈ ಬಲಾತ್ ॥ ೩೨ ॥**

**ಪದಾ ಸಂತರ್ಜಯಾಮಾಸ ಸಂಜ್ಞಾಂ ವೈವಸ್ವತೋ ಯಮಃ ।**
**ತಂ ಶಶಾಪ ತತಃ ಕೋಪಾತ್ಸಂಜ್ಞಾ ಸಾ ಪಾರ್ಥಿವೀ ಭೃಶಂ ॥ ೩೩ ॥**

**ಪದಾ ತರ್ಜಯಸೇ ಯನ್ಮಾಂ ಪಿತುರ್ಭಾರ್ಯಾಂ ಗರೀಯಸೀಂ ।**
**ತಸ್ಮಾತ್ತವೈಷ ಚರಣಃ ಪತಿಷ್ಯತಿ ನ ಸಂಶಯಃ ॥ ೩೪ ॥**

---

೩೦. ಸೌಂದರ್ಯದಲ್ಲಿ ಅಸಮಾನಳಾದ ತಪತಿಯೆಂಬವಳೇ ಆಕೆಯ ಮಗಳು. ರಾಜಪತ್ನಿಯಾದ ಸುಜ್ಞಾವೇಷಧಾರಿ ಛಾಯೆಯಾದರೋ ತನ್ನ ಈ ಮಕ್ಕಳಲ್ಲಿ ಹೇಗೆ ಪ್ರೀತಿಯಿಂದ ನಡೆದುಕೊಳ್ಳುವಳೋ ಹಾಗೆ ಮುಂಚೆ ಜನಿಸಿದ್ದ ಮಕ್ಕಳಲ್ಲಿ ಪ್ರೀತಿಯಿಂದ ನಡೆದುಕೊಳ್ಳಲಿಲ್ಲ.

೩೧. ಹಿರಿಯಮಗ ಮನುವು ಅವಳ ಈ ನಡತೆಯನ್ನು ಸಹಿಸಿಕೊಂಡನು. ಯಮನಾದರೋ ಅವಳ ಈ ನಡತೆಯನ್ನು ಸಹಿಸಲಿಲ್ಲ.

೩೨. ತಂದೆಯು ಅಂಗೀಕರಿಸಿದ ಪತ್ನಿಯಿಂದ ತುಂಬ ಯಾತನೆಪಡಿಸಲ್ಪಟ್ಟವನಾಗಿ ದುಃಖಹೊಂದಿ ಬಾಲಭಾವದಿಂದಲೂ, ಕೋಪದಿಂದಲೂ, ಮುಂದೆ ಸಂಭವಿಸಬೇಕಾದ ಪ್ರಾರಬ್ಧಕರ್ಮವಶದಿಂದಲೂ ಸೂರ್ಯಪುತ್ರನಾದ ಯಮನು ವೇಷದ ಸಂಜ್ಞಾ, ದೇವಿಯನ್ನು ಕಾಲಿನಿಂದ ಒದೆಯುವೆನೆಂದು ಹೆದರಿಸಿದನು.

೩೩-೩೪. ಆಗ ಸೂರ್ಯಪತ್ನಿಯಾದ ಸಂಜ್ಞೆಯು ಅತ್ಯಂತ ಕೋಪಾವಿಷ್ಟಳಾಗಿ ಅವನನ್ನು ಶಪಿಸಲು ನಿಶ್ಚಯಿಸಿ "ನಿಮ್ಮ ತಂದೆಯ ಅರ್ಧಾಂಗಿಯೂ, ಗೌರವಕ್ಕೆ ಅರ್ಹಳೂ ಆದ ನನ್ನನ್ನು ನೀನು ಕಾಲಿನಿಂದ ಪ್ರಹರಿಸುವೆನೆಂದು ಹೆದರಿಸಿ ತರ್ಜನ ಮಾಡಿದ್ದೀಯೆ, ಆದುದರಿಂದ ನಿನ್ನ ಆ ಕಾಲು ಕೊಳೆತು ಬಿದ್ದುಹೋಗುವುದರಲ್ಲಿ ಸಂಶಯವಿಲ್ಲ" ಎಂದಳು.

ಯಮಸ್ತು ತೇನ ಶಾಪೇನ ಭೃಶಂ ಪೀಡಿತಮಾನಸಃ ।
ಮನುನಾ ಸಹ ತನ್ಮಾತುಃ ಪಿತುಸ್ಸರ್ವಂ ನ್ಯವೇದಯತ್ ॥ ೩೫ ॥

ಸ್ನೇಹೇನ ತುಲ್ಯಮಸ್ಮಾಸು ಮಾತಾ ದೇವ ನ ವರ್ತತೇ ।
ನಿಃಸ್ನೇಹಾ ಜ್ಯಾಯಸೋಽಹ್ಯಸ್ಮಾ ಕನೀಯಾಂಸಂ ಬುಭೂಷತಿ ॥ ೩೬ ॥

ತಸ್ಯಾ ಮಯೋದ್ಯತಃ ಪಾದೋ ನ ತು ದೇವ ನಿಪಾತಿತಃ ।
ಬಾಲ್ಯಾದ್ವಾ ಯದಿ ವಾ ಮೋಹಾತ್ತದ್ಭವಾನ್ ಕ್ಷಂತುಮರ್ಹತಿ ॥ ೩೭ ॥

ಶಪ್ತೋಽಹಮಸ್ಮಿ ಲೋಕೇಶ ಜನನ್ಯಾ ತಪತಾಂವರ ।
ತವ ಪ್ರಸಾದಾಚ್ಚರಣಸ್ತ್ರಾಯತಾಂ ಮಹತೋ ಭಯಾತ್ ॥ ೩೮ ॥

॥ ರವಿರುವಾಚ ॥

ಅಸಂಶಯಂ ಮಹತ್ಪುತ್ರ ಭವಿಷ್ಯತ್ಯತ್ರ ಕಾರಣಂ ।
ಯೇನ ತ್ವಾಮಾವಿಶತ್ಕ್ರೋಧೋ ಧರ್ಮಜ್ಞಂ ಧರ್ಮಶಾಲಿನಂ ॥ ೩೯ ॥

---

೩೫. ಯಮನು ಆ ಶಾಪದಿಂದ ಅತ್ಯಂತ ಮನೋವ್ಯಥೆ ಹೊಂದಿದವನಾಗಿ ಅಣ್ಣನಾದ ಮನುವಿನೊಡನೆ ತಂದೆಯ ಬಳಿಗೆ ಹೋಗಿ ತಾಯಿಯ ಕ್ರೂರಕೃತ್ಯಗಳನ್ನೆಲ್ಲಾ ತಂದೆಗೆ ತಿಳಿಸಿದನು.

೩೬. ಎಲೈ ತಂದೆಯೇ! ಈ ತಾಯಿಯು ನಮ್ಮಲ್ಲಿ ಸಮನಾದ ಪ್ರೀತಿಯಿಂದ ನಡೆದುಕೊಳ್ಳುವುದಿಲ್ಲ. ಹಿರಿಯ ಮಕ್ಕಳಾದ ನಮ್ಮನ್ನು ಸಮಪ್ರೀತಿಯಿಂದ ನೋಡದೆ ಕಿರಿಯುವನನ್ನು ಮಾತ್ರ ಹಾಗೆ ಪ್ರೀತಿಮಾಡಬೇಕೆಂದು ಇಚ್ಛಿಸುತ್ತಾಳೆ.

೩೭. "ಅಯ್ಯಾ ದೇವನೇ! ಈ ರೀತಿ ನಡೆದ ಅವಳ ವಿಷಯದಲ್ಲಿ ನಾನು ಸುಮ್ಮನೆ ಕಾಲನ್ನು ತೋರಿಸಿದೇನೇ ಹೊರತು ಒದೆಯಲಿಲ್ಲ. ಹುಡುಗತನದಿಂದಲೋ ಅಜ್ಞಾನದಿಂದಲೋ ತಾಯ ವಿಷಯದಲ್ಲಿ ಹೀಗೆ ಮಾಡಿದ ನನ್ನ ಅಪರಾಧವನ್ನು ನೀನು ಕ್ಷಮಿಸಲು ಅರ್ಹನಾಗಿದ್ದೀಯೆ."

೩೮. "ಅಪ್ಪಾ ತಪಿಸುವರಲ್ಲಿ ಶ್ರೇಷ್ಠನೂ ಲೋಕೇಶನೂ ಆದ ತಂದೆಯೇ! ಈಗ ತಾಯಿಯು ನನ್ನನ್ನು ಶಪಿಸಿದ್ದಾಳೆ. ನಿನ್ನ ಅನುಗ್ರಹದಿಂದ ನನ್ನ ಕಾಲು ಈ ಮಹಾ ಶಾಪಭಯದಿಂದ ರಕ್ಷಿತವಾಗಬೇಕು" ಎಂದನು.

೩೯. ರವಿಯು ಹೇಳುತ್ತಾನೆ—ಧರ್ಮವನ್ನು ತಿಳಿದವನೂ ಧರ್ಮಶಾಲಿಯೂ ಆದ ಪುತ್ರನೇ,! ನಿನಗೆ ಕೋಪಬರಬೇಕಾದರೆ ಏನೋ ದೊಡ್ಡ ಕಾರಣವೇ ಇರಬೇಕು.

**ಸರ್ವೇಷಾಮೇವ ಶಾಪಾನಾಂ ಪ್ರತಿಘಾತಸ್ತು ವಿದ್ಯತೇ ।**
**ನ ತು ಮಾತ್ರಾಭಿಶಪ್ತಾನಾಂ ಕ್ವಚಿನ್ಮೋಕ್ಷೋ ಭವೇದಿಹ　　॥ ೪೦ ॥**

**ನಶಕ್ಯಮೇತನ್ಮಿಥ್ಯಾ ಮೇ ಕರ್ತುಂ ಮಾತುರ್ವಚಸ್ತವ ।**
**ಕಿಂಚಿತ್ತ್ವೇಽಹಂ ವಿಧಾಸ್ಯಾಮಿ ಪಿತೃಸ್ನೇಹಾದನುಗ್ರಹಂ　　॥ ೪೧ ॥**

**ಕೃಮಯೋ ಮಾಂಸಮಾದಾಯ ಯಾಸ್ಯಂತಿ ತು ಮಹೀತಲೇ ।**
**ಕೃತಂ ತಸ್ಯಾ ವಚಃ ದತ್ಯಂ ತ್ವಂ ಚ ತ್ರಾತೋ ಭವಿಷ್ಯಸಿ　　॥ ೪೨ ॥**

**॥ ಸುಮಂತುರುವಾಚ ॥**

**ಆದಿತ್ಯಸ್ತ್ವಬ್ರವೀಚ್ಛಾಯಾಂ ಕಿಮರ್ಥೌ ತನಯಾವುಭೌ ।**
**ತುಲ್ಯೇತ್ವೇಽಭ್ಯಧಿಕಃ ಸ್ನೇಹ ಏಕತ್ರ ಕ್ರಿಯತೇ ತ್ವಯಾ　　॥ ೪೩ ॥**

**ಸಾ ತತ್ಪುರಾಭವಂ ತಸ್ಯೈ ನಾ ಚಚಕ್ಷೇ ವಿವಸ್ವತೇ ।**
**ಆತ್ಮಾನಂ ಸ ಸಮಾಧಾಯ ವಕ್ತುತಸ್ಯಾಮುಪಕ್ರಮತ್　　॥ ೪೪ ॥**

---

೪೦. "ಎಲ್ಲಾ ಶಾಪಗಳಿಗೂ ನಿವಾರಣೋಪಾಯವುಂಟು. ಆದರೆ ತಾಯಿಯು ಶಾಪಕ್ಕೆ ಮಾತ್ರ ಈ ಲೋಕದಲ್ಲಿ ಬಿಡುಗಡೆ ಎಲ್ಲಿಯೂ ಇಲ್ಲ."

೪೧. "ನಿಮ್ಮ ತಾಯಿಯ ಮಾತನ್ನು ವ್ಯರ್ಥಮಾಡಲು ನನ್ನಿಂದ ಸಾಧ್ಯವಿಲ್ಲ ಆದರೆ ತಂದೆಯಾದ ನನಗೆ ಮಗನಾದ ನಿನ್ನಲ್ಲಿರುವ ಪ್ರೀತಿಯಿಂದ ನಿನಗೆ ಸ್ವಲ್ಪಮಟ್ಟಿಗೆ ಅನುಗ್ರಹಮಾಡುತ್ತೇನೆ."

೪೨. "ಆಕೆಯ ಶಾಪದಂತೆ ಹುಳುಗಳು ನಿನ್ನ ಕಾಲಿನ ಮಾಂಸವನ್ನು ತೆಗೆದುಕೊಂಡು ಭೂತಳಕ್ಕೆ ಹೋಗಿಬಿಡಲಿ. ಅಲ್ಲಿಗೆ ಅವಳ ಮಾತೂ ಸತ್ಯವಾಗಿ ಮಾಡಲ್ಪಟ್ಟ ಹಾಗಾಯಿತು. ನನ್ನ ಅನುಗ್ರಹದಿಂದ, ಪುನಃ ಅವು ಬಾರದೇ ಇರುವುದರಿಂದ ನಿನಗೆ ಅವುಗಳ ಬಾಧೆಯು ಇಲ್ಲದೆ ಸುರಕ್ಷಿತನಾಗುತ್ತೀಯೆ" ಎಂದನು.

೪೩. ಸುಮಂತುಮುನಿವರ್ಯರು ಹೇಳುತ್ತಾರೆ—ಆಗ ಸೂರ್ಯನು ಛಾಯೆಯನ್ನು ಕುರಿತು "ನಿನಗೆ ಇಬ್ಬರು ಮಕ್ಕಳಿದ್ದು ಸಾರ್ಥಕವಾಯ್ತು? ಇಬ್ಬರು ಮಕ್ಕಳು ಸಮಾನರಲ್ಲವೆ? ನೀನು ಒಬ್ಬನಲ್ಲಿ ಮಾತ್ರ ಹೆಚ್ಚು ಪ್ರೀತಿಯನ್ನು ತೋರಿಸುತ್ತಿದ್ದೀಯೆ" ಎನಲು.

೪೪. ಆಗ ಅವಳು ಹಿಂದೆ ನಡೆದ ಸಮಾಚಾರವೊಂದನ್ನೂ ಸೂರ್ಯನಿಗೆ ಹೇಳಲಿಲ್ಲ. ಆಗ ಸೂರ್ಯನು ತಾನು ಮಾಡಬೇಕಾದುದನ್ನು ನಿಶ್ಚಯಿಸಿ ಮನಸ್ಸನ್ನು ಸಮಾಧಾನಪಡಿಸಿಕೊಂಡು ಅವಳೊಡನೆ ಆಗ ಮಾತನಾಡತೊಡಗಿದನು.

ತಾಂ ಶಪ್ತುಕಾಮೋ ಭಗವಾನತ್ಯಂತಂ ಕುಪಿತಸ್ತತಃ ॥
ತತಶ್ಛಾಯಾ ಯಥಾವೃತ್ತಂ ಆಚಚಕ್ಷೇ ವಿವಸ್ವತೇ ॥ ೪೫ ॥

ವಿವಸ್ವಾಂಸ್ತು ತತಃ ಕ್ರುದ್ಧಃ ಶ್ರುತ್ವಾ ಶ್ವಶುರಮಾಗತಃ ।
ಸ ಚಾಪಿ ತಂ ತಥಾನ್ಯಾಯಮರ್ಚಯಿತ್ವಾ ದಿವಾಕರಂ ॥
ನಿರ್ದಗ್ಧುಕಾಮಂ ರೋಷೇಣ ಸಾಂತ್ವಯಾಮಾಸ ತಂ ಶನೈಃ ॥ ೪೬ ॥

॥ ವಿಶ್ವಕರ್ಮೋವಾಚ ॥

ತವಾತಿತೇಜಸಾವಿಷ್ಟಮಿದಂ ರೂಪಂ ಸುದುಸ್ಸಹಂ ।
ಅಸಹಂತೀ ತು ಸಂಜ್ಞಾ ಚ ವನೇ ಚರಣಿತಿ ಶಾದ್ವಲೇ ॥ ೪೭ ॥

ದ್ರಕ್ಷ್ಯತೇ ತಾಂ ಭವಾನದ್ಯ ಸ್ವಾಂ ಭಾರ್ಯಾಂ ಶುಭಚಾರಿಣೀಂ ।
ರೂಪಾರ್ಥಂ ಭವತೋರಣ್ಯೇ ಚರಂತೀಂ ಸುಮಹತ್ತಪಃ ॥ ೪೮ ॥

---

೪೫. ಆ ಮೇಲೆ ಭಗವಂತನಾದ ಸೂರ್ಯನು ಅವಳಿಗೆ ಶಾಪವನ್ನೇ ಕೊಡಬೇಕೆಂದು ಅತ್ಯಂತವಾಗಿ ಕೋಪಿಸಿಕೊಂಡನು. ಆಗ ಛಾಯೆಯು ಸಮಾಚಾರವನ್ನೆಲ್ಲಾ ನಡೆದದ್ದು ನಡೆದಹಾಗೆಯೇ ಹೇಳಿದಳು.

೪೬. ಸೂರ್ಯನು ಅವನ್ನು ಕೇಳಿ ಕೋಪಗೊಂಡು ಮಾವನ (ವಿಶ್ವಕರ್ಮನ) ಬಳಿಗೆ ಬಂದನು. ರೋಷದಿಂದ ಸುಟ್ಟುಬಿಡಬೇಕೆಂದು ಬಂದಿದ್ದ ಅಳಿಯನಾದ ಸೂರ್ಯನನ್ನು ವಿಶ್ವಕರ್ಮನು ಮರ್ಯಾದಾನುಸಾರವಾಗಿ ಪೂಜಿಸಿ ಮೃದುನುಡಿಗಳಿಂದ ಮೆಲ್ಲಗೆ ಸಂತೈಸಿದನು.

೪೭. ವಿಶ್ವಕರ್ಮನು ಹೇಳುತ್ತಾನೆ—"ನಿನ್ನ ಈ ರೂಪವು ಅತಿ ತೇಜಸ್ಸಿನಿಂದ ಸಹಿಸಲು ಅಸಾಧ್ಯವಾಗಿದೆ. ನನ್ನ ಕುಮಾರಿಯಾದ ಸಂಜ್ಞೆಯು ಅದನ್ನು ಸಹಿಸಲಾರದೆ ಉತ್ತರ ಕುರುದೇಶದ ಹುಲ್ಲುಗಾವಲಿನಲ್ಲಿ ತಿರುಗುತ್ತಿದ್ದಾಳೆ.

೪೮. ಒಳ್ಳೆಯ ನಡತೆಯಲ್ಲಿರುವಳೂ, ನಿನಗೆ ಸೌಂದರ್ಯಪ್ರಾಪ್ತಿಗೋಸ್ಕರವೇ ಅರಣ್ಯದಲ್ಲಿ ಉಗ್ರವಾದ ತಪಸ್ಸನ್ನು ಮಾಡುತ್ತಿರುವವಳೂ, ಆದ ನಿನ್ನ ಹೆಂಡತಿಯನ್ನು ತತ್‌ಕ್ಷಣದಲ್ಲೇ ನೋಡುವೆಯಂತೆ.

**ರೂಪಂ ತೇ ಬ್ರಹ್ಮಣೋ ವಾಕ್ಯಾದ್ಯದಿ ವೈ ರೋಚತೇ ವಿಭೋ ।**
**ಪ್ರಶಾತಯಾಮಿ ದೇವೇಂದ್ರ ಶ್ರೇಯೋರ್ಥಂ ಜಗತಃ ಪ್ರಭೋ ॥ ೪೯ ॥**

**ಸಂತುಷ್ಟಸ್ತಸ್ಯ ತದ್ವಾಕ್ಯಂ ಬಹುಮೇನೇ ಮಹಾತಪಾಃ ।**
**ತತೋಽನ್ವಜಾನಾತ್ತ್ವಷ್ಟಾರಂ ರೂಪ ನಿರ್ವರ್ತನಾಯ ತು ॥ ೫೦ ॥**

**ವಿಶ್ವಕರ್ಮಾ ಹ್ಯನುಜ್ಞಾತಃ ಶಾಕದ್ವೀಪೇ ವಿವಸ್ವತಃ ।**
**ಭ್ರಮಿಮಾರೋಪ್ಯ ತತ್ತೇಜಃ ಶಾತಯಾಮಾಸ ತಸ್ಯ ವೈ ॥ ೫೧ ॥**

**ಆಜಾನುಲಿಖಿತಶ್ಚಾಸೌ ನಿಪುಣಂ ವಿಶ್ವಕರ್ಮಣಾ ।**
**ಲೇಖನಂ ನಾಭ್ಯನಂದತ್ತು ತತಸ್ತೇನ ನಿವಾರಿತಃ ॥ ೫೨ ॥**

**ತತ್ರತದ್ಭಾಸಿತಂ ರೂಪಂ ತೇಜಸಾ ಪ್ರಕೃತೇನ ತು ।**
**ಕಾಂತಾತ್ಕಾಂತತರಂ ಭೂತ್ವಾ ಅಧಿಕಂ ಶುಶುಭೇ ತತಃ ॥ ೫೩ ॥**

---

೪೯. ದೇವಶ್ರೇಷ್ಠನಾದ ಪ್ರಭುವೇ! ನಿನಗೆ ಇಷ್ಟವಿದ್ದರೆ ಹೇಳು. ಬ್ರಹ್ಮನೂ ನನಗೆ ಹೇಳಿದ್ದಾನೆ. ಜಗತ್ತಿನ ಶ್ರೇಯಸ್ಸಿಗೋಸ್ಕರ ನಿನ್ನ ರೂಪವನ್ನು ಶಾತನ ಮಾಡಿಸುತ್ತೇನೆ" (ಎಂದನು)

೫೦. ಮಹಾತಪಸನಾದ ಸೂರ್ಯನು ಸಂತುಷ್ಟನಾಗಿ ವಿಶ್ವಕರ್ಮನು ಹೇಳಿದ ಆ ವಾಕ್ಯವನ್ನು ಗೌರವಿಸಿದನು. ಆಮೇಲೆ ತ್ವಷ್ಟೃವಿಗೆ (ವಿಶ್ವಕರ್ಮನಿಗೆ) ತನ್ನ ರೂಪವನ್ನು ಸರಿಪಡಿಸುವುದಕ್ಕೆ ಸಮ್ಮತಿಕೊಟ್ಟನು.

೫೧. ಹೀಗೆ ಅಪ್ಪಣೆ ಹೊಂದಿದ ವಿಶ್ವಕರ್ಮನು ಶಾಕದ್ವೀಪದಲ್ಲಿ ಸೂರ್ಯನನ್ನು ಸಾಣೆಯ ಯಂತ್ರಕ್ಕೆ ಒಡ್ಡಿ ಅವನ ತೇಜಸ್ಸನ್ನು ಕಡಿಮೆಮಾಡಿದನು.

೫೨. ಸಾಣೆಯ ಯಂತ್ರದ ಮೂಲಕ ಜಾಣತನದಿಂದ ಕೆಲಸಮಾಡುತ್ತಾ ವಿಶ್ವಕರ್ಮನು ಸೂರ್ಯನ ಮಂಡಿಯ ಪರ್ಯಂತ ಸಾಣೆ ಹಿಡಿದನು. ಅಷ್ಟಕ್ಕೆ ದುಸ್ಸಹವಾದ ವೇದನೆಯಿಂದ ಮುಂದಕ್ಕೆ ತನ್ನನ್ನು ಸಾಣೆಹಿಡಿಯುವುದಕ್ಕೆ ಸೂರ್ಯನು ಒಪ್ಪಲಿಲ್ಲ. ಆದರಿಂದ ವಿಶ್ವಕರ್ಮನ ಕೆಲಸಕ್ಕೆ ತಡೆಯುಂಟಾಯಿತು.

೫೩. ಹೀಗೆ ಸಾಣೆಹಿಡಿದಮೇಲೆ ಇವನಲ್ಲಿ ಸ್ವಭಾವವಾಗಿ ಪ್ರಕಾಶಿಸುತ್ತಿದ್ದ ತೇಜಸ್ಸು ಅತ್ಯಂತ ಮನೋಹರವಾಗಿರುವ ರೂಪಿನಿಂದ ಕೂಡಿ ಪ್ರಕಾಶಿಸಿತು.

ದದರ್ಶ ಯೋಗಮಾಸ್ಥಾಯ ಸ್ವಾಂ ಭಾರ್ಯಾಂ ವಡವಾಂ ತಥಾ ।
ಅದೃಶ್ಯಾಂ ಸರ್ವಭೂತಾನಾಂ ತೇಜಸಾ ಸ್ವೇನ ಸಂವೃತಾಂ ॥ ೫೪ ॥

ಅಶ್ವರೂಪೇಣ ಮಾರ್ತಂಡಸ್ತಾಂ ಸುಖೇನ ಸಮಾಸದತ್ ।
ಮೈಥುನಾಯ ವಿಚೇಷ್ಟಂತೀಂ ಪರಪುಂಸೋಽ ವಿಶಂಕಯಾ ॥ ೫೫ ॥

ಸಾ ತಂ ವಿವಸ್ವತಃ ಶುಕ್ರಂ ನಾಸಾಭ್ಯಾಂ ಸಮಧಾರಯತ್ ।
ದೇವೌ ತಸ್ಯಾಮಜಾಯೇತಾಮಾಶ್ವಿನೌ ಭಿಷಜಾಂ ವರೌ ॥ ೫೬ ॥

ನಾಸತ್ಯೌ ಚೈವ ದಸ್ರೌಚ ತೌ ಸ್ಮೃತೋ ನಾಮತೋಽಶ್ವಿನೌ ।
ಅತಃ ಪರಂ ಸ್ವಕಂ ರೂಪಂ ದರ್ಶಯಾಮಾಸ ಭಾಸ್ಕರಃ ।
ತದ್ದೃಷ್ಟ್ವಾ ಚಾಪಿ ಸಂಜ್ಞಾ ತು ತುತೋಷ ಚ ಮುಮೋಹ ಚ ॥ ೫೭ ॥

---

೫೪ ಆಗ ಉಪಾಯಾಂತರವನ್ನು ಯೋಚಿಸಿ ಕೂಡಲೆ ಉತ್ತರಕುರು ಪ್ರಾಂತಕ್ಕೆ ಹೋಗಿ ಸಮಸ್ತ ಪ್ರಾಣಿಗಳಿಗೂ ಕಾಣಿಸದಂತೆ ಇರುತ್ತಾ, ತನ್ನ ತೇಜಸ್ಸಿನಿಂದ ಕೂಡಿ ಹೆಣ್ಣುಕುದುರೆಯ ರೂಪದಲ್ಲಿದ್ದ ತನ್ನ ಹೆಂಡತಿಯನ್ನು ನೋಡಿದನು.

೫೫. ಆಗ ಸೂರ್ಯನು ತಾನು ಗಂಡುಕುದುರೆಯ ರೂಪಿನಿಂದ ಕೂಡಿದವನಾಗಿ ಅದರ ಬಳಿಗೆ ಹೋದನು. ಆ ಜಾತಿಯ ಗುಣಕ್ಕನುಸಾರವಾಗಿ ಪರಪುರುಷನೆಂಬ ಶಂಕೆ ಯಿಲ್ಲದೆ ಮೈಥುನಕ್ಕಾಗಿ ಪ್ರಯತ್ನಪಡುತ್ತಿರುವ ಹೆಣ್ಣುಕುದುರೆಯ ರೂಪಿನಲ್ಲಿದ್ದ ಆ ತನ್ನ ಭಾರ್ಯೆಯನ್ನು ಸುಖವಾಗಿ ಹೊಂದಿದನು.

೫೬. ಅವಳು ಆ ಸೂರ್ಯನ ರೇತಸ್ಸನ್ನು ಮೂಗಿನ ಹೊಳ್ಳೆಯಿಂದ ಧರಿಸಿದಳು. ದೇವವೈದ್ಯ ಶ್ರೇಷ್ಠರಾದ ಅಶ್ವಿನೀದೇವತೆಗಳು ಅಶ್ವರೂಪಿಯಾದ ಅವಳಲ್ಲಿ ಆಗ ಹುಟ್ಟಿದರು.

೫೭. ನಾಸತ್ಯರು, ದಸ್ರರು ಎಂದು ಅವರ ಹೆಸರು ಪ್ರಸಿದ್ಧವಾಯಿತು. ಆ ಮೇಲೆ ಸೂರ್ಯನು ತನ್ನ ಆದಿತ್ಯ ರೂಪವನ್ನು ಪ್ರಕಟವಾಗಿ ತೋರಿಸಿದನು. ಅದನ್ನು ನೋಡಿ ಸಂಜ್ಞೆಯು ಸಂತೋಷಪಟ್ಟದ್ದಲ್ಲದೆ, ಮೋಹಿಸಿದಳು.

ತತಸ್ತು ಜನಯಾಮಾಸ ಸಂಜ್ಞಾ ಸೂರ್ಯಸುತಂ ಶುಭಂ ।
ರೂಪೇಣ ಚಾತ್ಮನಸ್ತುಲ್ಯಂ ರೇವತಂ ನಾಮ ನಾಮತಃ ॥ ೫೮ ॥

ಪಿತುರ್ಗೃಹ್ಯಾಷ್ಟಮಂ ಸೋಽಶ್ವಂ ಜಾತಮಾತ್ರಃ ಪಲಾಯತ ।
ಸ ತಸ್ಮಿನ್ನಶ್ವದಾರೂಢಸ್ತಮಶ್ವಂ ನೈವ ಮುಂಚತಿ ॥ ೫೯ ॥

ತತೋಽರ್ಕೇಣ ಸಮಾದಿಷ್ಟಾ ದಂಡನಾಯಕಪಿಂಗಲೌ ।
ಅಶ್ವಂ ಪ್ರತ್ಯಾನಯೇಥಾಂ ಮೇ ಮಾಬಲಾಚ್ಛಿದ್ರತೋಽಸ್ಯ ತು ॥ ೬೦ ॥

ಪಾರ್ಶ್ವಸ್ಥೌ ತಿಷ್ಠತ ಸ್ತಸ್ಯ ಅಶ್ವಚ್ಛಿದ್ರಾಭಿಕಾಂಕ್ಷಿಣೌ ।
ನ ಚ್ಛಿದ್ರಂ ತು ಲಭೇತೇ ತೌ ತಸ್ಯಾದ್ಯಾಪಿ ಮಹಾತ್ಮನಃ ॥ ೬೧ ॥

ಪ್ಲವಗಚ್ಛತ್ಯಸೌ ಯಸ್ಮಾತ್ಸಂಜ್ಞಾಯಾಃ ಶಾಂತಿದಃ ಸುತಃ ।
ರೈವಸ್ತು ಜಗತೋ ಧಾತೂ ರೇವಂತಸ್ತೇನ ಸ ಸ್ಮೃತಃ ॥ ೬೨ ॥

---

೫೮. ಅನಂತರ ಸಂಜ್ಞೆಯು ಸೂರ್ಯವೀರ್ಯಜಾತನೂ, ಮಂಗಳಕರನೂ ತನ್ನ ಅಶ್ವರೂಪಕ್ಕೆ ಸಮಾನನೂ ಆದ ರೇವತನೆಂಬ ಹೆಸರಿನಿಂದ ಸುಪ್ರಸಿದ್ಧನಾದ ಮಗನನ್ನು ಪ್ರಸುವಿಸಿದಳು.

೫೯. ಅವನು ಹುಟ್ಟಿದ ಕೂಡಲೇ ಸೂರ್ಯನ ರಥದ ಎಂಟು ಕುದುರೆಗಳಲ್ಲಿ ಒಂದನ್ನು ಏರಿಕೊಂಡು ಓಡಿಹೋದನು. ಅವನು ಒಂದಾವರ್ತಿ ಕುದುರೆಯನ್ನು ಏರಿದವನು, ಅದನ್ನು ಬಿಡಲೇ ಇಲ್ಲ.

೬೦. ಆಗ ಸೂರ್ಯನು ದಂಡನಾಯಕ, ಪಿಂಗಳ ಇವರಿಬ್ಬರನ್ನೂ ಕರೆದು ನನ್ನ ಕುದುರೆಯನ್ನು ತೆಗೆದುಕೊಂಡುಬನ್ನಿರಿ. ಆದರೆ ಬಲಾತ್ಕಾರದಿಂದ ತರಬೇಡಿ ಅದಕ್ಕೆ ಗಾಯವಾದೀತು ಎಂದಾಜ್ಞಾಪಿಸಿದನು.

೬೧. ಅವರು ಅಶ್ವಕ್ಕೆ ಗಾಯವಾಗಿರುವುದು ಕಣ್ಣಿಗೆ ಬೀಳಲಿ, ಎಂದು ಕುದುರೆಯ ಎರಡು ಪಾರ್ಶ್ವಗಳಲ್ಲಿಯೂ ಇದ್ದರು. ಶಾಂತಿದಾಯಕನೂ, ಸಂಜ್ಞಾದೇವೀ ಪುತ್ರನೂ ಆದ ಆ ರೇವತನು ಕುಪ್ಪಳಿಸುತ್ತಾ ಓಡಿಸಿದ ಕಾರಣದಿಂದ ಮಹಾತ್ಮನ ಆ ಅಶ್ವದಲ್ಲಿ ಅವರಿಬ್ಬರಿಗೂ ಯಾವ ಗಾಯವೂ ಕಾಣಲಿಲ್ಲ.

೬೨. ರೈವ ಮತ್ತು ಸ್ತು ಎಂಬ ಗಮನಾರ್ಥಕವಾದ ಎರಡು ಧಾತುಗಳಿಂದ ಸಿದ್ಧವಾದುದಾಗಿ ಗಮನಶೀಲನಾದ ಅವನಿಗೆ ರೈವಂತನೆಂಬದಾಗಿ ಹೆಸರಾಯಿತು.

ಮನುರ್ಯಮೋ ಯಮೀ ಚೈವ ರೇವಂತ ಶ್ಚ ರವೇಸ್ಸುತಾಃ ।
ಏವಮಾದ್ಯಾ ತು ಸಂಜ್ಞಾ ಭೂತ್ ಭಾರ್ಯೈಷಾಸೀದ್ದ್ವಿತೀಯಕಾ ॥ ೬೩ ॥

ಯಾ ಸಂಜ್ಞಾ ಸಾ ಸ್ಮೃತಾ ರಾಜ್ಞೀ ಛಾಯಾ ಯಾ ಸಾ ತು ನಿಕ್ಷುಭಾ
॥ ೬೪ ॥

ರಾಜೃ ದೀಪ್ತೌ ಸ್ಮೃತೋ ಧಾತೂ ರಾಜಾ ರಾಜತಿ ಯತ್ಸದಾ ।
ಅಧಿಕಃ ಸರ್ವ ಭೂತೇಭ್ಯೋ ರಾಜತೇ ಚ ದಿವಾಕರಃ ॥ ೬೫ ॥

ಅಧಿಕಂ ರಾಜತೇ ಯಸ್ಮಾ ತ್ತಸ್ಮಾದ್ರಾಜ್ಞಾ ಸ ಉಚ್ಯತೇ ।
ರಾಜ್ಞಃ ಪತ್ನೀ ತು ಸಾ ಯಸ್ಮಾತ್ತಸ್ಮಾತ್ ರಾಜ್ಞೀ ಪ್ರಕೀರ್ತಿತಾ ॥ ೬೬ ॥

ಕ್ಷುಭ ಸಂಚಲತೇ ಧಾತುರ್ನಿಶ್ಚಲಾ ತೇನ ನಿಕ್ಷುಭಾ ।
ಭವನ್ತೀತ್ಯಥ ವಾ ಯಸ್ಮಾತ್ಸ್ವರ್ಗೀಯಾಃ ಕ್ಷುದ್ವಿವರ್ಜಿತಾಃ ।
ಛಾಯಾಂ ತಾಂ ವಿಶತೇ ದಿವ್ಯಾಂ ಸ್ಮೃತಾ ಸಾ ತೇನ ನಿಕ್ಷುಭಾ ॥ ೬೭ ॥

---

೬೩. ಯಮ, ಸಾವರ್ಣಿ, ಮನು, ಯಮಿ (ಯಮುನೆ) ಶನೈಶ್ಚರ, ತಪತಿ, ಅಶ್ವಿನೀದೇವತೆಗಳು, ರೇವಂತ ಇವರೆಲ್ಲರೂ ಸೂರ್ಯನ ಮಕ್ಕಳು.

೬೪. ಹೀಗೆ ಅವನ ಪತ್ನಿಯರಲ್ಲಿ ಸಂಜ್ಞೆಯು ಮೊದಲನೆಯವಳು. ಛಾಯೆಯು ಎರಡನೆಯವಳು. ಸಂಜ್ಞೆ ಎಂಬುವಳೇ ರಾಜ್ಞಿ, ಛಾಯೆ ಎಂಬುವಳೇ ನಿಕ್ಷುಭೆಯೆನಿಸಿಕೊಂಡಿದಾರೆಂದು ತಿಳಿಯಬೇಕು.

೪೫–೬೬. 'ರಾಜೃದೀಪ್ತೌ' ಎಂಬ ಧಾತುಪಾಠರೀತ್ಯಾ ರಾಜೃಧಾತುವಿಗೆ ಪ್ರಕಾಶಿಸು ಎಂಬ ಅರ್ಥ ಹೇಳಿದೆ. ಸರ್ವದಾ ಈ ಸೂರ್ಯನು ರಾಜಿಸುವ (ಪ್ರಕಾಶಿಸುವ) ಕಾರಣದಿಂದಲೂ, ದಿವಾಕರನು ಸಮಸ್ತ ಭೂತಗಳಿಗಿಂತ ಅಧಿಕವಾಗಿ ಪ್ರಕಾಶಿಸುವ ಕಾರಣದಿಂದಲೂ, ಅವನು ರಾಜನೆನಿಸಿಕೊಂಡು ಅಧಿಕವಾಗಿ ಪ್ರಕಾಶಿಸುತ್ತಾನೆ. ಎಂಬುದರಿಂದ ರಾಜನೆಂದು ಹೇಳಲ್ಪಡುತ್ತಾನೆ.

೬೭. ರಾಜನ ಪತ್ನಿಯೆಂಬ ಕಾರಣದಿಂದ ಆ ಸಂಜ್ಞೆಯು ರಾಜ್ಞಿ ಎನಿಸಿಕೊಂಡಳು. ಕ್ಷುಭ್ ಎಂಬುದು ಸಂಚಲನಾರ್ಥಕ ಧಾತು. ನಿ ಎಂಬುದು ಅದರ ಅಭಾವಸೂಚಕವಾದ ಉಪಸರ್ಗ. ಚಲನವಿಲ್ಲದಿರುವವಳಾಗಿರೋಣದರಿಂದ ನಿಕ್ಷುಭಾ ಎಂದು ಹೇಳಬೇಕು. ಅಥವಾ ಸ್ವರ್ಗವಾಸಿಗಳಾದ ದೇವತೆಗಳು ಕ್ಷುದ್ವಿವರ್ಜಿತರಾಗಿ

ದೃಷ್ಟ್ವಾ ಜನಂ ಸದಾ ತಾತ ಭೃಶಂ ಪೀಡಿತಮಾನಸಂ।
ಧರ್ಮೇಣ ರಂಜಯಾಮಾಸ ಧರ್ಮರಾಜಸ್ತತಃ ಸ್ಮೃತಃ ॥ ೬೮ ॥

ಶುದ್ಧೇನ ಕರ್ಮಣಾ ತಾತ ಶುಭೇನ ಪರಮದ್ಯುತಿಃ।
ಪಿತ್ರೂಣಾಮಾಧಿಪತ್ಯಂ ಚ ಲೋಕಪಾಲತ್ವಮಾಪ ಚ ॥ ೬೯ ॥

ಸಾಂಪ್ರತಂ ವರ್ತತೇ ಯೋಽಯಂ ಮನುರ್ಲೋಕೇ ಮಹಾಮತೇ।
ಯಸ್ಯಾನ್ವವಾಯೇ ಜಾತಸ್ತು ಶಂಖಚಕ್ರಗದಾಧರಃ ॥ ೭೦ ॥

ಯಮಸ್ಯ ಭಗಿನೀ ಯಾ ತು ಯಮಿಾ ಕನ್ಯಾ ಯಶಸ್ವಿನೀ।
ಸಾಭವತ್ಸರಿತಾಂ ಶ್ರೇಷ್ಠಾ ಯಮುನಾ ಲೋಕಪಾವನೀ ॥ ೭೧ ॥

---

(ಹಸಿವಿಲ್ಲದವರಾಗಿ) ಇದ್ದುಕೊಂಡು ಆ ಶ್ರೇಷ್ಠವಾದ ಸೂರ್ಯಛಾಯೆಯನ್ನು ಪ್ರವೇಶಿಸುತ್ತಾರೆ. ಆದ್ದರಿಂದ ಅವಳು ನಿಕ್ಷುಭಾ ಎನಿಸಿಕೊಳ್ಳುವಳು.

೬೮. ಅಪ್ಪಾ ಸಾಂಬ! ಅತ್ಯಂತವಾಗಿ ದುಃಖಿತವಾದ ಮನಸ್ಸುಳ್ಳ ಜನರನ್ನು ತನ್ನ ಧರ್ಮದಿಂದ ಮನಸ್ಸಿಗೆ ಸಂತೋಷವನ್ನುಂಟುಮಾಡಿದುದರಿಂದ ಸೂರ್ಯಪುತ್ರನಾದ ಯಮನಿಗೆ ಧರ್ಮರಾಜ ಎಂಬದಾಗಿ ಹೆಸರಾಯಿತು.

೬೯. ಅಯ್ಯಾ ಸಾಂಬನೇ! ಶುದ್ಧವಾದ ಶುಭಕರ್ಮದಿಂದ ಕೂಡಿದವನೂ, ವಿಶೇಷ ಕಾಂತಿಯುತನೂ ಆದ ಆ ಯಮನು ಪಿತೃದೇವತೆಗಳಿಗೆ ಅಧಿಪತಿಯಾಗಿರುವ ಸ್ಥಿತಿಯನ್ನೂ ಲೋಕಪಾಲಕತ್ವವನ್ನೂ ಪಡೆದನು.

೭೦. ಅಯ್ಯಾ ಮಹಾಮತಿಯೇ! ಲೋಕದಲ್ಲಿ ಮನುವೆಂಬ ಪ್ರಸಿದ್ಧನಾಗಿರುವವನ ವಂಶದಲ್ಲಿ ಶಂಖ, ಚಕ್ರ, ಗಧಾಧರನಾದ ವಿಷ್ಣುವು ಹುಟ್ಟಿದಾನೆ.

೭೧. ಯಮನ ಸಹೋದರಿಯೂ, ಯಶಸ್ವಿನಿಯಾದ ಕನ್ಯೆಯೂ, ಎನಿಸಿದ ಯಮಿಯು ಸರ್ವಲೋಕವನ್ನೂ ಪರಿಶುದ್ಧಮಾಡುವ ಯಮುನೆಯೆಂಬ ಶ್ರೇಷ್ಠ ನದಿಯಾದಳು.

ಮನುಃ ಪ್ರಜಾಪತಿಸ್ತ್ವೇಷ ಸಾವರ್ಣಿಃ ಸ ಮಹಾಯಶಾಃ ।
ಭವಿಷ್ಯಃ ಸಮನುಸ್ತ್ರಾತ ಅಷ್ಟಮಃ ಪರಿಕೀರ್ತಿತಃ ॥ ೭೨ ॥

ಮೇರುಪೃಷ್ಠೇ ತಪೋ ದಿವ್ಯಮದ್ಯಾಪಿ ಚರತೇ ಪ್ರಭುಃ ।
ಭ್ರಾತಾ ಶನೈಶ್ಚರಸ್ತಸ್ಯ ಗ್ರಹತ್ವಂ ಸ ತು ಲಬ್ಧವಾನ್ ॥ ೭೩ ॥

ತಪತೀ ನಾಮ ಯಾ ನಾಮ್ನಾ ತಯೋಃ ಕನ್ಯಾ ಗರೀಯಸೀ ।
ಸಾ ಬಭೂವ ಶುಭಾ ಪತ್ನೀ ರಾಜ್ಞಃ ಸಂವರಣಸ್ಯ ತು ॥ ೭೪ ॥

ತಾಪೀ ನಾಮ ನದೀ ಚೈವ ವಿಂಧ್ಯಮೂಲಾದ್ವಿನಿಸ್ಸೃತಾ ।
ನಿತ್ಯಂ ಪುಣ್ಯಜಲಾ ಸ್ನಾನೇ ಪಶ್ಚಿಮೋದಧಿಗಾಮಿನೀ ॥ ೭೫ ॥

ಸಾಮ್ಯಯಾ ಸಂಗತಾ ಸಾ ತು ಸರ್ವಪಾಪಭಯಾಪಹಾ ।
ವೈವಸ್ವತೀ ಯಥಾ ವೀರ ಸಂಗತಾ ಶಿವಕಾಂತಯಾ ॥ ೭೬ ॥

---

೭೨. ಅಯ್ಯಾ ಸಾಂಬನೇ! ಮಹಾಯಶಸ್ವಿಯೂ, ಪ್ರಜಾಪತಿಯೂ ಆದ ಈ ಸಾವರ್ಣಿಯು ಮುಂದೆ ಎಂದರೆ ಈ ಮನ್ವಂತರ ಕಳೆದ ಮೇಲೆ ಭವಿಷ್ಯತ್ಕಾಲದಲ್ಲಿ ಎಂಟನೆಯ ಮನುವು ಎನಿಸುತ್ತಾನೆ.

೭೩. ಆ ಸಾವರ್ಣಿ ಮನುವು ಈಗಲೂ ಮೇರುಪರ್ವತದ ತಪ್ಪಲಿನಲ್ಲಿ ದಿವ್ಯವಾದ ತಪಸ್ಸನ್ನು ಮಾಡುತ್ತಾ ಇದ್ದಾನೆ. ಅವನ ತಮ್ಮನಾದ ಶನೈಶ್ಚರನು ಗ್ರಹಗಳ ಪಂಕ್ತಿಯಲ್ಲಿ ಪ್ರವಿಷ್ಟನಾಗಿದಾನೆ.

೭೪. ಆ ಛಾಯಾ ಸೂರ್ಯರಿಗೆ ಜನಿಸಿದ ತಪತಿಯೆಂಬ ಹೆಸರುಳ್ಳ ಶ್ರೇಷ್ಠಳೂ ಪ್ರಸಿದ್ಧಳೂ ಆದ ಕನ್ಯೆಯು ಸಂವರಣನೆಂಬ ರಾಜನಿಗೆ ಶುಭಪತ್ನಿಯಾದಳು.

೭೫. ವಿಂಧ್ಯಪರ್ವತದ ತಪ್ಪಲಿನಲ್ಲಿ ಹುಟ್ಟಿ ತಾಪೀ ಎಂಬ ಹೆಸರಿನಿಂದ ಪಶ್ಚಿಮಸಮುದ್ರವನ್ನು ಸೇರುತ್ತಾ ಇದ್ದು ಅದರಲ್ಲಿ ಸ್ನಾನಮಾಡಿದರೆ ಪುಣ್ಯವನ್ನು ಕೊಡುವ ಜಲವುಳ್ಳ ಆ ತಪತೀನದಿಯು ಈ ಸೂರ್ಯಪುತ್ರಿಯಾಗಿದ್ದಾಳೆ.

೭೬. ಅಯ್ಯಾ ವೀರನೇ! ಯಮುನೆಯು ಗಂಗೆಯೊಡನೆ ಹೇಗೆ ಸೇರಿದೆಯೋ ಹಾಗೆ, ಈ ತಾಪೀನದಿಯು ಸಾಮ್ಯ ಎಂಬ ನದಿಯೊಡನೆ ಸೇರಿ ಇದರಲ್ಲಿ ಸ್ನಾನಮಾಡಿದವರ ಸಮಸ್ತ ಪಾಪಗಳನ್ನೂ ನಾಶಮಾಡತಕ್ಕದ್ದಾಗಿದೆ.

ಅಶ್ವಿನೌ ದೇವವೈದ್ಯತ್ವಂ ಲಬ್ಧವಂತೌ ಯದೂತ್ತಮ ।
ತಯೋಃ ಕರ್ಮೋಪಜೀವಂತಿ ಲೋಕೇsಸ್ಮಿನ್ ಭಿಷಜಸ್ಸದಾ ॥ ೭೭ ॥

ರೇವಂತೋ ನಾಮ ಯೋsರ್ಕಸ್ಯ ರೂಪೇಣಾರ್ಕಸಮಃ ಸುತಃ ।
ಅಶ್ವಾನಾಮಾಧಿಪತ್ಯೇ ತು ಯೋಜಿತಸ್ಸ ತು ಭಾನುನಾ ॥ ೭೮ ॥

ಕ್ಷೇಮೇಣ ಗಚ್ಛತೇsಧ್ವಾನಂ ಯಸ್ತಂ ಪೂಜಯತೇ ಪಥಿ ।
ಸುಖಪ್ರಸಾದ್ಯೋ ಮರ್ತ್ಯಾನಾಂ ಸದಾ ಯದುಕುಲೋದ್ವಹ ॥ ೭೯ ॥

ತ್ವಷ್ಟ್ರಾಪಿ ತೇಜಸಾ ತೇನ ಮಾರ್ತಂಡಸ್ಯೈವ ಚಾಜ್ಞಯಾ ।
ಭೋಜಾನುತ್ಪಾದಯಾಮಾಸ ಪೂಜಾರ್ಥ್ಯೈ ತಸ್ಯ ಸುವ್ರತ ॥ ೮೦ ॥

ಯ ಇದಂ ಜನ್ಮ ದೇವಸ್ಯ ಶೃಣುಯಾದ್ವಾಪಠೇತ ವಾ ।
ವಿವಸ್ವತೋ ಹಿ ಪುತ್ರಾಣಾಂ ಸರ್ವೇಷಾಮಮಿತೌಜಸಾಂ ॥ ೮೧ ॥

---

೭೭. ಅಯ್ಯಾ ಯದುವಂಶಶ್ರೇಷ್ಠನಾದ ಸಾಂಬನೇ! ಅಶ್ವಿನೀದೇವತೆಗಳು ದೇವತೆಗಳ ವೈದ್ಯಪದವಿಯನ್ನು ಹೊಂದಿದರು. ಲೋಕದಲ್ಲಿರುವ ವೈದ್ಯರುಗಳೆಲ್ಲ ಈ ಅಶ್ವಿನೀದೇವತೆಗಳಿಬ್ಬರು ಮಾಡುವ ಚಿಕಿತ್ಸೆಯನ್ನೇ ಸರ್ವದಾ ಅವಲಂಬಿಸಿ ಉಪಜೀವನಮಾಡಿಕೊಂಡಿದ್ದಾರೆ.

೭೮. ಅಸಮಾನವಾದ ರೂಪವುಳ್ಳ ರೇವಂತನೆಂಬ ತನ್ನ ಪುತ್ರನಿಗೆ ಸೂರ್ಯ ದೇವನು ಅಶ್ವಾಧಿಪತ್ಯವನ್ನು ಕೊಟ್ಟಿದ್ದಾನೆ.

೭೯. ಈ ರೇವಂತನನ್ನು ಆರಾಧಿಸಿ ಯಾವನು ಮಾರ್ಗ ಪ್ರಯಾಣಮಾಡು ವನೋ ಅವನು ಸುರಕ್ಷಿತವಾಗಿ ಪ್ರಯಾಣವನ್ನು ಸಾಗಿಸುವನು. ಅಯ್ಯಾ ಯದು ವಂಶಜನೇ! ಈ ರೇವಂತನನ್ನು ಮರ್ತ್ಯರು ಸುಖವಾಗಿ ಒಲಿಸಿಕೊಳ್ಳಬಹುದು.

೮೦. ಅಯ್ಯಾ ಸುವ್ರತನೇ! ವಿಶ್ವಕರ್ಮನು ಸೂರ್ಯನ ಆಜ್ಞೆಯಿಂದ ಅವನನ್ನು ಶಾತನಮಾಡಿವಾಗ ಉದುರಿದ ತೇಜಸ್ಸಿನಕಣಗಳ ದೆಸೆಯಿಂದ ಅವನ ಪೂಜೆಗಾಗಿ ಭೋಜಕರೆಂಬುವರನ್ನು ನಿರ್ಮಿಸಿದನು.

೮೧-೮೨. ಪರಾಕ್ರಮಿಗಳಾದ ಸೂರ್ಯನ ಎಲ್ಲ ಮಕ್ಕಳ ಉತ್ಪತ್ತಿಯ ವಿಚಾರವನ್ನು ಯಾವನು ಪಠಮಾಡುತ್ತಾನೆಯೋ ಯಾವನು ಕೇಳುತ್ತಾನೆಯೋ

**ಸರ್ವಪಾಪವಿನಿರ್ಮುಕ್ತೋ ಯಾತಿ ಸೂರ್ಯಸಲೋಕತಾಂ ।**
**ಇಹ ರಾಜಾ ಭವತ್ಯೇವ ಪುನರೇತ್ಯ ನ ಸಂಶಯಃ ॥ ೮೨ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮಿೀ ಕಲ್ಪೇ ಆದಿತ್ಯಮಾಹಾತ್ಮ್ಯ ವರ್ಣನಂ ನಾಮ ಏಕೋನಾಶೀತಿತಮೋಽಧ್ಯಾಯಃ.**



---

ಅವನು ಪಾಪಗಳಿಂದ ಬಿಡುಗಡೆಹೊಂದಿ ಸೂರ್ಯಸಾಲೋಕ್ಯವನ್ನು ಪಡೆಯುತ್ತಾನೆ. ಆ ಮೇಲೆ ಈ ಲೋಕದಲ್ಲಿ ಜನಿಸಿ ರಾಜನಾಗುತ್ತಾನೆ ಎಂಬುದರಲ್ಲಿ ಏನೂ ಸಂಶಯವಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಆದಿತ್ಯನ ಮಹಿಮೆಯ ವರ್ಣನೆಯೆಂಬ ಎಪ್ಪತ್ತೊಂಭತ್ತನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಅಶೀತಿತಮೋಽಧ್ಯಾಯಃ

---

॥ ಸುಮಂತುರುವಾಚ ॥

ಇತ್ಥಂ ಶ್ರುತ್ವಾ ಕಥಾಂ ದಿವ್ಯಾಂ ಹೇಲಿಮಾಹಾತ್ಮ್ಯಮಾಶ್ರಿತಾಂ ।
ಸಾಂಬಃ ಪಪ್ರಚ್ಛ ಭೂಯೋಽಪಿ ನಾರದಂ ಮುನಿಸತ್ತಮಂ ॥ ೧ ॥

॥ ಸಾಂಬ ಉವಾಚ ॥

ಸೂರ್ಯಪೂಜಾಫಲಂ ಯಚ್ಚ ಯಚ್ಚ ದಾನಫಲಂ ಮಹತ್ ।
ಪ್ರಣಿಪಾತೇ ಫಲಂ ಯಚ್ಚ ಗೀತವಾದ್ಯೇ ಚ ಯತ್ಫಲಂ ॥ ೨ ॥

---

## ಎಂಬತ್ತನೆಯ ಅಧ್ಯಾಯ

೧. ಸುಮಂತುಮುನಿವರ್ಯರು ಹೇಳುತ್ತಾರೆ—ಹೀಗೆ ಸೂರ್ಯಮಹಾತ್ಮೆಯನ್ನು ಕುರಿತ ಶ್ರೇಷ್ಠವಾದ ಕಥೆಯನ್ನು ಕೇಳಿ ಸಾಂಬನು ಮತ್ತೆ ಮುನಿಶ್ರೇಷ್ಠನಾದ ನಾರದನನ್ನು ಕುರಿತು ಕೇಳುತ್ತಾನೆ.

೨. ಸಾಂಬನು ಕೇಳುತ್ತಾನೆ—ಸೂರ್ಯನನ್ನು ಪೂಜಿಸಿದರೂ, ಅವನಿಗೆ ಪ್ರೀತಿಯಾಗಲೆಂದು ಉದ್ದೇಶಿಸಿ ದಾನಮಾಡಿದರೂ ಏನು ಫಲ ಬರುವುದು ? ಅವನಿಗೆ ನಮಸ್ಕಾರಮಾಡಿದರೂ ಅವನ ಸನ್ನಿಧಿಯಲ್ಲಿ ಸಂಗೀತಸೇವೆ, ವಾದ್ಯವಾದನ ಸೇವೆಗಳನ್ನು ಮಾಡಿದರೂ ಏನು ಫಲ ಲಭಿಸುವುದು ?

ಭಾಸ್ಕರಸ್ಯ ದ್ವಿಜಶ್ರೇಷ್ಠ ತನ್ಮೇ ಬ್ರೂಹಿ ಸಮಂತತಃ ।
ಯೇನ ಸಂಪೂಜಯಾಮ್ಯೇಷ ಭಾನುಂ ದೇವೈಸ್ಸದಾರ್ಚಿತಂ ॥ ೩ ॥

॥ ನಾರದ ಉವಾಚ ॥

ಇಮಮರ್ಥಂ ಪುರಾ ಪೃಷ್ಟೋ ಬ್ರಹ್ಮಾ ಲೋಕಪಿತಾಮಹಃ ।
ದಿಂಡಿನಾ ಯದುಶಾರ್ದೂಲ ಶೃಣುಷ್ವೇಕಾಗ್ರಮಾನಸಃ ॥ ೪ ॥

ಸುಖಾಸೀನಂ ತಥಾ ದೇವಂ ಸುರಜ್ಯೇಷ್ಠಂ ಪಿತಾಮಹಂ ।
ಪ್ರಣಮ್ಯ ಶಿರಸಾ ದಿಂಡಿರಿದಂ ವಚನಮಬ್ರವೀತ್ ॥ ೫ ॥

॥ ದಿಂಡಿರುವಾಚ ॥

ಸೂರ್ಯಪೂಜಾಫಲಂ ಬ್ರೂಹಿ ಬ್ರೂಹಿ ದಾನಫಲಂ ತಥಾ ।
ಪ್ರಣಾಮೇ ಯತ್ಫಲಂ ದೇವ ಯಚ್ಚೋಕ್ತಂ ತೌರ್ಯಕತ್ರಯೇ ॥ ೬ ॥

---

೩. ಅಯ್ಯಾ ದ್ವಿಜಶ್ರೇಷ್ಠನೇ! ನೀನು ನನಗೆ ಇದನ್ನು ವಿಸ್ತಾರವಾಗಿ ಹೇಳು ಹಾಗೆ ನೀನು ಹೇಳಿದ್ದನ್ನು ಕೇಳಿ ದೇವತೆಗಳಿಂದ ಸದಾ ಪೂಜಿತನಾದ ಸೂರ್ಯನನ್ನು ನಾನೂ ಪೂಜಿಸುವೆನು ಎಂದನು.

೪. ನಾರದನು ಹೇಳುತ್ತಾನೆ—ಅಯ್ಯಾ ಯದುವಂಶಶ್ರೇಷ್ಠನೇ! ಪೂರ್ವದಲ್ಲಿ ದಿಂಡಿಯು ಲೋಕಪಿತಾಮಹನಾದ ಬ್ರಹ್ಮನನ್ನು, ಈ ವಿಚಾರವನ್ನು ಕುರಿತು ಇದೇ ರೀತಿ ಪ್ರಶ್ನೆ ಮಾಡಿದ್ದನು. ನೀನು ಏಕಾಗ್ರಚಿತ್ತವುಳ್ಳವನಾಗಿ ನಾನು ಹೇಳುವುದನ್ನು ಕೇಳು.

೫. ಸುರಜ್ಯೇಷ್ಠನಾದ ಬ್ರಹ್ಮನು ಸುಖವಾಗಿ ಕುಳಿತಿರಲು ದಿಂಡಿಯು ತಲೆ ಬಾಗಿ ನಮಿಸಿ ಈ ರೀತಿಯಾಗಿ ಪ್ರಶ್ನಿಸಿದನು.

೬. ದಿಂಡಿಯು ಕೇಳುತ್ತಾನೆ—ಸೂರ್ಯನನ್ನು ಪೂಜೆಮಾಡುವುದರಿಂದಲೂ ಅವನನ್ನುದ್ದೇಶಿಸಿ ದಾನಮಾಡೋಣದರಿಂದಲೂ ಏನು ಫಲ ಬರುವುದೋ ಅದನ್ನು ಹೇಳು. ಅವನಿಗೆ ನಮಸ್ಕಾರಮಾಡುವುದರ ಫಲವೇನು? ಸೂರ್ಯಸಮ್ಮುಖದಲ್ಲಿ ನೃತ್ಯ, ಗೀತ, ವಾದ್ಯಗಳೆಂಬ ತೌರ್ಯತ್ರಯ ಸೇವೆಯಿಂದ ಏನು ಫಲವೆಂದು ಹೇಳಿದೆ?

**ಇತಿಹಾಸಪುರಾಣಾಭ್ಯಾಂ ಕಾರಿತೇ ಶ್ರವಣೇ ತಥಾ ।**
**ಪುರತೋ ದೇವದೇವಸ್ಯ ಯತ್ಫಲಂ ಸ್ಯಾತ್ತದುಚ್ಯತಾಂ ॥ ೭ ॥**

**ಮಾರ್ಜನೇ ಲೇಪನೇ ಯಚ್ಚ ದೇವದೇವಸ್ಯ ಮಂದಿರೇ ।**
**ಭಾಸ್ಕರಸ್ಯ ಕೃತೇ ಬ್ರೂಹಿ ಮಮ ಲೋಕಪಿತಾಮಹ ॥ ೮ ॥**

**॥ ಬ್ರಹ್ಮೋವಾಚ ॥**

**ಸ್ತುತಿ ಜಪ್ಯ ನಮಸ್ಕಾರೈಃ ಪೂಜಯಾ ಚ ನರೋ ರವೇಃ ।**
**ಉಪವಾಸೇನ ಷಷ್ಠ್ಯಾಂ ಚ ಸರ್ವಪಾಪೈಃ ಪ್ರಮುಚ್ಯತೇ ॥ ೯ ॥**

**ಪ್ರಣಿಧಾಯ ಶಿರೋ ಭೂಮೌ ನಮಸ್ಕಾರಪರೋ ರವೇಃ ।**
**ತತ್ಕ್ಷಣಾತ್ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೧೦ ॥**

---

೭. ಈ ಫಲವು ಇಂತಹದೆಂದು ಇತಿಹಾಸ ಪುರಾಣಗಳಿಂದ ಕೇಳುವ ಹಾಗೆ ಮಾಡಿದರೆ (ಎಂದರೆ ಪುರಾಣ ಹೇಳಿಸಿ ಕೇಳಿದರೆ) ಏನು ಫಲ? ಸೂರ್ಯದೇವನ ಸಮ್ಮುಖದಲ್ಲಿ ಪುರಾಣಗಳ ಮೂಲಕ ಪೂಜಾ ನಮಸ್ಕಾರಾದಿಗಳ ಫಲಶ್ರುತಿ ಕೇಳಿದರೆ ಏನು ಫಲ? ಅದನ್ನೆಲ್ಲಾ ಹೇಳು.

೮. ಎಲೈ ಲೋಕಪಿತಾಮಹನೇ! ಸೂರ್ಯದೇವಾಲಯದಲ್ಲಿ ಸೂರ್ಯನ ಪ್ರೀತ್ಯರ್ಥವಾಗಿ ಗುಡಿಸುವುದು, ಸಾರಿಸುವುದು ಮುಂತಾದ ಕಾರ್ಯಗಳನ್ನು ಮಾಡಿದರೆ ಫಲವೇನು? ಎಂಬುದನ್ನೂ ನನಗೆ ಹೇಳು ಎಂದನು.

೯. ಬ್ರಹ್ಮನು ಹೇಳುತ್ತಾನೆ—ಮನುಷ್ಯನು ಸೂರ್ಯನನ್ನು ಸ್ತೋತ್ರ ಮಾಡುವುದು, ಜಪಮಾಡುವುದು, ಸೂರ್ಯನಿಗೆ ನೈವೇದ್ಯ ಸಮರ್ಪಣೆಮಾಡುವುದು, ಸೂರ್ಯಪೂಜೆ ಮಾಡುವುದು, ಸೂರ್ಯನಮಸ್ಕಾರಮಾಡುವುದು ಈ ಕೆಲಸಗಳನ್ನು ಮಾಡುವುದರಿಂದ ಸರ್ವ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ.

೧೦. ಸೂರ್ಯನಮಸ್ಕಾರದಲ್ಲಿ ಆಸಕ್ತನಾದ ಮಾನವನು ತನ್ನ ತಲೆಯನ್ನು ನೆಲದ ಮೇಲೆ ಚಾಚಿ ನಮಸ್ಕರಿಸಿದರೆ ಆಕ್ಷಣವೇ ಎಲ್ಲ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆಂಬುದರಲ್ಲಿ ಸಂಶಯವಿಲ್ಲ

ಭಕ್ತಿಯುಕ್ತೋ ನರೋ ಯಸ್ತು ರವೇಃ ಕುರ್ಯಾತ್ಪ್ರದಕ್ಷಿಣಂ ।
ಪ್ರದಕ್ಷಿಣೀಕೃತಾ ತೇನ ಸಪ್ತದ್ವೀಪಾ ಭವೇನ್ಮಹೀ ॥ ೧೧ ॥

ಸೂರ್ಯಲೋಕಂ ವ್ರಜೇಚ್ಚಾಪಿ ಇಹ ರೋಗೈಶ್ಚ ಮುಚ್ಯತೇ ।
ಉಪಾನಹೌ ಪರಿತ್ಯಜ್ಯ ಅನ್ಯಥಾ ನರಕಂ ವ್ರಜೇತ್ ॥ ೧೨ ॥

ಸೋಪಾನತ್ಕೋ ನರೋ ಯಸ್ತು ಆರೋಹೇತ್ ಸೂರ್ಯಮಂದಿರಂ ।
ಸ ಯಾತಿ ನರಕಂ ಘೋರಮಸಿಪತ್ರವನಂ ವಿಭೋ ॥ ೧೩ ॥

ಸೂರ್ಯಂ ಮನಸಿ ಯಃ ಕೃತ್ವಾ ಕುರ್ಯಾದ್ವಪ್ರಪ್ರದಕ್ಷಿಣಾಂ ।
ಪ್ರದಕ್ಷಿಣೀಕೃತಾಸ್ತೇನ ಸರ್ವೇ ದೇವಾ ಭವಂತಿ ಹಿ ॥ ೧೪ ॥

ಪರಿತುಷ್ಟಾಶ್ಚ ತೇ ಸರ್ವೇ ಪ್ರಯಚ್ಛಂತಿ ಗತಿಂ ಶುಭಾಂ ।
ಸರ್ವೇ ದೇವಾ ಮಹಾಬಾಹೋ ಹ್ಯಭೀಷ್ಟಂ ತು ಪರಂತಪ ॥ ೧೫ ॥

---

೧೧-೧೨. ಭಕ್ತಿಯುಕ್ತನಾದ ಮನುಷ್ಯನು ಪಾದರಕ್ಷೆಯನ್ನು ಮೆಟ್ಟಿಕೊಳ್ಳದೆ ಸೂರ್ಯ ಪ್ರದಕ್ಷಿಣೆ ಮಾಡಿದರೆ ಅವನು ಸಪ್ತದ್ವೀಪಸಮೇತನಾದ ಭೂಮಂಡಲವನ್ನೆಲ್ಲಾ ಪ್ರದಕ್ಷಿಣೆಮಾಡಿದಂತಾಗುವುದು. ಅಲ್ಲದೆ ಅವನು ಸೂರ್ಯಲೋಕವನ್ನು ಸೇರುತ್ತಾನೆ. ಮತ್ತು ಈ ಲೋಕದಲ್ಲಿ ರೋಗಗಳಿಂದ ಬಿಡುಗಡೆಹೊಂದುತ್ತಾನೆ. ಪಾದರಕ್ಷೆ ಸಹಿತನಾಗಿ ಪ್ರದಕ್ಷಿಣೆಮಾಡುವವನಿಗೆ ಖಂಡಿತವಾಗಿ ನರಕಪ್ರಾಪ್ತಿಯೇ ಆಗುವುದು.

೧೩. ಯಾವ ಮನುಷ್ಯನು ಪಾದರಕ್ಷೆಯನ್ನು ಮೆಟ್ಟಿಕೊಂಡು ಸೂರ್ಯ ದೇವಾಲಯವನ್ನು ಪ್ರವೇಶಿಸುತ್ತಾನೋ ಅವನು ಭಯಂಕರವಾದ ಅಸಿಪತ್ರವನವೆಂಬ ನರಕವನ್ನು ಹೊಂದುತ್ತಾನೆ.

೧೪. ಯಾವನು ಸೂರ್ಯನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ಆಲಯದ ಪ್ರಾಕಾರದ ಸುತ್ತಲೂ ಪ್ರದಕ್ಷಿಣೆಮಾಡುತ್ತಾನೋ ಅವನು ಸಮಸ್ತ ದೇವತೆಗಳಿಗೂ ಪ್ರದಕ್ಷಿಣಮಾಡಿದ ಹಾಗಾಗುವುದು.

೧೫. ಈ ಪ್ರಕಾರವಾದ ಪ್ರದಕ್ಷಿಣೆಯಿಂದ ಅವರೆಲ್ಲರೂ ಸಂತುಷ್ಟರಾಗಿ ಒಳ್ಳೆಯ ಗತಿಯನ್ನು ಕೊಡುತ್ತಾರೆ. ಎಲೈ ಮಹಾಬಾಹುವೇ! ಎಲ್ಲ ದೇವತೆಗಳೂ ಇವನ ವಿಚಾರದಲ್ಲಿ ತುಷ್ಟರಾಗಿ ಇಷ್ಟಾರ್ಥವನ್ನು ಕೊಡುವರು.

ಏಕಾಹಾರೋ ನರೋ ಭೂತ್ವಾ ಷಷ್ಠ್ಯಾಂ ಯೋಽರ್ಚಯತೇ ರವಿಂ ।
ಸಪ್ತಮ್ಯಾಂ ವಾ ಮಹಾಬಾಹೋ ಸೂರ್ಯಲೋಕಂ ಸ ಗಚ್ಛತಿ ॥ ೧೬ ॥

ಅಹೋರಾತ್ರೋಪವಾಸೀ ಚ ಪೂಜಯೇದ್ಯಸ್ತು ಭಾಸ್ಕರಂ ।
ಸಪ್ತಮ್ಯಾಂ ವಾಥ ಷಷ್ಠ್ಯಾಂ ವಾ ಸ ಗಚ್ಛೇತ್ಪರಮಾಂ ಗತಿಂ ॥ ೧೭ ॥

ಕೃಷ್ಣಪಕ್ಷಸ್ಯ ಸಪ್ತಮ್ಯಾಂ ಸೋಪವಾಸೋ ಜಿತೇಂದ್ರಿಯಃ ।
ಸರ್ವರಕ್ತೋಪಹಾರೇಣ ಪೂಜಯೇದ್ಯಸ್ತು ಭಾಸ್ಕರಂ ॥ ೧೮ ॥

ಪಂಕಜೈಃ ಕರವೀರೈರ್ವಾ ಕುಂಕುಮೋದಕಚಂದನೈಃ ।
ಮೋದಕೈಶ್ಚ ಗಣಶ್ರೇಷ್ಠ ಸೂರ್ಯಲೋಕಂ ಸ ಗಚ್ಛತಿ ॥ ೧೯ ॥

ಶುಕ್ಲಪಕ್ಷಸ್ಯ ಸಪ್ತಮ್ಯಾಮುಪವಾಸರತಸ್ಸದಾ ।
ಸರ್ವ ಶುಕ್ಲೋಪಹಾರೇಣ ಪೂಜಯೇದ್ಯಸ್ತು ಭಾಸ್ಕರಂ ॥ ೨೦ ॥

---

೧೬. ಯಾರು ಷಷ್ಠಿಯ ದಿವಸ ಒಪ್ಪೊತ್ತು ಊಟಮಾಡಿ ಸಪ್ತಮಿಯದಿನ ಸೂರ್ಯಪೂಜೆ ಮಾಡುತ್ತಾರೋ ಅವರು ಸೂರ್ಯಲೋಕಕ್ಕೆ ಹೋಗುತ್ತಾರೆ.

೧೭. ಯಾವನು ಹಗಲೂ ರಾತ್ರಿಯೂ ಕೂಡ ಉಪವಾಸಮಾಡಿ ಸಪ್ತಮಿಯಲ್ಲಿ ಅಥವಾ ಷಷ್ಠಿಯಲ್ಲಿ ಸೂರ್ಯನನ್ನು ಪೂಜಿಸಿಯಾನೋ ಅವನು ಶ್ರೇಷ್ಠವಾದ ಸದ್ಗತಿಹೊಂದುತ್ತಾನೆ.

೧೮-೧೯. ಅಯ್ಯಾ ಗಣನಾಯಕನೇ ! ಕೃಷ್ಣಪಕ್ಷದ ಸಪ್ತಮಿಯಲ್ಲಿ ಉಪವಾಸ ಮಾಡಿ ಇಂದ್ರಿಯ ನಿಗ್ರಹಮಾಡಿಕೊಂಡು ಕೆಂಪುಬಣ್ಣದ ಸಮಸ್ತ ಪೂಜಾದ್ರವ್ಯಗಳಿಂದಲೂ ಎಂದರೆ ಮುಖ್ಯವಾಗಿ ಕೆಂಪು ಕಮಲ, ಕೆಂಪು ಕಣಿಗಲೇಹೂವು, ಕೇಸರಿಯನ್ನು ಅರೆದು ಕದಡಿದ ಜಲ, ಕೆಂಪುಗಂಧ ಇವುಗಳಿಂದಲೂ, ಮೋದಕವೆಂಬ ನಿವೇದನ ದ್ರವ್ಯಗಳಿಂದಲೂ ಯಾರು ಸೂರ್ಯನನ್ನು ಪೂಜಿಸುವರೋ ಅವರು ಸೂರ್ಯಲೋಕವನ್ನು ಸೇರುತ್ತಾರೆ.

೨೦-೨೧. ಮಾನವನು ಶುಕ್ಲಪಕ್ಷದ ಸಪ್ತಮಿಯಲ್ಲಿ ಉಪವಾಸಮಾಡಿ ಬಿಳಿಯ ವರ್ಣದ ಸಮಸ್ತ ವಿಧಗಳಾದ ಪೂಜೋಪಕರಣಗಳಿಂದ ಸೂರ್ಯನನ್ನು ಪೂಜಿಸಬೇಕು. ಪೂಜೆಗೆ ಜಾಜಿಯ ಹೂವು, ಮುದ್ಗರಪುಷ್ಪ, ಬಿಳಿಯ ಸ್ಫಟಿಲೆ, ಕದಂಬ

ಜಾತೀ ಮುದ್ಗರಕೈ ಶ್ಚೈವ ಶ್ವೇತೋತ್ಪಲಕದಂಬಕೈಃ ।
ಪಾಯಸೇನ ತಥಾ ದೇವಂ ಸವಜ್ರೇಣಾರ್ಚಯೇದ್ರವಿಂ ॥ ೨೧ ॥

ಸರ್ವಪಾಪವಿಶುದ್ಧಾತ್ಮಾ ವಿಧುಕಾಂತ್ಯಾ ನ ಸಂಶಯಃ ।
ಹಂಸಯುಕ್ತೇನ ಯಾನೇನ ಹಂಸಲೋಕಮವಾಪ್ನುತೇ ॥ ೨೨ ॥

॥ ದಿಂಡಿರುವಾಚ ॥

ಬ್ರೂಹಿ ಮೇ ವಿಸ್ತರಾದ್ದೇವ ಸಪ್ತಮೀಕಲ್ಪಮುತ್ತಮಂ ।
ಉಪೋಷ್ಯ ಸಪ್ತಮೀಂ ಯೇನ ಗಮಿಷ್ಯೇ ಶರಣಂ ರವೇಃ ॥ ೨೩ ॥

॥ ಬ್ರಹ್ಮೋವಾಚ ॥

ಸಾಧು ಪೃಷ್ಟೋಽಸ್ಮಿ ಭವತಾ ಸಪ್ತಮೀಕಲ್ಪಮುತ್ತಮಂ ।
ಯಥಾ ಸಹಸ್ರಕಿರಣಃ ಪುರಾ ಪೃಷ್ಟೋಽರುಣೇನ ವೈ ॥ ೨೪ ॥

---

ಪುಷ್ಪಗಳು ಇವುಗಳನ್ನು ಸಂಪಾದಿಸಿ ಪೂಜಿಸಿ (ವಜ್ರ=ಆಜ್ಯ "ವಜ್ರೋ ವಾ ಆಜ್ಯಂ" ಎಂದು ವೇದಪಾಠ) ಆಜ್ಯಸಹಿತವಾದ ಪಾಯಸದ ನೈವೇದ್ಯದಿಂದ ಸೂರ್ಯನನ್ನು ಪೂಜಿಸಬೇಕು.

೨೨. ಈ ಪ್ರಕಾರ ಸೂರ್ಯನನ್ನು ಪೂಜಿಸಿದವನು ಸಮಸ್ತ ಪಾಪಗಳಿಂದ ಬಿಡುಗಡೆಹೊಂದಿದವನಾಗಿ ಚಂದ್ರಸಮಾನವಾದ ತೇಜಸ್ಸುಳ್ಳವನಾಗಿ ಹಂಸಪಕ್ಷ್ಯಂಕಿತವಾದ ಯಾನ (ವಿಮಾನ) ದಲ್ಲಿ ಕುಳಿತು ಸೂರ್ಯಲೋಕವನ್ನು ಸೇರುತ್ತಾನೆ. ಇದರಲ್ಲಿ ಸಂಶಯವಿಲ್ಲ.

೨೩. ದಿಂಡಿಯು ಹೇಳುತ್ತಾನೆ—ಸ್ವಾಮಿ ! ನನಗೆ ಉತ್ತಮವಾದ ಸಪ್ತಮೀಕಲ್ಪವನ್ನು ವಿಸ್ತಾರವಾಗಿ ಹೇಳು. ನೀನು ಹೇಳಿದರೆ ಅದನ್ನು ಕೇಳಿ ನಾನೂ ಸಪ್ತಮಿಯಲ್ಲಿ ಉಪವಾಸ ವಿಧಿಯನ್ನು ನೆರವೇರಿಸಿ ಸೂರ್ಯಸಾಮೀಪ್ಯವನ್ನು ಹೊಂದುತ್ತೇನೆ (ಎಂದನು.)

೨೪. ಬ್ರಹ್ಮನು ಹೇಳುತ್ತಾನೆ—ನೀನು ನನ್ನನ್ನು ಸಪ್ತಮೀಕಲ್ಪ ವಿಚಾರವಾಗಿ ಕೇಳಿದ್ದು ಸಮಂಜಸವಾಗಿದೆ. ಪೂರ್ವದಲ್ಲಿ ಅರುಣನು ಸೂರ್ಯನನ್ನು ಕುರಿತು ಈ ವಿಚಾರವನ್ನೇ ಕೇಳಿದ್ದನು.

**ಕಥಿತಾಃ ಸಪ್ತಸಪ್ತಮ್ಯೋ ಭಾನುನಾ ಶ್ರೇಯಸೇ ನೃಣಾಂ।**
**ಅರುಣಸ್ಯ ಗಣಶ್ರೇಷ್ಠ ಪೃಚ್ಛತಃ ಕಾರಣಾಂತರೇ ॥ ೨೫ ॥**

**ಕಸ್ಯಚಿತ್ತ್ವಥ ಕಾಲಸ್ಯ ದೇವದೇವಂ ದಿವಾಕರಂ।**
**ಧ್ಯಾನಮಾಶ್ರಿತ್ಯ ತಿಷ್ಠಂತಮರುಣೋ ವಾಕ್ಯಮಬ್ರವೀತ್ ॥ ೨೬ ॥**

**ಕಿಮರ್ಥಂ ದೇವದೇವೇಶ ಧ್ಯಾನಮಾಶ್ರಿತ್ಯ ತಿಷ್ಠಸಿ।**
**ದಿನಂ ನ ಯಾತಿ ದೇವೇಶ ಕಾರಣಂ ಮಮ ಕಥ್ಯತಾಂ ॥ ೨೭ ॥**

**ಕುರು ಚಂಕ್ರಮಣಂ ದೇವ ಹ್ಯರ್ಚಮಾನೋ ದಿವಸ್ಪತೇ।**
**ಇತ್ಯೇವಂ ಭಗವಾನುಕ್ತಃ ಇದಂ ವಚನಮಬ್ರವೀತ್ ॥ ೨೮ ॥**

**ಶೃಣು ತ್ವಂ ದ್ವಿಜ ಶಾರ್ದೂಲ ಯದರ್ಥಂ ಧ್ಯಾನಮಾಶ್ರಿತಃ।**
**ಅರ್ವಾವಸುಃ ಪುತ್ರಹೀನಃ ಪ್ರಯತಃ ಪುತ್ರಕಾಮ್ಯಯಾ ॥ ೨೯ ॥**

---

೨೫. ಅಯ್ಯಾ ಗಣಶ್ರೇಷ್ಠನೇ! ಮನುಷ್ಯರ ಶ್ರೇಯಸ್ಸಿಗಾಗಿ ಸೂರ್ಯನು ಏಳುಬಗೆಯ ಸಪ್ತಮಿಗಳನ್ನು ಹೇಳಿದನು. ಕಾರಣಾಂತರದಿಂದ ಪ್ರಶ್ನೆಮಾಡಿದ ಅರುಣನಿಗೆ ಸೂರ್ಯನು ಈ ಏಳು ಸಪ್ತಮೀ ವಿಚಾರವನ್ನೂ ಹೇಳಿದನು.

೨೬. ಹಿಂದೆ ಒಂದಾನೊಂದು ಕಾಲದಲ್ಲಿ ದೇವದೇವನಾದ ಸೂರ್ಯನು ಧ್ಯಾನಾರೂಢನಾಗಿರುವುದನ್ನು ನೋಡಿ ಅರುಣನು ಸೂರ್ಯನನ್ನು ಕುರಿತು ಈ ವಾಕ್ಯವನ್ನು ಹೇಳಿದನು.

೨೭. "ಸ್ವಾಮಿ ದೇವದೇವನೇ! ನೀನು ಏತಕ್ಕೆ ಧ್ಯಾನಾರೂಢನಾಗಿ ಕುಳಿತಿದ್ದೀ. ನೀನು ಹೀಗೆ ಕುಳಿತರೆ ದಿನವೇ ಮುಂದೆ ಸಾಗುವುದಿಲ್ಲ. ಆದ್ದರಿಂದ ಇದರ ಕಾರಣವನ್ನು ಹೇಳು."

೨೮. "ಆಕಾಶಾಧಿಪತಿಯಾದ ಸೂರ್ಯದೇವನೇ! ಅರ್ಚನೆಯನ್ನು ಹೊಂದುತ್ತಾ ನೀನು ಸಂಚಾರಮಾಡು" ಎಂದನು. ಈ ಪ್ರಕಾರವಾದ ಮಾತನ್ನು ಕೇಳಿ ಸೂರ್ಯನು ಮುಂದೆ ನಿರೂಪಿಸುವಂತೆ ಹೇಳಿದನು.

೨೯–೩೧. ಅಯ್ಯಾ ಶ್ರೇಷ್ಠನಾದ ದಿಂಡಿಯೇ! ಅವನು ಏತಕ್ಕೆ ಧ್ಯಾನಾರೂಢನಾಗಿ ಕುಳಿತಿದ್ದನು ಎಂಬ ವಿಚಾರವನ್ನು ಅರಿತು ಅವನೇ ಹೇಳುವುದನ್ನು ಕೇಳು.

ಆರಾಧಯತಿ ಮಾಂ ನಿತ್ಯಂ ಗಂಧಪುಷ್ಪೋಪಹಾರಕೈಃ ।
ಪುತ್ರಕಾಮಃ ಖಗಶ್ರೇಷ್ಠ ನ ಚ ಜಾನಾತ್ಯಯಂ ಯಥಾ ॥ ೩೦ ॥

ಪುತ್ರದೋಹಂ ಭವೇ ಯೇನ ವಿಧಿನಾ ಪೂಜಿತಃ ಖಗ ।
ಶ್ರೂಯತಾಂ ಚ ವಿಧಿ ಸರ್ವೋ ಯೇನ ಪ್ರೀತೋ ಭವೇ ನೃಣಾಂ ॥ ೩೧ ॥

ಸಪ್ತಮೀಕಲ್ಪಸಂಜ್ಞೋ ವೈ ವಿಧೀನಾಮುತ್ತಮೋ ವಿಧಿಃ ।
ಯಸ್ತು ಮಾಂ ಪೂಜಯೇನ್ನಿತ್ಯಂ ತಸ್ಯ ಪುತ್ರಾನ್ ದದಾಮ್ಯಹಂ ॥ ೩೨ ॥

ಗೃಹ್ಣೀಷ್ವ ಸಪ್ತಮೀಕಲ್ಪಂ ಗತ್ವಾ ಬ್ರೂಹಿ ದ್ವಿಜೋತ್ತಮಂ ।
ಯೇನಾಹಂ ಬಹುಪುತ್ರತ್ವಂ ದದ್ಯಾಂ ತಸ್ಯ ತದಾ ಖಗ ॥ ೩೩ ॥

ಶ್ರುತ್ವಾ ಭಾನೋಃ ಕ್ಷಣಾದೇವ ಜಗಾಮ ಸ ಖಗೋತ್ತಮಃ ।
ಕಥಯಾಮಾಸ ತತ್ಸರ್ವಂ ಭಾನೋರ್ವಚನಮಾದಿತಃ ॥ ೩೪ ॥

---

" ಅಯ್ಯಾ ಖಗನಾದ ಅರುಣನೇ! ಪುತ್ರಹೀನನಾದ ಅರ್ವಾವಸುವೆಂಬ ಬ್ರಾಹ್ಮಣ ಶ್ರೇಷ್ಠನು ಪುತ್ರಾಪೇಕ್ಷೆಯಿಂದ ನಿಯಮನಿಷ್ಠನಾಗಿ ಪ್ರತಿದಿನವೂ ಗಂಧ ಪುಷ್ಪೋಪ ಹಾರಗಳಿಂದ ನನ್ನನ್ನು ಆರಾಧಿಸುತ್ತಾನೆ. ಅಯ್ಯಾ ಖಗೋತ್ತಮನೇ!" ಆದರೆ ಯಾವ ವಿಧಿಯಿಂದ ನಾನು ಪೂಜಿತನಾದರೆ ಪುತ್ರಪ್ರದನಾದೇನೋ ಆ ವಿಧಿಯನ್ನು ಇವನು ಅರಿಯನು. ಯಾವರೀತಿ ಆರಾಧಿಸಿದರೆ ಮಾನವರಿಗೆ ನಾನು ಒಲಿಯುವೆನೋ ಆ ವಿಧಾನವನ್ನೆಲ್ಲ ಕೇಳು.

೩೨. ಸಪ್ತಮೀ ಕಲ್ಪವೆಂಬ ವಿಧಿಯೇ ವಿಧಿಗಳಲ್ಲೆಲ್ಲಾ ಉತ್ತಮವಾದ ವಿಧಿ. ಈ ವಿಧಿಯಪ್ರಕಾರ ಯಾವನು ನನ್ನನ್ನು ನಿತ್ಯವೂ ಪೂಜಿಸುವನೋ ಅವನಿಗೆ ನಾನು ಪುತ್ರರನ್ನು ಕೊಡುತ್ತೇನೆ.

೩೩. ಅಯ್ಯಾ ಖಗಶ್ರೇಷ್ಠನಾದ ಅರುಣನೇ! ಈ ಸಪ್ತಮೀ ಕಲ್ಪವನ್ನು ನೀನು ಗ್ರಹಿಸಿಕೊಂಡು ಹೋಗಿ ಬ್ರಾಹ್ಮಣಶ್ರೇಷ್ಠನಾದ ಅರ್ವಾವಸುವಿಗೆ ಹೇಳು. ಅದನ್ನು ಆಚರಿಸುವುದರಿಂದ ನಾನು ಅವನಿಗೆ ಬಹು ಪುತ್ರತ್ವವನ್ನು ಕೊಟ್ಟೇ ಎಂದನು.

೩೪. ಇದನ್ನು ಸೂರ್ಯನಿಂದ ಕೇಳಿ ತಿಳಿದುಕೊಂಡು ಖಗೋತ್ತಮನಾದ ಅರುಣನು ತತ್ಕ್ಷಣದಲ್ಲಿಯೇ ಹೊರಟುಹೋದನು. ಅಲ್ಲಿ ಹೋಗಿ ಸೂರ್ಯನು ಹೇಳಿದ ಮಾತನ್ನೆಲ್ಲಾ ಅರ್ವಾವಸುವಿಗೆ ಹೇಳಿದನು.

ಬ್ರಾಹ್ಮಣಸ್ತು ಖಗಶ್ರೇಷ್ಠಾತ್ಸ ಚ ಶ್ರುತ್ವಾ ಯಥಾಕ್ರಮಂ ।
ಚಕಾರ ಸಪ್ತಮೀಕಲ್ಪಂ ಯಥಾಖ್ಯಾತಂ ಖಗೇನ ತು ॥ ೩೫ ॥

ಋದ್ಧಿಂ ವೃದ್ಧಿಂ ತಥಾರೋಗ್ಯಂ ಪ್ರಾಪ್ಯ ಪುತ್ರಾಂಶ್ಚ ಪುಷ್ಕಲಾ ।
ಗತೋಽಸೌ ಸೂರ್ಯಲೋಕಂ ಚ ತೇಜಸಾ ತತ್ಸಮೋಽಭವತ್ ॥ ೩೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇ ಪರ್ವಣಿ ಸಪ್ತಮೀಕಲ್ಪೇ
ಸೂರ್ಯಮಾಹಾತ್ಮ್ಯವರ್ಣನಂ ನಾಮ ಅಶೀತಿತಮೋಽಧ್ಯಾಯಃ.



---

೩೫. ಬ್ರಾಹ್ಮಣೋತ್ತಮನಾದ ಅರ್ವಾವಸುವು ಅರುಣನು ಹೇಳಿದ ಕ್ರಮವನ್ನು ಕೇಳಿ ಅದನ್ನು ಅನುಸರಿಸಿ ಸಪ್ತಮೀಕಲ್ಪವನ್ನು ಆಚರಿಸಿದನು.

೩೬. ಹೀಗೆ ಆಚರಿಸಿದುದರಿಂದ ಅತಿಶಯವೃದ್ಧಿಯನ್ನೂ ಆರೋಗ್ಯವನ್ನೂ ಹೊಂದಿ ಬಹು ಪುತ್ರರನ್ನೂ ಪಡೆದು ಸೂರ್ಯಲೋಕಕ್ಕೆ ಹೋಗಿ ತೇಜಸ್ಸಿನಲ್ಲಿ ಅವನಿಗೆ ಸಮಾನನಾದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ
ಸೂರ್ಯಮಹಾತ್ಮೆಯ ವರ್ಣನವೆಂಬ ಎಂಬತ್ತನೇ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಏಕಾಶೀತಿತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಜಯಾ ಚ ವಿಜಯಾ ಚೈವ ಜಯಂತೀ ಚಾಪರಾಜಿತಾ ।
ಮಹಾಜಯಾ ಚ ನನ್ದಾ ಚ ಭದ್ರಾಚಾನ್ಯಾ ಪ್ರಕೀರ್ತಿತಾ ॥ ೧ ॥

ಶುಕ್ಲಪಕ್ಷಸ್ಯ ಸಪ್ತಮ್ಯಾಂ ಸೂರ್ಯವಾರೋ ಭವೇದ್ಯದಿ ।
ಸಪ್ತಮೀ ವಿಜಯಾನಾಮ ತತ್ರ ದತ್ತಂ ಮಹಾಫಲಂ ॥ ೨ ॥

ಸ್ನಾನಂ ದಾನಂ ತಥಾ ಹೋಮ ಉಪವಾಸಸ್ತಥೈವ ಚ ।
ಸರ್ವಂ ವಿಜಯಸಪ್ತಮ್ಯಾಂ ಮಹಾಪಾತಕನಾಶನಂ ॥ ೩ ॥

---

## ಎಂಬತ್ತೊಂದನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಜಯ, ವಿಜಯ, ಜಯಂತ, ಅಪರಾಜಿತ, ಮಹಾಜಯ, ನಂದ, ಭದ್ರಾ ಇವು ಸಪ್ತಮೀ ಪ್ರಭೇದಗಳು.

೨. ಶುಕ್ಲಪಕ್ಷದ ಸಪ್ತಮಿಯದಿನ ಭಾನುವಾರ ಬಂದರೆ ಅದು ವಿಜಯಸಪ್ತಮಿ ಎನಿಸಿಕೊಳ್ಳುವುದು. ಆ ದಿನ ಮಾಡಿದ ದಾನವು ಮಹಾಫಲವನ್ನು ಕೊಡುವುದು.

೩. ವಿಜಯಸಪ್ತಮೀ ದಿವಸ ಮಾಡಿದ ಸ್ನಾನ, ದಾನ, ಹೋಮ, ಉಪವಾಸ ಇವೆಲ್ಲವೂ, ಅದನ್ನು ಮಾಡಿದವನಿಗೆ ಹಿಂದೆ ಒದಗಿದ್ದ ಮಹಾಪಾತಕಗಳೆಲ್ಲವನ್ನೂ ಧ್ವಂಸಮಾಡುತ್ತವೆ.

ಪಂಚಮ್ಯಾಮೇಕಭಕ್ತಂಸ್ಯಾತ್ ಷಷ್ಠ್ಯಾಂ ನಕ್ತಂ ಪ್ರಚಕ್ಷತೇ ।
ಉಪವಾಸಸ್ತು ಸಪ್ತಮ್ಯಾಮಷ್ಟಮ್ಯಾಂ ಪಾರಣಂ ಭವೇತ್ ॥ ೪ ॥

ಕೇಚಿದೇವಮುಶಂತ್ಯೇವ ನೇತಿ ಚಾನ್ಯೇ ಗಣಾಧಿಪ ।
ಅಭಿಪ್ರೇತಸ್ತು ಮೇ ಷಷ್ಠ್ಯಾಮುಪವಾಸೋ ಗಣೋತ್ತಮ ॥ ೫ ॥

ಚತುರ್ಥ್ಯಾಮೇಕಭಕ್ತಂ ತು ಪಂಚಮ್ಯಾಂ ನಕ್ತಮಾದಿಶೇತ್ ।
ಉಪವಾಸಸ್ತು ಷಷ್ಠ್ಯಾಂ ಸ್ಯಾತ್ಸಪ್ತಮ್ಯಾಂ ಪಾರಣಾ ಭವೇತ್ ॥ ೬ ॥

ಉಪವಾಸಪರಃ ಷಷ್ಠ್ಯಾಮಬ್ದೇಶಂ ಪೂಜಯೇದ್ಬುಧಃ ।
ಗಂಧ ಪುಷ್ಪೋಪಹಾರೈಶ್ಚ ಭಕ್ತ್ಯಾ ಶ್ರದ್ಧಾ ಸಮನ್ವಿತಃ ॥ ೭ ॥

ಪ್ರಕಲ್ಪ್ಯ ಪೂಜಾಂ ಭೂಮೌ ತು ಸಂವಿಶೇತ್ಪುರತೋ ರವೇಃ ।
ಜಪಮಾನಸ್ತು ಗಾಯತ್ರೀಂ ಸೌರಸೂಕ್ತಮಥಾಪಿ ವಾ ॥ ೮ ॥

---

೪. ಈ ಕಲ್ಪದಲ್ಲಿ ಪಂಚಮಿಯದಿನ ಹಗಲು ಒಪ್ಪೊತ್ತು ಊಟಮಾಡಬೇಕು. ಷಷ್ಠಿಯದಿನ ರಾತ್ರಿ ಮಾತ್ರ ಭೋಜನ. ಸಪ್ತಮಿಯದಿನ ನಿರಾಹಾರ. ಅಷ್ಟಮಿಯದಿವಸ ಪಾರಣೆ ಈ ರೀತಿ ಮಾಡಬೇಕು.

೫. ಗಣೋತ್ತಮನಾದ ದಿಂಡಿಯೇ! ಕೆಲವರು ಹೀಗೆ ಮಾಡಬೇಕೆಂದು ಅಭಿಪ್ರಾಯಪಡುತ್ತಾರೆ. ಕೆಲವರು ಹಾಗಲ್ಲ ಎನ್ನುತ್ತಾರೆ. ಅಯ್ಯಾ ಗಣಾಧಿಪನೇ! ಷಷ್ಠಿಯದಿನ ಉಪವಾಸ ಮಾಡುವುದೆಂಬುದೇ ನನಗೆ ಇಷ್ಟವಾದ ವಿಷಯ.

೬. ಈ ವ್ರತಾಚರಣದಲ್ಲಿ ಚತುರ್ಥಿಯಲ್ಲಿ ಹಗಲು ಒಪ್ಪೊತ್ತು ಊಟವೂ ಪಂಚಮಿಯಲ್ಲಿ ರಾತ್ರಿ ಒಂದುಹೊತ್ತು ಊಟವೂ ಷಷ್ಠಿಯಲ್ಲಿ ಉಪವಾಸವೂ ಸಪ್ತಮಿಯಲ್ಲಿ ಪಾರಣೆಯೂ ನಡೆಯತಕ್ಕದ್ದು.

೭. ತಿಳಿದವನು ಷಷ್ಠಿಯಲ್ಲಿ ಉಪವಾಸಪರನಾಗಿ ಭಕ್ತಿಯಿಂದ ಕೂಡಿ ಗಂಧ ಪುಷ್ಪ ಉಪಹಾರ ಇವುಗಳಿಂದ ಸಂವತ್ಸರಾಧಿಪನಾದ ಸೂರ್ಯನನ್ನು ಪೂಜಿಸಬೇಕು.

೮. ಹೀಗೆ ಪೂಜೆಯನ್ನು ಮಾಡಿ ದೇವರ ಸಮ್ಮುಖದಲ್ಲಿ ಗಾಯತ್ರಿಯನ್ನೋ, ಮಹಾಸೌರಸೂಕ್ತವನ್ನೋ ಜಪಿಸಬೇಕು.

ಅಕ್ಷರಂ ವಾ ಮಹಾಶ್ವೇತಾಂ ಷಡಕ್ಷರಮಥಾಪಿ ವಾ ।
ವಿಬುದ್ಧಸ್ತ್ವಥ ಸಪ್ತಮ್ಯಾಂ ಕೃತ್ವಾ ಸ್ನಾನಂ ಗಣಾಧಿಪ ॥ ೯ ॥

ಗ್ರಹೇಶಂ ಪೂಜಯಿತ್ವಾ ತು ಹೋಮಂ ಕೃತ್ವಾ ವಿಧಾನತಃ ।
ಬ್ರಾಹ್ಮಣಾನ್ ಭೋಜಯೇದ್ಭಕ್ತ್ಯಾ ಶಕ್ತ್ಯಾ ಚ ಗಣನಾಯಕ ॥ ೧೦ ॥

ಶಾಲ್ಯೋದನಮಪೂಪಾಂಶ್ಚ ಖಂಡವೇಷ್ಟಾಂಶ್ಚ ಶಕ್ತಿತಃ ।
ಸಘೃತಂ ಪಾಯಸಂ ದದ್ಯಾತ್ತಥಾ ವಿಪ್ರೇಷು ಶಕ್ತಿತಃ ॥ ೧೧ ॥

ದತ್ವಾ ಚ ದಕ್ಷಿಣಾಂ ಭಕ್ತ್ಯಾ ತತೋ ವಿಪ್ರಾನ್ ವಿಸರ್ಜಯೇತ್ ।
ಇತ್ಯೇಷಾ ಕಥಿತಾ ದೇವ ಪುಣ್ಯಾ ವಿಜಯಸಪ್ತಮೀ ॥ ೧೨ ॥

ಯಾಮುಪೋಷ್ಯ ನರೋ ಗಚ್ಛೇತ್ಪದಂ ವೈರೋಚನಂ ಪರಂ ।
ಕರವೀರಾಣಿ ರಕ್ತಾನಿ ಕುಂಕುಮಂ ಚ ವಿಲೇಪನಂ ॥ ೧೩ ॥

---

೯. ಅಥವಾ ಮಹಾಶ್ವೇತಾ ಎಂಬ ಹೆಸರಿನ ತ್ರಿಚಮಂತ್ರವನ್ನೋ, ಷಡಕ್ಷರ ಮಂತ್ರವನ್ನೋ, ಜಪಿಸುತ್ತ ನೆಲದ ಮೇಲೆ ಮಲಗಿಕೊಳ್ಳಬೇಕು.

೧೦. ಅಯ್ಯಾ ಗಣಾಧಿಪನೇ! ಸಪ್ತಮಿಯ ದಿನ ಬೆಳಿಗ್ಗೆ ಎದ್ದು ಸ್ನಾನಾದಿ ಗಳನ್ನು ನೆರವೇರಿಸಿ ವಿಧಿಪ್ರಕಾರ ಗ್ರಹಾಧಿಪನಾದ ಸೂರ್ಯನನ್ನು ಭಕ್ತಿಯಿಂದ ಪೂಜಿಸಿ ವಿಧಾನದಂತೆ ಹೋಮವನ್ನು ಮಾಡಬೇಕು.

೧೧. ಬಳಿಕ ಶಾಲ್ಯೋದನ, ಅಪೂಪ, ಕರಿಗಡಬು ಮುಂತಾದುವುಗಳಿಂದ ಶಕ್ತ್ಯನುಸಾರ ಬ್ರಾಹ್ಮಣರಿಗೆ ಭೋಜನಮಾಡಿಸಿ ತುಪ್ಪವನ್ನು ಅಭಿಘರಿಸಿದ ಪಾಯಸ ವನ್ನು ತನ್ನ ಶಕ್ತಿಯಿದ್ದಷ್ಟು ಮಂದಿ ಬ್ರಾಹ್ಮಣರಿಗೆ ದಾನಕೊಡಬೇಕು.

೧೨. ಭಕ್ತಿಯಿಂದ ದಕ್ಷಿಣೆಯನ್ನೂ ಕೊಟ್ಟು ಬ್ರಾಹ್ಮಣರನ್ನು ಕಳುಹಿಸಿ ಕೊಡಬೇಕು. ಹೀಗೆ ಪುಣ್ಯಕರವಾದ ವಿಜಯಸಪ್ತಮೀ ವ್ರತವಿಚಾರವನ್ನು ಹೇಳಿದುದಾಯಿತು.

೧೩. ಈ ಸಪ್ತಮಿಯಲ್ಲಿ ಉಪವಾಸಮಾಡಿದ ಮನುಷ್ಯನು ಶ್ರೇಷ್ಠವಾದ ಸೂರ್ಯಸಾಲೋಕ್ಯವನ್ನು ಹೊಂದುತ್ತಾನೆ. ಕೆಂಪು ಕಣಿಗಲೆಯ ಹೂ, ಕುಂಕುಮ ಕೇಸರಿ, ಕೆಂಪುಗಂಧ, ವಿಜಯಧೂಪ, ಇವೆಲ್ಲಾ ಸೂರ್ಯನಿಗೆ ಸಂತೋಷಕರ ಗಳಾದುವು.

**ವಿಜಯಂ ಧೂಪಮಸ್ಯಾಂ ತು ಭಾನೋಸ್ತುಷ್ಟಿಕರಾಣಿ ವೈ ।**
**ಏಷಾ ಪುಣ್ಯಾ ಪಾಪಹರಾ ಮಹಾಪಾತಕನಾಶಿನೀ ॥ ೧೪ ॥**

**ಅತ್ರ ದತ್ತಂ ಹುತಂ ಚಾಪಿ ಕ್ಷೀಯತೇ ನ ಗಣಾಧಿಪ ।**
**ಸ್ನಾನಂ ದಾನಂ ತಥಾ ಹೋಮಃ ಪಿತೃದೈವಾಭಿಪೂಜನಂ ॥ ೧೫ ॥**

**ಸರ್ವಂ ವಿಜಯಸಪ್ತಮ್ಯಾಂ ಮಹಾಪಾತಕನಾಶನಂ ।**
**ಆದಿತ್ಯವಾರೇಣ ಯುತಾ ಸ್ಮೃತಾ ವಿಜಯಸಪ್ತಮೀ ॥ ೧೬ ॥**

**ಇತ್ಯೇಷಾ ಕಥಿತಾ ವೀರ ಸರ್ವಕಾಮಪ್ರದಾಯಿನೀ ।**
**ಧನ್ಯಂ ಯಶಸ್ಯಮಾಯುಷ್ಯಂ ಕೀರ್ತಿತಂ ಶ್ರವಣಂ ತಥಾ ॥ ೧೭ ॥**

**ಮರಣಂ ತು ತಥಾಸ್ಯಾಂ ತು ಪುಣ್ಯದಂ ತ್ರಿಪುರಾಂತಕ ॥ ೧೮ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ ವಿಜಯಸಪ್ತಮೀ ವರ್ಣನಂ ನಾಮ ಏಕಾಶೀತಿತಮೋಽಧ್ಯಾಯಃ.**

---

೧೪. ಈ ಸಪ್ತಮಿಯು ಪುಣ್ಯಕರವೂ ಮಹಾಪಾತಕಗಳನ್ನು ನಾಶಮಾಡ ತಕ್ಕದ್ದೂ ಆಗಿದೆ.

೧೫. ಅಯ್ಯಾ ಗಣಾಧಿಪತಿಯೇ! ಈ ಸಪ್ತಮಿಯಲ್ಲಿ ದಾನಮಾಡಿದ ಫಲವೂ ಹೋಮಮಾಡಿದ ಫಲವೂ ಎಂದಿಗೂ ಕ್ಷೀಣವಾಗುವುದಿಲ್ಲ.

೧೬. ಸ್ನಾನ, ದಾನ, ಹೋಮ, ಪಿತೃದೇವತಾಪೂಜೆ ಇವನ್ನೆಲ್ಲಾ ಮಾಡಿದರೆ ಎಂತಹ ಮಹಾಪಾಪಗಳಿದ್ದರೂ ನಾಶವಾಗುತ್ತವೆ. ಸಪ್ತಮಿಯದಿನ ಆದಿತ್ಯವಾರವೂ ಸೇರಿದರೆ ಅದನ್ನು ವಿಜಯಸಪ್ತಮೀಯೆನ್ನುತ್ತಾರೆ.

೧೭. ಅಯ್ಯಾ ವೀರನೇ! ಸಮಸ್ತ ಇಷ್ಟಾರ್ಥಗಳನ್ನು ಕೊಡುವ ಸಪ್ತಮೀ ವಿಚಾರವನ್ನು ಹೀಗೆ ತಿಳಿಸಿದುದಾಯಿತು. ಈ ಸಪ್ತಮೀಕಲ್ಪದ ಚರಿತ್ರವನ್ನು ಶ್ರವಣಮಾಡುವುದು ಇವೂ ಸಹ ಧನ್ಯತೆಯನ್ನೂ, ಯಶಸ್ಸನ್ನೂ, ಆಯುಷ್ಯವನ್ನೂ ಕೊಡುವುದೆಂದು ಹೇಳಿದೆ.

೧೮. ಅಯ್ಯಾ ತ್ರಿಪುರಾರಿಯೇ! ಈ ವಿಜಯಸಪ್ತಮೀದಿನ ಮರಣ ಹೊಂದುವುದೂ ಕೂಡ ಪುಣ್ಯದಾಯಕವೆಂದು ಹೇಳಿದೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ವಿಜಯ ಸಪ್ತಮೀ ವರ್ಣನೆಯೆಂಬ ಎಂಬತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ದ್ವ್ಯಶೀತಿತಮೋಽಧ್ಯಾಯಃ

॥ ದಿಂಡಿರುವಾಚ ॥

ಯೇತ್ವಾದಿತ್ಯದಿನೇ ಬ್ರಹ್ಮನ್ ಪೂಜಯಂತಿ ದಿವಾಕರಂ ।
ಸ್ನಾನದಾನಾದಿಕಂ ತೇಷಾಂ ಕಿಂ ಫಲಂ ಸ್ಯಾದ್ಬ್ರವೀತು ಮೇ ॥ ೧ ॥

ಪುಣ್ಯಾ ಸಾ ಸಪ್ತಮೀ ಪ್ರೋಕ್ತಾ ಯುಕ್ತಾ ತೇನ ಪಿತಾಮಹ ।
ವಿಜಯೇತಿ ತಥಾ ನಾಮ ವರ್ಣ್ಯತಾಮಸ್ಯ ಪುಣ್ಯತಾ ॥ ೨ ॥

॥ ಬ್ರಹ್ಮೋವಾಚ ॥

ಯೇತ್ವಾದಿತ್ಯದಿನೇ ಬ್ರಹ್ಮನ್ ಶ್ರಾದ್ಧಂ ಕುರ್ವಂತಿ ಮಾನವಾಃ ।
ಸಪ್ತಜನ್ಮಸು ತೇ ಜಾತಾಃ ಸಂಭವಂತಿ ನಿರೋಗಿಣಃ ॥ ೩ ॥

---

### ಎಂಭತ್ತೆರಡನೆಯ ಅಧ್ಯಾಯ

೧. ದಿಂಡಿಯು ಹೇಳುತ್ತಾನೆ—ಅಯ್ಯಾ ಪಿತಾಮಹನೇ! ಯಾರು ಭಾನುವಾರದ ದಿನ ಸೂರ್ಯನನ್ನು ಪೂಜಿಸುವರೋ, ಮತ್ತು ಸ್ನಾನ ದಾನಾದಿಗಳನ್ನು ಯಾರು ಮಾಡುತ್ತಾರೋ ಅವರಿಗೆ ಏನು ಫಲ ಬರುವುದು ? ಅದನ್ನು ನನಗೆ ಹೇಳು.

೨. ಭಾನುವಾರದಿಂದ ಕೂಡಿದ ಸಪ್ತಮಿಯು ಪುಣ್ಯಕರವು ಎನ್ನುವರು. ಅದು ವಿಜಯಾ ಎಂಬ ಸಪ್ತಮಿಯೆಂದು ಹೇಳುತ್ತಾರೆ. ಇದರ ಪುಣ್ಯವನ್ನು ವರ್ಣಿಸು ಎಂದನು.

೩. ಬ್ರಹ್ಮನು ಹೇಳುತ್ತಾನೆ—ಅಯ್ಯಾ ಬ್ರಹ್ಮಜ್ಞನೇ! ಯಾವ ಮಾನವರು ಭಾನುವಾರದದಿನ ಆದಿತ್ಯಪ್ರೀತಿಗಾಗಿ ಶ್ರಾದ್ಧವನ್ನು ಮಾಡುತ್ತಾರೋ ಅವರು ಮುಂದಿನ ಏಳು ಜನ್ಮಗಳಲ್ಲಿ ರೋಗವಿಲ್ಲದವರಾಗುವರು.

**ನಕ್ತಂ ಕುರ್ವಂತಿ ಯೇ ತತ್ರ ಮಾನವಾಃ ಸ್ಥೈರ್ಯಮಾಶ್ರಿತಾಃ ।**
**ಜಪಮಾನಾಃ ಪರಂ ಜಾಪ್ಯಮಾದಿತ್ಯಹೃದಯಂ ಪರಂ ॥ ೪ ॥**

**ಆರೋಗ್ಯಮಿಹ ವೈ ಪ್ರಾಪ್ಯ ಸೂರ್ಯಲೋಕಂ ವ್ರಜಂತಿ ತೇ ।**
**ಉಪವಾಸಂ ಚ ಯೇ ಕುರ್ಯುರಾದಿತ್ಯಸ್ಯ ದಿನೇ ಸದಾ ॥ ೫ ॥**

**ಜಪಂತಿ ಚ ಮಹಾಶ್ವೇತಾಂ ತೇ ಲಭಂತೇ ಯಥೇಪ್ಸಿತಂ ।**
**ಅಹೋರಾತ್ರೇಣ ನಕ್ತೇನ ತ್ರಿರಾತ್ರನಿಯಮೇನ ವಾ ॥ ೬ ॥**

**ಜಪಮಾನೋ ಮಹಾಶ್ವೇತಾಂ ಈಪ್ಸಿತಂ ಲಭತೇ ಫಲಂ ।**
**ವಿಶೇಷತಃ ಸೂರ್ಯದಿನೇ ಜಪಮಾನೋ ಗಣಾಧಿಪ ॥ ೭ ॥**

**ಷಡಕ್ಷರಂ ತಥಾ ಶ್ವೇತಾಂ ಗಚ್ಛೇದ್ವೈರೋಚನಂ ಪದಂ ।**
**ದ್ವಾದಶೇಹ ಸ್ಮೃತಾ ದಾರಾ ಆದಿತ್ಯಸ್ಯ ಮಹಾತ್ಮನಃ ॥ ೮ ॥**

---

೪. ಸ್ಥೈರ್ಯವನ್ನು ಹೊಂದಿ ಭಾನುವಾರದ ದಿನ ಯಾರು ನಕ್ತವ್ರತವನ್ನು ಮಾಡುತ್ತಾರೋ ಮತ್ತು ಉತ್ತಮವಾದ ಮಂತ್ರವನ್ನು ಎಂದರೆ ಆದಿತ್ಯಹೃದಯವನ್ನು ಜಪಿಸುತ್ತಾರೋ ಅವರು ಸೂರ್ಯಲೋಕಕ್ಕೆ ಹೋಗುತ್ತಾರೆ.

೫. ಭಾನುವಾರದದಿನ ಯಾರು ಉಪವಾಸ ಮಾಡುತ್ತಾರೋ ಮತ್ತು ಸೂರ್ಯ ಗಾಯತ್ರೀ ಮಹಾಶ್ವೇತಾಮಂತ್ರವನ್ನು ಜಪಿಸುತ್ತಾರೋ ಅವರು ತಮಗೆ ಬೇಕಾದ ಇಷ್ಟಾರ್ಥವನ್ನು ಪಡೆಯುತ್ತಾರೆ.

೬. ಅಹೋರಾತ್ರವ್ರತ, ನಕ್ತವ್ರತ, ತ್ರಿರಾತ್ರನಿಯಮ ಇವುಗಳನ್ನು ನಡೆಸಿ ಮಹಾಶ್ವೇತಾ ಎಂಬ ತ್ರಿಚಮಂತ್ರವನ್ನೂ ಜಪಿಸಿದರೆ ಆತನು ತನ್ನ ಇಷ್ಟಾರ್ಥವನ್ನು ಹೊಂದುವನು.

೭. ಎಲೈ ಗಣಾಧಿಪತಿಯಾದ ದಿಂಡಿಯೇ! ಭಾನುವಾರದ ದಿವಸ ವಿಶೇಷವಾಗಿ ಈ ಜಪಮಾಡುತ್ತಾ ಇರಬೇಕು.

೮. ಷಡಕ್ಷರಮಂತ್ರವನ್ನು ಮತ್ತು ತ್ರಿಚಮಂತ್ರವನ್ನು ಜಪಿಸುವವನು ಸೂರ್ಯಲೋಕವನ್ನು ಸೇರುವನು ? ಮಹಾತ್ಮನಾದ ಸೂರ್ಯನಿಗೆ ಹನ್ನೆರಡು ಮಂದಿ ಹೆಂಡಿರು ಇರುವರು.

ನಂದೋ ಭದ್ರಸ್ತಥಾಸೌಮ್ಯಃ ಕಾಮದಃ ಪುತ್ರದಸ್ತಥಾ ।
ಜಯೋ ಜಯಂತೋ ವಿಜಯಃ ಆದಿತ್ಯಾಭಿಮುಖೋಽಸ್ಥಿತಃ ॥ ೯ ॥

ಹೃದಯೋ ರೋಗಹಾ ಚೈವ ಮಹಾಶ್ವೇತಪ್ರಿಯೋಽಪರಃ ।
ಶುಕ್ಲಪಕ್ಷಸ್ಯ ಷಷ್ಠ್ಯಾಂ ತು ಮಾಘೇ ಮಾಸಿ ಗಣಾಧಿಪ ॥ ೧೦ ॥

ಯಃ ಕುರ್ಯಾತ್ಸಭವೇದ್ಭೂಪಃ ಸರ್ವಪಾಪಭಯಾಪಹಃ ।
ಅತ್ರ ನಕ್ತಂ ಸ್ಮೃತಂ ಪುಣ್ಯಂ ಘೃತೇನ ಸ್ನಪನಂ ರವೇಃ ॥ ೧೧ ॥

ಅಗಸ್ತ್ಯಕುಸುಮಾನೀಹ ಭಾನೋಸ್ತುಷ್ಟಿಕರಾಣಿ ತು ।
ವಿಲೇಪನಂ ಸುಗಂಧಸ್ತು ಶ್ವೇತಚಂದನಮುತ್ತಮಂ ॥ ೧೨ ॥

ಧೂಪಸ್ತು ಗುಗ್ಗುಲಃ ಶ್ರೇಷ್ಠೋ ನೈವೇದ್ಯಂ ಪೂಪಮೇವ ಹಿ ।
ದತ್ವಾ ಪೂಪಂ ತು ವಿಪ್ರಸ್ಯ ತತೋ ಭುಂಜೀತ ವಾಗ್ಯತಃ ॥ ೧೩ ॥

---

೯. ನಂದ, ಭದ್ರ, ಸೌಮ್ಯ, ಕಾಮದ, ಪುತ್ರದ, ಜಯ, ಜಯಂತ, ವಿಜಯ, ಆದಿತ್ಯಾಭಿಮುಖ, ಹೃದಯ, ರೋಗಹಾ, ಮಹಾಶ್ವೇತಪ್ರಿಯ. ಇವರೇ ಆ ಹೆಂಡಿರು.

೧೦. ಅಯ್ಯಾ ಗಣಾಧಿಪನೇ! ಮಾಘ ಶುದ್ಧ ಷಷ್ಠಿಯಲ್ಲಿ ಯಾವನು ಸೂರ್ಯನ ಸೇವೆಯನ್ನು ಮಾಡುತ್ತಾನೋ, ಅವನು ಸರ್ವಪಾಪಗಳನ್ನೂ ಹೋಗಲಾಡಿಸಿಕೊಂಡು ರಾಜನಾಗುತ್ತಾನೆ.

೧೧. ಆ ದಿನ ಸೂರ್ಯನಿಗೆ ಆಜ್ಯಾಭಿಷೇಕಪೂರ್ವಕವಾದ ಪೂಜೆಯೂ, ನಕ್ತಭೋಜನವೂ ತುಂಬಾ ಶ್ರೇಷ್ಠವೆಂದು ಹೇಳುತ್ತಾನೆ.

೧೨. ಆ ದಿವಸದ ಪೂಜೆಗೆ ಉಪಯೋಗಿರುವುದರಲ್ಲಿ ಅಗಸೇ ಹೂಗಳು, ಸೂರ್ಯನಿಗೆ ಸಂತೋಷಕರಗಳು. ಬಿಳಿಯ ಬಣ್ಣದ ಸುವಾಸನೆಯ ಶ್ರೀ ಗಂಧವು ಉತ್ತಮವು.

೧೩. ಆ ದಿನ ಗುಗ್ಗುಲ ಧೂಪ ಸಮರ್ಪಣೆಯೂ, ಹಿಟ್ಟುಗಳಿಂದ ಮಾಡಿದ ಭಕ್ಷ್ಯಗಳ ನೈವೇದ್ಯವೂ ಶ್ರೇಷ್ಠ. ಸೂರ್ಯಪ್ರೀತರ್ಥ್ಯವಾಗಿ ಬ್ರಾಹ್ಮಣನಿಗೆ ಭಕ್ಷ್ಯಗಳನ್ನು ದಾನಮಾಡಿ ಆಮೇಲೆ ತಾನು ಮೌನವಾಗಿ ಭೋಜನಮಾಡಬೇಕು.

ನಕ್ಷತ್ರದರ್ಶನಾನ್ನಕ್ತಂ ಕೇಚಿದಿಚ್ಛಂತಿ ಮಾನದ ।
ಮುಹೂರ್ತೋನಂ ದಿನಂ ಕೇಚಿತ್ ಪ್ರವದಂತಿ ಮನೀಷಿಣಃ ॥ ೧೪ ॥

ನಕ್ಷತ್ರ ದರ್ಶನಾನ್ನಕ್ತಮಹಂ ಮನ್ಯೇ ಗಣಾಧಿಪ ।
ಪ್ರಸ್ಥಮಾತ್ರಂ ಭವೇತ್ಪೂಪಂ ಗೋಧೂಮಮಯಮುತ್ತಮಂ ॥ ೧೫ ॥

ಯವೋದ್ಭವಂ ವಾ ಕುರ್ವೀತ ಸಗುಡಂ ಸರ್ಪಿಷಾನ್ವಿತಂ ।
ಸ ಹಿರಣ್ಯಂ ಚ ದಾತವ್ಯಂ ಬ್ರಾಹ್ಮಣೇ ಸೇತಿಹಾಸಕೇ ॥ ೧೬ ॥

ಭೌಮೇ ದಿವ್ಯೇಽಥವಾ ದೇಯಂ ನ್ಯಸೇದ್ವಾ ಪುರತೋ ರವೇಃ ।
ದಾತವ್ಯೋ ಮಂತ್ರತಶ್ಚಾಯಂ ಮಂಡಕೋ ಗ್ರಾಹ್ಯ ಏವ ಹಿ ॥ ೧೭ ॥

ಭುಕ್ತ್ವಾದಿತ್ಯೇನ ವೈ ಭಕ್ತ್ಯಾ ಆದಿತ್ಯಂ ತು ನಮಸ್ಯ ಚ ।
ಆದಿತ್ಯತೇಜಸೋತ್ಪನ್ನಂ ರಾಜ್ಞೀ ಕರವಿನಿರ್ಮಿತಂ ॥
ಶ್ರೇಯಸೇ ಮಮ ವಿಪ್ರ ತ್ವಂ ಪ್ರತೀಚ್ಛಾಪೂಪಮುತ್ತಮಂ ॥ ೧೮ ॥

---

೧೪. ಅಯ್ಯಾ ಗಣಾಧಿಪನೇ! ನಕ್ಷತ್ರ ದರ್ಶನವಾದ ಮೇಲೆ ಭೋಜನಮಾಡುವುದನ್ನು ನಕ್ತವೆಂದು ಕೆಲವರು ಹೇಳುತ್ತಾರೆ. ಹಗಲು ಮುಗಿಯುವುದಕ್ಕೆ ಒಂದು ಮುಹೂರ್ತ ಮುಂಚೆ ಭುಂಜಿಸಿದರೆ ಅದು ನಕ್ತವೆಂದು ಕೆಲವರು ಹೇಳುವುದುಂಟು.

೧೫. ಎಲೈ ದಿಂಡಿಯೇ! ನಕ್ಷತ್ರ ದರ್ಶನವಾದನಂತರ ಮಾಡುವ ಭೋಜನವೇ ನಕ್ತಭೋಜನವೆಂದು ನನ್ನ ಅಭಿಪ್ರಾಯ. ಉತ್ತಮವಾದ ಗೋಧಿಯ ಹಿಟ್ಟನ್ನು ಸೇರಿನಷ್ಟು ಮಾತ್ರ ಉಪಯೋಗಿಸಿ ಮಾಡಿದ ಅಪೂಪವು ಶ್ರೇಷ್ಠವಾದುದು.

೧೬. ಅಕ್ಕಿಯ ಹಿಟ್ಟು, ಜವೆಗೋಧಿಯ ಹಿಟ್ಟು ಇವುಗಳಲ್ಲಿ ಯಾವುದಕ್ಕಾದರೂ ತುಪ್ಪ ಬೆಲ್ಲ ಇವುಗಳನ್ನು ಹಾಕಿ ಮಂಡಿಗೆಯನ್ನು ಮಾಡಬೇಕು. ಆ ಮಂಡಿಗೆಯನ್ನು ಪುರಾಣವಾಚಕನಾದ ಬ್ರಾಹ್ಮಣನಿಗಾಗಲಿ.

೧೭. ಅಥವಾ ದಿವ್ಯರು ಭೌಮರು ಎಂಬ ಬ್ರಾಹ್ಮಣರಿಗಾಗಲಿ ದಕ್ಷಿಣಾಸಮೇತವಾಗಿ ದಾನಕೊಡಬೇಕು. ಅಥವಾ ಸೂರ್ಯನ ಪ್ರತಿಮೆಯ ಸಮ್ಮುಖದಲ್ಲಿ ಇರಿಸಬೇಕು.

೧೮. ಸೂರ್ಯಾಸ್ತವಾಗುವುದಕ್ಕೆ ಮುಂಚೆ ಸೂರ್ಯಸಮ್ಮುಖದಲ್ಲಿ ಭೋಜನ ಮಾಡಿ ಸೂರ್ಯನಿಗೆ ನಮಸ್ಕಾರ ಮಾಡಬೇಕು. ಸೂರ್ಯ ಪ್ರೀತ್ಯರ್ಥವಾಗಿ ಮಂಡಕ

**ಕಾಮುದಂ ಸುಖದಂ ಧರ್ಮ್ಯಂ ಧನದಂ ಪುತ್ರದಂ ತಥಾ ।**
**ಸದಾಸ್ತು ತೇ ಪ್ರತೀಚ್ಛಾಮಿ ಮಂಡಕಂ ಭಾಸ್ಕರಪ್ರಿಯಂ ॥ ೧೯ ॥**

**ಏತೌ ಚೈವ ಮಹಾಮಂತ್ರೌ ದಾನಾದಾನೇ ರವಿಪ್ರಿಯೌ ।**
**ಅಪೂಪಸ್ಯ ಗಣಶ್ರೇಷ್ಠ ಶ್ರೇಯಸೇ ನಾತ್ರ ಸಂಶಯಃ ॥ ೨೦ ॥**

**ಏಷ ನಂದವಿಧಿಃ ಪ್ರೋಕ್ತೋ ನರಾಣಾಂ ಶ್ರೇಯಸೇ ವಿಭೋ ।**
**ಅನೇನ ವಿಧಿನಾ ಯಸ್ತು ನರಃ ಪೂಜಯತೇ ರವಿಂ ॥**
**ಸರ್ವಪಾಪವಿನಿರ್ಮುಕ್ತಃ ಸೂರ್ಯಲೋಕೇ ಮಹೀಯತೇ ॥ ೨೧ ॥**

---

(ಮಂಡಿಗೆ) ಗಳನ್ನು ದಾನ ಕೊಡುವಾಗ "ಆದಿತ್ಯತೇಜಸೋತ್ಪನ್ನಂ ರಾಜ್ಞೀಕರ ವಿನಿರ್ಮಿತಂ ಶ್ರೇಯಸೇ ಮಮ ವಿಪ್ರ ತ್ವಂ ಪ್ರತೀಚ್ಛಾಪೂಪಮುತ್ತಮಂ" ಎಂಬ ಈ ಮಂತ್ರಪೂರ್ವಕವಾಗಿ ದಾನ ಕೊಡಬೇಕು. (ಅದರ ಅರ್ಥವಿದು.) "ಎಲೈ ವಿಪ್ರೋತ್ತಮನೇ! ಸೂರ್ಯತೇಜಸ್ಸಿನಿಂದ ಉತ್ಪನ್ನವಾಗಿ ರಾಜ್ಞೀಹಸ್ತದಿಂದ ನಿರ್ಮಿತವಾದ ಈ ಮಂಡಿಗೆಯನ್ನು ನನಗೆ ಶ್ರೇಯಸ್ಸುಂಟಾಗುವುದಕ್ಕಾಗಿ ನೀನು ಪರಿಗ್ರಹಿಸು."

೧೯. ದಾನ ತೆಗೆದುಕೊಳ್ಳುವವನು "ಕಾಮುದಂ ಸುಖದಂ ಧರ್ಮ್ಯಂ ಧನದಂ ಪುತ್ರದಂ ತಥಾ ಸದಾಸ್ತು ತೇ ಪ್ರತೀಚ್ಛಾಮಿ ಮಂಡಕಂ ಭಾಸ್ಕರ ಪ್ರಿಯಂ" ಎಂಬ ಈ ಮಂತ್ರೋಚ್ಚಾರಣಪೂರ್ವಕವಾಗಿ ದಾನವನ್ನು ಸ್ವೀಕರಿಸಬೇಕು. ಅದರ ಅರ್ಥವು ಈ ಪ್ರಕಾರ. "ನನ್ನ ಇಷ್ಟಾರ್ಥಗಳನ್ನೂ, ಸುಖವನ್ನೂ ಕೊಡತಕ್ಕದ್ದೂ ಧರ್ಮಾತಿಕ್ರಮವಲ್ಲದುದೂ ಸೂರ್ಯನಿಗೆ ಪ್ರಿಯವೆನಿಸಿದುದೂ ಆದ ಈ ಮಂಡಕವನ್ನು ನಾನು ಸ್ವೀಕರಿಸುತ್ತೇನೆ ನಿನ್ನ ಇಷ್ಟಾರ್ಥ ಸಿದ್ಧಿಸಿ ಸುಖವುಂಟಾಗಲಿ."

೨೦. ಅಯ್ಯಾ ಗಣಶ್ರೇಷ್ಠನೇ! ತನ್ನ ಶ್ರೇಯಸ್ಸಿಗಾಗಿ ವ್ರತಿಯು ಮಂಡಕ ದಾನ ಕೊಡುವಾಗಲೂ, ವಿಪ್ರನು ಪ್ರತಿಗ್ರಹ ಮಾಡುವಾಗಲೂ, ಈಮಂತ್ರೋಚ್ಚಾರಣ ಮಾಡಿದ್ದಾದರೆ. ಸೂರ್ಯನಿಗೆ ಪ್ರಿತೀಕರಗಳಾಗುವುವು. ಈ ವಿಷಯದಲ್ಲಿ ಸಂಶಯವಿಲ್ಲ.

೨೧. ಅಯ್ಯಾ ವಿಭುವಾದ ದಿಂಡಿಯೇ! ಮನುಷ್ಯರ ಶ್ರೇಯಸ್ಸಿಗೆ ಸಾಧಕವಾದ ನಂದಸಪ್ತಮೀವಿಧಿಯನ್ನು ಈಗ ಹೇಳಲಾಯ್ತು ಯಾವ ಮನುಷ್ಯನು ಈ ವಿಧಿಯಿಂದ ಸೂರ್ಯನನ್ನು ಪೂಜಿಸುವವನೋ ಅವನು ಎಲ್ಲಾ ಪಾತಕಗಳಿಂದಲೂ ಮುಕ್ತನಾಗಿ ಸೂರ್ಯಲೋಕದಲ್ಲಿ ಪೂಜ್ಯನಾಗುತ್ತಾನೆ.

ನ ದಾರಿದ್ರ್ಯಂ ನ ರೋಗಶ್ಚ ಕುಲೇ ತಸ್ಯ ಮಹಾತ್ಮನಃ ।
ಯೋಽನೇನ ಪೂಜಯೇದ್ಭಾನುಂ ನ ಕ್ಷಯಃ ಸಂತತೇ ಸ್ತಥಾ ॥ ೨೨ ॥

ಬಹುರತ್ನಸಮಾಯುಕ್ತಃ ತೇಜಸಾ ರವಿಸನ್ನಿಭಃ ॥ ೨೩ ॥

ಪಠತಾಂ ಶೃಣ್ವತಾಂ ಚೇದಂ ವಿಧಾನಂ ತ್ರಿಪುರಾಂತಕ ।
ಕಂ ದದಾತ್ಯಚಲಂ ದಿವ್ಯಂ ಕಮಲಾಮಚಲಾಂ ತಥಾ ॥ ೨೪ ॥

ಇತೀ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಆದಿತ್ಯವಾರ ಕಲ್ಪೇ
ನಂದವಿಧಿವರ್ಣನಂ ನಾಮ ದ್ವ್ಯಶೀತಿತಮೋಽಧ್ಯಾಯಃ.



---

೨೨. ಮಹಾತ್ಮನಾದ ಅವನ ವಂಶದಲ್ಲಿ ಬಡತನವಾಗಲೀ, ರೋಗವಾಗಲೀ, ಇರುವುದಿಲ್ಲ. ಯಾವನು ಈ ವಿಧಾನದಿಂದ ಸೂರ್ಯನನ್ನು ಪೂಜಿಸುವನೋ ಅವನ ಸಂತತಿಗೆ ಯಾವಾಗಲೂ ವಿಚ್ಛಿತ್ತಿಯಿಲ್ಲ.

೨೩–೨೪. ಅವನು ಸೂರ್ಯಲೋಕವಾಸದ ಪುಣ್ಯ ಮುಗಿದಮೇಲೆ ಭೂಮಿಗೆ ಬಂದು ರಾಜನಾಗುತ್ತಾನೆ. ಹಾಗೆ ರಾಜನಾದಾಗ ಅನೇಕ ಶ್ರೇಷ್ಠ ವಸ್ತುಗಳಿಂದ ಕೂಡಿದವನಾಗಿ ತೇಜಸ್ಸಿನಿಂದ ಸೂರ್ಯನಿಗೆ ಸಮನೆನಿಸುತ್ತಾನೆ. ಅಯ್ಯಾ ತ್ರಿಪುರಾಂಂಕ ! (ಎಂದರೆ ಸ್ಥೂಲ, ಸೂಕ್ಷ್ಮ, ಕಾರಣ ಎಂಬ ಮೂರು ಶರೀರಗಳ ಅಂತಕ-ಜಯಿಸಿದವನು.) ಈ ವಿಧಾನವನ್ನು ಓದುವವರಿಗೂ, ಕೇಳುವವರಿಗೂ ಆದಿತ್ಯನು ನಿಶ್ಚಲವಾದ ಸುಖವನ್ನೂ ಸ್ಥಿರವಾದ ಮತ್ತು ಶ್ರೇಷ್ಠವಾದ ಸಂಪತ್ತನ್ನೂ ಕೊಡುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಆದಿತ್ಯವಾರ ಕಲ್ಪದಲ್ಲಿ
ನಂದವಿಧಿವರ್ಣನೆಯೆಂಬ ಎಂಬತ್ತೆರಡನೇ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ತ್ರ್ಯಶೀತಿತಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಮಾಸಿ ಭಾದ್ರಪದೇ ವೀರ ಶುಕ್ಲಪಕ್ಷೇ ತು ಯಾ ಭವೇತ್ ।
ಷಷ್ಠೀ ಗಣಕುಲಶ್ರೇಷ್ಠ ಸಾ ಭದ್ರಾ ಪರಿಕೀರ್ತಿತಾ ॥ ೧ ॥

ತತ್ರ ನಕ್ತಂ ತು ಯಃ ಕುರ್ಯಾದುಪವಾಸಮಥಾಪಿ ವಾ ।
ಹಂಸಯಾನಸಮಾರೂಢೋ ಯಾತಿ ಹಂಸಸಲೋಕತಾಂ ॥ ೨ ॥

ಮಾಲತೀ ಕುಸುಮಾನೀಹ ತಥಾ ಶ್ವೇತಂ ಚ ಚಂದನಂ ।
ವಿಜಯಂ ಚ ತಥಾ ಧೂಪಂ ನೈವೇದ್ಯಂ ಪಾಯಸಂ ಪರಂ ॥ ೩ ॥

---

## ಎಂಭತ್ತಮೂರನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ವೀರನಾದ ಕುರುಕುಲಶ್ರೇಷ್ಠನೇ! ಭಾದ್ರಪದ ಶುಕ್ಲಪಕ್ಷದಲ್ಲಿ ಬರುವ ಷಷ್ಠಿಯು ಭದ್ರಾಷಷ್ಠಿ ಎಂದು ಉಕ್ತವಾಗಿದೆ.

೨. ಆ ದಿವಸ ಉಪವಾಸವನ್ನೋ ಅಥವಾ ನಕ್ತ ಭೋಜನವನ್ನೋ ಮಾಡಿದರೆ ಅವನು ಹಂಸವಾಹನವನ್ನೇರಿ ಸೂರ್ಯಸಾಲೋಕ್ಯವನ್ನು ಹೊಂದುತ್ತಾನೆ.

೩. ಈ ಭದ್ರವಿಧಿಯ ಪೂಜೆಯಲ್ಲಿ ಜಾಜಿಯ ಹೂವು, ಬಿಳಿಯ ಗಂಧ (ಶ್ರೀ ಗಂಧ) ವಿಜಯಧೂಪ, ನೈವೇದ್ಯಕ್ಕೆ ಶ್ರೇಷ್ಠವಾದ ಪಾಯಸ, ಇವುಗಳನ್ನು ಉಪಯೋಗಿಸಬೇಕು.

**ಪೂಜಾಯಾಂ ಭಾಸ್ಕರಸ್ಯೇಹ ಕುರ್ಯಾತ್ತ್ರಿಪುರಸೂದನ ।**
**ಇತ್ಥಂ ಸಂಪೂಜ್ಯ ದೇವೇಶಂ ಮಧ್ಯಾಹ್ನೇ ಚ ದಿನಾಧಿಪಂ　　॥ ೪ ॥**

**ದತ್ವಾ ತು ದಕ್ಷಿಣಾಂ ಶಕ್ತ್ಯಾ ತತೋ ಭುಂಜೀತ ವಾಗ್ಯತಃ ।**
**ಪಾಯಸಂ ಗಣಶಾರ್ದೂಲ ಸಗುಡಂ ಸರ್ಪಿಷಾ ಸಹ　　॥ ೫ ॥**

**ಯ ಏವಂ ಪೂಜಯೇದ್ಭಕ್ತ್ಯಾ ಮಾನವಸ್ತಿಮಿರಾಪಹಂ ।**
**ಸರ್ವಾನ್ ಕಾಮಾನವಾಪ್ನೋತಿ ಪುತ್ರದಾರಧನಾದಿಕಾನ್　　॥ ೬ ॥**

**ವಿಮುಕ್ತಸ್ಸರ್ವಪಾಪೇಭ್ಯೋ ವ್ರಜೇದ್ಭಾನುಸಲೋಕತಾಂ ।**
**ಏಷ ಭದ್ರಾವಿಧಿಃ ಪ್ರೋಕ್ತೋ ಮಯಾ ಯಸ್ತೇ ಗಣಾಧಿಪ　　॥ ೭ ॥**

**ಶ್ರುತ್ವಾ ಕೃತ್ವಾ ಚ ಯಂ ಪಾಪಾನ್ಮುಚ್ಯತೇ ಮಾನವೋ ಭುವಿ　　॥ ೮ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಆದಿತ್ಯವಾರಕಲ್ಪೇ ಭದ್ರವಿಧಿವರ್ಣನಂ ನಾಮ ತ್ರ್ಯಶೀತಿತಮೋಽಧ್ಯಾಯಃ.**

---

೪–೫. ಅಯ್ಯಾ ತ್ರಿಪುರಾಂತಕಸ್ವರೂಪನಾದ ದಿಂಡಿಯೇ! ಈ ಪ್ರಕಾರ ಮಧ್ಯಾಹ್ನದಲ್ಲಿ ದೇವೇಶನಾದ ಸೂರ್ಯನನ್ನು ಪೂಜಿಸಿ ಶಕ್ತ್ಯನುಸಾರವಾಗಿ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟ ಮೇಲೆ ತುಪ್ಪಹಾಕಿದ ಬೆಲ್ಲದ ಪಾಯಸವನ್ನು ಮೌನದಿಂದ ಭೋಜನಮಾಡಬೇಕು.

೬. ಅಯ್ಯಾ ಗಣಶ್ರೇಷ್ಠನೇ! ಅಂಧಕಾರನಾಶಕನಾದ ಸೂರ್ಯನನ್ನು ಯಾವನು ಭಕ್ತಿಯಿಂದ ಈ ರೀತಿ ಪೂಜಿಸುವನೋ, ಅವನು ಹೆಂಡಿರು ಮಕ್ಕಳು ಮೊದಲಾದವರೊಡಗೂಡಿ ಸಮಸ್ತ ಇಷ್ಟಾರ್ಥಗಳನ್ನೂ ಪಡೆಯುತ್ತಾನೆ. ಅಲ್ಲದೆ ಸರ್ವ ಪಾಪಗಳಿಂದಲೂ ಬಿಡುಗಡೆಹೊಂದಿ ಸೂರ್ಯಸಾಲೋಕ್ಯವನ್ನು ಪಡೆಯುತ್ತಾನೆ.

೭–೮. ಅಯ್ಯಾ ಗಣಾಧಿಪನೇ! ಈ ಭದ್ರವಿಧಿಯನ್ನು ನಿನಗೆ ತಿಳಿಸಿಯಾಯಿತು. ಇದನ್ನು ಕೇಳಿ ಆದರಂತೆ ಆಚರಿಸುವ ಮನುಷ್ಯನು ಭೂಲೋಕದಲ್ಲಿ ಸಮಸ್ತ ಪಾಪಗಳಿಂದಲೂ ಬಿಡುಗಡೆಹೊಂದುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಆದಿತ್ಯವಾರಕಲ್ಪದಲ್ಲಿ ಭದ್ರವಿಧಿ ವರ್ಣನವೆಂಬ ಎಂಬತ್ತಮೂರನೇ ಅಧ್ಯಾಯ ಮುಗಿದುದು.

॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಚತುರಶೀತಿತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ನಕ್ಷತ್ರಂ ರೋಹಿಣೀ ವೀರ ಯದಾ ವಾರೇಽಸ್ಯ ವೈ ಭವೇತ್ ।
ಯಾತ್ಯಸೌ ಸೌಮ್ಯತಾಂ ವೀರ ಸ ಸೌಮ್ಯಃ ಪರಿಕೀರ್ತಿತಃ ॥ ೧ ॥

ಸ್ನಾನಂ ದಾನಂ ಜಪೋ ಹೋಮಃ ಪಿತೃದೇವಾದಿತರ್ಪಣಂ ।
ಅಕ್ಷಯಂ ಸ್ಯಾನ್ನ ಸಂದೇಹಸ್ತ್ವತ್ರ ವಾರೇ ಮಹಾತ್ಮನಃ ॥ ೨ ॥

ನಕ್ತಂ ಸಮಾಶ್ರಿತೋ ಯೋಽತ್ರ ಪೂಜಯೇದ್ಭಾಸ್ಕರಂ ನರಃ ।
ಯಾತಿ ಲೋಕಂ ಸ ದೇವಸ್ಯ ಭಾಸ್ಕರಸ್ಯ ನ ಸಂಶಯಃ ॥ ೩ ॥

---

## ಎಂಭತ್ತನಾಲ್ಕನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಅಯ್ಯಾ ವೀರನೇ! ಭಾನುವಾರದದಿನ ರೋಹಿಣೀನಕ್ಷತ್ರ ಸೇರಿದರೆ ಅದಕ್ಕೆ ಸೌಮ್ಯವಿಧಿಯೆಂದು ಹೆಸರು.

೨. ಇಂತಹ ಭಾನುವಾರದಲ್ಲಿ ಸ್ನಾನ, ದಾನ, ಜಪ, ಹೋಮ, ಪಿತೃ ದೇವತಾ ತರ್ಪಣ ಇವುಗಳನ್ನು ಮಾಡಿದರೆ ಫಲವು ಅಕ್ಷಯವಾಗುವುದರಲ್ಲಿ ಸಂದೇಹವಿಲ್ಲ.

೩. ಮಹಾತ್ಮನಾದ ಸೂರ್ಯದೇವನ ಈ ವಾರದಲ್ಲಿ ಯಾವನು ನಕ್ತ ವಿಧಿಯನ್ನು ಆಶ್ರಯಿಸಿ ಸೂರ್ಯನನ್ನು ಪೂಜಿಸುವನೋ ಅವನು ಸೂರ್ಯದೇವನ ಲೋಕವನ್ನೇ ಹೊಂದುವನು. ಇದರಲ್ಲಿ ಸಂಶಯವಿಲ್ಲ.

ರಕ್ತೋತ್ಪಲಾನಿ ವೈ ತತ್ರ ತಥಾ ರಕ್ತಂ ಚ ಚಂದನಂ ।
ಸುಗಂಧಶ್ಚಾಪಿ ಧೂಪಸ್ತು ನೈವೇದ್ಯಂ ಪಾಯಸಂ ತಥಾ ॥
ಬ್ರಾಹ್ಮಣಾಯ ಚ ದಾತವ್ಯಂ ಭೋಕ್ತವ್ಯಂ ಚಾತ್ಮನಾ ತಥಾ ॥ ೪ ॥

ಯ ಏವಂ ಪೂಜಯೇತ್ಸೌಮ್ಯ ಚಿತ್ರಭಾನುಂ ಗವಾಂ ಪತಿಂ ।
ಸ ವಿಮುಕ್ತಸ್ತು ಪಾಪೇಭ್ಯಸ್ತ್ವಾಷ್ಟ್ರೀಂ ಕಾಂತಿಮವಾಪ್ನುಯಾತ್ ॥ ೫ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಆದಿತ್ಯವಾರಕಲ್ಪೇ
ಸೌಮ್ಯವಿಧಿ ವರ್ಣನಂ ನಾಮ ಚತುರಶೀತಿತಮೋಽಧ್ಯಾಯಃ.



---

೪. ಈ ಕಲ್ಪದಲ್ಲಿ ಕೆಂದಾವರೆ ಹೂಗಳು, ರಕ್ತಚಂದನ, ಗಂಧ, ಸುವಾಸನೆಯಾದ ಧೂಪ, ಪಾಯಸದ ನೈವೇದ್ಯ ಇವುಗಳನ್ನು ಸಮರ್ಪಿಸಿ ವಿಧಿಯ ಪ್ರಕಾರ ಪೂಜಿಸಿ ಬ್ರಾಹ್ಮಣರಿಗೆ ದಾನಮಾಡಿ ತಾನೂ ಭೋಜನಮಾಡಬೇಕು.

೫. ಅಯ್ಯಾ ಸೌಮ್ಯನೇ! ಕಿರಣಾಧಿಪತಿಯೂ ಚಿತ್ರಭಾನುವೂ ಆದ ಸೂರ್ಯನನ್ನು ಯಾವನು ಈ ಸೌಮ್ಯವಿಧಿಯಿಂದ ಪೂಜಿಸುವನೋ ಅವನು ಸಮಸ್ತ ಪಾಪಗಳಿಂದ ಬಿಡುಗಡೆಹೊಂದಿ ತ್ವಷ್ಟೃವಿನ (ಸೂರ್ಯನ) ತೇಜಸ್ಸನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಆದಿತ್ಯವಾರಕಲ್ಪದಲ್ಲಿ
ಸೌಮ್ಯವಿಧಿವರ್ಣನವೆಂಬ ಎಂಬತ್ತನಾಲ್ಕನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಪಂಚಾಶೀತಿತಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಪ್ರಾಪ್ತೇ ಮಾರ್ಗಶಿರೇ ಮಾಸಿ ಶುಕ್ಲ ಷಷ್ಠ್ಯಾಂ ತು ಯೋ ಭವೇತ್ ।
ಸ ಜ್ಞೇಯಃ ಕಾಮದೋ ವಾರಃ ಸದೇಷ್ಟೋ ಭಾಸ್ಕರಸ್ಯ ತು ॥ ೧ ॥

ತತ್ರ ಯಃ ಪೂಜಯೇದ್ಭಾನುಂ ಭಕ್ತ್ಯಾ ಶ್ರದ್ಧಾಸಮನ್ವಿತಃ ।
ವಿಮುಕ್ತಸ್ಸರ್ವಪಾಪೈಸ್ತು ಪ್ರಾಪ್ನುತೇ ನಂದನಾಧಿಪಂ ॥ ೨ ॥

ರಕ್ತಚಂದನಮಿಶ್ರಾಣಿ ಕರವೀರಾಣಿ ಸುವ್ರತ ।
ಧೂಪಂ ಘೃತಾನ್ವಿತಂ ವೀರ ಭಾಸ್ಕರಾಯ ಸಮರ್ಪಯೇತ್ ॥ ೩ ॥

---

## ಎಂಭತ್ತೈದನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಮಾರ್ಗಶಿರಮಾಸದ ಶುದ್ಧ ಷಷ್ಠಿಯು ಭಾನುವಾರವಾದರೆ ಆ ವಾರವು ಕಾಮದಾಷಷ್ಠಿ ಎನಿಸಿಕೊಳ್ಳುವುದು. ಅದು ಯಾವಾಗಲೂ ಸೂರ್ಯನಿಗೆ ಪ್ರಿಯವಾದುದು ಎಂದು ತಿಳಿಯಬೇಕು.

೨. ಕಾಮಪ್ರದವಾದ ಆ ವಾರದಲ್ಲಿ ಯಾವನು ಸೂರ್ಯನನ್ನು ಆರಾಧಿಸುವನೋ ಅವನು ಸರ್ವ ಪಾಪಗಳಿಂದ ಮುಕ್ತನಾಗಿ ನಂದನವನಾಧಿಪನಾದ ದೇವೇಂದ್ರನ ಸಮೀಪವನ್ನು ಸೇರುತ್ತಾನೆ.

೩. ಅಯ್ಯಾ ಸುವ್ರತನಾದ ವೀರನೇ! ಕಾಮದಾಷಷ್ಠಿಯಲ್ಲಿ ಕೆಂಪು ಕಣಿಗಲೆ ಹೂ, ರಕ್ತಚಂದನ, ಘೃತಯುಕ್ತವಾದ ಧೂಪ ಇವುಗಳನ್ನು ಸೂರ್ಯನಿಗೆ ಸಮರ್ಪಿಸಬೇಕು.

ನೈವೇದ್ಯಂ ಚಾಪಿ ಕೃಸರಂ ಸುಗಂಧಂ ತೀಕ್ಷ್ಣಮೇವ ಚ ।
ನಕ್ತಂ ವಾಪ್ಯುಪವಾಸಂ ವಾ ಕುರ್ಯಾತ್ತ್ರಿಪುರಸೂದನ ॥ ೪ ॥

ಇತ್ಥಂ ಪ್ರಪೂಜಿತೋ ಹ್ಯತ್ರ ಭಾಸ್ಕರೋ ಲೋಕಭಾಸ್ಕರಃ ।
ಕಾಮಾರ್ನ್ ದದಾತಿ ಸರ್ವಾರ್ನ್ ವೈ ಅತೋಽಯಂ ಕಾಮದಃ ಸ್ಮೃತಃ ॥ ೫ ॥

ಸಪುತ್ರಂ ಪುತ್ರಕಾಮಸ್ಯ ಧನಕಾಮಸ್ಯ ವಾ ಧನಂ ।
ವಿದ್ಯಾರ್ಥಿನೇ ಶುಭಾಂ ವಿದ್ಯಾಮಾರೋಗ್ಯಂ ರೋಗಿಣೇ ವಿಭೋ ॥ ೬ ॥

ಅನ್ಯಾಂಶ್ಚ ವಿವಿಧಾನ್ ಕಾಮಾನ್ಮಂತ್ರೈಃ ಸಂಪೂಜಿತೋ ರವಿಃ ।
ದದಾತಿ ಗಣಶಾರ್ದೂಲ ಅತೋಽಯಂ ಕಾಮದಃ ಸ್ಮೃತಃ ॥ ೭ ॥

---

೪. ಎಲೈ ತ್ರಿಪುರಾಂತಕಸ್ವರೂಪನಾದ ದಿಂಡಿಯೇ! ತೀಕ್ಷ್ಣವೂ ಸುವಾಸನಾ ಯುಕ್ತವೂ ಆದ ಕೃಸರ (ಚಿಗಳಿಯ) ವನ್ನು ನೈವೇದ್ಯ ಮಾಡಿ ಆದಿನ ನಕ್ತ ಭೋಜನವನ್ನೋ, ಉಪವಾಸವನ್ನೋ ಮಾಡಬೇಕು.

೫. ಹೀಗೆ ಆರಾಧಿಸಿದರೆ ಲೋಕಪ್ರಕಾಶಕನಾದ ಸೂರ್ಯನು ಸರ್ವಕಾಮ ಗಳನ್ನೂ ಪೂರ್ಣಮಾಡುತ್ತಾನೆ. ಆದುದರಿಂದಲೇ ಈ ವಾರಕ್ಕೆ ಕಾಮಪ್ರದವಾರ ವೆಂದು ಹೆಸರು.

೬-೭. ಅಯ್ಯಾ ಗಣಗಳ ಪ್ರಭುವೇ! ಕಾಮಪ್ರದವಾದ ಈ ವಾರವ್ರತದಲ್ಲಿ ಮಂತ್ರಪೂರ್ವಕನಾಗಿ ಪೂಜಿತನಾದ ರವಿಯು ಪುತ್ರ ಬೇಕಾದವನಿಗೆ ಪುತ್ರನನ್ನೂ, ಧನಾಪೇಕ್ಷಿಗೆ ಧನವನ್ನೂ, ವಿದ್ಯಾರ್ಥಿಯಾದವನಿಗೆ ಸದ್ವಿದ್ಯೆಯನ್ನೂ, ರೋಗಿಗೆ ಆರೋಗ್ಯವನ್ನೂ, ಇನ್ನೂ ವಿವಿಧವಾದ ಆಸೆಯುಳ್ಳವರಿಗೆ ಅವೆಲ್ಲವನ್ನೂ ಕೊಡುತ್ತಾನೆ. ಅಯ್ಯಾ ಗಣಶ್ರೇಷ್ಠನೇ! ಆದುದರಿಂದಲೇ ಈ ವಿಧಿಗೆ ಕಾಮಪ್ರದವಿಧಿಯೆಂದು ಹೆಸರು.

**ದದ್ಯಾದ್ಯೋ ಮಂಡಕಂ ಚಾತ್ರ ಗೋಪತೇ ಗೋತ್ರಭೂಷಣಃ ।**
**ಗೋತ್ರಾರೇಸ್ತೇಜಸಾ ತುಲ್ಯೋ ಗೋಪತೇರ್ಗೋಪುರಂ ವ್ರಜೇತ್ ॥ ೮ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಆದಿತ್ಯವಾರಕಲ್ಪೇ ಕಾಮುದವಿಧಿ ವರ್ಣನಂ ನಾಮ ಪಂಚಾಶೀತಿತಮೋಽಧ್ಯಾಯಃ.**



---

೮. ವಂಶಭೂಷಣನಾದ ಯಾವ ಮನುಷ್ಯನು ಕಿರಣಾಧಿಪನಾದ ಸೂರ್ಯನ ಪ್ರೀತ್ಯರ್ಥವಾಗಿ ಮಂಡಿಗೆಯನ್ನು ದಾನಕೊಡುವನೋ ಅವನು ತೇಜಸ್ಸಿನಲ್ಲಿ ದೇವೇಂದ್ರನಿಗೆ ಸಮಾನನಾಗಿ ಸೂರ್ಯಲೋಕಕ್ಕೆ ಹೋಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಬ್ರಾಹ್ಮಪರ್ವದ ಆದಿತ್ಯವಾರ ಕಲ್ಪದಲ್ಲಿ ಕಾಮುದಾ ವಿಧಿಯ ವರ್ಣನವೆಂಬ ಎಂಬತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಷಡಶೀತಿತಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

**ಪಂಚತಾರಂ ಭವೇದ್ಯತ್ರ ನಕ್ಷತ್ರಂ ತೇ ವೃಷಧ್ವಜ ।**
**ವಾರೇ ತು ದೇವದೇವಸ್ಯ ಸ ವಾರಃ ಪುತ್ರದಃ ಸ್ಮೃತಃ ॥ ೧ ॥**

**ಉಪವಾಸೋ ಭವೇತ್ತತ್ರ ಶ್ರಾದ್ಧಂ ಕಾರ್ಯಂ ತಥಾ ಭವೇತ್ ।**
**ಪ್ರಾಶನಂ ಚಾಪಿ ಪಿಂಡಸ್ಯ ಮಧ್ಯಮಸ್ಯ ಪ್ರಕೀರ್ತಿತಂ ॥ ೨ ॥**

**ಸೋಪವಾಸೋ ನರೊ ಭಕ್ತ್ಯಾ ಪೂಜಯೇದತ್ರ ಗೋಪತಿಂ ।**
**ಧೂಪಮಾಲ್ಯೋಪಹಾರೈಸ್ತು ದಿವ್ಯ ಗಂಧಸಮನ್ವಿತೈಃ ॥ ೩ ॥**

---

## ಎಂಭತ್ತಾರನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಅಯ್ಯಾ ವೃಷಧ್ವಜನಾದ ದಿಂಡಿಯೇ! ದೇವದೇವನಾದ ಸೂರ್ಯನ ವಾರದಲ್ಲಿ ಪಂಚತಾರ? (ಶತಭಿಷ) ನಕ್ಷತ್ರ ಬಂದರೆ ಆ ಭಾನುವಾರವು ಪುತ್ರಪ್ರದವಾರವೆಂದು ಉಕ್ತವಾಗಿದೆ.

೨. ಆ ವಾರದಲ್ಲಿ ಉಪವಾಸಮಾಡಬೇಕು. ಮತ್ತು ಶ್ರಾದ್ಧವನ್ನು ಮಾಡಬೇಕು. ಈ ಶ್ರಾದ್ಧದಲ್ಲಿ ಪ್ರದಾನ ಮಾಡಿದ ಪಿಂಡಗಳಲ್ಲಿ ಮಧ್ಯಮ ಪಿಂಡವನ್ನು ಪ್ರಾಶನಮಾಡಬೇಕು ಎಂದು ಉಕ್ತವಾಗಿದೆ.

೩. ವ್ರತಾಚರಣೆ ಮಾಡುವವನು ಆವಾರದದಿನ ಉಪವಾಸವಿದ್ದು ದಿವ್ಯಗಂಧಯುಕ್ತಗಳಾದ ಧೂಪ, ಮಾಲ್ಯ. ಉಪಹಾರಗಳಿಂದ ಕಿರಣಾಧಿಪನಾದ ಸೂರ್ಯನನ್ನು ಪೂಜಿಸಬೇಕು.

ಸಂಪೂಜ್ಯೈವಂ ವಿವಸ್ವಂತಂ ತಸ್ಯೈವ ಪುರತೋ ನಿಶಿ ।
ಭೂಮೌ ಸ್ವಪಿತಿ ವೈ ವೀರ ಜಪಞ್ಶ್ಚೀತಾಂ ಮಹಾಮತೇ ॥ ೪ ॥

ಪ್ರಾತರುತ್ಥಾಯ ಚ ಸ್ನಾನಂ ಕೃತ್ವಾ ದತ್ವಾರ್ಘ್ಯಮುತ್ತಮಂ ।
ರಕ್ತಚಂದನ ಸಂಮಿಶ್ರೈಃ ಕರವೀರೈರ್ಗಣಾಧಿಪ ॥ ೫ ॥

ಪ್ರಪೂಜ್ಯ ಗ್ರಹಭೂತೇಶಮಂಶುಮಂತಂ ತ್ರಿಲೋಚನ ।
ದೀಪಂ ಚ ಪೂಜಯಿತ್ವಾ ತು ತತಃ ಶ್ರಾದ್ಧಂ ಪ್ರಕಲ್ಪಯೇತ್ ॥ ೬ ॥

ಪಂಚಭಿರ್ಬ್ರಾಹ್ಮಣೈರ್ದೇವ ದಿವ್ಯೈರ್ಭೌಮ್ಯೈಶ್ಚ ಸುವ್ರತ ।
ಮ ಗ (ಘ) ಸಂಜ್ಞೌ ತತ್ರ ದಿವ್ಯೌ ಬ್ರಾಹ್ಮಣೌ ಪರಿಕಲ್ಪಯೇತ್ ॥ ೭ ॥

ತ್ರೀನತ್ರ ಬ್ರಾಹ್ಮಣಾನ್ ಭೌಮಾನ್ ಪ್ರಕಲ್ಪ್ಯಾಂಧಕಸೂದನ ।
ಕುರ್ಯಾದೇವಂ ತತಃ ಶ್ರಾದ್ಧಂ ಪಾರ್ವಣಂ ಭಾಸ್ಕರಪ್ರಿಯಂ ॥ ೮ ॥

---

೪. ಅಯ್ಯಾ ಮಹಾಬುದ್ಧಿಶಾಲಿಯಾದ ವೀರನೇ! ಹೀಗೆ ಸೂರ್ಯನನ್ನು ಆರಾಧಿಸಿ ಆ ರಾತ್ರಿ ಪೂಜಿಸಿದ ಮೂರ್ತಿಯ ಸಮ್ಮುಖದಲ್ಲಿಯೇ ನೆಲದ ಮೇಲೆ ತ್ರಿಚಮಂತ್ರವನ್ನು ಜಪಿಸುತ್ತಾ ಮಲಗಬೇಕು.

೫. ಅಯ್ಯಾ ತ್ರಿಲೋಚನನೇ, ಪ್ರಾತಃಕಾಲ ಎದ್ದು ಸ್ನಾನಮಾಡಿ ಸೂರ್ಯನಿಗೆ ಅರ್ಘ್ಯಪ್ರದಾನ ಮಾಡಿ ಗ್ರಹಗಳಿಗೂ ಭೂತಗಳಿಗೂ ಈಶ್ವರನೂ ಶಾಂತಿವಂತನೂ ಆದ ಸೂರ್ಯನನ್ನು ಕಣಗಲೇ ಹೂ, ರಕ್ತಚಂದನ ಇವುಗಳಿಂದ ಪೂಜಿಸಬೇಕು.

೬. ಅಯ್ಯಾ ಸುವ್ರತನೇ! ಆ ಮೇಲೆ ದೀಪಕ್ಕೂ ಪೂಜೆಯನ್ನು ನೆರವೇರಿಸಿ, ದಿವ್ಯಬ್ರಾಹ್ಮಣರು, ಭೌಮಬ್ರಾಹ್ಮಣರು, ಇವೆರಡು ಪಂಗಡಗಳಿಂದ ಐದು ಮಂದಿಗಳಿಗೆ ಆಮಂತ್ರಣಕೊಟ್ಟು ಶ್ರಾದ್ಧವನ್ನು ಮಾಡಬೇಕು.

೭. ಅವರಲ್ಲಿ ದಿವ್ಯಬ್ರಾಹ್ಮಣರಿಬ್ಬರನ್ನು ಮಘಸಂಜ್ಞರೆಂದು ನಿರ್ದೇಶಮಾಡಬೇಕು. ಮಿಕ್ಕ ಮೂವರು ಭೌಮಬ್ರಾಹ್ಮಣರಾಗಬಹುದು.

೮. ಅಯ್ಯಾ ಅಂಧಕಾಸುರಸಂಹಾರಿಯೇ! ಈ ರೀತಿಯಲ್ಲಿ ಸೂರ್ಯನಿಗೆ ಪ್ರಿಯವಾದ ಪಾರ್ವಣಶ್ರಾದ್ಧವನ್ನು ಮಾಡಬೇಕು.

ಶ್ರಾದ್ಧೇ ಸಮಾಪ್ತೇ ವಿಧಿವದದ್ಯಾತ್ಪಿಂಡಂ ತು ಮಧ್ಯಮಂ ।
ಪುರತೋ ದೇವದೇವಸ್ಯ ಸ್ಥಿತ್ವಾ ಮಂತ್ರೇಣ ಸುವ್ರತ ॥ ೯ ॥

ಸ ಏಷ ಪಿಂಡೋ ದೇವೇಶ ಯೋಽಭೀಷ್ಟಸ್ತವ ಸರ್ವದಾ ।
ಅಶ್ನಾಮಿ ಪಶ್ಯ ತ್ವಂ ದೇವ ತೇನ ಮೇ ಸಂತತಿರ್ಭವೇತ್ ॥ ೧೦ ॥

ಪ್ರಸಾದಾತ್ತವ ದೇವೇಶ ಇತಿ ಮೇ ಭಾವಿತಂ ಮನಃ ।
ಇತ್ಥಂ ಸಂಪೂಜಿತೋಽಹ್ಯತ್ರ ಭಾಸ್ಕರಃ ಪುತ್ರದೋ ಭವೇತ್ ॥ ೧೧ ॥

ಅತೋಽಯಂ ಪುತ್ರದೋ ವಾರೋ ದೇವಸ್ಯ ಪರಿಕೀರ್ತಿತಃ ।
ಏವಮತ್ರ ಸದಾ ಯಸ್ತು ಭಾಸ್ಕರಃ ಪೂಜಯೇನ್ನರಃ ॥ ೧೨ ॥

ಉಪವಾಸಪರಃ ಶ್ರಾದ್ಧೇ ಸ ಪುತ್ರಂ ಲಭತೇ ಧ್ರುವಂ ।
ಧನಂ ಧಾನ್ಯಂ ಹಿರಣ್ಯಂ ಚ ಆರೋಗ್ಯಂ ಸುಖದಂ ತಥಾ ॥
ಸೂರ್ಯಲೋಕಂ ಚ ಸಂಪ್ರಾಪ್ಯ ತತೋ ರಾಜಾ ಭವೇನ್ನೃಷು ॥ ೧೩ ॥

---

೯–೧೦. ವಿಧಿಪ್ರಕಾರ ಶ್ರಾದ್ಧವನ್ನು ಮಾಡಿ ಮುಗಿದಮೇಲೆ ಮಧ್ಯಮ ಪಿಂಡವನ್ನು ಪ್ರಾಶನ ಮಾಡಲುದ್ಯುಕ್ತನಾಗಬೇಕು. ಅಯ್ಯಾ ಸುವ್ರತನೇ! ಆ ಮೇಲೆ ಸೂರ್ಯದೇವನ ಎದುರಿಗೆ ನಿಂತು "ಸ ಏಷ ಪಿಂಡೋ ದೇವೇಶ ಯೋಽಭೀಷ್ಟಸ್ತವ ಸರ್ವದಾ। ಅಶ್ನಾಮಿ ಪಶ್ಯ ತ್ವಂ ದೇವ ತೇನ ಮೇ ಸಂತತಿರ್ಭವೇತ್ ॥ ಪ್ರಸಾದಾತ್ತವ ದೇವೇಶ ಇತಿ ಮೇ ಭಾವಿತಂ ಮನಃ ॥"

೧೧. ಈ ಮಂತ್ರವನ್ನು ಹೇಳಿ ಪಿಂಡಪ್ರಾಶನ ಮಾಡಬೇಕು, ಈರೀತಿ ಪೂಜಿತನಾದರೆ ಸೂರ್ಯನು ಪುತ್ರ ಪ್ರದನಾಗುತ್ತಾನೆ.

೧೨. ಆದ್ದರಿಂದ ಸೂರ್ಯದೇವನ ಈ ವಾರಕ್ಕೆ ಪುತ್ರಪ್ರದವಾದ ಭಾನುವಾರವೆಂದು ಹೆಸರಾಗಿದೆ. ಹೀಗೆ ಯಾವನು ಉಪವಾಸಪರನಾಗಿ ಶ್ರಾದ್ಧಮಾಡಿ ಸೂರ್ಯನನ್ನು ಪೂಜಿಸುತ್ತಾನೆಯೋ ಅವನು ನಿಶ್ಚಯವಾಗಿಯೂ ಪುತ್ರನನ್ನು ಹೊಂದುತ್ತಾನೆ.

೧೩. ಇದಲ್ಲದೆ ಧನವನ್ನೂ, ಧಾನ್ಯವನ್ನೂ, ಹಿರಣ್ಯವನ್ನೂ ಸುಖಪ್ರದವಾದ ಆರೋಗ್ಯವನ್ನೂ ಪಡೆಯುವನು. ಮತ್ತು ಸೂರ್ಯಲೋಕವನ್ನು ಹೊಂದಿ ಅಲ್ಲಿಯ ವಾಸ ಮುಗಿದಮೇಲೆ ಮನುಷ್ಯ ಲೋಕದಲ್ಲಿ ರಾಜನಾಗುವನು.

**ಪ್ರಭಯಾ ದ್ವಿಜಸಂಕಾಶಃ ಕಾಂತ್ಯಾ ಚಾಂಬುಜಸನ್ನಿಭಃ ।**
**ವೀರ್ಯೇಣ ಗೋಪತೇಸ್ತುಲ್ಯೋ ಗಾಂಭೀರ್ಯೇ ಸಾಗರೋಪಮಃ**
**॥ ೧೪ ॥**

**(ಇತಿ ಶ್ರೀ ಪುತ್ರದವಿಧಿ ವರ್ಣನಂ)**

**॥ ಬ್ರಹ್ಮೋವಾಚ ॥**

**ದಕ್ಷಿಣೇ ತ್ವಯನೇ ಯಃ ಸ್ಯಾತ್ಸಜಯಃ ಪರಿಕೀರ್ತಿತಃ ॥ ೧೫ ॥**

**ಅತ್ರೋಪವಾಸೊ ನಕ್ತಂ ಚ ಸ್ನಾನಂ ದಾಸ ಜಪಸ್ತಥಾ ।**
**ಭವೇಚ್ಛತಗುಣಂ ದೇವ ಭಾಸ್ಕರಪ್ರೀತಯೇ ಕೃತಂ ॥ ೧೬ ॥**

**ತಸ್ಮಾನ್ನಕ್ತಾದಿ ಕರ್ತವ್ಯಂ ಯತ್ಸ್ಯಾಚ್ಛತಗುಣಂ ವಿಭೋ ॥ ೧೭ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಆದಿತ್ಯವಾರಕಲ್ಪೇ ಜಯವಾರತಿಥಿವರ್ಣನಂ ನಾಮ ಷಡಶೀತಿತಮೋಽಧ್ಯಾಯಃ.**

---

೧೪. ಆತನು ಪ್ರಕಾಶದಲ್ಲಿ ದ್ವಿಜ (ನಕ್ಷತ್ರ) ಗಳಿಗೆ ಸಮನಾಗಿಯೂ, ಕಾಂತಿಯಲ್ಲಿ ಕಮಲಕ್ಕೆ ಸಮನೂ, ಶೌರ್ಯದಲ್ಲಿ ಸೂರ್ಯನಿಗೆ ಸಮನೂ, ಗಾಂಭೀರ್ಯದಲ್ಲಿ ಸಮುದ್ರಕ್ಕೆ ಸಮಾನನೂ ಆಗುವನು.

ಇಲ್ಲಿಗೆ ಪುತ್ರದ ವಿಧಿಸಪ್ತಮಿಯು ಸಂಪೂರ್ಣ

೧೫. ದಕ್ಷಿಣಾಯನದಲ್ಲಿ ಈ ಪ್ರಕಾರ ಒದಗಿ ಬಂದ, ಭಾನುವಾರವು ಜಯ ಸಂಜ್ಞೆಯೆಂದು ಹೇಳಲ್ಪಟ್ಟಿದೆ. ಈ ದಿನದಲ್ಲಿ ಸೂರ್ಯಪ್ರೀತಿಗಾಗಿ ಮಾಡಿದ ಉಪವಾಸ ಸ್ನಾನ, ದಾನ, ಜಪ, ನಕ್ತಭೋಜನ, ಇವು ಒಂದಕ್ಕೆ ನೂರು ಮಡಿ ಫಲವನ್ನು ಕೊಡುತ್ತವೆ.

೧೬. ಅಯ್ಯಾ ವಿಭುವೇ! ಆದಕಾರಣ ಶತಗುಣಫಲವನ್ನು ಕೊಡತಕ್ಕ ಸ್ನಾನ ನಕ್ತಭೋಜನಾದಿಗಳನ್ನು ಮಾಡುವುದು ಅವಶ್ಯ ಕರ್ತವ್ಯ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಬ್ರಾಹ್ಮಪರ್ವದ ಆದಿತ್ಯವಾರ ಕಲ್ಪದಲ್ಲಿ ಜಯವಾರತಿಥಿ ವರ್ಣನೆಯೆಂಬ ಎಂಬತ್ತಾರನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಸಪ್ತಾಶೀತಿತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಜಯಂತೋ ಹ್ಯುತ್ತರೇ ಜ್ಞೇಯಶ್ಚಾಯನೇ ಗಣನಾಯಕ ।
ವಾರೋ ದೇವಸ್ಯ ಯಃ ಸ್ಯಾದ್ವೈ ತತ್ರ ಪೂಜ್ಯೋ ದಿವಾಕರಃ ॥ ೧ ॥

ಪೂಜಿತಸ್ತತ್ರ ದೇವೇಶಃ ಸಹಸ್ರಗುಣಿತಂ ಫಲಂ ।
ದದಾತಿ ದೇವಶಾರ್ದೂಲ ಸ್ನಾನದಾನಾದಿ ಕರ್ಮಣಾಂ ॥ ೨ ॥

ಘೃತೇನ ಪಯಸಾ ಯತ್ರ ಸ್ನಾನಮಿಕ್ಷುರಸೇನ ತು ।
ವಿಲೇಪನಂ ಕುಂಕುಮಂ ತು ಪ್ರಶಸ್ತಂ ಭಾಸ್ಕರೇ ಪ್ರಿಯಂ ॥ ೩ ॥

---

## ಎಂಭತ್ತೇಳನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಅಯ್ಯಾ ಗಣನಾಯಕನೇ! ಉತ್ತರಾಯಣದಲ್ಲಿ ಬರುವ ಭಾನುವಾರವು ಜಯಂತವೆಂಬ ಹೆಸರುಳ್ಳದ್ದೆಂದು ತಿಳಿಯಬೇಕು. ಆ ದಿನ ಸೂರ್ಯನನ್ನು ಪೂಜಿಸುವುದು ತುಂಬ ಶ್ರೇಷ್ಠವಾದುದು.

೨. ಅಯ್ಯಾ ದೇವಶ್ರೇಷ್ಠನಾದ ದಿಂಡಿಯೇ! ಆ ದಿನದಲ್ಲಿ ದೇವೇಶನಾದ ಸೂರ್ಯನನ್ನು ಪೂಜಿಸಿದರೂ, ಸ್ನಾನದಾನಾದಿ ಕರ್ಮಗಳನ್ನು ಮಾಡಿದರೂ ಸೂರ್ಯನು ಒಂದಕ್ಕೆ ಸಾವಿರ ಪಾಲು ಫಲವನ್ನು ಕೊಡುತ್ತಾನೆ.

೩. ಈ ಜಯಂತಾದಿತ್ಯವಾರದಲ್ಲಿ ತುಪ್ಪ, ಹಾಲು, ಕಬ್ಬಿನ ಹಾಲು, ಇವುಗಳ ಅಭಿಷೇಕ, ಕುಂಕುಮಕೇಸರಿ, ಗಂಧಲೇಪನ, ಇವು ಸೂರ್ಯನಿಗೆ ಪ್ರಿಯವೂ, ಪ್ರಶಸ್ತವೂ ಆಗಿರುತ್ತವೆ.

ಧೂಪಕ್ರಿಯಾ ಗುಗ್ಗುಲೇನ ನೈವೇದ್ಯೇ ಮೋದಕಃ ಸ್ಮೃತಃ ।
ಇತ್ಥಂ ಸಂಪೂಜ್ಯ ದೇವೇಶಂ ಕುರ್ಯಾದ್ಧೋಮಂ ತತಸ್ತಿಲೈಃ ॥ ೪ ॥

ಬ್ರಾಹ್ಮಣಾನ್ ಭೋಜಯೇತ್ಪಶ್ಚಾತ್ ಮೋದಕಾಂಸ್ತಿಲಶಷ್ಕುಲೀಃ ।
ಇತ್ಥಂ ಯಃ ಪೂಜಯೇದ್ಭಾನು ಮಂತ್ರೇಣೈನಂ ಗಣಾಧಿಪ- ॥ ೬ ॥

ಸಹಸ್ರಗುಣಿತಂ ತಸ್ಯ ಫಲಂ ದೇವೋ ದದಾತಿ ವೈ ।
ಸ್ನಾನದಾನಜಪಾದೀನಾಮುಪವಾಸಸ್ಯ ವೈ ವಿಭೋ ॥ ೫ ॥

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಆದಿತ್ಯವಾರ ಕಲ್ಪೇ ಜಯಂತ ವಿಧಿವರ್ಣನಂ ನಾಮ ಸಪ್ತಾಶೀತಿತಮೋಽಧ್ಯಾಯಃ.**

---

೪. ಈ ರೀತಿ ಗಂಧಾದಿಗಳಿಂದ ಪೂಜಿಸಿ ಗುಗ್ಗುಳಧೂಪವನ್ನೂ, ಕಡುಬಿನ ನೈವೇದ್ಯವನ್ನೂ ಸಮರ್ಪಿಸಬೇಕು ಎಂದು ಹೇಳಿದೆ. ಹೀಗೆ ದೇವೇಶನಾದ ಸೂರ್ಯನನ್ನು ಪೂಜಿಸಿ ಆಮೇಲೆ ತಿಲಹೋಮ ಮಾಡಬೇಕು.

೫-೬. ಅನಂತರ ಕಡುಬು, ಚಿಗುಳಿ, ತಂಬಿಟ್ಟು, ಚಕ್ಕುಲಿ, ಇವುಗಳಿಂದ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ಅಯ್ಯಾ ಗಣಾಧಿಪನಾದ ದಿಂಡಿಯೇ! ಹೀಗೆ ಮಂತ್ರಸಹಿತವಾಗಿ ಯಯರು ಸೂರ್ಯನನ್ನು ಪೂಜಿಸುವರೋ, ಮತ್ತು ಸ್ನಾನ, ದಾನ, ಜಪ, ಉಪವಾಸ ಮೊದಲಾದುವನ್ನು ಮಾಡುವರೋ ಅವರಿಗೆ ಸೂರ್ಯದೇವನು ಸಹಸ್ರಪಾಲು ಫಲವನ್ನು ಕೊಡುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಬ್ರಾಹ್ಮಪರ್ವದ ಆದಿತ್ಯವಾರ ಕಲ್ಪದಲ್ಲಿ ಜಯಂತ ವಿಧಿವರ್ಣನೆಯೆಂಬ ಎಂಬತ್ತೇಳನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಅಷ್ಟಾಶೀತಿತಮೋಽಧ್ಯಾಯಃ

॥ ಬ್ರಹ್ಮೋವಾಚ ॥

**ಶುಕ್ಲಪಕ್ಷಸ್ಯ ಸಪ್ತಮ್ಯಾಂ ಪ್ರಾಜಾಪತ್ಯರ್ಕ್ಷಸಂಯುತಃ ।**
**ಸಜ್ಞೇಯೋ ವಿಜಯೋ ನಾಮ ಸರ್ವಪಾಪಭಯಾಪಹಃ ॥ ೧ ॥**

**ತತ್ರ ಕೋಟಿಗುಣಂ ಸರ್ವಂ ಫಲಂ ಪುಣ್ಯಸ್ಯ ಕರ್ಮಣಃ ।**
**ದದಾತಿ ಭಗವಾನ್ ಪ್ರೀತಃ ಪೂಜಿತಶ್ಚಂದನಾದಿಭಿಃ ॥ ೨ ॥**

**ಸ್ನಾನಂ ದಾನಂ ಜಪೋ ಹೋಮಃ ಪಿತೃದೇವಾದಿಪೂಜನಂ ।**
**ನಕ್ತಂ ಚಾಪ್ಯುಪವಾಸಸ್ತು ಸರ್ವಮತ್ರ ದಿವಾಕರಃ ॥ ೩ ॥**

---

### ಎಂಭತ್ತೆಂಟನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಶುಕ್ಲಪಕ್ಷದ ಸಪ್ತಮಿಯದಿನವು ರೋಹಿಣಿ ನಕ್ಷತ್ರಯುಕ್ತವಾಗಿದ್ದರೆ ಅದು ಸರ್ವ ಪಾಪಗಳ ಭಯವನ್ನು ಹೋಗಲಾಡಿಸತಕ್ಕ ವಿಜಯಾದಿತ್ಯವಾರವೆಂದು ತಿಳಿಯಬೇಕು.

೨. ಆ ದಿವಸ ಚಂದನ ಮೊದಲಾದುವುಗಳಿಂದ ಪೂಜಿತನಾದ ಸೂರ್ಯ ದೇವನು ಪ್ರೀತನಾಗಿ ಒಂದಕ್ಕೆ ಕೋಟಿಪಾಲಷ್ಟು ಪುಣ್ಯವನ್ನು ಕೊಡುತ್ತಾನೆ.

೩. ಆದಿನ ಮಾಡಿದ ಸ್ನಾನ, ದಾನ, ಜಪ, ಹೋಮ, ಪಿತ್ರಾರಾಧನೆ, ದೇವಾರಾಧನೆ, ನಕ್ತಭೋಜನ, ಉಪವಾಸ ಇವೆಲ್ಲದರ ಫಲವನ್ನೂ ಆದಿನ ಪೂಜಿತ ನಾದ ಗೋಪತಿ (ಕಿರಣಾಧಿಪ) ಆದ ದಿವಾಕರನು ಕೋಟಿಗುಣವನ್ನಾಗಿ ಮಾಡುತ್ತಾನೆ.

**ಕುರ್ಯಾತ್ಕೋಟಿಗುಣಂ ಸರ್ವಂ ಪೂಜಿತೋ ಹ್ಯತ್ರಗೋಪತಿಃ ।**
**ತಸ್ಮಾದತ್ರ ಸದಾ ದೇವಂ ಪೂಜಯೇದ್ಭಕ್ತಿಮಾನ್ನರಃ ॥ ೪ ॥**

**ಸರ್ವೇಶಂ ಸಪ್ತದ್ವೀಪೇಶಂ ಸಪ್ತಸೈಂಧವವಾಹನಂ ।**
**ಸಪ್ತಮ್ಯಾಂ ತು ಸಮಾರಾಧ್ಯ ಸಪ್ತಪ್ರಕೃತಿಸಂಭವಂ ॥ ೫ ॥**

**ಸಪ್ತಲೋಕಾಧಿಪತ್ಯಂ ತು ಪ್ರಾಪ್ನುತೇ ಸಪ್ತರಶ್ಮಿಭಿಃ ॥ ೬ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಆದಿತ್ಯವಾರ ಕಲ್ಪೇ ವಿಜಯವಾರ ವಿಧಿವರ್ಣನಂ ನಾಮ ಅಷ್ಟಾಶೀತಿತಮೋಽಧ್ಯಾಯಃ.**



---

೪. ಆದುದರಿಂದ ಭಕ್ತಿಯುತನಾದ ಮನುಷ್ಯನು ಆ ದಿನದಲ್ಲಿ ಸೂರ್ಯದೇವನನ್ನು ಸದಾ ಪೂಜಿಸಬೇಕು.

೫. ಸರ್ವೇಶನೂ, ಸಪ್ತದ್ವೀಪಾಧಿಪತಿಯೂ, ಸಪ್ತಾಶ್ವವಾಹನನೂ, ಸಪ್ತಪ್ರಕೃತಿಸಂಭವನೂ ಆದ ಸೂರ್ಯನನ್ನು ಸಪ್ತಮಿಯಲ್ಲಿ ಪೂಜಿಸಿ ಸೂರ್ಯನ ಸಪ್ತರಶ್ಮಿಗಳ ಸಹಾಯದಿಂದ ಸಪ್ತಲೋಕಾಧಿಪತ್ಯವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಬ್ರಾಹ್ಮಪರ್ವದ ಆದಿತ್ಯವಾರಕಲ್ಪದಲ್ಲಿ ವಿಜಯವಾರದ ವಿಧಿವರ್ಣನೆಯೆಂಬ ಎಂಬತ್ತೆಂಟನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಏಕೋನನವತಿತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಕೃಷ್ಣಪಕ್ಷಸ್ಯ ಸಪ್ತಮ್ಯಾಂ ಮಾಘಮಾಸೇ ಭವೇತ್ತು ಯಃ ।
ಸೋದಿತ್ಯಾಭಿಮುಖೋ ಜ್ಞೇಯಃ ಶೃಣು ಚಾಸ್ಯ ವಿಧಿಂ ಪರಂ ॥ ೧ ॥

ಕೃತ್ವೈಕೇ ಭಕ್ತಂ ಕೃಷ್ಣಸ್ಯ ವಾರೇ ತ್ರಿಪುರಸೂದನ ।
ಪ್ರಾತಃ ಕೃತ್ವಾ ತತಃ ಸ್ನಾನಂ ಪೂಜಯಿತ್ವಾ ದಿವಾಕರಂ ॥ ೨ ॥

ಆದಿತ್ಯಾಭಿಮುಖಸ್ತಿಷ್ಠೇದ್ಯಾವದಸ್ತಮನಂ ರವೇಃ ।
ಜಪಮಾನೋ ಮಹಾಶ್ವೇತಾಂ ಲಾಭಮಾಶ್ರಿತ್ಯ ಸುವ್ರತ ॥ ೩ ॥

---

### ಎಂಭತ್ತೊಂಭತ್ತನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಮಾಘ ಕೃಷ್ಣ ಸಪ್ತಮಿಯದಿನ ಭಾನುವಾರ ಯುಕ್ತವಾದರೆ ಅದು ಆದಿತ್ಯಾಭಿಮುಖ, ಸಪ್ತಮಿ ಎನಿಸಿಕೊಳ್ಳುವುದು. ಶ್ರೇಷ್ಠವಾದ ಈ ಸಪ್ತಮಿಯ ವಿಧಿಯನ್ನು ಕೇಳು.

೨. ಅಯ್ಯಾ ತ್ರಿಪುರಾಂತಕ ಸ್ವರೂಪನಾದ ದಿಂಡಿಯೇ! ಆ ಕೃಷ್ಣಪಕ್ಷದಲ್ಲಿ ಬರುವ ಭಾನುವಾರದಲ್ಲಿ ಒಪ್ಪೊತ್ತು ಊಟಮಾಡಿ ಮಾರನೆಯ ಬೆಳಿಗ್ಗೆ ಎದ್ದು ಸ್ನಾನಾದಿಗಳನ್ನು ಮಾಡಿ ಸೂರ್ಯನನ್ನು ಪೂಜಿಸಿ ಆದಿತ್ಯನಿಗೆ ಅಭಿಮುಖವಾಗಿ ಸೂರ್ಯಾಸ್ತಪರ್ಯಂತರವೂ ನಿಂತಿರಬೇಕು.

೩. ಅಯ್ಯಾ ಸುವ್ರತನೆ! ತನಗೆ ಏನು ಲಾಭವಾಗಬೇಕೋ ಅದನ್ನು ಮನಸ್ಸಿನಲ್ಲಿ ಕುರಿತುಕೊಂಡು ತ್ರಿಚಮಂತ್ರವನ್ನು ಜಪಮಾಡಬೇಕು.

ಚತುರ್ಹಸ್ತಮೃಜುಂ ಶುಕ್ಲಮವ್ರಣಂ ಸುಸಮಂ ದೃಢಂ ।
ರಕ್ತಚಂದನವೃಕ್ಷಸ್ಯ ಸ್ತಂಭಂ ಕೃತ್ವಾ ಗಣಾಧಿಪ ॥ ೪ ॥

ತಮಾಶ್ರಿತ್ಯ ಮಹಾಭಕ್ತ್ಯಾ ದೇವದೇವಂ ದಿವಾಕರಂ ।
ಪಶ್ಯಮಾನೋ ಜಪಞ್ಸ್ತೀತಾಂ ತಿಷ್ಠೇದಸ್ತಮನಾದ್ರವೇಃ ॥ ೫ ॥

ಗಂಧಪುಷ್ಪೋಪಹಾರೈಸ್ತು ಪೂಜಯಿತ್ವಾ ದಿವಾಕರಂ ।
ಬ್ರಾಹ್ಮಣೇ ದಕ್ಷಿಣಾಂ ದತ್ವಾ ತತೋ ಭುಂಜೀತ ವಾಗ್ಯತಃ ॥ ೬ ॥

ಇತ್ಥಮೇತಂ ತು ಯಃ ಕುರ್ಯಾದಾದಿತ್ಯಪ್ರೀತಯೇ ನರಃ ।
ಭಾನುಮಾಂಸ್ತಸ್ಯ ಪ್ರೀತಃಸ್ಯಾತ್ಸರ್ವಮಿಷ್ಟಂ ದದಾತಿ ಹಿ ॥ ೭ ॥

ಧನಂ ಧಾನ್ಯಂ ತಥಾ ಪುತ್ರಮಾರೋಗ್ಯಂ ಭಾರ್ಗವೀಂ ಯಶಃ ।
ತಸ್ಮಾತ್ಸಂಪೂಜಯೇದತ್ರ ಗೀರ್ವಾಣಾಧಿಪತಿಂ ಹರ ॥ ೮ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ -ಆದಿತ್ಯವಾರಕಲ್ಪೇ ಆದಿತ್ಯಾಭಿಮುಖ ವರ್ಣನಂ ನಾಮ ಏಕೋನನವತಿತಮೋಽಧ್ಯಾಯಃ.

---

೪-೫. ಅಯ್ಯಾ ಗಣಾಧಿಪನಾದ ದಿಂಡಿಯೇ! ನಾಲ್ಕುಮೊಳ ಉದ್ದವುಳ್ಳದ್ದಾಗಿಯೂ, ನೇರವಾಗಿಯೂ ಇರುವಹಾಗೆ ಕೆಂಪುಚಂದನಮರದಲ್ಲಿ ಒಂದು ಕಂಬವನ್ನು ಮಾಡಿ ಅದನ್ನು ಅಭಿಮುಖಮಾಡಿ ಒರಗಿಕೊಂಡು ಮಹಾಭಕ್ತಿಯಿಂದ ಅಸ್ತಮಯಪರ್ಯಂತ ಸೂರ್ಯನನ್ನು ನೋಡುತ್ತಾ ತ್ರಿಚಮಂತ್ರವನ್ನು ಜಪಮಾಡುತ್ತಾ ನಿಂತಿರಬೇಕು.

೬. ಹಾಗೆ ನಿಂತು ಜಪಮಾಡಿದಮೇಲೆ ಗಂಧ, ಪುಷ್ಪ, ಉಪಹಾರ ನೈವೇದ್ಯ ಇವುಗಳನ್ನು ಸಮರ್ಪಿಸಿ ಸೂರ್ಯನನ್ನು ಪೂಜಿಸಿ ಪೂಜಾಸಾದ್ಗುಣ್ಯಕ್ಕಾಗಿ ಬ್ರಾಹ್ಮಣನಿಗೆ ದಕ್ಷಿಣೆಯನ್ನು ಕೊಟ್ಟು ತಾನು ಮೌನದಿಂದ ಭೋಜನಮಾಡಬೇಕು.

೭ ಯಾವ ಮನುಷ್ಯನು ಸೂರ್ಯಪ್ರೀತ್ಯರ್ಥವಾಗಿ ಈ ಪ್ರಕಾರಮಾಡುತ್ತಾನೋ ಅವನಿಗೆ ಸೂರ್ಯನ ಪ್ರಸನ್ನತೆಯುಂಟಾಗಿ ಅವನ ಇಷ್ಟಗಳೆಲ್ಲಾ ಸಿದ್ಧಿಯಾಗುತ್ತವೆ.

೮. ಅಲ್ಲದೆ ಅವನಿಗೆ ಸೂರ್ಯನು ಧನ, ಧಾನ್ಯ, ಪುತ್ರರು, ಆರೋಗ್ಯ, ಐಶ್ವರ್ಯ, ಯಶಸ್ಸು ಇವೆಲ್ಲವನ್ನೂ ಕೊಡುತ್ತಾನೆ. ಆದ್ದರಿಂದ ಹರಸ್ವರೂಪನಾದ ದಿಂಡಿಯೇ! ಆ ದಿವಸ ದೇವಾಧಿಪನಾದ ಸೂರ್ಯನನ್ನು ಈ ಪ್ರಕಾರ ಪೂಜಿಸಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಬ್ರಾಹ್ಮಪರ್ವದ ಆದಿತ್ಯವಾರ ಕಲ್ಪದಲ್ಲಿ ಆದಿತ್ಯಾಭಿಮುಖ ವರ್ಣನೆಯೆಂಬ ಎಂಬತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ನವತಿತಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

ರವಿಸಂಕ್ರಮಣೇ ಯಃ ಸ್ಯಾದ್ರವೇರ್ವಾರೋ ಗಣಾಧಿಪ ।
ಸ ಜ್ಞೇಯೋ ಹೃದಯೋ ನಾಮ ಆದಿತ್ಯಹೃದಯಪ್ರಿಯಃ ॥ ೧ ॥

ತತ್ರ ನಕ್ತಂ ಸಮಾಶ್ರಿತ್ಯ ದೇವಂ ಸಂಪೂಜ್ಯ ಭಕ್ತಿತಃ ।
ಗತ್ವಾ ಚ ಸದನೇ ಭಾನೋರಾದಿತ್ಯಾಭಿಮುಖಸ್ಥಿತಃ ॥ ೨ ॥

ಜಪೇದಾದಿತ್ಯಹೃದಯಂ ಸಂಖ್ಯಯಾಷ್ಟಶತಂ ಬುಧಃ ।
ಅಥ ವಾಸ್ತಮನಂ ಯಾವದ್ಭಾಸ್ಕರಂ ಚಿಂತಯೇದ್ಧೃದಿ ॥ ೩ ॥

---

### ತೊಂಭತ್ತನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಸೂರ್ಯನು ಯಾವ ರಾಶಿಯಲ್ಲಿಯಾದರೂ ಸಂಕ್ರಮಣವಾಗುವ ದಿವಸ ಭಾನುವಾರವಾದರೆ ಅದನ್ನು ಹೃದಯಾದಿತ್ಯವಾರ, ಎಂಬ ದಾಗಿ ತಿಳಿಯಬೇಕು.

೨. ಆ ದಿನ ನಕ್ತಭೋಜನವು ಕರ್ತವ್ಯವು ತಿಳಿದವನು ಆ ದಿನ ನಿಯಮ ದಿಂದ ಮನೆಯಲ್ಲಿ ಭಕ್ತಿಯುತನಾಗಿ ಸೂರ್ಯದೇವನನ್ನು ಪೂಜಿಸಿ ಬಳಿಕ ಸೂರ್ಯ ದೇವಾಲಯಕ್ಕೆ ಹೋಗಿ ಅಲ್ಲಿ ಸೂರ್ಯಾಭಿಮುಖವಾಗಿ ನಿಂತು ಎಂಟುನೂರುಸಲ ಆದಿತ್ಯಹೃದಯಮಂತ್ರವನ್ನು ಜಪಮಾಡಬೇಕು. ಅಥವಾ ಸೂರ್ಯಾಸ್ತವಾಗುವ ಪರ್ಯಂತ ಸೂರ್ಯನನ್ನು ಮನಸ್ಸಿನಲ್ಲಿ ಧ್ಯಾನಿಸಬೇಕು.

೩–೪. ಅಯ್ಯಾ ವೀರನಾದ ದಿಂಡಿಯೇ! ಅನಂತರ ಮನೆಗೆ ಬಂದು ತನಗೆ ಶಕ್ತಿಯಿದ್ದಷ್ಟು ಮಂದಿ ಬ್ರಾಹ್ಮಣರಿಗೆ ಭಕ್ತಿಯಿಂದ ಭೋಜನಮಾಡಿಸಬೇಕು.

ಗೃಹಮೇತ್ಯ ತತೋ ವಿಪ್ರಾನ್ ಭೋಜಯೇಚ್ಛಕ್ತಿತಃ ಶಿವ ।
ಭುಕ್ತ್ವಾ ತು ಪಾಯಸಂ ವೀರ ತತೋ ಭೂಮೌ ಸ್ವಪೇದ್ಬುಧಃ ॥ ೪ ॥

ಯತ್ರ ಸಂಪೂಜಯೇದ್ಭಾನುಂ ಭಕ್ತ್ಯಾ ಶ್ರದ್ಧಾಸಮನ್ವಿತಃ ।
ಸ ಕಾಮಾಲ್ಲಭತೇ ಸರ್ವಾನ್ಭಾಸ್ಕರಾದ್ಧೃದಯಸ್ಥಿತಃ ॥ ೫ ॥

ತೇಜಸಾ ಯಶಸಾ ತುಲ್ಯಃ ಭವತ್ಯೇಷಾಂ ಮಹಾತ್ಮನಾಂ ।
ಇಂದ್ರವಹ್ನ್ಯಂತಕೃದ್ರಕ್ಷಃ ಪಾಶಿವಾತಾರ್ಥಪೇಶ್ವರಾಃ ॥ ೬ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಆದಿತ್ಯವಾರಕಲ್ಪೇ ಹೃದಯವಾರವಿಧಿ ವರ್ಣನಂ ನಾಮ ನವತಿತಮೋಽಧ್ಯಾಯಃ.



---

ಅನಂತರ ತಾನೂ ಪಾಯಸವನ್ನು ಭುಂಜಿಸಿ ಬಳಿಕ ತಾನು ಆರಾಧಿಸಿದ ಮೂರ್ತಿ ಸಾನ್ನಿಧ್ಯದಲ್ಲಿಯೇ ನೆಲದ ಮೇಲೆ ಮಲಗಬೇಕು.

೫. ಹೀಗೆ ಭಕ್ತಿಯಿಂದ ಯಾವನು ಮಾಡುವನೋ ಅವನಿಗೆ ಸೂರ್ಯನು ಗ್ರಹದಿಂದ ಆತನ ಮನಸ್ಸಿನಲ್ಲಿದ್ದ ಎಲ್ಲಾ ಇಷ್ಟಗಳೂ ಲಭಿಸುತ್ತವೆ.

೬. ಈ ವ್ರತಿಯು ತೇಜಸ್ಸಿನಲ್ಲೂ, ಯಶಸ್ಸಿನಲ್ಲೂ ಇಂದ್ರ, ಅಗ್ನಿ, ಯಮ, ನಿಋುಋುತಿ, ವರುಣ, ವಾಯು, ಕುಬೇರ, ಈಶಾನರೆಂಬ ಈ ಮಹಾತ್ಮರಿಗೆ ಸಮಾನನು ಆಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಬ್ರಾಹ್ಮಪರ್ವದ ಆದಿತ್ಯವಾರ ಕಲ್ಪ ದಲ್ಲಿ ಹೃದಯವಾರವಿಧಿ ವರ್ಣನೆಯೆಂಬ ತೊಂಬತ್ತನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಏಕನವತಿತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಪೂಷ್ಣೋ ಭವೇದ್ಯದಾ ವಾರೇ ಋಕ್ಷಂ ಚ ಭಗದೈವತಂ ।
ವಾಸರಃ ಸ ಮಹಾನ್ ಪ್ರೋಕ್ತಃ ಸರ್ವರೋಗಭಯಾಪಹಃ ॥ ೧ ॥

ಯೋಽತ್ರ ಪೂಜಯತೇ ಭಾನುಂ ಶುಭಗಂಧವಿಲೇಪನೈಃ ।
ಸರ್ವ ರೋಗವಿನಿರ್ಮುಕ್ತೋ ಯಾತಿ ಭಾನುಸಲೋಕತಾಂ ॥ ೨ ॥

ಅರ್ಕಪತ್ರಪುಟೇ ಕೃತ್ವಾ ಪುಷ್ಪಾಣ್ಯರ್ಕಸ್ಯ ಸುವ್ರತ ।
ದೇವಸ್ಯ ಪುರತೋ ರಾತ್ರೌ ಭಕ್ತ್ಯಾ ಯಃ ಸ್ಥಾಪಯೇದ್ಬುಧಃ ॥ ೩ ॥

---

### ತೊಂಭತ್ತೊಂದನೆಯ ಅಧ್ಯಾಯ

೧ ಬ್ರಹ್ಮನು ಹೇಳುತ್ತಾನೆ—ಆದಿತ್ಯವಾರದಲ್ಲಿ ಪೂರ್ವಫಲ್ಗುನಿ (ಪುಬ್ಬಾ) ನಕ್ಷತ್ರವು ಸೇರಿಬಂದರೆ ಅದು ಮಹತ್ತಾದ ಸರ್ವರೋಗಹರಾದಿತ್ಯವಾರವೆನಿಸುವುದು.

೨. ಈ ವಾರದಲ್ಲಿ ಯಾವನು ಸೂರ್ಯನನ್ನು ಶುಭಕರವಾದ ಒಳ್ಳೆಯ ಸುವಾಸನೆಯುಳ್ಳ ಅನುಲೇಪನ ಸಾಮಾಗ್ರಿಗಳಿಂದ ಪೂಜಿಸುವನೋ ಅವನು ಸಮಸ್ತ ರೋಗ ಬಾಧೆಗಳಿಂದ ಬಿಡುಗಡೆ ಹೊಂದಿದವನಾಗಿ ಸೂರ್ಯಸಾಲೋಕ್ಯವನ್ನು ಪಡೆಯುತ್ತಾನೆ.

೩. ಈ ವ್ರತಮಾಡುವ ಪ್ರಾಜ್ಞನು ಎಕ್ಕದ ಹೂವುಗಳನ್ನು ತಂದು ಎಕ್ಕದ ಎಲೆಯಲ್ಲಿ ಪೊಟ್ಟಣಕಟ್ಟಿ ರಾತ್ರಿಯಲ್ಲಿ ಸೂರ್ಯನ ಪ್ರತಿಮೆಯಮುಂದೆ ಭಕ್ತಿಯಿಂದ ಇರಿಸಬೇಕು.

ಪೂಜಯಿತ್ವಾರ್ಕಪುಷ್ಪೈಸ್ತು ಅರ್ಕಮರ್ಕಪ್ರಿಯಂ ಸದಾ ।
ಪ್ರಾಶಯಿತ್ವಾರ್ಕಪುಷ್ಪಂ ತು ದತ್ವಾ ವಿಪ್ರಾಯ ದಕ್ಷಿಣಾಂ ॥ ೪ ॥

ಭುಕ್ತ್ವಾ ಚ ಪಾಯಸಂ ವೀರಂ ರಾತ್ರೌ ಸ್ವಪಿತಿ ಭೂತಲೇ ।
ಅನೇನ ವಿಧಿನಾ ಯಸ್ತು ಪೂಜಯೇದತ್ರ ವೈ ರವಿಂ ॥ ೫ ॥

ಸ ಮುಕ್ತಃ ಸರ್ವರೋಗೈಸ್ತು ಗಚ್ಛೇದ್ದಿನಕರಾಲಯಂ ।
ತಸ್ಮಾದಪಿ ವ್ರಜೇಲ್ಲೋಕಂ ಭಂಕಾರಾ ರವಹೇತಿನಃ ॥ ೬ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೆ ಬ್ರಾಹ್ಮೇಪರ್ವಣಿ ಆದಿತ್ಯಕಲ್ಪೇ
ರೋಗಹರವಿಧಿ ವರ್ಣನಂ ನಾಮ ಏಕನವತಿತಮೋಧ್ಯಾಯಃ.



---

೪. ಎಕ್ಕದ ಪತ್ರಪುಷ್ಪಗಳಲ್ಲಿ ಪ್ರೀತಿಯುಳ್ಳ ಸೂರ್ಯನಿಗೆ ಆ ಎಕ್ಕದ ಹೂಗಳಿಂದ ಪೂಜೆಮಾಡಿ ಪ್ರಸಾದದ ಎಕ್ಕದ ಹೂವನ್ನೇ ಸ್ವಲ್ಪ ಸೇವಿಸಿ ಆಮೇಲೆ ಬ್ರಾಹ್ಮಣನಿಗೆ ದಕ್ಷಿಣೆಯನ್ನು ಕೊಡಬೇಕು.

೫-೬. ಎಲೈ ವೀರನೇ ! ಅನಂತರ ಪಾಯಸವನ್ನು ಭೋಜನಮಾಡಿ ರಾತ್ರಿಯಲ್ಲಿ ನೆಲದಮೇಲೆ ಮಲಗಬೇಕು. ಈ ವಿಧಾನದಿಂದ ಯಾವನು ರವಿಯನ್ನು ಪೂಜಿಸುವನೋ ಅವನು ಸಮಸ್ತ ರೋಗಗಳಿಂದಲೂ, ಬಿಡುಗಡೆಹೊಂದಿ ಸೂರ್ಯಲೋಕವನ್ನು ಪಡೆಯುತ್ತಾನೆ. ಅಲ್ಲಿಂದ ಭಂಕಾರ ಶಬ್ದಮಾಡುವ ಶಂಖವನ್ನು ಧರಿಸಿರುವ ವಿಷ್ಣುವಿನ ಲೋಕಕ್ಕೂ ಹೋಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಬ್ರಾಹ್ಮಪರ್ವದ ಆದಿತ್ಯಕಲ್ಪದಲ್ಲಿ
ರೋಗಹರವಿಧಿ ವರ್ಣನೆಯೆಂಬ ತೊಂಬತ್ತೊಂದನೆಯ
ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ದ್ವಿನವತಿತಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಯಸ್ತ್ವಾದಿತ್ಯ ಗ್ರಹಸ್ತಸ್ಯ ವಾರೇ ದೇವಸ್ಯ ಸುವ್ರತ।
ಶಸ್ಯಃ ಪ್ರೋಕ್ತಃ ಪ್ರಿಯೋ ಲೋಕೇ ಖ್ಯಾತೋ ಗೋಶ್ರುತಿಭೂಷಣ ॥ ೧ ॥

ಯಸ್ತು ಪೂಜಯತೇ ತಸ್ಮಿನ್ ಪತಂಗಂ ಪತಗಪ್ರಿಯಂ।
ಗಂಧಪುಷ್ಪೋಪಹಾರೈಸ್ತು ಸೂರ್ಯಲೋಕಂ ಸ ಗಚ್ಛತಿ ॥ ೨ ॥

ಸೋಪವಾಸೋ ಗಣಶ್ರೇಷ್ಠ ಆದಿತ್ಯಗ್ರಹಣೇ ಶುಚಿಃ।
ಜಪಮಾನೋ ಮಹಾಶ್ವೇತಾಂ ಖಪೋಷಮಥವಾ ಶಿವಂ ॥ ೩ ॥

---

### ತೊಂಭತ್ತೆರಡನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಕಣ್ಣೇಕಿವಿಯಾಗಿ ಉಳ್ಳ ಸರ್ಪಗಳನ್ನು ಆಭರಣವಾಗಿ ಧರಿಸಿರುವ ಮಹಾವ್ರತನಾದ ದಿಂಡಿಯೇ! ಭಾನುವಾರವು ಸೂರ್ಯ ಗ್ರಹಣಯುಕ್ತವಾಗಿದ್ದರೆ ಅದು ಬಹು ಪ್ರಶಸ್ತವು.

೨. ಅದು ಮಹಾಶ್ವೇತಪ್ರಿಯವೆಂಬದಾಗಿ ಪ್ರಸಿದ್ಧವೆಂದು ಉಕ್ತವಾಗಿದೆ. ಆ ದಿನ ಗಂಧ ಪುಷ್ಪ ಉಪಹಾರಗಳಿಂದ ಆದಿತ್ಯನನ್ನು ಆರಾಧಿಸಿದವನು ಸೂರ್ಯ ಲೋಕಕ್ಕೆ ಹೋಗುತ್ತಾನೆ.

೩. ಅಯ್ಯಾ ಗಣಶ್ರೇಷ್ಠನೇ! ಸೂರ್ಯಗ್ರಹಣ ಕಾಲದಲ್ಲಿ ಸ್ನಾನಮಾಡಿ ಪರಿಶುದ್ಧನಾಗಿ ತ್ರಿಚಮಂತ್ರವನ್ನು ಜಪಮಾಡುತ್ತಾ ಶಿವನನ್ನೋ, ಸೂರ್ಯ

ಪೂಜಯೇಜ್ಜಗತಾಮೀಶಂ ತಮೋನಾಶನಮಾಶುಗಂ ।
ಪೂಜಯಿತ್ವಾ ಖಪೋಷಂ ತು ಮಹಾಶ್ವೇತಾಂ ತತೋ ಜಪೇತ್ ॥ ೪ ॥

ಪೂಜಯಿತ್ವಾ ಮಹಾಶ್ವೇತಾಂ ರವಿಂ ದೇವಂ ಸಮರ್ಚಯೇತ್ ।
ಮಹಾಶ್ವೇತಾಂ ಪ್ರತಿಷ್ಠಾಪ್ಯ ಗಂಧಪುಷ್ಪೈಃ ಸುಪೂಜಿತಾಂ ॥ ೫ ॥

ತಸ್ಯಾ ಏವ ಬಹಿಃ ಕಾರ್ಯಂ ಸ್ಥಂಡಿಲಂ ಸುಸಮಾಹಿತಃ ।
ಶುಚೌ ಭೂಮಿವಿಭಾಗೇ ತು ವೀರಂ ಸಂಸ್ಥಾಪ್ಯ ಯತ್ನತಃ ॥ ೬ ॥

ಕುರ್ಯಾದ್ಧೋಮಂ ತಿಲೈಃ ಸ್ನಾತಃ ಸರ್ಪಿಷಾ ಚ ವಿಶೇಷತಃ ।
ಆದಿತ್ಯಗ್ರಸವೇಲಾಯಾಂ ಜಪೇಚ್ಛ್ವೇತಾಂ ಮಹಾಮತೇ ॥ ೭ ॥

---

ನಾರಾಯಣನನ್ನೇ ಧ್ಯಾನಿಸಬೇಕು. (ಹೀಗೆ ಇಂದ್ರಿಯ ಸೌಖ್ಯಕ್ಕೆ ಅಧೀನನಾಗಿ ಇಂದ್ರಿಯಗಳು ಕೆಡದಂತೆ ಅವುಗಳನ್ನು ಕಾಪಾಡುವವನಾದುದರಿಂದ ಅಕ್ಷಜಸೌಖ್ಯವನ್ನು ಅಧಃಕರಣಮಾಡಿ ಇಂದ್ರಿಯಪೋಷಣಕಾರ್ಯವನ್ನು ನೆರವೇರಿಸಿದ್ದರಿಂದ ಖಪೋಷ ಎಂದರೆ ಇಂದ್ರಿಯಪೋಷಕನಾದ ಸೂರ್ಯನಾರಾಯಣನೆಂದು ರೂಢಿಯಾಯಿತು.

೪. ಬಳಿಕ ಜಗದೀಶನೂ, ತಮೋನಾಶಕನೂ, ಶೀಘ್ರಗಾಮಿಯೂ, ಇಂದ್ರಿಯಪೋಷಕನೂ ಆದ ಸೂರ್ಯನಾರಾಯಣನನ್ನು ಪೂಜಿಸಿ ಆಮೇಲೆ ತ್ರಿಚಮಂತ್ರವನ್ನು ಜಪಿಸಬೇಕು.

೫. ಮಹಾ ಶ್ವೇತಾನಾಮಕವಾದ ತ್ರಿಚವನ್ನು ಪೂಜಿಸಬೇಕು ಸೂರ್ಯದೇವನನ್ನು ಪೂಜಿಸಬೇಕು. ತ್ರಿಚವನ್ನು ಸ್ಥಾಪನಮಾಡಿ ಗಂಧ ಪುಷ್ಪಗಳಿಂದ ಚೆನ್ನಾಗಿ ಪೂಜಿಸಿ ಸಮಾಧಾನಚಿತ್ತನಾಗಿ ಅದರ ಹೊರಭಾಗದಲ್ಲೇ ಸ್ಥಂಡಿಲವನ್ನು ರಚಿಸಬೇಕು.

೬. ಸಾರಿಸಿ ಶುಚಿಮಾಡಿದ ಭೂಭಾಗದಲ್ಲಿ ಯತ್ನದಿಂದ ಅಗ್ನಿಪ್ರತಿಷ್ಠಾಪನೆ ಮಾಡಿ ಆಜ್ಯದಿಂದ ಹೋಮ ಮಾಡಬೇಕು.

೭. ಅಯ್ಯಾ ಮಹಾಮತಿಯೇ! ಈ ವ್ರತಿಯು ಆ ದಿನ ಎಳ್ಳು ಅರೆದು ಹಚ್ಚಿಕೊಂಡು ಸ್ನಾನಮಾಡಿ ಈ ಪೂಜಾ ಹೋಮಾದಿಗಳನ್ನು ಮಾಡಬೇಕು. ಸೂರ್ಯಗ್ರಹಣ ಕಾಲದಲ್ಲಿ ತ್ರಿಚವನ್ನು ಜಪಿಸಬೇಕು.

ಮುಕ್ತೇ ದಿನಕರೇ ಪಶ್ಚಾತ್ ಸ್ನಾನಂ ಕೃತ್ವಾ ಸಮಾಹಿತಃ ।
ಕೃತ್ವಾ ಪೂಜಾಂ ಮಹಾಶ್ವೇತಾಂ ಖಷೋಲ್ಕಂ ಚ ಗ್ರಹಾಧಿಪಂ ॥ ೮ ॥

ಬ್ರಾಹ್ಮಣಾನ್ವಾಚಯಿತ್ವಾ ಚ ತತೋ ಭುಂಜೀತ ವಾಗ್ಯತಃ ।
ಆದಿತ್ಯಗ್ರಹಯುಕ್ತೇಽಸ್ಮಿನ್ವಾರೇ ತ್ರಿಪುರಸೂದನ ॥ ೯ ॥

ಯತ್ಕರ್ಮ ಕ್ರಿಯತೇ ಪುಣ್ಯಂ ತತ್ಸರ್ವಂ ಶುಭದಂ ಭವೇತ್ ।
ಸ್ನಾನದಾನ ಜಪಾದೀನಾಂ ಕರ್ಮಣಾಂ ಗೋವೃಷಧ್ವಜ ॥ ೧೦ ॥

ಅನಂತಂ ಹಿ ಫಲಂ ತೇಷಾಂ ಭವತ್ಯಸ್ಮಿನ್ನ ಸಂಶಯಃ ।
ಕೃತಾನಾಂ ತು ಗಣಶ್ರೇಷ್ಠ ಭಾಸ್ಕರಸ್ಯ ವಚೋ ಯಥಾ ॥ ೧೧ ॥

ತಸ್ಮಾದ್ದ್ವಿಜಗಣೈಃ ಕಾರ್ಯಂ ಪುಣ್ಯಕರ್ಮವಿಚಕ್ಷಣೈಃ ।
ಏಕ ಭುಕ್ತಂ ಚ ನಕ್ತಂ ಚ ಉಪವಾಸಂ ಗಣಾಧಿಪ ॥ ೧೨ ॥

---

೮. ಗ್ರಹಣ ಬಿಟ್ಟ ಮೇಲೆ ಸ್ನಾನಮಾಡಿ ಅವಹಿತವಾದ ಮನಸ್ಸಿನಿಂದ ಶ್ರಿಚವನ್ನೂ ಗ್ರಹಾಧಿಪತಿಯಾದ ಖಷೋಲ್ಕನನ್ನೂ ಪೂಜಿಸಬೇಕು.

೯. ಬ್ರಾಹ್ಮಣರಿಂದ ತ್ರಿಚಮಂತ್ರ ಪಾರಾಯಣಮಾಡಿಸಿ ಅವರ ಭೋಜನ ವಾದ ಮೇಲೆ ತಾನೂ ಮೌನವಾಗಿ ಭೋಜನಮಾಡಬೇಕು.

೧೦. ಎಲೈ ವೃಷಭಧ್ವಜನೇ ! ಸೂರ್ಯಗ್ರಹಣಯುಕ್ತವಾದ ಭಾನುವಾರ ದಲ್ಲಿ ಸ್ನಾನ, ದಾನ, ಜಪ ಮುಂತಾದ ಯಾವ ಕರ್ಮವನ್ನು ಮಾಡಿದರೂ ಅದೆಲ್ಲವೂ ಶುಭಪ್ರದವಾಗುವುದು.

೧೧. ಅಯ್ಯಾ ! ಗಣಶ್ರೇಷ್ಠನೇ ಅಂಥ ದಿವಸದಲ್ಲಿ ಆಚರಿಸಿದ ಸ್ನಾನ, ದಾನ, ಜಪ ಮೊದಲಾದ ಕರ್ಮಗಳಿಗೆ ಅನಂತಫಲವಾಗುವುದು. ಈ ವಿಷಯದಲ್ಲಿ ಸಂದೇಹ ವಿಲ್ಲ ಎಂಬದಾಗಿ ಸೂರ್ಯದೇವನೇ ಈ ಪ್ರಕಾರ ನಿರೂಪಿಸಿದ್ದಾನೆ.

೧೧. ಆದುದರಿಂದ ಪುಣ್ಯಕರ್ಮಮಾಡುವುದರಲ್ಲಿ ನಿಪುಣರಾದ ಬ್ರಾಹ್ಮಣರು ಆದಿನ ಏಕಭುಕ್ತವನ್ನೋ, ಉಪವಾಸವನ್ನೋ ಮಾಡಬೇಕು. ಯಾರು ಈ ರೀತಿ ಯಾಗಿ ಮಾಡುತ್ತಾರೋ ಅವರು ಪರಮಪದವನ್ನು ಹೊಂದುವರು.

ಯೇ ನಾದಿತ್ಯದಿನೇ ಕುರ್ಯುಸ್ತೇ ಯಾಂತಿ ಪರಮಂ ಪದಂ ।
ಧರ್ಮ್ಯಂ ಪುಣ್ಯಂ ಯಶಸ್ಯಂ ಚ ಪುತ್ರೀಯಂ ಕಾಮದಂ ತಥಾ ॥ ೧೩ ॥

ತಸ್ಮಿನ್ಸ್ನಾನಮುಪ್ರೂಪಸ್ಯ ಗೋದಾನೇನ ಸಮಂ ಭವೇತ್ ।
ದ್ವಾದಶೈತೇ ಮಹಾಬಾಹೋ ವೀರ ಭಾನೋರ್ಮಹಾತ್ಮನಃ ॥ ೧೪ ॥

ತುಷ್ಟಿದಾಃ ಕಥಿತಾಸ್ತುಭ್ಯಂ ಸರ್ವಪಾಪಭಯಾಪಹಾಃ ।
ಪಠತಾಂ ಶೃಣ್ವತಾಂ ತಾತ ಕುರ್ವತಾಂ ಚ ವಿಶೇಷತಃ ॥ ೧೫ ॥

ಕೃತ್ವೈಕಮೇಷಾಂ ವಿಧಿವದ್ವಾರಂ ವೃಷಭವಾಹನ ।
ವೃಷಾದಿ ತ್ರಿತಯಂ ಪ್ರಾಪ್ಯ ಚಾತ್ರಿಜಾಮುಚಲಾಂ ತಥಾ ॥ ೧೬ ॥

ತತೋ ಯಾತಿ ಪರಂ ಲೋಕಂ ವೃಷಕೇತೋರ್ಮಹಾತ್ಮನಃ ।
ತೇಜಸಾಂಬುಜಸಂಕಾಶಃ ಪ್ರಭಯಾಂಡಜ ಸನ್ನಿಭಃ ॥ ೧೭ ॥

---

೧೩. ಧರ್ಮವನ್ನು ಅನುಸರಿಸಿಯೂ, ಪುಣ್ಯಕರವಾಗಿಯೂ, ಕೀರ್ತಿಕರವಾಗಿಯೂ, ಪುತ್ರಪ್ರದವಾಗಿಯೂ, ಇಷ್ಟಾರ್ಥವನ್ನು ಕೊಡತಕ್ಕದ್ದಾಗಿಯೂ, ಇರುವ ಈ ದಿನ ಅಪೂರ್ವದಾನವನ್ನು ಮಾಡಿದರೆ ಅದು ಗೋದಾನಕ್ಕೆ ಸಮನಾಗುವುದು.

೧೪. ಎಲೈ ವೀರನೇ! ಈ ಹನ್ನೆರಡೂ ಮಹಾತ್ಮನಾದ ಸೂರ್ಯನಿಗೆ ಸಂತೋಷವನ್ನು ಉಂಟುಮಾಡುವುವು, ಇವುಗಳನ್ನು ನಿನಗೆ ಹೇಳಿದೇನೆ.

೧೫. ಅಪ್ಪಾ, ದಿಂಡೀ! ಈ ಪ್ರಕರಣವನ್ನು ಓದುವವರಿಗೂ, ಕೇಳುವವರಿಗೂ, ವಿಶೇಷವಾಗಿ ಆಚರಿಸತಕ್ಕವರಿಗೂ ಸಹ, ಸಮಸ್ತಪಾಪಗಳ ಭಯವನ್ನೂ ಹೋಗಲಾಡಿಸತಕ್ಕದ್ದಾಗಿದೆ.

೧೬. ಎಲೈ ದಿಂಡಿಯೇ! ಪೂರ್ವೋಕ್ತವಾದ ವಿಧಿಯಂತೆ ಒಂದು ಭಾನುವಾರ, ವ್ರತವನ್ನು ಮಾಡಿದರೆ ಧರ್ಮಾರ್ಥಕಾಮಗಳನ್ನೂ, ಸ್ಥಿರಸಂಪತ್ತನ್ನೂ ಹೊಂದುವನು.

೧೭. ಮತ್ತು ಮಹಾತ್ಮನಾದ ಧರ್ಮಧ್ವಜನ ಉತ್ತಮವಾದ ಲೋಕವನ್ನು ಸೇರುತ್ತಾನೆ.

ಪವಿಹೇತಿಸಮೋ ವೀರ್ಯೇ ಕಾಂತ್ಯಾ ಚಂದ್ರಸಮಪ್ರಭಃ ॥ ೧೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಆದಿತ್ಯವಾರಕಲ್ಪೇ ಮಹಾಶ್ವೇತವಾರವಿಧಿವರ್ಣನಂ ನಾಮ ದ್ವಿನವತಿತಮೋಽಧ್ಯಾಯಃ



---

೧೮. ಅವನು ತೇಜಸ್ಸಿನಲ್ಲಿ ಕಮಲಕ್ಕೆ ಸಮನಾಗಿಯೂ, ಕಾಂತಿಯಲ್ಲಿ ಸೂರ್ಯನಿಗೆ ಸಮನಾಗಿಯೂ, ಪರಾಕ್ರಮದಲ್ಲಿ ಇಂದ್ರನಿಗೆ ಸಮನಾಗಿಯೂ, ಕಾಂತಿಯಲ್ಲಿ ಚಂದ್ರನಿಗೆ ಸಮನಾಗಿಯೂ, ಇರುವನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಬ್ರಾಹ್ಮಪರ್ವದ ಆದಿತ್ಯವಾರಕಲ್ಪದಲ್ಲಿ ಮಹಾಶ್ವೇತವಾರವಿಧಿವರ್ಣನೆ ಎಂಬ ತೊಂಬತ್ತೆರಡನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ತ್ರಿನವತಿತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಯೇಷಾಂ ಸ್ಯುರ್ಧರ್ಮಕಾರ್ಯಾಣಿ ಸದೈವೋದ್ದಿಶ್ಯಭಾಸ್ಕರಂ ।
ನ ಕುಲೇ ಜಾಯತೇ ತೇಷಾಂ ದರಿದ್ರೋ ವ್ಯಾಧಿತೋಽಪಿ ವಾ ॥ ೧ ॥

ದೇವತಾಯನಭೂಮೇಸ್ತು ಗೋಮಯೇನೋಪಲೇಪನಂ ।
ಯಃ ಕರೋತಿ ನರೋ ಭಕ್ತ್ಯಾ ಸದ್ಯಃ ಪಾಪಾತ್ ಪ್ರಮುಚ್ಯತೇ ॥ ೨ ॥

ಶ್ವೇತಯಾ ರಕ್ತಯಾ ವಾಪಿ ಪೀತಮೃತ್ತಿಕಯಾಪಿ ವಾ ।
ಉಪಲೇಪನಕರ್ತಾ ವೈ ಚಿಂತಿತಂ ಲಭತೇ ಫಲಂ ॥ ೩ ॥

---

### ತೊಂಭತ್ತಮೂರನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಸೂರ್ಯೋದ್ದೇಶವಾಗಿ ಮಾಡತಕ್ಕ ಧರ್ಮಕಾರ್ಯಗಳು ಯಾರ ಕುಲದಲ್ಲಿ ನಡೆಯುವುವೋ ಅವರ ಕುಲದಲ್ಲಿ ಯಾವನೊಬ್ಬನೂ ದರಿದ್ರನಾಗಲಿ, ರೋಗಪೀಡಿತನಾಗಲಿ ಆಗುವುದಿಲ್ಲ.

೨. ಯಾವನು ದೇವಾಲಯದ ನೆಲವನ್ನು ಭಕ್ತಿಪೂರ್ವಕವಾಗಿ ಸಗಣಿಯಿಂದ ಸಾರಿಸುವನೋ ಅವನು ತತ್ಕ್ಷಣವೇ ಪಾಪದಿಂದ ಬಿಡುಗಡೆಹೊಂದುತ್ತಾನೆ.

೩. ಬಿಳಿಯ ಮಣ್ಣಿನಿಂದಾಗಲಿ, ಕೆಂಪುಮಣ್ಣಿನಿಂದಾಗಲಿ ಅಥವಾ ಹಳದಿಯ ಮಣ್ಣಿನಿಂದಾಗಲಿ; ದೇವಾಲಯವನ್ನು ಸಾರಿಸಿದವನು ಮನಸ್ಸಿಗೆ ಅಭೀಷ್ಟವಾದ ಫಲವನ್ನು ಪಡೆಯುತ್ತಾನೆ.

ಚಿತ್ರಭಾನುಂ ವಿಚಿತ್ರೈಶ್ಚ ಕುಸುಮೈರ್ಯಸ್ಸುಗಂಧಿಭಿಃ ।
ಪೂಜಯೇತ್ಸೋಪವಾಸಸ್ತು ಸ ಕಾಮಾನೀಪ್ಸಿತಾಲ್ಲಭೇತ್ ॥ ೪ ॥

ಘೃತೇನ ದೀಪಂ ಪ್ರಜ್ವಾಲ್ಯ ತಿಲತೈಲೇನ ವಾ ರವೇಃ ।
ಪ್ರಯಾತಿ ಸೂರ್ಯಭವನಂ ದೀಪಕೋಟಿಶತೈರ್ವೃತಃ ॥ ೫ ॥

ದೀಪತೈಲಪ್ರದಾನೇನ ನ ಯಾತಿ ನರಕಂ ನರಃ ।
ದೀಪತೈಲಂ ತಿಲಾಶ್ಚೈವ ಮಹಾಪಾತಕ ನಾಶನಾಃ ॥ ೬ ॥

ದೀಪಂ ದದಾತಿ ಯೋ ನಿತ್ಯಂ ಭಾಸ್ಕರಾಯತನೇಷು ಚ ।
ಚತುಷ್ಪಥೇಷು ತೀರ್ಥೇಷು ರೂಪೌಜಸ್ವೀ ಹ ಜಾಯತೇ ॥ ೭ ॥

ಯಸ್ತು ಕಾರಯತೇ ದೀಪಂ ರವೇರ್ಭಕ್ತಿಸಮನ್ವಿತಃ ।
ಸ ಕಾಮಾನೀಪ್ಸಿತಾನ್ ಪ್ರಾಪ್ಯ ವೃಂದಾರಕಪುರಂ ವ್ರಜೇತ್ ॥ ೮ ॥

---

೪. ಯಾವನು ಉಪವಾಸಮಾಡಿ ಸೂರ್ಯನನ್ನು ವಿಚಿತ್ರಗಳಾದ ಸುವಾಸನಾ ಪುಷ್ಪಗಳಿಂದ ಪೂಜಿಸುವನೋ ಅವನು ಬೇಕುಬೇಕಾದ ಇಷ್ಟಾರ್ಥಗಳನ್ನೆಲ್ಲಾ ಹೊಂದುತ್ತಾನೆ.

೫. ಯಾವನು ಸೂರ್ಯಸಮ್ಮುಖದಲ್ಲಿ ತುಪ್ಪದಿಂದಾಗಲಿ, ಎಣ್ಣೆಯಿಂದಾಗಲಿ, ದೀಪವನ್ನು ಉರಿಸುವನೋ ಅವನು ಕೋಟ್ಯಂತರ ದೀಪಗಳನ್ನು ಹಿಡಿಸಿಕೊಂಡು ಸೂರ್ಯಲೋಕಕ್ಕೆ ಹೋಗುತ್ತಾನೆ.

೬. ಸೂರ್ಯದೇವಾಲಯದ ದೀಪಕ್ಕೆ ಬೇಕಾದ ಎಣ್ಣೆಯನ್ನು ದಾನಮಾಡೋಣದರಿಂದ ಮನುಷ್ಯನು ನರಕಭಯವನ್ನು ತಪ್ಪಿಸಿಕೊಳ್ಳುತ್ತಾನೆ. ದೀಪದ ಎಣ್ಣೆಯ ದಾನವೂ, ತಿಲದಾನವೂ, ಮಹಾಪಾಪಗಳನ್ನು ನಾಶಮಾಡತಕ್ಕವುಗಳಾಗಿವೆ.

೭. ಯಾರು ಸೂರ್ಯದೇವಾಲಯಗಳಲ್ಲೂ, ನಾಲ್ಕುಬೀದಿ ಕೂಡುವ ಚೌಕಗಳಲ್ಲೂ, ಪುಣ್ಯ ತೀರ್ಥಕ್ಷೇತ್ರದಲ್ಲಿಯೂ, ನಿತ್ಯವೂ ದೀಪವನ್ನು ಹತ್ತಿಸುವನೋ ಅವನು ಸ್ಫುರದ್ರೂಪಿಯೂ, ಓಜಸ್ವಿಯೂ, ಆಗುತ್ತಾನೆ.

೮. ಯಾವನು ಭಕ್ತಿಯುತನಾಗಿ ಸೂರ್ಯೋದ್ದೇಶದಿಂದ ದೀಪವನ್ನು ಹತ್ತಿಸುವನೋ ಅವನು ಬೇಕಾದ ಇಷ್ಟಾರ್ಥಗಳನ್ನು ಹೊಂದಿ ದೇವಲೋಕಕ್ಕೆ ಹೋಗುತ್ತಾನೆ.

ಯಃ ಸಮಾಲಭತೇ ಸೂರ್ಯಂ ಚಂದನಾಗುರುಕುಂಕುಮೈಃ ।
ಕರ್ಪೂರರೇಣ ವಿಮಿಶ್ರೈಶ್ಚ ತಥಾ ಕಸ್ತೂರಿಕಾನ್ವಿತೈಃ ॥ ೯ ॥

ಶುಭಂ ಕಾಲಂ ಕೋಟಿಶತಂ ವಿಹೃತ್ಯ ಚ ಭವಾಲಯೇ ।
ಪುನಃ ಸಂಜಾಯತೇ ಭೂಮೌ ರಾಜರಾಜೋ ನ ಸಂಶಯಃ ।
ಸರ್ವಕಾಮಸಮೃದ್ಧಾತ್ಮಾ ಸರ್ವಲೋಕನಮಸ್ಕೃತಃ ॥ ೧೦ ॥

ಚಂದನೋದಕಮಿಶ್ರೈಶ್ಚ ದತ್ವಾರ್ಘ್ಯಂ ಕುಸುಮೈ ರವೇಃ ।
ಸಪುತ್ರಪೌತ್ರಪತ್ನೀಕಃ ಸ್ವರ್ಗಲೋಕೇ ಮಹೀಯತೇ ॥ ೧೧ ॥

ಸುಗಂಧೋದಕಮಿಶ್ರೈಸ್ತು ದತ್ವಾರ್ಘ್ಯಂ ಕುಸುಮೈ ರವೇಃ ।
ದೇವಲೋಕೇ ಚಿರಂ ಸ್ಥಿತ್ವಾ ರಾಜಾ ಭವತಿ ಭೂತಲೇ ॥ ೧೨ ॥

ಸಹಿರಣ್ಯೇನ ಚಾರ್ಘೇಣ ರಕ್ತೋದಕಯುತೇನ ವಾ ।
ಕೋಟೀಶತಂ ತು ವರ್ಷಾಣಾಂ ಸ್ವರ್ಗಲೋಕೇ ಮಹೀಯತೇ ॥ ೧೩ ॥

---

೯-೧೦. ಪಚ್ಚಕರ್ಪೂರ, ಕಸ್ತೂರಿ ಇವುಗಳನ್ನೂ ಚಂದನ, ಅಗರು, ಕೇಸರಿ ಇವುಗಳನ್ನೂ ತೆಯ್ದು ಗಂಧದೊಡನೆ ಮಿಶ್ರಮಾಡಿ ಯಾರು ಸೂರ್ಯದೇವನಿಗೆ (ಪ್ರತಿಮೆಗೆ) ಅನುಲೇಪನಮಾಡುವನೋ ಅವನು ಕೋಟ್ಯಂತರ ವರ್ಷಗಳು ಶಿವ ಲೋಕದಲ್ಲಿ ವಿಹರಿಸಿ ಆಮೇಲೆ ಭೂಮಿಯಲ್ಲಿ ರಾಜಾಧಿರಾಜನಾಗಿ ಹುಟ್ಟುತ್ತಾನೆ. ಅಲ್ಲದೆ ಅವನು ಸರ್ವ ಇಷ್ಟಗಳನ್ನು ಪೂರ್ಣಮಾಡಿಕೊಂಡವನೂ ಸರ್ವಲೋಕಗಳಿಂದ ಪೂಜಿತನೂ ಆಗುತ್ತಾನೆ. ಇದರಲ್ಲಿ ಸಂಶಯವಿಲ್ಲ.

೧೧. ಚಂದನ ಮಿಶ್ರವಾದ ನೀರು ಪುಷ್ಪ ಇವುಗಳಿಂದ ಸೂರ್ಯನಿಗೆ ಅರ್ಘ್ಯ ಪ್ರದಾನಮಾಡಿದವನು ಪತ್ನೀಪುತ್ರ ಪೌತ್ರರುಸಹಿತವಾಗಿ ಸ್ವರ್ಗಲೋಕಕ್ಕೆ ಹೋಗಿ ಅಲ್ಲಿ ಪೂಜಿತನಾಗುತ್ತಾನೆ.

೧೨. ಕೈಯಲ್ಲಿ ಪುಷ್ಪವನ್ನು ಇಟ್ಟುಕೊಂಡು ಗಂಧಮಿಶ್ರವಾದ ಜಲದಿಂದ ಸೂರ್ಯನಿಗೆ ಅರ್ಘ್ಯವನ್ನು ಕೊಟ್ಟ ಮನುಷ್ಯನು ದೇವಲೋಕಕ್ಕೆ ಹೋಗಿ ಅಲ್ಲಿ ಬಹುಕಾಲ ವಾಸಿಸಿ ಆಮೇಲೆ ಭೂಮಿಯಲ್ಲಿ ಜನಿಸಿ ರಾಜನಾಗುತ್ತಾನೆ.

೧೩. ಕೈಯಲ್ಲಿ ಚಿನ್ನವನ್ನಿಟ್ಟುಕೊಂಡು ಕೆಂಪುಗಂಧಮಿಶ್ರವಾದ ಉದಕದಿಂದ ಯಾವನು ಸೂರ್ಯನಿಗೆ ಅರ್ಘ್ಯವನ್ನು ಕೊಡುವನೋ ಅವನು ಸ್ವರ್ಗದಲ್ಲಿ ನೂರು ಕೋಟಿವರ್ಷಗಳಕಾಲ ಪೂಜಿತನಾಗುತ್ತಾನೆ.

ಪದ್ಮೈರಭ್ಯರ್ಚನಂ ಕೃತ್ವಾ ರವೇಃ ಸ್ವರ್ಗಗತೋ ನರಃ ।
ಪದ್ಮೇ ವಸತಿ ವರ್ಷಾಣಾಂ ಸ್ತ್ರೀಪದ್ಮಶತಸಂವೃತಃ ॥ ೧೪ ॥

ಗುಗ್ಗುಲಂ ಸಘೃತಂ ದತ್ವಾ ರವೇರ್ಭಕ್ತಿಸಮನ್ವಿತಃ ।
ತತ್‌ಕ್ಷಣಾತ್ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥ ೧೫ ॥

ಪಕ್ಷಂ ತು ಗುಗ್ಗುಲಂ ದತ್ವಾ ಮುಚ್ಯತೇ ಬ್ರಹ್ಮಹತ್ಯಯಾ ।
ಸಂವತ್ಸರೇಣ ಲಭತೇ ಅಶ್ವಮೇಧಫಲಂ ಶಿವ ॥ ೧೬ ॥

ಧೂಪೇನ ಲಭತೇ ಸ್ವರ್ಗಂ ತುರುಷ್ಕೇಣ ಸುಗಂಧಿನಾ ।
ಕರ್ಪೂರಾಗುರುಧೂಪೇನ ರಾಜಸೂಯಫಲಂ ಲಭೇತ್ ॥ ೧೭ ॥

---

೧೪. ಕಮಲಪುಷ್ಪಗಳಿಂದ ಸೂರ್ಯನನ್ನು ಪೂಜಿಸಿದ ಮನುಷ್ಯನು ಸ್ವರ್ಗಕ್ಕೆ ಹೋಗಿ ಅಲ್ಲಿ ಒಂದು ಪದ್ಮಸಂಖ್ಯೆಯಷ್ಟು ವರ್ಷಗಳಕಾಲ, ನೂರು ಪದ್ಮಸಂಖ್ಯೆಯ ಸ್ತ್ರೀಯರಿಂದ ಸುತ್ತುವರಿಯಲ್ಪಟ್ಟು ವಾಸಿಸುತ್ತಾನೆ. (ಕೋಟಿ, ದಶಕೋಟಿ, ಅರ್ಬುದ, ಶಂಖ, ಮಹಾಶಂಖ, ಪದ್ಮ, ಮಹಾಪದ್ಮ, ಇವು ಏಕ, ದಶ, ಶತ, ಇತ್ಯಾದಿಯಂತೆ ಸಂಖ್ಯಾಸ್ಥಾನ.)

೧೫. ತುಪ್ಪಮಿಶ್ರವಾದ ಗುಗ್ಗುಳವನ್ನು ಭಕ್ತಿಯಿಂದ ಸೂರ್ಯನಿಗೆ ಸಮರ್ಪಿಸಿದರೆ ಆಕ್ಷಣದಲ್ಲಿಯೇ ಸರ್ವಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ. ಇದಕ್ಕೆ ಸಂಶಯವಿಲ್ಲ.

೧೬. ಹದಿನೈದುದಿನಗಳು ಎಂದರೆ ಒಂದು ಪಕ್ಷಕಾಲ, ಗುಗ್ಗುಲಧೂಪವನ್ನು ಹಾಕಿದರೆ, ಆತನು ಬ್ರಹ್ಮಹತ್ಯೆಯಿಂದ ಬಿಡುಗಡೆ ಹೊಂದುತ್ತಾನೆ. ಅಯ್ಯಾ, ಶಿವ ಸ್ವರೂಪನಾದ ದಿಂಡಿಯೇ! ಒಂದು ವರ್ಷಕಾಲ ಗುಗ್ಗುಳಧೂಪವನ್ನು ಹಾಕಿದರ ಒಂದು ಅಶ್ವಮೇಧಯಾಗ ಮಾಡಿದ ಫಲದಷ್ಟು ಪುಣ್ಯವನ್ನು ಹೊಂದುತ್ತಾನೆ.

೧೭. ಸುಗಂಧಿಯಾದ ತದುಕಿನಮರದ (ತುರುಷ್ಕದೇಶದಲ್ಲಿ ಬೆಳೆದ ಮರದ) ಧೂಪವನ್ನು ಹಾಕಿದರೆ ಸ್ವರ್ಗವನ್ನು ಪಡೆಯುತ್ತಾನೆ. ಕರ್ಪೂರ, ಅಗರುಚಕ್ಕೆ ಇವುಗಳ ಧೂಪವನ್ನು ಸಮರ್ಪಿಸಿದರೆ ರಾಜಸೂಯಯಾಗ ಮಾಡಿದಷ್ಟು ಫಲ ಹೊಂದುತ್ತಾನೆ.

ಪೂರ್ವಾಹ್ನೇ ಮಾನವೋ ಭಕ್ತ್ಯಾ ಶ್ರದ್ಧಯಾ ಯೋಽರ್ಚಯೇದ್ರವಿಂ ।
ಸ ತತ್ಫಲಮವಾಪ್ನೋತಿ ಯದ್ದತ್ತೇ ಕಪಿಲಾಶತೇ ॥ ೧೮ ॥

ಮಧ್ಯಾಹ್ನೇ ಯೋಽರ್ಚಯೇತ್ಸೂರ್ಯಂ ಪ್ರಯತಾತ್ಮಾ ಜಿತೇಂದ್ರಿಯ ।
ಲಭತೇ ಭೂಮಿದಾನಸ್ಯ ಗೋ ಶತಸ್ಯ ಚ ತತ್ಫಲಂ ॥ ೧೯ ॥

ಪಶ್ಚಿಮಾಯಾಂ ತು ಸಂಧ್ಯಾಯಾಂ ಯೋಽರ್ಚಯೇದ್ಭಾಸ್ಕರಂ ನರಃ ।
ಶುಚಿಃ ಶುಕ್ಲಾಂಬರೋಷ್ಣೀಷೋ ಗೋಸಹಸ್ರಫಲಂ ಲಭೇತ್ ॥ ೨೦ ॥

ಅರ್ಧರಾತ್ರೇ ತು ಯೋ ಹೇಲಿಂ ಭಕ್ತ್ಯಾ ಸಂಪೂಜಯೇನ್ನರಃ ।
ಜಾತಿಸ್ಮರತ್ವಮಾಪ್ನೋತಿ ಕುಲೇ ಜಾತೋ ವೃಷಾನ್ವಿತೇ ॥ ೨೧ ॥

ಪ್ರದೋಷರಾತ್ರಿವೇಲಾಯಾಂ ಯಃ ಪೂಜಯತಿ ಭಾಸ್ಕರಂ ।
ಸ ಗತ್ವಾ ಸಹಸಾ ವೀರ ಕ್ರೀಡೇತ್ ಸೌಮನಸಂ ಕ್ಷಯಂ ॥ ೨೨ ॥

---

೧೮. ಯಾವ ಮನುಷ್ಯನು ಪೂರ್ವಾಹ್ಣದಲ್ಲಿ ಶ್ರದ್ಧೆಯಿಂದ ಸೂರ್ಯನನ್ನು ಪೂಜಿಸುವನೋ ಅವನಿಗೆ ನೂರು ಕಪಿಲವರ್ಣದ ಗೋವುಗಳನ್ನು ದಾನಮಾಡುವುದರಿಂದ ಆಗುವಂಥ ಫಲವು ಲಭಿಸುವುದು.

೧೯. ಯಾವನು ಇಂದ್ರಿಯನಿಗ್ರಹ ಮಾಡಿ ಶುದ್ಧಚಿತ್ತನಾಗಿ, ನೇಮದಿಂದ ಮಧ್ಯಾಹ್ನಕಾಲದಲ್ಲಿ ಸೂರ್ಯನನ್ನು ಪೂಜಿಸುವನೋ ಅವನು ನೂರು ಗೋವುಗಳನ್ನೂ, ಭೂಮಿಯನ್ನೂ, ದಾನಮಾಡಿದಷ್ಟು ಫಲವನ್ನು ಹೊಂದುತ್ತಾನೆ.

೨೦. ಯಾವ ಮನುಷ್ಯನು ಬಿಳಿಯ ಬಟ್ಟೆಗಳು, ಬಿಳಿಯರುಮಾಲು ಇವನ್ನು ಧರಿಸಿ ಸಾಯಂಸಂಧ್ಯೆಯಲ್ಲಿ ಸೂರ್ಯನನ್ನು ಪೂಜಿಸುವನೋ ಅವನು ಸಹಸ್ರ ಗೋದಾನದ ಫಲವನ್ನು ಹೊಂದುತ್ತಾನೆ.

೨೧. ಯಾವನು ಅರ್ಧರಾತ್ರಿಯಲ್ಲಿ ಸೂರ್ಯಪ್ರತಿಕೃತಿಯನ್ನು ಭಕ್ತಿಯಿಂದ ಪೂಜಿಸುತ್ತಾನೆಯೋ, ಅವನು ಪುಣ್ಯಯುಕ್ತವಾದ ವಂಶದಲ್ಲಿ ಹುಟ್ಟಿ ಪೂರ್ವಜನ್ಮದ ಸ್ಮರಣೆಯುಳ್ಳವನಾಗುತ್ತಾನೆ.

೨೨. ಯಾವನು ಪ್ರದೋಷಕಾಲದಲ್ಲಿ ಸೂರ್ಯನನ್ನು ಆರಾಧಿಸುವನೋ ಅವನು ಜಾಗ್ರತೆ ದೇವತೆಗಳ ಲೋಕಕ್ಕೆ ಹೋಗಿ ಕ್ರಿಡಿಸುತ್ತಾನೆ. (ಕ್ಷಯ-ಗೃಹ)

ದಂಡನಾಯಕ ವೇಲಾಯಾಂ ಪ್ರಭಾತಸಮಯೇ ಪುನಃ ।
ಪೂಜಯಿತ್ವಾ ರವಿಂ ಭಕ್ತ್ಯಾ ವ್ರಜೇದನಿಮಿಷಾಲಯಂ ॥ ೨೩ ॥

ಏವಂ ವೇಲಾಸು ಸರ್ವಾಸು ಅವೇಲಾಸು ಚ ಮಾನವಃ ।
ಭಕ್ತ್ಯಾ ಪೂಜಯತೇ ಯೋಽರ್ಕಮರ್ಕಪುಷ್ಪೈಃ ಸಮಾಹಿತಃ ॥ ೨೪ ॥

ತೇಜಸಾದಿತ್ಯಸಂಕಾಶೋ ಹ್ಯರ್ಕಲೋಕೇ ಮಹೀಯತೇ ।
ಅಯನೇತೂತ್ತರೇ ಸೂರ್ಯಮಥವಾ ದಕ್ಷಿಣಾಯನೇ ।
ಪೂಜಯೇದ್ಯಸ್ತು ವೈ ಭಕ್ತ್ಯಾ ಸ ಗಚ್ಛೇತ್ಕಂಜಜಾಲಯಂ ॥ ೨೫ ॥

ತತ್ರಸ್ಥಃ ಪೂಜ್ಯತೇ ದೇವೈಃ ಸರ್ವೈಃ ಸುಹೃದಯೈಸ್ತಥಾ ।
ಗೋಪತಿಃ ಪೂಜ್ಯತೇ ತದ್ವದ್ಗೋಪತಿಪ್ರಮುಖೈಃ ಸುರೈಃ ॥ ೨೬ ॥

---

೨೩. ಅಯ್ಯಾ, ದಂಡನಾಯಕನೇ! ಪ್ರಾತಃಕಾಲದ ವೇಳೆಯಲ್ಲಿ ಸೂರ್ಯನನ್ನು ಭಕ್ತಿಯಿಂದ ಪೂಜಿಸಿದವನು, ದೇವತೆಗಳ ಗೃಹಕ್ಕೆ (ಎಂದರೆ, ದೇವಲೋಕಕ್ಕೆ) ಹೋಗುತ್ತಾನೆ.

೨೪. ಇದು ಪೂಜೆಗೆ ಸಕಾಲ, ಇದು ಅಕಾಲ ಎಂದು ಭೇದವಿಡದೆ ಎಲ್ಲ ಕಾಲದಲ್ಲಿಯೂ ಯಾವನು ಅವಹಿತನಾಗಿ (ಅವಧಾನವಿಟ್ಟು) ಎಕ್ಕದ ಹೂಗಳಿಂದ ಸೂರ್ಯನನ್ನು ಪೂಜಿಸುವನೋ ಆ ಮನುಷ್ಯನು ತೇಜಸ್ಸಿನಿಂದ ಸೂರ್ಯನಿಗೆ ಸಮನಾಗಿ ಆದಿತ್ಯಲೋಕವನ್ನು ಸೇರಿ ಅಲ್ಲಿ ಪೂಜ್ಯನಾಗುತ್ತಾನೆ.

೨೫. ಉತ್ತರಾಯಣ (ಮಕರ) ಸಂಕ್ರಮಣದಲ್ಲಿಯಾಗಲಿ, ದಕ್ಷಿಣಾಯನ (ಕರ್ಕಾಟಕ) ಸಂಕ್ರಮಣದಲ್ಲಿಯಾಗಲಿ, ಯಾವನು ಸೂರ್ಯನನ್ನು ಭಕ್ತಿಯಿಂದ ಪೂಜಿಸುವನೋ ಅವನಿಗೆ ಬ್ರಹ್ಮಲೋಕಪ್ರಾಪ್ತಿಯಾಗುವುದು.

೨೬. ಅಲ್ಲಿ ಬ್ರಹ್ಮಲೋಕದಲ್ಲಿ ಸುಹೃದಯರು (ಒಳ್ಳೆಯ ಮನಸ್ಸುಳ್ಳವರು) ಆಗಿರುವ ಸಮಸ್ತ ದೇವತೆಗಳಿಂದಲೂ ಪೂಜಿಸಲ್ಪಡುತ್ತಾನೆ. ಕಿರಣಾಧಿಪತಿಯಾದ ಸೂರ್ಯನೂ ಗೋಪತಿ (ವಿಷ್ಣು) ಮುಂತಾದ ದೇವತೆಗಳಿಂದ ಅದೇ ರೀತಿಯಲ್ಲಿ ಪೂಜೆ ಹೊಂದುತ್ತಾನೆ.

ವಿಷುವೇಷೂಪರಾಗೇಷು ಷಡಶೀತಿಮುಖೇಷು ಚ ।
ಪೂಜಯಿತ್ವಾ ರವಿಂ ಭಕ್ತ್ಯಾ ನಾತ್ಮಾನಂ ಶೋಚತೇ ನರಃ ॥ ೨೭ ॥

ವಿಬುಧ್ಯ ವಾ ಸ್ವಯಂ ವಾಪಿ ಯೋ ನಮಸ್ಕುರುತೇ ರವಿಂ ।
ಸಂತುಷ್ಟೋ ಭಾಸ್ಕರಸ್ತಸ್ಮೈ ಗತಿಮಿಷ್ಟಾಂ ಪ್ರಯಚ್ಛತಿ ॥ ೨೮ ॥

ಕೃಶರಾಪಾಯಸಾಪೂಪಪಲಲೋನ್ಮಿಶ್ರಮೋದಕೈಃ ।
ಬಲಿಂ ಕೃತ್ವಾ ತು ಸೂರ್ಯಾಯ ಸರ್ವಕಾಮವಾಪ್ನುಯಾತ್ ॥ ೨೯ ॥

ನೋದಕಾನಾಂ ಪ್ರದಾನೇನ ಪಾಯಸಸ್ಯ ಚ ಸುವ್ರತ ।
ಮಧುಮಾಂಸರಸಾನಾಂ ಚ ಪ್ರೀಯತೇಽತೀವ ಭಾಸ್ಕರಃ ॥ ೩೦ ॥

ಘೃತೇನ ತರ್ಪಣಂ ಕೃತ್ವಾ ಸದಾ ಸ್ನಿಗ್ಧೋ ಭವೇನ್ನರಃ ।
ತರ್ಪಯಿತ್ವಾ ತು ಮಾಂಸೇನ ಸದ್ಯಃ ಪಾಪಾತ್ಪ್ರಮುಚ್ಯತೇ ॥ ೩೧ ॥

---

೨೭. ವಿಷುವತ್ಪುಣ್ಯಕಾಲ, ಗ್ರಹಣಗಳು, ಷಡಶೀತಿಪುಣ್ಯಕಾಲ, ಇವುಗಳಲ್ಲಿ ಸೂರ್ಯನನ್ನು ಪೂಜಿಸಿದ ಮನುಷ್ಯನು ತನ್ನ ಸ್ಥಿತಿಯನ್ನು ಕುರಿತು ಶೋಕಿಸ ಬೇಕಾಗಿಲ್ಲ.

೨೮. ಇತರರಿಂದ ತಿಳುವಳಿಕೆ ತಂದುಕೊಂಡೋ, ಅಥವಾ ಸ್ವಂತ ಬುದ್ಧಿ ಯಿಂದಲೋ ಸೂರ್ಯನನ್ನು ನಮಸ್ಕರಿಸಿದವನಿಗೆ ಸೂರ್ಯನು ಸಂತುಷ್ಟನಾಗಿ ಇಷ್ಟ ವಾದ ಗತಿಯನ್ನು ಕೊಡುತ್ತಾನೆ.

೨೯. ಕೃಶರ, (ಚಿಗುಳಿ) ಅಪೂಪ, ಪಲಲ (ಮಾಂಸ) ಪಾಯಸ, ಇವು ಮಿಶ್ರವಾದ ಜಲದಿಂದ ಸೂರ್ಯನಿಗೆ ಬಲಿಪ್ರದಾನಮಾಡಿದವನು ಸಮಸ್ತ ಇಷ್ಟಾರ್ಥ ಗಳನ್ನೂ ಹೊಂದುತ್ತಾನೆ.

೩೦. ಅಯ್ಯಾ, ಸುವ್ರತನಾದ ದಿಂಡಿಯೇ! ಕಡುಬು, ಮಾಂಸ, ಪಾಯಸ, ಮಧು ಇವುಗಳನ್ನು ದಾನಮಾಡೋಣದರಿಂದ ಸೂರ್ಯನು ಅತಿಯಾಗಿ ಸಂತುಷ್ಟ ನಾಗುತ್ತಾನೆ.

೩೧. ಸೂರ್ಯನಿಗೆ ತುಪ್ಪದಿಂದ ತೃಪ್ತಿಯನ್ನುಂಟುಮಾಡಿದವನು ಯಾವಾ ಗಲೂ ಸ್ನೇಹಪರನಾಗಿರುತ್ತಾನೆ. ಮಾಂಸದಿಂದ ತೃಪ್ತಿಪಡಿಸಿದವನು ತತ್ಕ್ಷಣವೇ ಪಾಪದಿಂದ ಬಿಡುಗಡೆಹೊಂದುತ್ತಾನೆ.

ಘೃತೇನ ಸ್ನಪನಂ ಕೃತ್ವಾ ಏಕಾಹಮುದಯೇ ರವೇಃ ।
ಗವಾಂ ಶತಸಹಸ್ರಸ್ಯ ದತ್ತಸ್ಯ ಫಲಮಶ್ನುತೇ ॥ ೩೨ ॥

ಗವಾಂ ಕ್ಷೀರೇಣ ಸಂತರ್ಪ್ಯ ಪುಂಡರೀಕಫಲಂ ಲಭೇತ್ ।
ದಧಿನಾ ಸ್ನಾಪಯೇದ್ದೇವಮಶ್ವಮೇಧಫಲಂ ಲಭೇತ್ ॥ ೩೩ ॥

ಸೂರ್ಯಾಯ ತರುಣೀಂ ಧೇನುಂ ಗಾಮೇಕಾಂ ಯಃ ಪ್ರಯಚ್ಛತಿ ।
ಕಂಜಜಾಮಚಲಾಂ ಪ್ರಾಪ್ಯ ಪುನರ್ಲೇಖಪುರಂ ವ್ರಜೇತ್ ॥ ೩೪ ॥

ಗೋಶರೀರೇ ತು ರೋಮಾಣಿ ಯಾವಂತಿ ತ್ರಿಪುರಾಂತಕ ।
ಸ ತಾವದ್ವರ್ಷಕೋಟೀಸ್ತು ಲೇಖಲೋಕೇ ಮಹೀಯತೇ ॥ ೩೫ ॥

---

೩೨. ಸೂರ್ಯೋದಯಕಾಲಕ್ಕೆ ಸರಿಯಾಗಿ ಅರ್ಚಾಸೂರ್ಯಮಂಡಲಕ್ಕೆ ಒಂದು ದಿನವಾದರೂ ಆಜ್ಯಸ್ನಾನ ಮಾಡಿಸಿದರೆ ನೂರುಸಾವಿರ ಗೋದಾನ ಮಾಡಿದಷ್ಟು ಫಲವನ್ನು ಹೊಂದುತ್ತಾನೆ.

೩೩. ಹಸುವಿನ ಹಾಲಿನಿಂದ ಸೂರ್‍ಯನಿಗೆ ತೃಪ್ತಿಯನ್ನುಂಟುಮಾಡಿದವನು ಪೌಂಡರೀಕವೆಂಬ ಯಜ್ಞಮಾಡಿದಷ್ಟು ಫಲ ಹೊಂದುತ್ತಾನೆ. ಸೂರ್ಯನಿಗೆ ಮೊಸರನ್ನು ಅಭಿಷೇಕಮಾಡಿದವನಿಗೆ ಅಶ್ವಮೇಧಯಾಗ ಮಾಡಿದಷ್ಟು ಫಲ ಬರುವುದು.

೩೪. ಸೂರ್ಯನನ್ನುದ್ದೇಶಿಸಿ ಹೊಸದಾಗಿ ಕರುಹಾಕಿರುವ ಒಂದು (ಕಡಸನ್ನು) ಪ್ರಾಯದ ಹಸುವನ್ನು ದಾನಮಾಡಿದ ಮನುಷ್ಯನು ಸ್ಥಿರವಾದ ಸಂಪತ್ತನ್ನು ಹೊಂದಿ ಲೇಖಪುರವನ್ನು (ಎಂದರೆ ದೇವತೆಗಳ ಪಟ್ಟಣವಾದ ಅಮರಾವತಿಯನ್ನು) ಸೇರುತ್ತಾನೆ.

೩೫. ತ್ರಿಪುರಾರಾತಿಸ್ವರೂಪನಾದ ದಿಂಡಿಯೇ! ಆ ಹಸುವಿನ ಮೈಯ್ಯಲ್ಲಿ ಎಷ್ಟು ರೋಮಗಳಿವೆಯೋ, ಅಷ್ಟು ಕೋಟಿವರ್ಷಗಳವರೆಗೆ ದೇವಲೋಕದಲ್ಲಿ ಪೂಜಿತನಾಗುತ್ತಾನೆ.

ಗೋ ಶತಂ ಭಾನವೇ ದತ್ವಾ ರಾಜಸೂಯಫಲಂ ಲಭೇತ್ ।
ಅಶ್ವಮೇಧಫಲಂ ತಸ್ಯ ಯಃ ಸಹಸ್ರಂ ಪ್ರಯಚ್ಛತಿ ॥ ೩೬ ॥

ಗುಗ್ಗುಲಂ ದೇವದಾರುಂ ಚ ದಹೇನ್ನಿತ್ಯಂ ಘೃತಸ್ರವಂ ।
ಆಜ್ಯಧೂಮೋ ಹಿ ದೇವಾನಾಂ ಪ್ರಕೃತ್ಯೈವ ಪ್ರಿಯಃ ಸದಾ ॥ ೩೭ ॥

ಭೇರ್ಯಾದೀನಿ ಚ ವಾದ್ಯಾನಿ ಶಂಖವೇಣ್ವಾದಿಕಾನಿ ಚ ।
ಯೇ ಪ್ರಯಚ್ಛಂತಿ ಸೂರ್ಯಾಯ ಯಾಂತಿ ತೇ ಹಂಸಮಂದಿರಂ ॥ ೩೮ ॥

ವಜ್ರಮಾಹರತೇ ಯಸ್ತು ರವೇರ್ಭಕ್ತಿಸಮನ್ವಿತಃ ।
ತೀರ್ಥೋದಕಮಥೈವಾನ್ಯಃ ಸ ಯಾತಿ ವಿಬುಧಾಲಯಂ ॥ ೩೯ ॥

ವಿಮಾನೈಃ ಸ್ತ್ರೀಶತಾಕೀರ್ಣೈಃ ಕ್ರೀಡಯಿತ್ವಾ ಚಿರಂ ನರಃ ।
ಮಾನುಷತ್ವಮನುಪ್ರಾಪ್ಯ ರಾಜಾ ಭವತಿ ಧಾರ್ಮಿಕಃ ॥ ೪೦ ॥

---

೩೬. ಸೂರ್ಯನನ್ನು ಉದ್ದೇಶಮಾಡಿಕೊಂಡು ನೂರು ಗೋದಾನ ಮಾಡಿದವನು ರಾಜಸೂಯಯಾಗ ಮಾಡಿದ ಫಲವನ್ನು ಹೊಂದುತ್ತಾನೆ. ಸೂರ್ಯಪ್ರೀತ್ಯರ್ಥವಾಗಿ ಸಾವಿರ ಗೋವುಗಳನ್ನು ದಾನಮಾಡಿದವನು ಅಶ್ವಮೇಧಯಜ್ಞ ಮಾಡಿದ ಫಲವನ್ನು ಹೊಂದುತ್ತಾನೆ.

೩೭. ದೇವಾದಾರುಚಕ್ಕೆ, ಗುಗ್ಗುಳ, ಇವನ್ನು ತುಪ್ಪಸೋರುವಂತೆ ಅದ್ದಿ ನಿತ್ಯವೂ ಉರಿಸಬೇಕು. ತುಪ್ಪದ ಹೊಗೆಯು ದೇವತೆಗಳಿಗೆ ಸ್ವಾಭಾವಿಕವಾಗಿಯೇ ಯಾವಾಗಲೂ ಪ್ರಿಯವಾದುದು.

೩೮. ಭೇರಿ, ಶಂಖ, ಕೊಳಲು ಮುಂತಾದ ವಾದ್ಯಗಳನ್ನು ಸೂರ್ಯೋದ್ದೇಶದಿಂದ ಯಾರು ದಾನಮಾಡುವರೋ ಅವರು ಸೂರ್ಯಲೋಕಕ್ಕೆ ಹೋಗುತ್ತಾರೆ.

೩೯. ಸೂರ್ಯನಲ್ಲಿ ತುಂಬಾ ಭಕ್ತಿಯುತನಾಗಿ ಯಾವನು ಅಭಿಷೇಕಕ್ಕೆ ತುಪ್ಪವನ್ನೂ, ತೀರ್ಥೋದಕವನ್ನೂ ತರುವನೋ ಅವನು ದೇವಲೋಕವನ್ನು ಹೊಂದುತ್ತಾನೆ. ("ಘೃತಂ, ವೈವಜ್ರಃ" ಎಂಬ ಶ್ರುತಿಯಿಂದ ವಜ್ರವೆಂದರೆ ಘೃತವೆಂದು ಅರ್ಥಮಾಡಿದೆ.)

೪೦. ಅಲ್ಲದೆ ಆ ಮನುಷ್ಯನು ನೂರಾರು ಹೆಂಗಸರಿಂದ ಕೂಡಿದ ವಿಮಾನಗಳ ಮೇಲೆ ಕುಳಿತು ಕ್ರೀಡಿಸಿ ಮನುಷ್ಯಜನ್ಮ ಬಂದಾಗ ಧಾರ್ಮಿಕನಾದ ರಾಜನಾಗುತ್ತಾನೆ.

ಛತ್ರಂ ಧ್ವಜಂ ವಿತಾನಂ ಚ ಪತಾಕಾಶ್ಚಾಮರಾಣಿ ಚ ।
ಹೇಮದಂಡಾನಿ ವೈ ದದ್ಯಾದ್ರವೇರ್ಯೋ ಭಕ್ತಿಮಾನ್ನರಃ । ॥ ೪೧ ॥

ವಿಮಾನೇನ ಸ ದಿವ್ಯೇನ ಕಿಂಕಿಣೀಜಾಲಮಾಲಿನಾ ।
ಸೂರ್ಯಲೋಕಮತೋ ಗತ್ವಾ ಭವತ್ಯಪ್ಸರಸಾಂ ಪತಿಃ ॥ ೪೨ ॥

ತತೋಪ್ಯೇಷ್ಯ ಸುಚಿರಂ ಕಾಲಂ ಸ್ವರ್ಗಾತ್ಪ್ರತ್ಯಾಗತಃ ಪುನಃ ।
ಮಾನುಷ್ಯೇ ಜಾಯತೇ ರಾಜಾ ಸರ್ವರಾಜನಮಸ್ಕೃತಃ ॥ ೪೩ ॥

ದತ್ವಾ ವಾಸಾಂಸಿ ಸೂರ್ಯಾಯ ಅಲಂಕಾರಾಂಸ್ತಥೈವ ಚ ।
ಕ್ರೀಡತೇ ಜನಲೋಕಸ್ಥೋ ಯಾವದಾಭೂತಸಂಪ್ಲವಂ ॥ ೪೪ ॥

ಗೀತ ವಾದಿತ್ರನೃತ್ಯೈಶ್ಚ ಕುರ್ಯಾಜ್ಜಾಗರಣಂ ರವೇಃ ।
ಗಂಧರ್ವಾಪ್ಸರಸಾಂ ಮಧ್ಯೇ ಕ್ರೀಡತೇ ಸುಚಿರಂ ನರಃ ॥ ೪೫ ॥

---

೪೧. ಛತ್ರಿ, ಬಾವುಟ, ಮೇಲ್ಕಟ್ಟಿನ ಬಟ್ಟೆ, ಸಣ್ಣ ಬಾವುಟಗಳು, ಚಾಮರಗಳು, ಚಿನ್ನದ ಕೋಲುಗಳು, ಇವನ್ನು ಯಾವ ಮನುಷ್ಯನು ಸೂರ್ಯೋದ್ದೇಶದಿಂದ ಕೊಡುವನೋ ಅವನು,

೪೨. ಕಿರುಗಂಟೆಗಳ ಗುಂಪುಗಳ ಮಾಲಿಕೆಯುಳ್ಳ ವಿಮಾನದ ಮೇಲೆ ಕುಳಿತು ಸೂರ್ಯಲೋಕವನ್ನು ಸೇರಿ ಅಪ್ಸರಸ್ತ್ರೀಯರ ಸ್ವಾಮಿಯಾಗುತ್ತಾನೆ

೪೩. ಅಲ್ಲಿ ಬಹುಕಾಲದವರೆಗಿದ್ದು ಸ್ವರ್ಗದಿಂದ ಪುನಃ ಹಿಂದಿರುಗಿ ಬಂದು ಮನುಷ್ಯಜನ್ಮದಲ್ಲಿ ಜನಿಸಿ ಎಲ್ಲಾ ರಾಜರಿಂದಲೂ ನಮಸ್ಕೃತನಾದ ರಾಜನಾಗುತ್ತಾನೆ.

೪೪. ಅರ್ಚಾಮೂರ್ತಿಯಾದ ಸೂರ್ಯನಿಗೆ ವಸ್ತ್ರಗಳನ್ನೂ ಮತ್ತು ಒಡವೆಗಳನ್ನೂ (ಆಭರಣ) ಅರ್ಪಿಸಿದವನು ಮಹೋಲೋಕದ ಮೇಲಿರುವ ಜನಲೋಕದಲ್ಲಿದ್ದುಕೊಂಡು ಪ್ರಳಯದವರೆಗೆ ಕ್ರೀಡಿಸುತ್ತಾನೆ.

೪೫. ಸೂರ್ಯಪ್ರೀತಿಗಾಗಿ ಗಾನ, ವಾದ್ಯ, ನೃತ್ಯ, (ಕುಣಿತ) ಗಳಿಂದ ಜಾಗರಣವನ್ನು ಮಾಡಬೇಕು. ಹೀಗೆ ಮಾಡಿದರೆ ಗಂಧರ್ವರು, ಅಪ್ಸರಸ್ತ್ರೀಯರು, ಇವರ ನಡುವೆ ವಾಸಿಸುವ ಪುಣ್ಯಲಭಿಸಿ ಬಹುಕಾಲದವರೆಗೆ ಕ್ರೀಡಿಸುತ್ತಾನೆ.

ಗಂಧೈಃ ಪುಷ್ಪೈಸ್ತಥಾ ಪತ್ರೈಃ ಸ್ತೋತ್ರೈರ್ವಾ ವಿವಿಧೈಸ್ತಥಾ।
ಯೇ ಸ್ತುವಂತಿ ರವಿಂ ಭಕ್ತ್ಯಾ ತೇ ಯಾಂತಿ ಪತಗಾಲಯಂ ॥ ೪೬ ॥

ಉಷಃ ಸ್ತುವಂತಿ ಯೇ ಸೂರ್ಯಮುಪಗಾಯಂತಿ ತೇ ಸದಾ।
ಪಾಠಕಾಶ್ಚಾರಣಾಶ್ಚೈವ ಸರ್ವೇ ತೇ ಸ್ವರ್ಗಗಾಮಿನಃ ॥ ೪೭ ॥

ಅಶ್ವಯುಕ್ತಂ ಯುಗೈರ್ಯುಕ್ತಂ ಯೋ ದದ್ಯಾದ್ರವಯೇ ರಥಂ।
ಕಾಂಚನಂ ವಾಪಿ ರೌಪ್ಯಂ ವಾ ಮಣಿರತ್ನಾನ್ವಿತಂ ಶುಭಂ ॥ ೪೮ ॥

ಸ ಯಾನೇನಾರ್ಕವರ್ಣೇನ ಕಿಂಕಣೀಜಾಲಮಾಲಿನಾ।
ಸ್ವರ್ಗಲೋಕಮಿತೋ ಗತ್ವಾ ಕ್ರೀಡತೇಽಪ್ಸರಸಾಂ ಸಹ ॥ ೪೯ ॥

ಯಸ್ತು ದಾರುಮಯಂ ಕುರ್ಯಾತ್ ರವೇ ರಥಮನುತ್ತಮಂ।
ಸ ಯಾತ್ಯರ್ಕಸವರ್ಣೇನ ವಿಮಾನೇನಾರ್ಕಮಂಡಲಂ ॥ ೫೦ ॥

---

೪೬. ಯಾರು ಗಂಧ ಪುಷ್ಪ ಪತ್ರಗಳಿಂದ ಪೂಜಿಸಿ ಬಗೆಬಗೆಯ ಸ್ತೋತ್ರಗಳಿಂದ ಸೂರ್ಯನನ್ನು ಭಕ್ತಿಯಿಂದ ಸ್ತುತಿಸುವರೋ ಅವರು ಸೂರ್ಯನ ಆಲಯಕ್ಕೆ ಹೋಗುವರು.

೪೭. ಉಷಃಕಾಲದಲ್ಲಿ (ಬೆಳಗಿನ ಜಾವದಲ್ಲಿ) ಯಾರು ಸೂರ್ಯನನ್ನು ಸ್ತೋತ್ರಮಾಡಿ (ಉಪಗಾನ) ಉದಯರಾಗವನ್ನು ಹೇಳುತ್ತಾರೋ ಅಂಥ ಪಾಠಕರು ಚಾರಣರು ಇವರೆಲ್ಲಾ ಸ್ವರ್ಗಕ್ಕೆ ಹೋಗುತ್ತಾರೆ.

೪೮. ಕುದುರೆಗಳನ್ನು ಹೂಡಿದ ನೊಗಗಳುಳ್ಳ ರಥವನ್ನು ಯಾವನು ಸೂರ್ಯನಿಗೆ ಸಮರ್ಪಿಸುವನೋ ಮತ್ತು ಒಳ್ಳೆಯ ಚಿನ್ನದಿಂದ ಅಥವಾ ಬೆಳ್ಳಿಯಿಂದ ಮಾಡಿ ಮಣಿರತ್ನಗಳಿಂದ ಕೂಡಿದ ರಥವನ್ನು ಕೊಡುವನೋ.

೪೯. ಅವನು ಸೂರ್ಯನ ಬಣ್ಣವುಳ್ಳುದೂ; ಕಿರುಗಂಟೆ ಕ್ಷುದ್ರಗಂಟೆಗಳ ಮಾಲೆಗಳುಳ್ಳುದೂ ಯಾನದ ಮೇಲೆ ಕುಳಿತು ಇಂದ್ರನ ಸ್ವರ್ಗಲೋಕಕ್ಕೆ ಹೋಗಿ ಅಪ್ಸರಸ್ತ್ರೀಸಮೂಹದೊಡನೆ ಕ್ರೀಡಿಸುತ್ತಾನೆ.

೫೦. ಯಾವನು ಸೂರ್ಯನಿಗಾಗಿ ಮರದ ರಥವನ್ನು ಮಾಡಿಸುವನೋ ಅವನು ಸೂರ್ಯನಿಗೆ ಸಮಾನವಾದ ಬಣ್ಣವುಳ್ಳ ವಿಮಾನದ ಸಹಾಯದಿಂದ ಸೂರ್ಯಮಂಡಲವನ್ನು ಸೇರುತ್ತಾನೆ.

**ಯಾತ್ರಾಂ ಕುರ್ವಂತಿ ಯೇ ಭಾನೋರ್ನರಾಃ ಸವಂತ್ಸರಾದಪಿ ।**
**ಷಣ್ಮಾಸಾನ್ವಾ ಗಣಶ್ರೇಷ್ಠ ತೇಷಾಂ ಕರ್ಮಫಲಂ ಶೃಣು ॥ ೫೧ ॥**

**ಧ್ಯಾನಿನೋ ಯೋಗಿನಶ್ಚೈವ ಪ್ರಾಪ್ನುವಂತೀಹ ಯಾಂ ಗತಿಂ ।**
**ತಾಂ ಗತಿಂ ಪ್ರತಿಪದ್ಯಂತೇ ಸೂರ್ಯವರ್ತ್ಮಾವಗಾಹಿನಃ ॥ ೫೨ ॥**

**ರಥಂ ಕರ್ಷಂತಿ ಯೇ ಭಾನೋಃ ನರಾ ಭಕ್ತಿ ಸಮನ್ವಿತಾಃ ।**
**ಅರೋಗಾಶ್ಚಾದರಿದ್ರಾಶ್ಚ ಜಾತೌ ಜಾತೌ ಭವಂತಿ ತೇ ॥ ೫೩ ॥**

**ಕರ್ತಾರೋ ರಥಯಾತ್ರಾಯಾಃ ಯೇ ನರಾ ಭಾಸ್ಕರಸ್ಯ ತು ।**
**ತೇ ಭಾನುಲೋಕಮಾಸಾದ್ಯವಿ ಹರಂತಿ ಯಥಾಸುಖಂ ॥ ೫೪ ॥**

**ಯಾತ್ರಾಭಂಗಂ ತು ಯೇ ಮೋಹಾತ್ ಕ್ರೋಧಾದ್ವಾ ಕುರ್ವತೇ ನರಾಃ ।**
**ಮಂದೇಹಾಸ್ತೇ ನರಾ ಜ್ಞೇಯಾಃ ರಾಕ್ಷಸಾಃ ಪಾಪಕಾರಿಣಃ ॥ ೫೫ ॥**

---

೫೧. ಯಾವ ಮನುಷ್ಯರು ವರ್ಷಕ್ಕೋ, ಆರುತಿಂಗಳಿಗೋ ಒಂದಾವರ್ತಿ ಸೂರ್ಯಯಾತ್ರೆಯನ್ನು ಮಾಡುವರೋ ಅವರಿಗೆ ಲಭಿಸುವ ಪುಣ್ಯ ಫಲನನ್ನು ಕೇಳು.

೫೨. ಧ್ಯಾನಶೀಲರೂ, ಯೋಗಿಗಳೂ ಯಾವ ಸದ್ಗತಿಯನ್ನು ಹೊಂದುವರೋ ಆ ಗತಿಯನ್ನು ಸೂರ್ಯಮಾರ್ಗವನ್ನು ಪ್ರವೇಶಿಸುವವರೂ ಹೊಂದುತ್ತಾರೆ.

೫೩. ಯಾರು ಭಕ್ತಿಯುತರಾಗಿ ಸೂರ್ಯನ ರಥವನ್ನು ಎಳೆಯುತ್ತಾರೋ ಅವರು ಜನ್ಮಜನ್ಮದಲ್ಲೂ ರೋಗವಿಲ್ಲದವರೂ, ಬಡತನವಿಲ್ಲದವರೂ ಆಗುತ್ತಾರೆ.

೫೪. ಯಾವ ಮನುಷ್ಯರು ಸೂರ್ಯರಥೋತ್ಸವವನ್ನು ಮಾಡುತ್ತಾರೋ ಅವರು ಸೂರ್ಯಲೋಕವನ್ನು ಹೊಂದಿ ಸುಖವಾಗಿ ಕ್ರೀಡಿಸಿಕೊಂಡಿರುತ್ತಾರೆ.

೫೫. ಯಾವ ಮನುಷ್ಯರು ಅಜ್ಞಾನದಿಂದಲೋ ಅಥವಾ ಕ್ರೋಧದಿಂದಲೋ ಉತ್ಸವಕ್ಕೆ ಭಂಗವನ್ನುಂಟುಮಾಡುತ್ತಾರೋ ಅವರು ಪಾಪಿಷ್ಟರಾದ ಮಂದೇಹರೆಂಬ ರಾಕ್ಷಸರೆಂದು ತಿಳಿಯಬೇಕು.

ಧನಂ ಧಾನ್ಯಂ ಹಿರಣ್ಯಂ ವಾ ವಾಸಾಂಸಿ ವಿವಿಧಾನಿ ಚ ।
ಯೇ ಪ್ರಯಚ್ಛಂತಿ ಸೂರ್ಯಾಯ ತೇ ಯಾಂತಿ ಪರಮಾಂ ಗತಿಂ ॥ ೫೬ ॥

ಗಾ ವಾಥ ಮಹಿಷೀರ್ವಾಪಿ ಗಜಾನಶ್ವಾಂಶ್ಚ ಶೋಭನಾನ್ ।
ಯಃ ಪ್ರಯಚ್ಛತಿ ಸೂರ್ಯಾಯ ತಸ್ಯ ಪುಣ್ಯಫಲಂ ಶೃಣು ॥ ೫೭ ॥

ಅಕ್ಷಯಂ ಸರ್ವಕಾಮೀಯಮಶ್ವಮೇಧಫಲಂ ಲಭೇತ್ ।
ಸಹಸ್ರಗುಣಿತಂ ತಚ್ಚ ದಾನಮಸ್ಯೋಪತಿಷ್ಠತಿ ॥ ೫೮ ॥

ಮಹೀಂ ದದಾತಿ ಯೋಽರ್ಕಾಯ ಕೃಷ್ಟಾಂ ಫಲವತೀಂ ಶುಭಾಂ ।
ಸ ತಾರಯತಿ ವೈ ವಂಶ್ಯಾನ್ ದಶ ಪೂರ್ವಾನ್ ದಶಾಪರಾನ್ ॥ ೫೯ ॥

ವಿಮಾನೇನ ಚ ದಿವ್ಯೇನ ಗೋಪುರಂ ಗೋಪತೇರ್ವ್ರಜೇತ್ ।
ಕ್ರೀಡತ್ಯಪ್ಸರಸಾಂ ಮಧ್ಯೇ ಕರೀವ ಕರಣೀಗಣೇ ॥ ೬೦ ॥

---

೫೬. ಸೂರ್ಯೋದ್ದೇಶದಿಂದ ಧನ, ಧಾನ್ಯ, ಸುವರ್ಣ, ಬಗೆಬಗೆಯಾದ ಬಟ್ಟೆಗಳು, ಇವುಗಳನ್ನು ಯಾರು ದಾನಕೊಡುತ್ತಾರೋ ಅವರು ಶ್ರೇಷ್ಠವಾದ ಗತಿಯನ್ನು ಹೊಂದುತ್ತಾರೆ.

೫೭. ಹಸುಗಳನ್ನಾಗಲೀ, ಎಮ್ಮೆಗಳನ್ನಾಗಲೀ, ಒಳ್ಳೆಯ ಆನೆ, ಕುದುರೆಗಳನ್ನಾಗಲಿ ಯಾವನು ಸೂರ್ಯೋದ್ದೇಶದಿಂದ ದಾನಕೊಡುವನೋ, ಅವನಿಗೆ ಲಭಿಸುವ ಪುಣ್ಯಫಲವನ್ನು ಕೇಳು :–

೫೮. ಅವನು ಎಂದಿಗೂ ಮುಗಿಯದುದೂ, ಸರ್ವಕಾಮಪ್ರದವೂ ಆದ ಅಶ್ವಮೇಧಯಜ್ಞದ ಫಲವನ್ನು ಹೊಂದುತ್ತಾನೆ. ಈ ದಾನವು ಇವನಿಗೆ ಸಾಸಿರ್ಮಡಿಯಾಗಿ ಫಲ ಕೊಡುವುದು.

೫೯. ಯಾವನು ಸೂರ್ಯ ಪ್ರೀತಿಗಾಗಿ ಉತ್ತು ಬೆಳೆಮಾಡಿದ ಒಳ್ಳೆಯ ಭೂಮಿಯನ್ನು ದಾನಕೊಡುತ್ತಾನೋ ಅವನು ತನ್ನ ಹಿಂದಿನ ಹತ್ತು ತಲೆಯವರನ್ನೂ ಮುಂದಿನ ಹತ್ತು ತಲೆಯವರನ್ನೂ ಪಾರುಗಾಣಿಸುತ್ತಾನೆ.

೬೦. ಅಲ್ಲದೆ ಶ್ರೇಷ್ಠವಾದ ವಿಮಾನವನ್ನೇರಿ ಸೂರ್ಯನ ಪುರದ್ವಾರಕ್ಕೆ ಹೋದ ಅವನು ಹೆಣ್ಣಾನೆಗಳ ಗುಂಪಿನಲ್ಲಿನ ಗಂಡಾನೆಯಂತೆ ಅಪ್ಸರಸ್ತ್ರೀಯರ ಮಧ್ಯದಲ್ಲಿ ಕ್ರೀಡಿಸುತ್ತಾನೆ.

ಗ್ರಾಮಂ ದದಾತಿ ಯೋ ಭಕ್ತ್ಯಾ ಸೂರ್ಯಾಯ ಮತಿಮಾನ್ನರಃ ।
ವಿಮಾನೇನಾರ್ಕವರ್ಣೇನ ಸ ಯಾತಿ ಪರಮಾಂ ಗತಿಂ　　॥ ೬೧ ॥

ಆರಾಮಾನ್ ಯೇ ಪ್ರಯಚ್ಛಂತಿ ಪತ್ರಪುಷ್ಪಫಲೋಪಗಾನ್ ।
ಭಾನವೇ ಭಕ್ತಿಯುಕ್ತಾಸ್ತು ತೇ ಯಾಂತಿ ಪರಮಾಂ ಗತಿಂ　　॥ ೬೨ ॥

ಮಾನಸಂ ವಾಚಿಕಂ ವಾಪಿ ಕರ್ಮಜಂ ಯಚ್ಚ ದುಷ್ಕೃತಂ ।
ಸರ್ವಂ ಸೂರ್ಯಪ್ರಸಾದೇನ ಅಶೇಷಂ ಚ ಪ್ರಣಶ್ಯತಿ　　॥ ೬೩ ॥

ಆರ್ತೋ ವಾ ವ್ಯಾಧಿತೋ ವಾಪಿ ದರಿದ್ರೋ ದುಃಖಿತೋಽಪಿ ವಾ ।
ಆದಿತ್ಯಂ ಶರಣಂ ಗತ್ವಾ ನಾತ್ಮಾನಂ ಶೋಚತೇ ನರಃ　　॥ ೬೪ ॥

---

೬೧. ಬುದ್ಧಿಶಾಲಿಯಾದ ಯಾವ ಮನುಷ್ಯನು ಭಕ್ತಿಯಿಂದ ಸೂರ್ಯಪ್ರೀತಿಗಾಗಿ ಗ್ರಾಮವನ್ನು ದಾನಮಾಡುತ್ತಾನೋ ಅವನು ಸೂರ್ಯನ ತೇಜಸ್ಸಿನಂತೆ ಹೊಳೆಯುವ ವಿಮಾನವನ್ನೇರಿ ಉತ್ತಮಗತಿಯನ್ನು ಹೊಂದುತ್ತಾನೆ.

೬೨. ಪತ್ರ, ಪುಷ್ಪ, ಫಲಗಳಲ್ಲಿ ಒಂದೊಂದೂ ಮುಖ್ಯವಾಗುಳ್ಳ ತೋಟಗಳನ್ನು (ವೀಳಯದೆಲೆಯ ತೋಟ, ಮರುಗದ ತೋಟ ಇತ್ಯಾದಿಗಳು ಪತ್ರಪ್ರಧಾನಗಳು. ಮಲ್ಲಿಗೆ, ಜಾಜಿ, ಸುಗಂಧರಾಜ, ಸೇವಂತಿಗೆ, ಸುರಗಿ, ಕಣಗಿಲೆ, ಪಾದರಿ ಈ ಗಿಡದ ತೋಟಗಳು, ಪುಷ್ಪಪ್ರಧಾನಗಳು, ತೆಂಗು, ಮಾವು, ಹಲಸು, ದಾಳಿಂಬಿ, ಸೀಬೆ, ಖರ್ಜೂರ, ದ್ರಾಕ್ಷೆ, ನಿಂಬೆ, ಕಿತ್ತಳೆ, ಹೇರಳೆ, ಮಾದಳ, ಚಕ್ಕೋತ ಇತ್ಯಾದಿಗಳುಳ್ಳವು ಫಲಪ್ರಧಾನಗಳು. ಇವನ್ನುಳ್ಳ ತೋಗಳನ್ನುಟ) ಭಕ್ತಿಯಿಂದ ಸೂರ್ಯಪ್ರೀತಿಗಾಗಿ ಯಾರು ಕೊಡುವರೋ ಅವರು ಪರಮಗತಿಯನ್ನೈದುವರು.

೬೩. ಮಾನಸ, ವಾಚಿಕ, ಕರ್ಮಜಗಳಾದ ಯಾವ ಪಾಪಗಳುಂಟೋ ಅವು ಸೂರ್ಯಾನುಗ್ರಹದಿಂದ ಏನೂ ಉಳಿಯದಂತೆ ಅಳಿಯುವುವು.

೬೪. ಮನೋರೋಗವುಳ್ಳವನು, ದೇಹರೋಗವುಳ್ಳವನು, ದರಿದ್ರನು, ದುಃಖಿತನು, ಇವರಲ್ಲಿ ಯಾರೇ ಆದರೂ ಸೂರ್ಯನನ್ನು ಮರೆಹೊಕ್ಕ ಮೇಲೆ ಅವರು ತಮಗಾಗಿ ದುಃಖಪಡಬೇಕಾದುದಿಲ್ಲ.

ಏಕಾಹೇನಾಪಿ ಯದ್ಭಾನೋಃ ಪೂಜಾಯಾಃ ಪ್ರಾಪ್ಯತೇ ಫಲಂ ।
ತದ್ವೈ ಕ್ರತುಶತೈರಿಷ್ಟೈಃ ಪ್ರಾಪ್ಯತೇ ಫಲಮುತ್ತಮಂ ॥ ೬೫ ॥

ಕೃತ್ವಾ ಪ್ರೇಕ್ಷಣಕಂ ಭಾನೋಃ ದಿವ್ಯಮಾಯತನೇ ಶುಭಂ ।
ಅಕ್ಷಯಂ ಸರ್ವಕಾಮೀಯಂ ರಾಜಸೂಯಫಲಂ ಲಭೇತ್ ॥ ೬೬ ॥

ವೇಶ್ಯಾಕದಂಬಕಂ ಯಸ್ತು ದದ್ಯಾತ್ಸೂರ್ಯಾಯ ಭಕ್ತಿತಃ ।
ಸ ಗಚ್ಛೇತ್ಪರಮಂ ಸ್ಥಾನಂ ಯತ್ರ ತಿಷ್ಠತಿ ಭಾನುಮಾನ್ ॥ ೬೭ ॥

ಪುಸ್ತಕಂ ಭಾನವೇ ದದ್ಯಾದ್ಭಾಸ್ಕರಸ್ಯ ಗಣಪ್ರಿಯ ।
ಸರ್ವಪಾಪವಿಮುಕ್ತಾತ್ಮಾ ವಿಷ್ಣುಲೋಕೇ ಮಹೀಯತೇ ॥ ೬೮ ॥

ರಾಮಾಯಣಸ್ಯ ದತ್ವಾ ತು ಪುಸ್ತಕಂ ತ್ರಿಪುರಾಂತಕ ।
ವಾಜಪೇಯಫಲಂ ಪ್ರಾಪ್ಯ ಗೋಪತೇಃ ಪುರಮಾವ್ರಜೇತ್ ॥ ೬೯ ॥

---

೬೫. ಒಂದು ದಿವಸದ ಸೂರ್ಯಪೂಜೆಯಿಂದ ಯಾವ ಫಲ ಬರುತ್ತದೋ, ಅದು ನೂರು ಯಾಗಗಳನ್ನು ಮಾಡಿದರೆ ಬರುವ ಉತ್ತಮ ಫಲಕ್ಕೆ ಸಮವು.

೬೬. ಸೂರ್ಯನ ಆಲಯದಲ್ಲಿ ಶ್ರೇಷ್ಠವಾದ ಶುಭಪ್ರೇಕ್ಷಣಕ (ನೋಡುವ ನಾಟಕ) ಮೊದಲಾದುವನ್ನು ಏರ್ಪಡಿಸಿದವನು ಸಮಸ್ತ ಇಷ್ಟಪ್ರಾಪ್ತಿಗಾಗಿ ಮಾಡುವ ರಾಜಸೂಯಯಾಗದ ಫಲವನ್ನು ಹೊಂದುವನು.

೬೭. ಯಾವನು ನಾಟ್ಯಮಾಡುವ ವೇಶ್ಯೆಯರನ್ನು ಸೂರ್ಯೋತ್ಸವದಲ್ಲಿ ಭಕ್ತಿಗಾಗಿ ಏರ್ಪಡಿಸುವನೋ ಅವನು ಸೂರ್ಯನಿರುವ ಶ್ರೇಷ್ಠಸ್ಥಾನಕ್ಕೆ ಹೋಗುವನು.

೬೮. ಎಲೈ ದಿಂಡಿಯೇ! ಸೂರ್ಯಪ್ರೀತ್ಯರ್ಥವಾಗಿ ಯಾವನು ಪುಸ್ತಕವನ್ನು ದಾನ ಮಾಡುವನೋ ಅವನು ಎಲ್ಲಾ ಪಾಪಗಳಿಂದಲೂ ಬಿಡುಗಡೆಹೊಂದಿ ವಿಷ್ಣುಲೋಕದಲ್ಲಿ ಪೂಜಿತನಾಗುತ್ತಾನೆ.

೬೯. ಎಲೈ ದಿಂಡಿಯೇ! ಮಾನವನು ಸೂರ್ಯಪ್ರೀತ್ಯರ್ಥವಾಗಿ ರಾಮಾಯಣ ಪುಸ್ತಕವನ್ನು ದಾನ ಮಾಡಿದರೆ–ವಾಜಪೇಯ ಯಾಗಮಾಡಿದ ಫಲವನ್ನು ಹೊಂದಿ ಸೂರ್ಯಲೋಕಕ್ಕೆ ಹೋಗುತ್ತಾನೆ.

ಭವಿಷ್ಯಂ ಸಾಂಬಸಂಜ್ಞಂ ವಾ ದತ್ವಾ ಸೂರ್ಯಾಯ ಪುಸ್ತಕಂ ।
ರಾಜಸೂಯಾಶ್ವಮೇಧಾಭ್ಯಾಂ ಫಲಂ ಪ್ರಾಪ್ನೋತಿ ಮಾನವಃ ॥ ೭೦ ॥

ಸರ್ವಾನ್ ಕಾಮಾನವಾಪ್ನೋತಿ ಯಾತಿ ಸೂರ್ಯಸಲೋಕತಾಂ ।
ಸೂರ್ಯಲೋಕೇ ಚಿರಂ ಸ್ಥಿತ್ವಾ ಬ್ರಹ್ಮಲೋಕಂ ವ್ರಜೇತ್ಪುನಃ ॥ ೭೧ ॥

ಸ್ಥಿತ್ವಾಕಲ್ಪಶತಂ ತತ್ರ ರಾಜಾ ಭವತಿ ಭೂತಲೇ ।
ಭಾನೋರಾಯತನೇ ಯಸ್ತು ಪ್ರಪಾಂ ಕುರ್ಯಾದ್ಗಣಾಧಿಪ ।
ಸ ಯಾತಿ ಪರಮಂ ಸ್ಥಾನಂ ದಿವ್ಯಂ ಸೌಮನಸಂ ನರಃ ॥ ೭೨ ॥

ಶೀತಕಾಲೇ ಘನಂ ದದ್ಯಾತ್ ನರಾಣಾಂ ಶೀತನಾಶನಂ ।
ಭಾನೋರಾಯತನೇ ದೇವ ಅಶ್ವಮೇಧಫಲಂ ಲಭೇತ್ ॥ ೭೩ ॥

---

೭೦. ಭವಿಷ್ಯಪುರಾಣ ಅಥವಾ ಸಾಂಬಪುರಾಣ ಇವನ್ನು ಸೂರ್ಯಪ್ರೀತ್ಯರ್ಥವಾಗಿ ದಾನಮಾಡಿದರೆ ವಾಜಪೇಯ, ಅಶ್ವಮೇಧ ಈ ಎರಡು ಯಜ್ಞಗಳ ಫಲಗಳನ್ನೂ ಹೊಂದುವನು.

೭೧. ಹಾಗೆ ದಾನ ಮಾಡಿದವನು ತನ್ನ ಎಲ್ಲಾ ಬಯಕೆಗಳನ್ನೂ ಪಡೆದು ಸೂರ್ಯಸಾಲೋಕ್ಯವನ್ನು ಪಡೆಯುತ್ತಾನೆ. ಬಹುಕಾಲ ಸೂರ್ಯಲೋಕದಲ್ಲಿದ್ದು ಪುನಃ ಬ್ರಹ್ಮಲೋಕಕ್ಕೆ ಹೋಗುತ್ತಾನೆ. ಅಲ್ಲಿ ನೂರು ಕಲ್ಪಗಳವರೆಗೆ ಇದ್ದು ಆಮೇಲೆ ಭೂಮಿಯಲ್ಲಿ ರಾಜನಾಗುವನು.

೭೨. ಸೂರ್ಯಾಲಯದಲ್ಲಿ ಯಾವನು ಅರವಟ್ಟಿಗೆಯನ್ನು ಇಡುವ ಏರ್ಪಾಡು ಮಾಡುತ್ತಾನೋ ಅವನು ಶ್ರೇಷ್ಠವಾದ ದೇವಲೋಕವನ್ನು ಹೊಂದುತ್ತಾನೆ.

೭೩. ಶೀತಕಾಲದಲ್ಲಿ ಮನುಷ್ಯರ ಛಳಿಯನ್ನು ಹೋಗಲಾಡಿಸುವ ಹೊದ್ದಿಕೆಯನ್ನು ಸೂರ್ಯಾಲಯದಲ್ಲಿ ದಾನಕೊಡುವವನು ಅಶ್ವಮೇಧಯಜ್ಞದ ಫಲವನ್ನು ಪಡೆವನು. ಇತಿಹಾಸ ಪುರಾಣಗಳ ಪುಸ್ತಕಗಳನ್ನು ಇಟ್ಟುಕೊಂಡು ಓದಿದರೆ ಪುಣ್ಯ ಬರುವುದು. ಪುಣ್ಯಾಖ್ಯಾನ ಕಥೆಗಳಿಂದ ಸೂರ್ಯನು ಹೇಗೆ ಸಂತೋಷಪಡುವನೋ ಹಾಗೆ ಬೇರೆ ಯಾವುದರಿಂದಲೂ ಸೂರ್ಯನು ಸಂತೋಷಪಡುವುದಿಲ್ಲ.

ಇತಿಹಾಸಪುರಾಣಾಭ್ಯಾಂ ಪುಣ್ಯಂ ಪುಸ್ತಕವಾಚನಂ ।
ಅಶ್ವಮೇಧಸಹಸ್ರಂ ಯೋ ನಿತ್ಯಂ ಕರ್ತುಂ ಪ್ರವರ್ತತೇ ॥
ನ ತತ್ಫಲಮವಾಪ್ನೋತಿ ಯದಾಪ್ನೋತ್ಯಸ್ಯ ಕರ್ಮಣಃ ॥ ೭೪ ॥

ತಸ್ಮಾತ್ಸರ್ವಪ್ರಯತ್ನೇನ ಕಾರ್ಯಂ ಪುಸ್ತಕವಾಚನಂ ।
ಇತಿಹಾಸಪುರಾಣಾಭ್ಯಾಂ ಭಾನೋರಾಯತನೇ ಶುಭಂ ॥ ೭೫ ॥

ನಾನ್ಯತ್ಪುಷ್ಟಿಕರಂ ಭಾನೋಃ ತಥಾ ತುಷ್ಟಿಕರಂ ಪರಂ ।
ಪುಣ್ಯಾಖ್ಯಾನಕಥಾ ಯಾಸ್ತು ಯಥಾ ತುಷ್ಯತಿ ಭಾಸ್ಕರಃ ॥ ೭೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ ಭಾನುಮಹಿಮವರ್ಣನಂ ನಾಮ ತ್ರಿನವತಿತಮೋಽಧ್ಯಾಯಃ.



---

೭೪ ಸಹಸ್ರ ಅಶ್ವಮೇಧಗಳನ್ನು ಮಾಡಲು ನಿತ್ಯವೂ ಪ್ರವರ್ತಿಸುವವನಿಗೆ ಬರುವ ಪುಣ್ಯಫಲವೇ ಈ ಪುರಾಣವಾಚಕನಿಗೂ ಬರುವುದು.

೭೫. ಆದುದರಿಂದ ಸರ್ವಪ್ರಯತ್ನದಿಂದಲೂ ಪುರಾಣವಾಚನ ಮಾಡಬೇಕು. ಇತಿಹಾಸ ಮತ್ತು ಪುರಾಣವಾಚನವನ್ನು ಸೂರ್ಯಾಲಯದಲ್ಲಿ ಮಾಡಿದರೆ,

೭೬ ಆ ಪುಣ್ಯಕರವಾದ ಆಖ್ಯಾನ ಕಥನದಿಂದ ಸೂರ್ಯನು ಹೇಗೆ ತುಷ್ಟನಾಗುವನೋ ಹಾಗೆ ಮತ್ತಾವುದರಿಂದಲೂ ತುಷ್ಟನಾಗಲಾರನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಸೂರ್ಯನ ಮಹಿಮೆಯ ವರ್ಣನೆಯೆಂಬ ತೊಂಬತ್ತಮೂರನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಚತುರ್ನವತಿತಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಅತ್ರಾಖ್ಯಾನಮುಶಂತೀಹ ಸಂವಾದಂ ಗಣಪುಂಗವ ।
ಪುಣ್ಯಂ ಪಾಪಹರಂ ಚೈವ ಪಿತಾಮಹಕುಮಾರಯೋಃ ॥ ೧ ॥

ಸ್ರಷ್ಟಾರಂ ಸರ್ವಲೋಕಾನಾಂ ಸುಖಾಸೀನಂ ಪಿತಾಮಹಂ ।
ಪ್ರಣಮ್ಯ ಶಿರಸಾ ದೇವಂ ಶ್ರದ್ಧಾಭಕ್ತಿಸಮನ್ವಿತಃ ॥ ೨ ॥

ಕುಮಾರೋ ದೇವಶಾರ್ದೂಲ ಇದಂ ವಚನಮಬ್ರವೀತ್ ।
ಗತೋಽಹಮದ್ಯ ಭಗವನ್ ದ್ರಷ್ಟುಂ ದೇವಂ ದಿವಾಕರಂ ॥ ೩ ॥

---

## ತೊಂಭತ್ತನಾಲ್ಕನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಎಲೈ ದಿಂಡಿಯೇ! ಈ ಸಂದರ್ಭದಲ್ಲಿ ಪುಣ್ಯಕರವೂ, ಪಾಪಹರವೂ ಆದ ಬ್ರಹ್ಮ, ಷಣ್ಮುಖ ಸಂವಾದವನ್ನು ಉದಾಹರಿಸಬಹುದು.

೨. ದೇವಶ್ರೇಷ್ಠನಾದ ದಿಂಡಿಯೇ! ಸರ್ವಲೋಕಗಳನ್ನೂ ಸೃಷ್ಟಿಮಾಡಿದ ಬ್ರಹ್ಮದೇವನು ಸುಖವಾಗಿ ಕುಳಿತಿರಲು ಕುಮಾರಸ್ವಾಮಿಯು ಆ ದೇವನಿಗೆ ಶ್ರದ್ಧಾಭಕ್ತಿಯುತನಾಗಿ ನಮಸ್ಕರಿಸಿದನು.

೩. ಬಳಿಕ ಆ ಕುಮಾರಸ್ವಾಮಿಯು ಈ ರೀತಿ ಹೇಳಿದನು—ಎಲೈ ಭಗವಂತನೇ! ಈಗ ನಾನು ಸೂರ್ಯದೇವನನ್ನು ದರ್ಶನಮಾಡಲು ಹೋಗಿದ್ದೆನು.

ಕೃತ್ವಾ ಪ್ರದಕ್ಷಿಣಂ ದೇವಃ ಸ ಮಯಾ ಪೂಜಿತೋ ರವಿಃ ।
ಪ್ರಣಮ್ಯ ಶಿರಸಾ ಭಕ್ತ್ಯಾ ಪರಯಾ ಶ್ರದ್ಧಯಾ ವಿಭೋ ॥ ೪ ॥

ಅನುಜ್ಞಾತಸ್ತತಸ್ತೇನ ಸುಖಾಸೀನೋಽಹ್ಯಹಂ ಸ್ಥಿತಃ ।
ಆಸೀನೇನ ಮಯಾ ತತ್ರ ದೃಷ್ಟಮಾಶ್ಚರ್ಯ ಮದ್ಭುತಂ ॥ ೫ ॥

ಕಾಂಚನೇನ ವಿಮಾನೇನ ಕಿಂಕಿಣೀಜಾಲಮಾಲಿನಾ ।
ಮಣಿಮುಕ್ತಾವಿಚಿತ್ರೇಣ ವೈಡೂರ್ಯವರವೇದಿನಾ ॥ ೬ ॥

ಆಗತಂ ಪುರುಷಂ ತತ್ರ ದೃಷ್ಟ್ವಾ ದೇವೋ ದಿವಾಕರಃ ।
ಸಸಂಭ್ರಮಂ ಸಮುತ್ಥಾಯ ಆಸನಾದೇವ ಸತ್ತಮ ॥ ೭ ॥

ಗೃಹೀತ್ವಾ ದಕ್ಷಿಣೇ ಪಾಣೌ ಪುರತಃ ಪ್ರಾಪ್ಯ ತಂ ನರಂ ।
ಶಿರಸ್ಯಾಘ್ರಾಯ ದೇವೇಶ ಪೂಜಯಾಮಾಸ ವೈ ರವಿಃ ॥ ೮ ॥

ಉಪವಿಷ್ಟಂ ತು ತಂ ಭಾನುರಿದಂ ವಚನಮಬ್ರವೀತ್ ।
ಸುಸ್ವಾಗತಂ ಭದ್ರಮುಖ ಕೃತಾ ಪ್ರೀತಾಸ್ತ್ವಯಾ ವಯಂ ॥ ೯ ॥

---

೪. ಅಯ್ಯಾ ವಿಭುವಾದ ಬ್ರಹ್ಮನೇ! ನಾನು ತುಂಬಾ ಶ್ರದ್ಧೆಯಿಂದ ಸೂರ್ಯನನ್ನು ಪೂಜೆಮಾಡಿ ಪ್ರದಕ್ಷಿಣೆಮಾಡಿ ಶಿರಬಾಗಿ ನಮಸ್ಕರಿಸಿದೆನು.

೫. ಬಳಿಕ ಅವನಿಂದ ಅಪ್ಪಣೆಯನ್ನು ಪಡೆದು ಸುಖವಾಗಿ ಕುಳಿತುಕೊಂಡಿದ್ದೆನು. ಹಾಗೆ ಕುಳಿತಿರುವಾಗ ಅಲ್ಲಿ ಅದ್ಭುತವಾದ ಆಶ್ಚರ್ಯವೊಂದನ್ನು ಕಂಡೆನು.

೬–೭. ಸಣ್ಣ ಗಂಟೆಗಳ ಸಾಲುಗಳಿಂದ ಕೂಡಿದದ್ದೂ, ಮುತ್ತುಗಳಿಂದ ವಿಚಿತ್ರವಾಗಿ ರಂಜಿತವಾದುದೂ, ವೈಡೂರ್ಯ ಮುಂತಾದ ರತ್ನದ ವೇದಿಕೆಯುಳ್ಳದ್ದೂ, ಆದ ಚಿನ್ನದ ವಿಮಾನದಲ್ಲಿ ಕುಳಿತುಬಂದ ಪುರುಷನೊಬ್ಬನನ್ನು ನೋಡಿ, ಸೂರ್ಯದೇವನು ಪೀಠದಿಂದ ಧಿಗ್ಗನೆ ಎದ್ದು ನಿಂತನು.

೮. ದೇವೇಶನಾದ ಬ್ರಹ್ಮನೇ! ಏನಾಶ್ಚರ್ಯ! ಸೂರ್ಯನು ತನ್ನ ಬಳಿಗೆ ಬಂದ ಆತನ ಬಲಗೈಯನ್ನು ಹಿಡಿದುಕೊಂಡು ತನ್ನ ಮುಂದುಗಡೆ ಕುಳ್ಳಿರಿಸಿಕೊಂಡು (ವಾತ್ಸಲ್ಯದಿಂದ) ಆತನ ನೆತ್ತಿಯನ್ನು ಮೂಸಿನೋಡಿ ಅವನನ್ನು ಸತ್ಕರಿಸಿದನು.

೯. ಹೀಗೆ ಸತ್ಕಾರವನ್ನು ಹೊಂದಿ ಕುಳಿತಿರುವ ಆ ಮನುಷ್ಯನನ್ನು ಕುರಿತು ಸೂರ್ಯನು, "ಎಲೈ ಭದ್ರಮುಖನೇ! ಸುಖನಾಗಿ ಬಂದೆಯಾ ? ನಿನ್ನ ವಿಚಾರದಲ್ಲಿ ನಾನು ಸುಪ್ರೀತನಾಗಿದೇನೆ, ನೀನು ಪ್ರಳಯಕಾಲದವರೆಗೂ ನನ್ನ ಸಮೀಪದಲ್ಲಿರು.

ಸಮೀಪೇ ಮಮ ತಿಷ್ಠ ತ್ವಂ ಯಾವದಾಭೂತಸಂಪ್ಲವಂ
ಪುನರ್ಯಾಸ್ಯಸಿ ತತ್‌ಸ್ಥಾನಂ ಯತ್ರ ಬ್ರಹ್ಮಾ ಸ್ವಯಂ ಸ್ಥಿತಃ ॥ ೧೦ ॥

ಏತಸ್ಮಿನ್ನಂತರೇ ಚಾನ್ಯೋ ವಿಮಾನವರಮಾಸ್ಥಿತಃ ।
ಆಗತಃ ಪುರುಷೋ ದೇವೋ ಯತ್ರ ತಿಷ್ಠತಿ ಭಾಸ್ಕರಃ ॥ ೧೧ ॥

ಸಚಾಪ್ಯೇವಂ ನರೋ ದೇವ ಭಾನುನಾ ಪೂಜಿತೋ ತದಾ ।
ಸಾಮಪೂರ್ವಂ ತಥೋಕ್ತಸ್ತು ಪ್ರಶ್ರಯಾವನತಃ ಸ್ಥಿತಃ ॥ ೧೨ ॥

ತತ್ರ ಮೇ ಕೌತುಕಂ ಜಾತಂ ದೃಷ್ಟ್ವಾ ಪೂಜಾಂ ಕೃತಾಂ ತಯೋಃ ।
ಭಾನುನಾ ದೇವಶಾರ್ದೂಲ ಪೃಷ್ಟೋ ಭಾನುರ್ಮಯಾ ತತಃ ॥ ೧೩ ॥

ಕಿಮನೇನ ಕೃತಂ ದೇವ ಯೋऽಯಂ ಪೂರ್ವಮಿಹಾಗತಃ ।
ನರಸ್ತವ ಸಕಾಶಂ ವೈ ಯಸ್ಯ ತುಷ್ಟೋ ಭವಾನ್ ಭೃಶಂ ॥ ೧೪ ॥

---

೧೦. ಅನಂತರ ಬ್ರಹ್ಮನು ಇರುವ ಸ್ಥಾನಕ್ಕೆ ಹೋಗುವೆ ಎಂದನು."

೧೧. ಅಷ್ಟರಲ್ಲಿಯೇ ಇನ್ನೊಬ್ಬನು ಶ್ರೇಷ್ಠವಾದ ವಿಮಾನವನ್ನು ಹತ್ತಿಕೊಂಡು ಸೂರ್ಯದೇವನು ಇದ್ದ ಸ್ಥಳಕ್ಕೆ ಬಂದನು.

೧೨. ಎಲೈ ದೇವದೇವನಾದ ಬ್ರಹ್ಮನೇ! ಕೇಳು. ಅವನೂ ಸಹ ಆಗ ಸೂರ್ಯನಿಂದ ಹೀಗೆಯೇ ಪೂಜಿತನಾಗಿ ಮೃದುವಚನಗಳಿಂದ ಉಪಚಾರಹೊಂದಿ ವಿನಯದಿಂದ ಬಗ್ಗಿ ನಿಂತುಕೊಂಡನು.

೧೩. ಸೂರ್ಯದೇವನು ಅವರಿಬ್ಬರಿಗೂ ಮಾಡಿದ ಆ ಪೂಜೆಯನ್ನು ನೋಡಿ ನನಗೆ ಅತ್ಯಾಶ್ಚರ್ಯವೂ ಕುತೂಹಲವೂ ಉಂಟಾಯಿತು. ಅಯ್ಯಾ ದೇವಶ್ರೇಷ್ಠನಾದ ಬ್ರಹ್ಮನೇ! ಆಮೇಲೆ ನಾನು ಸೂರ್ಯನನ್ನು ಕುರಿತು ಪ್ರಶ್ನೆ ಮಾಡತೊಡಗಿ.

೧೪. "ಸ್ವಾಮಿ ಸೂರ್ಯದೇವನೇ! ಇಲ್ಲಿಗೆ ನಿನ್ನ ಸಮೀಪಕ್ಕೆ ಮೊದಲು ಒಬ್ಬ ಮನುಷ್ಯನು ಬಂದನಷ್ಟೆ. ಆತನು ಪೂರ್ವದಲ್ಲಿ ಏನು ಪುಣ್ಯಕಾರ್ಯ ಮಾಡಿದ್ದನು ? ನೀನು ಅವನಲ್ಲಿ ಅಷ್ಟುಮಟ್ಟಿಗೆ ಪ್ರೀತಿತೋರಿಸಿದೆ."

ಯದಸ್ಯ ಭವತಾ ಪೂಜಾ ಕೃತಾ ಹಿ ಸ್ವಯಮೇವ ತು ।
ಅತ್ರ ಮೇ ಕೌತುಕಂ ಜಾತಂ ವಿಸ್ಮಯಶ್ಚ ವಿಶೇಷತಃ ॥ ೧೫ ॥

ತಥೈವಾಸ್ಯ ಕೃತಾ ಪೂಜಾ ದ್ವಿತೀಯಸ್ಯ ನರಸ್ಯ ಚ ।
ಸರ್ವಥಾ ಪುಣ್ಯಕರ್ಮಾಣಾವಿಮೌ ನರವರೋತ್ತಮೌ ॥ ೧೬ ॥

ಬ್ರಹ್ಮವಿಷ್ಣುಶಿವಾದ್ಯೈಸ್ತು ಪೂಜ್ಯತೇ ಭಗವಾನ್ ಸದಾ ।
ಯಸ್ತ್ವಮಾಭ್ಯಾಂ ಪರಾಂ ಪೂಜಾಂ ಕೃತವಾನ್ ದೇವಸತ್ತಮ ॥ ೧೭ ॥

ಕಥ್ಯತಾಂ ಮಮ ದೇವೇಶ ಕಿಮೇತೌ ಕರ್ಮ ಚಕ್ರತುಃ ।
ಯಸ್ಯೇದೃಕ್ಪರಮಂ ಪುಣ್ಯಂ ಫಲಂ ದಿವ್ಯಮವಾಪತುಃ
ಶ್ರುತ್ವಾ ತದ್ವಚನಂ ದೇವ ಇದಂ ವಚನಮಬ್ರವೀತ್ ॥ ೧೮ ॥

॥ ಸೂರ್ಯ ಉವಾಚ ॥

ಸಾಧು ಪೃಷ್ಟೋಽಸ್ಮಿ ಭವತಾ ಕರ್ಮಣೋ ನಿರ್ಣಯಂಪರಂ ॥ ೧೯ ॥

---

೧೫. ಅಲ್ಲದೆ ನೀನೇ ಸ್ವಂತವಾಗಿ ಅವನ ಪೂಜೆಯನ್ನು ಮಾಡಿದ್ದೀಯೆ. ಈ ವಿಷಯದಲ್ಲಿ ನನಗೆ ವಿಶೇಷವಾದ ಕುತೂಹಲವೂ, ಆಶ್ಚರ್ಯವೂ ಉಂಟಾಯಿತು.

೧೬. ನಿನ್ನ ಬಳಿಗೆ ಬಂದ ಎರಡನೆಯ ಮನುಷ್ಯನಿಗೂ ಸಹ ಹಾಗೆಯೇ ಪೂಜೆ ನಡೆಯಿತು. ಈ ಮಾನವಶ್ರೇಷ್ಠರಿಬ್ಬರೂ ಸರ್ವಥಾ ಪುಣ್ಯಕರ್ಮಮಾಡಿದವರಾಗಿಯೇ ಇರಬೇಕು.

೧೭-೧೮. ಬ್ರಹ್ಮ, ವಿಷ್ಣು, ರುದ್ರ ಮೊದಲಾದವರು ಭಗವಂತನಾದ ನಿನ್ನನ್ನು ಯಾವಾಗಲೂ ಪೂಜಿಸುತ್ತಾರೆ. ಅಂಥ ದೇವಶ್ರೇಷ್ಠನಾದ ನೀನೇ ಆ ಮಾನವರಾದ ಅವರಿಬ್ಬರಿಗೂ ಅಂಥ ಉತ್ತಮವಾದ ಪೂಜೆಯನ್ನು ಮಾಡಿದೆಯಲ್ಲಾ ಅಯ್ಯಾ ದೇವೇಶನಾದ ಬ್ರಹ್ಮನೇ! ಅವರಿಬ್ಬರೂ ಯಾವ ಪುಣ್ಯ ಕರ್ಮವನ್ನು ಮಾಡಿದರು ಎಂಬುದನ್ನೂ ಯಾವ ಕಾರ್ಯ ಮಾಡಿದ್ದರಿಂದ ಇವರು ಇಂತಹ ಪರಮಫಲವನ್ನು ಹೊಂದಿದರು ಎಂಬುದನ್ನೂ ಹೇಳು" ಎಂದನು.

೧೯. ಸೂರ್ಯದೇವನು ಆ ಮಾತನ್ನು ಕೇಳಿ ಅವನಿಗೆ ಉತ್ತರವನ್ನು ನಿರೂಪಿಸುವನಾಗಿ ಹೇಳಿದನು. "ಕರ್ಮದಿಂದ ನಿಜವಾಗಿ ಪ್ರಾಪ್ತವಾಗುವ ಶ್ರೇಷ್ಠವಾದ ಫಲವನ್ನು ಕುರಿತು ನೀನು ನನ್ನನ್ನು ಕೇಳಿದುದು ಸಾಧುವಾಗಿದೆ.

**ಯದನೇನ ಕೃತಂ ಕರ್ಮ ನರೇಣ ಮುನಿಸತ್ತಮ ।**
**ಯೇನ ಮಾಂ ಪ್ರಾಪ್ತವಾನೇಷಃ ತಚ್ಛೃಣುಷ್ವ ಮಹಾಮತೇ　॥ ೨೦ ॥**

**ಯೇಯಂ ಮದಂಶಸಂಭೂತೈಃ ಪಾರ್ಥಿವೈಃ ಪಾಲಿತಾ ಸದಾ ।**
**ಅಯೋಧ್ಯಾ ನಾಮ ನಗರೀ ಪ್ರಖ್ಯಾತಾ ಪೃಥಿವೀತಲೇ　॥ ೨೧ ॥**

**ತತ್ರಾಸೌ ವೈಶ್ಯಜಾತೀಯೋ ಧನಪಾಲ ಇತಿ ಸ್ಮೃತಃ ।**
**ತಸ್ಯಾಂ ಪುರ್ಯಾಂ ದ್ವಿಜಶ್ರೇಷ್ಠ ದಿವ್ಯಮಾಯತನಂ ವ್ಯಧಾತ್　॥ ೨೨ ॥**

**ತಸ್ಮಿನ್ನಾಯತನೇ ದಿವ್ಯೇ ಹ್ಯಾಮ್ನಾಯಾರ್ಥಂ ತಥಾಶ್ರಿತಾಂ ।**
**ಬ್ರಾಹ್ಮಣಾನಾಂ ವಿಶಿಷ್ಟಾನಾಂ ಪೂಜಯಿತ್ವಾ ಕದಂಬಕಂ　॥ ೨೩ ॥**

**ಇತಿಹಾಸಪುರಾಣಾನಾಂ ವಾಚಕಂ ಚ ವಿಶೇಷತಃ ।**
**ಪೂಜಯಿತ್ವಾ ದ್ವಿಜಶ್ರೇಷ್ಠಂ ಮುನಿಶ್ರೇಷ್ಠಂ ಮಹಾಮುನಿಂ　॥ ೨೪ ॥**

---

೨೦. ಮುನಿಶ್ರೇಷ್ಠಸದೃಶನೂ ಮಹಾಮತಿಯೂ ಆದ ಗುಹನೇ! ಯಾವ ಪುಣ್ಯಕರ್ಮಮಾಡಿದುದರಿಂದ ಈ ಮನುಷ್ಯನು ನನ್ನ ಸಾನ್ನಿಧ್ಯಕ್ಕೆ ಬಂದನೆಂಬುವನ್ನು ಹೇಳುವೆನು ಕೇಳಯ್ಯಾ.

೨೧. ನನ್ನ ಅಂಶದಿಂದ ಉತ್ಪನ್ನರಾದ ರಾಜರು ಆಳುತ್ತಿದ್ದ ಅಯೋಧ್ಯೆ ಎಂಬುದು ಲೋಕವಿಖ್ಯಾತನಗರವಾಗಿದ್ದಿತು.

೨೨. ಆ ಅಯೋಧ್ಯಾ ಪಟ್ಟಣದಲ್ಲಿ ಧನಪಾಲನೆಂಬ ವೈಶ್ಯನೊಬ್ಬನಿದ್ದನು. ಆತನು ಶ್ರೇಷ್ಠವಾದ ದೇವಾಲಯವೊಂದನ್ನು ನಿರ್ಮಿಸಿದನು.

೨೩. ಆತನು ಶ್ರೇಷ್ಠವಾದ ಆ ದೇವಾಲಯದಲ್ಲಿ ವೇದಾಧ್ಯಯನಮಾಡುತ್ತಿದ್ದ ವಿಶೇಷಗುಣಯುಕ್ತರಾದ ಬ್ರಾಹ್ಮಣಸಮೂಹವನ್ನು ಪೂಜಿಸಿದನು. ಅಲ್ಲದೆ

೨೪-೨೫. ಇತಿಹಾಸ ಪುರಾಣಗಳನ್ನು ವಾಚನಮಾಡುವ ಪೌರಾಣಿಕನೆಂದು ಪ್ರಖ್ಯಾತನೂ, ಮನನಶೀಲರಲ್ಲಿ ಶ್ರೇಷ್ಠನೂ, ಮಹಾಮುನಿ ಸ್ವರೂಪನೂ ಆದ

**ಪುಸ್ತಕಂ ಚಾಪಿ ಸಂಪೂಜ್ಯ ಗಂಧಪುಷ್ಪೋಪಹಾರತಃ ।**
**ತಸ್ಯ ವಿಪ್ರಕದಂಬಸ್ಯ ವ್ಯಾಸಸ್ಯ ಚ ಯಥಾಗ್ರತಃ ॥ ೨೫ ॥**

**ಪ್ರಕಲ್ಪ್ಯೇಕೋತ್ತೇ ದ್ವಿಜೋಽನೇನ ಪಾಠಕೋ ವಾಚಕೋತ್ತಮಃ ।**
**ಏಷ ತಿಷ್ಠತಿ ದೇವೇಶಃ ಸಹಸ್ರಕಿರಣೋ ರವಿಃ ॥ ೨೬ ॥**

**ಚಾತುರ್ವರ್ಣ್ಯ ಮಿದಂ ವಾಪಿ ಶ್ರೋತುಕಾಮಂ ಪುರಾಣಕಂ ।**
**ತಿಷ್ಠ ಚೇಹ ದ್ವಿಜಶ್ರೇಷ್ಠ ಕುರು ಪುಸ್ತಕವಾಚನಂ ॥ ೨೭ ॥**

**ಯೇನ ಮೇ ವರದೋ ಭಾನುಃ ಸಪ್ತ ಜನ್ಮಾನಿ ವೈ ಭವೇತ್ ।**
**ಯಾವತ್ಸಂವತ್ಸರಂ ವಿಪ್ರ ಪ್ರಗೃಹ್ಯ ವೃತ್ತಿಮುತ್ತಮಾಂ ॥ ೨೮ ॥**

**ಸ್ವರ್ಣನಿಷ್ಕಶತಂ ವಿಪ್ರ ತತೋ ದಾಸ್ಯೇ ತಥಾಪರಂ ।**
**ಪೂರ್ಣೇ ವರ್ಷೇ ದ್ವಿಜಶ್ರೇಷ್ಠ ಶ್ರೇಯೋಽರ್ಥಮಹಮಾತ್ಮನಃ ॥ ೨೯ ॥**

---

ಬ್ರಾಹ್ಮಣೋತ್ತಮನನ್ನು ವಿಶೇಷವಾಗಿ ಪೂಜಿಸಿದ್ದಲ್ಲದೇ ಪಾರಾಯಣ ಪುಸ್ತಕವನ್ನೂ ಗಂಧ, ಪುಷ್ಪ, ನಿವೇದನ ಮೊದಲಾದುವುಗಳಿಂದ ಆರಾಧಿಸಿದನು.

೨೬. ಮತ್ತು ವ್ಯಾಸಮಹರ್ಷಿಗಳೇ ಪ್ರತ್ಯಕ್ಷವಾಗಿರುವಾಗ ನಡೆಯಿಸುವಂತೆ ಆ ಬ್ರಾಹ್ಮಣವೃಂದಕ್ಕೆ ಪೂಜೆಯನ್ನು ನಡೆಯಿಸಿದನು. ಸಹಸ್ರ ಕಿರಣನಾದ ಸೂರ್ಯ ದೇವನೇ ಪೌರಾಣಿಕಸ್ವರೂಪನಾಗಿ ಬಂದು ಇದಾನೆ ಎಂದು ಭಾವಿಸಿದನು.

೨೭. ಆತನನ್ನು ಕುರಿತು—"ಅಯ್ಯಾ ದ್ವಿಜಶ್ರೇಷ್ಠನೇ! ಇಲ್ಲಿ ನಾಲ್ಕು ವರ್ಣಗಳ ಜನರೂ ಪುರಾಣವನ್ನು ಕೇಳಲು ಅಪೇಕ್ಷೆಯುಳ್ಳವರಾಗಿ ಬಂದಿರುವರು.

೨೮-೨೯. ನೀನು ಪುರಾಣವಾಚನ ಮಾಡಿ ಎಲ್ಲರಿಗೂ ಶ್ರವಣಮಾಡಿಸು. ಅದರಿಂದ ಸೂರ್ಯನು ಕನಗೆ ಏಳು ಜನ್ಮಗಳವರೆಗೆ ವರಪ್ರದನಾಗುವನು. ಎಲೈ ದ್ವಿಜೋತ್ತಮನೇ! ನಾನು ಕೊಡುವ ನೂರು ಚಿನ್ನದ ವರಹರೂಪವಾದ ಉತ್ತಮ ವೃತ್ತಿಯನ್ನು ಸ್ವೀಕರಿಸಿ ಒಂದುಸಂವತ್ಸರ ಪರ್ಯಂತ ನಿತ್ಯವೂ ಪುರಾಣವಾಚನ ಮಾಡಿಸು. ಅನಂತರ ವರ್ಷವಾದಮೇಲೆ ನನ್ನ ಶ್ರೇಯಸ್ಸಿಗಾಗಿ ಬೇರೆ ಸಂಭಾವನೆಯನ್ನೂ ಕೊಡುತ್ತೇನೆ." ಎಂದು ಹೇಳಿ ಪುರಾಣವಾಚನ ಮಾಡಿಸಲು ತೊಡಗಿದನು.

ಏವಂ ಪ್ರವರ್ತಿತೇ ತಸ್ಮಿನ್ ಪುಣ್ಯೇ ಪುಸ್ತಕವಾಚನೇ ।
ಷಣ್ಮಾಸಾಗತಮಾತ್ರೇ ತು ಕಾಲೇ ಸುರವರೋತ್ತಮ ॥
ತತ್ರೈವಾಂತರತಶ್ಚಾಯಂ ಕಾಲಧರ್ಮಮುಪೇಯಿವಾನ್ । ॥ ೩೦ ॥

ಮಯಾ ಚಾಸ್ಯ ವಿಮಾನಂ ತು ಪ್ರೇಷಿತಂ ಕುರ್ವತೋ ವ್ರತಂ ।
ಇತ್ಯೇಷಾ ಕರ್ಮಣಸ್ತುಷ್ಟಿಃ ಪುಣ್ಯಾಖ್ಯಾನಸ್ವರೂಪಿಣಃ ॥ ೩೧ ॥

ಗಂಧಪುಷ್ಪೋಪಹಾರೈಸ್ತು ನ ತಥಾ ಜಾಯತೇ ಮಮ ।
ಪ್ರೀತಿರ್ದೇವವರಶ್ರೇಷ್ಠ ಪುರಾಣಶ್ರವಣೇ ಯಥಾ ॥ ೩೨ ॥

ಗೋಸುವರ್ಣಹಿರಣ್ಯಾನಾಂ ವಸ್ತ್ರಾಣಾಂ ಚಾಪಿ ಕೃತ್ಸ್ನಶಃ ।
ಗ್ರಾಮಾಣಾಂ ನಗರಾಣಾಂ ಚ ದಾನಂ ಪ್ರೀತಿಕರಂ ಮಮ ॥ ೩೩ ॥

ನ ತಥಾ ಸ್ಯಾತ್ಸುರಶ್ರೇಷ್ಠ ಯಥಾ ಪ್ರೀತಿಕರಂ ಗುಹ ।
ಇತಿಹಾಸಪುರಾಣಾನಾಂ ವಾಚನಂ ಸುರಸೈನ್ಯಪ ॥ ೩೪ ॥

---

೩೦. ಅಯ್ಯಾ ದೇವಶ್ರೇಷ್ಠನೇ! ಈರೀತಿ ಪುಣ್ಯಕರವಾದ ಪುರಾಣವಾಚನವು ನಡೆಯುತ್ತಿರಲು ಆರು ತಿಂಗಳು ಮುಗಿಯುತ್ತಲೇ ಪುರಾಣವಾಚನ ಮಾಡುತ್ತಿದ್ದ ಬ್ರಾಹ್ಮಣನು ಸ್ವರ್ಗಸ್ಥನಾದನು.

೩೧-೩೨. ಪುರಾಣವಾಚನರೂಪವಾದ ವ್ರತಮಾಡುತ್ತಿದ್ದ ಅವನಿಗೆ ನಾನು ವಿಮಾನವನ್ನು ಕಳುಹಿಸಿದೆನು. ಇದು ಪುರಾಣವಾಚನ ಕರ್ಮದಿಂದ ನನಗುಂಟಾದ ತುಷ್ಟಿಯು, ಅಯ್ಯಾ ದೇವಶ್ರೇಷ್ಠನೇ! ನನ್ನ ಭಕ್ತರು ಪುರಾಣಶ್ರವಣಮಾಡುವುದರಿಂದ ನನಗೆ ಸಂತೋಷವಾಗುವಷ್ಟು ಮಟ್ಟಿಗೆ ಗಂಧ ಪುಷ್ಪ ನಿವೇದನಪೂರ್ವಕವಾದ ಆರಾಧನೆಗಳಿಂದಲೂ ಸಂತೋಷವಾಗುವುದಿಲ್ಲ.

೩೩-೩೪. ಅಯ್ಯಾ ದೇವಸೇನಾಪತಿಯಾದ ಗುಹನೇ! ಇತಿಹಾಸ ಪುರಾಣ ವಾಚನದಿಂದ ನನಗೆ ಆಗುವಷ್ಟು ಸಂತೋಷವು ಗೋದಾನ, ಸುವರ್ಣದಾನ, ವಸ್ತ್ರ ದಾನ, ಗ್ರಾಮದಾನ, ನಗರದಾನ ಮುಂತಾದುವುಗಳಿಂದಲೂ ಆಗುವುದಿಲ್ಲ.

ಶ್ರಾದ್ಧಂ ಕುರ್ವಂತಿ ಯೇ ಮಹ್ಯಂ ಭಕ್ಷ್ಯಭೋಜ್ಯೈರನೇಕಶಃ ।
ನ ಕರೋತಿ ತಥಾ ಪ್ರೀತಿಂ ಯಥಾಪುಸ್ತಕ ವಾಚನಂ ॥ ೩೫ ॥

ಕರ್ಣಶ್ರಾದ್ಧೇ ಯಥಾ ಪ್ರೀತಿರ್ಮಮ ಸ್ಯಾತ್ಸುರಸತ್ತಮ ।
ನ ತಥಾ ಜಾಯತೇ ಪ್ರೀತಿರ್ಭೋಜ್ಯಶ್ರಾದ್ಧೇ ತಥೈವ ಚ ॥ ೩೬ ॥

ಅಥ ಕಿಂ ಬಹುನೋಕ್ತೇನ ನಾನ್ಯತ್ಪ್ರೀತಿಕರಂ ಮಮ ।
ಪುಣ್ಯಾಖ್ಯಾನಾದೃತೇ ದೇವ ಗುಹ್ಯಮೇತತ್ಪ್ರಕೀರ್ತಿತಂ ॥ ೩೭ ॥

ಯಶ್ಚಾಯಮುಪರೋ ವಿಪ್ರ ಇಹಾಯಾತೋ ನರೋತ್ತಮಃ ।
ಅಯಮಾಸೀದ್ದ್ವಿಜಶ್ರೇಷ್ಠಸ್ತಸ್ಮಿನ್ನೇವ ಪುರೋತ್ತಮೇ ॥ ೩೮ ॥

ಏಕದಾ ತು ಗತಶ್ಚಾಯಂ ಧರ್ಮಾಖ್ಯಾನಕಮುತ್ತಮಂ ।
ಶ್ರೋತುಂ ಭಕ್ತ್ಯಾ ದ್ವಿಜಶ್ರೇಷ್ಠ ಶ್ರದ್ಧಯಾ ಪರಯಾವೃತಃ ॥ ೩೯ ॥

---

೩೫. ನನ್ನ ಪ್ರೀತ್ಯರ್ಥವಾಗಿ ಅನೇಕ ಭಕ್ಷ್ಯಭೋಜ್ಯಯುಕ್ತವಾದ ಶ್ರಾದ್ಧವನ್ನು ಆಚರಿಸಿದರೂ ಪುರಾಣವಾಚನದಿಂದ ನನಗೆ ಉಂಟಾಗುವಷ್ಟು ಪ್ರೀತಿಯು ಎಂದಿಗೂ ಆಗಲಾರದು.

೩೬. ಅಯ್ಯಾ -ದೇವಶ್ರೇಷ್ಠನೇ! ಪುರಾಣಶ್ರವಣರೂಪವಾದ ಕರ್ಣಶ್ರಾದ್ಧದಿಂದ ನಾನು ತೃಪ್ತನಾಗುವ ಹಾಗೆ ಭೋಜನರೂಪವಾದ ಶ್ರಾದ್ಧದಿಂದ ಸಹ ನನಗೆ ತೃಪ್ತಿಯಾಗುವುದಿಲ್ಲ.

೩೭. ಹೆಚ್ಚು ಮಾತಾಡಿ ಪ್ರಯೋಜನವೇನು? ಪುಣ್ಯಾಖ್ಯಾನದ ಹೊರತು ಬೇರೊಂದೂ ನನಗೆ ಅಷ್ಟು ಪ್ರೀತಿಕರವಾಗುವುದಿಲ್ಲ. ಈ ಗುಟ್ಟನ್ನು ನಿನಗೆ ಮಾತ್ರ ಹೇಳಿರುವೆನು.

೩೮. ಇಲ್ಲಿಗೆ ಬಂದ ಆ ಇನ್ನೊಬ್ಬ ಬ್ರಾಹ್ಮಣನೂ ಅದೇ ಪಟ್ಟಣದಲ್ಲಿ ವಾಸಿಸುತ್ತಿದ್ದ ಪುಣ್ಯಾತ್ಮನು.

೩೯. ಅಯ್ಯಾ ದ್ವಿಜಶ್ರೇಷ್ಠನೇ! ಕೇಳು ಒಂದಾನೊಂದು ದಿನ ಆ ಬ್ರಾಹ್ಮಣಶ್ರೇಷ್ಠನು ಬಹು ಶ್ರದ್ಧೆಯಿಂದ ಕೂಡಿ ಶ್ರೇಷ್ಠವಾದ ಪುರಾಣಶ್ರವಣಮಾಡುವುದಕ್ಕಾಗಿ ಪುರಾಣಹೇಳುತ್ತಿದ್ದ ಸ್ಥಳಕ್ಕೆ ಹೋಗಿ ಅಲ್ಲಿ ಭಕ್ತಿಯಿಂದ ಕುಳಿತು ಆ ಪುಣ್ಯಾಖ್ಯಾನವನ್ನು ಕೇಳುತ್ತಿದ್ದನು.

ಶ್ರುತ್ವಾ ತತ್ರ ತತೋ ಭಕ್ತ್ಯಾ ಪುಣ್ಯಾಖ್ಯಾನಮನುತ್ತಮಂ ।
ಕೃತ್ವಾ ಪ್ರದಕ್ಷಿಣಂ ತಸ್ಯ ವಾಚಕಸ್ಯ ಮಹಾತ್ಮನಃ ॥
ಏಷ ವಿಪ್ರೋಽಮರಶ್ರೇಷ್ಠ ದತ್ತವಾನ್ ಸ್ವರ್ಣಮಾಷಕಂ ॥ ೪೦ ॥

ದತ್ವಾ ತು ದಕ್ಷಿಣಾಂ ತಸ್ಮೈ ವಾಚಕಾಯಾ ಮಿತೌಜಸೇ ।
ಆನಂದಮಗಮದ್ವಿಪ್ರಃ ಪ್ರಾಪ್ತವಾನ್ಕಾಂಚನಂ ಯಥಾ ॥ ೪೧ ॥

ಏತದ್ಧಿ ಸಫಲಂ ಚಾಸ್ಯ ನಚಾನ್ಯತ್ಕೃತವಾನಯಂ ।
ಯದನೇನ ಕೃತಾಪೂಜಾ ವಾಚಕಸ್ಯ ಮಹಾತ್ಮನಃ ॥
ಫಲಂ ಹಿ ಕರ್ಮಣಸ್ತಸ್ಯ ಯನ್ಮಯಾ ಪೂಜಿತಃ ಸ್ವಯಂ ॥ ೪೨ ॥

ವಾಚಕಂ ಪೂಜಯೇದ್ಯಸ್ತು ಶ್ರದ್ಧಾಭಕ್ತಿಸಮನ್ವಿತಃ ।
ತೇನಾಹಂ ಪೂಜಿತಃ ಸ್ಯಾಂ ವೈ ಕೋ ವಿಷ್ಣುಃ ಶಂಕರಸ್ತಥಾ ॥ ೪೩ ॥

ವಾಚಕಂ ಭೋಜಯೇದ್ಯಸ್ತು ಭಕ್ತ್ಯಾ ಭೋಜ್ಯೈರನುತ್ತಮೈಃ ।
ತೇನಾಹಂ ಪೂಜಿತಃ ಸ್ಯಾಂ ವೈ ದಶ ವರ್ಷಾಣಿ ಪಂಚ ಚ ॥ ೪೪ ॥

---

೪೦. ದೇವಶ್ರೇಷ್ಠನೇ! ಕೇಳು ಪುರಾಣ ಕೇಳಿದಮೇಲೆ ಮಹಾಶಕ್ತಿವಂತನೂ ಮಹಾತ್ಮನೂ ಆದ ಆ ಪೌರಾಣಿಕನಿಗೆ ಪ್ರದಕ್ಷಿಣೆ ನಮಸ್ಕಾರಮಾಡಿ ಒಂದು ಉದ್ದಿನ ಕಾಳುತೂಕ ಚಿನ್ನವನ್ನು ದಕ್ಷಿಣೆಯನ್ನಾಗಿ ಕೊಟ್ಟನು.

೪೧. ಹೀಗೆ ಕೊಟ್ಟ ಅನಂತರ ತನಗೇ ಚಿನ್ನ ದೊರೆತಷ್ಟುಮಟ್ಟಿಗೆ ಸಂತೋಷ ಪಡುತ್ತಾ ಮನೆಗೆಹೋದನು. ಇಷ್ಟು ಮಾತ್ರದಿಂದಲೇ ಅವನಿಗೆ ಈರೀತಿ ಫಲಪ್ರಾಪ್ತಿ ಯಾಯಿತೇವಿನಾ ಇನ್ನು ಯಾವ ಕಾರ್ಯವನ್ನೂ ಅವನು ಮಾಡಿಲ್ಲ.

೪೨. ಮಹಾತ್ಮನಾದ ಪೌರಾಣಿಕನನ್ನು ಈತನು ಪೂಜೆಮಾಡಿದುದರಿಂದ ಪೌರಾಣಿಕ ಪೂಜಕನಾದ ಇವನನ್ನು ನಾನೇ ಸಾಕ್ಷಾತ್ತಾಗಿ ಪೂಜೆಮಾಡಿದೆನು.

೪೩. ಯಾರು ಪುರಾಣವಾಚಕನನ್ನು ಶ್ರದ್ಧಾಭಕ್ತಿಯಿಂದ ಪೂಜಿಸುತ್ತಾರೋ ಅವರು ನನ್ನನ್ನೇ ಪೂಜಿಸಿದಂತಾಯಿತು. ಹರಿಗೂ ಹರನಿಗೂ ಹೇಗೆ ಭೇದವಿಲ್ಲವೋ ಹಾಗೆಯೇ ಪುರಾಣವಾಚಕನಿಗೂ ನನಗೂ ಭೇದವಿಲ್ಲ.

೪೪. ಪೌರಾಣಿಕನನ್ನು ಶ್ರೇಷ್ಠವಾದ ಭೋಜ್ಯವಸ್ತುಗಳಿಂದ ಭಕ್ತಿಪೂರ್ವಕವಾಗಿ ಭೋಜನ ಮಾಡಿಸಿದವನು ಹದಿನೈದು ವರ್ಷ ಅವಿಚ್ಛಿನ್ನವಾಗಿ ನನ್ನನ್ನು ಪೂಜಿಸಿದುದರಿಂದ ಹೊಂದಬಹುದಾದ ಫಲವನ್ನು ಅನುಭವಿಸುತ್ತಾನೆ.

ನಯ ನಯವೋ ನ ಯಮಿನಾ ಚಾಪಿ ನ ಮಂದೋ ನ ಮನುಸ್ತಥಾ ।
ತಪತೀ ನ ತಥಾನ್ವಿಷ್ಟಾ ಯಥೇಷ್ಟೋ ವಾಚಕೋ ಮಮ ॥ ೪೫ ॥

ವಾಚಕೇ ಸತ್ಕೃತೇ ದೇವ ಭೋಜಿತೇ ಸುರಸೈನ್ಯಪ ।
ತೃಪ್ತಿರ್ಭವತಿ ಮೇ ದೇವ ಸಂವತ್ಸರಶತದ್ವಯಂ ॥ ೪೬ ॥

ನ ಕೇವಲಂ ಮಮ ಪ್ರೀತಿಃ ವಾಚಕೇ ಭೋಜಿತೇ ಭವೇತ್ ।
ಕೃತ್ಸ್ನಶೋ ದೇವತಾನಾಂ ಚ ಇಂದ್ರಾದೀನಾಂ ತಥಾ ಭವೇತ್ ॥ ೪೭ ॥

ಬ್ರಹ್ಮವಿಷ್ಣುಶಿವಾದೀನಾಂ ಸ ಚೇಷ್ಟೋ ವಾಚಕೋ ಮಮ ।
ಪ್ರೀತೇ ತಸ್ಮಿನ್ ದೇವತಾಃ ಸ್ಯುಃ ಸರ್ವಾಃ ಪ್ರೀತಾಃ ನ ಸಂಶಯಃ ॥ ೪೮ ॥

ಇತ್ಯೇತತ್ಕಥಿತಂ ಸರ್ವಮನಯೋಃ ಕರ್ಮ ಷಣ್ಮುಖ ॥ ೪೯ ॥

---

೪೫. ವಾಚಕನಲ್ಲಿ ನನಗೆ ಇರುವಷ್ಟುಮಟ್ಟಿಗೆ ಪ್ರೀತಿಯು ನನ್ನ ಮಕ್ಕಳಾದ ಮನು, ಯಮ, ಯಮುನೆ, ಶನಿ, ತಪತೀ ಇವರಲ್ಲಿ ಕೂಡ ಇಲ್ಲ.

೪೬. ಸುರಸೇನಾಪತಿಯಾದ ಗುಹನೇ! ವಾಚಕನಿಗೆ ಭೋಜನಮಾಡಿಸಿ ಸತ್ಕರಿಸಿದರೆ ಇನ್ನೂರು ಸಂವತ್ಸರಗಳು ನನಗೆ ಭೋಜನಮಾಡಿಸಿದಷ್ಟು ತೃಪ್ತಿಯುಂಟಾಗುವುದು.

೪೭. ವಾಚಕನಿಗೆ ಭೋಜನಮಾಡಿಸಿದರೆ ನನಗೆ ಪ್ರೀತಿಯಾಗುವದಷ್ಟು ಮಾತ್ರವೇ ಅಲ್ಲ. ಇಂದ್ರನೇ ಮೊದಲಾದ ಸಮಸ್ತ ದೇವತೆಗಳಿಗೂ ಸಹ ತೃಪ್ತಿಯಾಗುತ್ತದೆ.

೪೮. ಆ ರೀತಿ ಸೂರ್ಯಪುರಾಣವಾಚಕನು ಬ್ರಹ್ಮ, ವಿಷ್ಣು, ಶಿವ ಮೊದಲಾದವರಿಗೂ ಇಷ್ಟನು. ಅವನು ಪ್ರೀತನಾದರೆ ಎಲ್ಲಾ ದೇವತೆಗಳೂ ಪ್ರೀತರಾಗುತ್ತಾರೆ ಎನ್ನುವುದರಲ್ಲಿ ಸಂಶಯವಿಲ್ಲ.

೪೯. ಅಯ್ಯಾ ಷಣ್ಮುಖನೇ! ಇವರಿಬ್ಬರೂ ಮಾಡಿದ ಪುಣ್ಯಕರ್ಮಗಳೆಲ್ಲವನ್ನೂ ನಿನಗೆ ವಿವರವಾಗಿ ಹೇಳಿದೆನು.

ನ ಚಾನ್ಯಚ್ಚ ಕ್ರತುಃ ಕರ್ಮ ಕಿಮನ್ಯಚ್ಛ್ರೋತುಮಿಚ್ಛಸಿ ।
ಏತಚ್ಚೃಷ್ಟ್ವಾಹಮಾಶ್ಚರ್ಯಂ ತವಾಭ್ಯಾಶಮಿಹಾಗತಃ ॥
ಕಿಮತ್ರ ತಥ್ಯಂ ದೇವೇಶ ಕಥ್ಯತಾಂ ಕೌತುಕಂ ಮಮ ॥ ೫೦ ॥

ಶ್ರುತ್ವಾ ಕುಮಾರವಚನಂ ಸರ್ವಲೋಕಪಿತಾಮಹಃ ॥ ೫೧ ॥

॥ ಬ್ರಹ್ಮೋವಾಚ ॥

ಹಂತ ಭೋಃ ಸಾಧು ಪುಣ್ಯೋಸಿ ನಾಸ್ತಿ ತುಲ್ಯಸ್ತ್ವಯಾಪರಃ ।
ಯದ್ದೃಷ್ಟೌ ಭವತಾ ತೌ ಹಿ ಸುಪುಣ್ಯೌ ಪುಣ್ಯಕಾರಿಣೌ ॥ ೫೨ ॥

ಯದುಕ್ತಂ ಭಾನುನಾ ವತ್ಸ ತತ್ತಥಾ ನಾನ್ಯಥಾ ಭವೇತ್ ।
ಯದಾಸೀನ್ಮೇ ಮುಖಂ ಪುತ್ರ ಪ್ರಥಮಂ ಲೋಕಪೂಜಿತಂ ॥ ೫೩ ॥

ತಸ್ಮಾದೇತಾನಿ ಸರ್ವಾಣಿ ನಿರ್ಗತಾನಿ ಸಮಂತತಃ ।
ಇತಿಹಾಸಪುರಾಣಾನಿ ಲೋಕಾನಾಂ ಹಿತಕಾಮ್ಯಯಾ ॥ ೫೪ ॥

---

೫೦–೫೧. ಈಗ ನಾನು ಹೇಳಿದುದೇ ಅವರು ಮಾಡಿದ ಕರ್ಮವೇಹೊರತು ಇನ್ನೂ ಬೇರೆ ಯಾವ ಯಜ್ಞಾದಿ ಕರ್ಮಗಳನ್ನೂ ಮಾಡಿಲ್ಲ. ಇನ್ನೇನನ್ನು ಕೇಳಲು ಅಪೇಕ್ಷಿಸುತ್ತೀಯೆ ? ಎನ್ನಲು " ನೀನು ಆ ದ್ವಿಜರನ್ನು ಪೂಜಿಸಿದ ಈ ಆಶ್ಚರ್ಯವನ್ನು ನೋಡಿ ಕಾರಣವನ್ನು ಕೇಳುವುದಕ್ಕಾಗಿ ನಾನು ನಿನ್ನ ಸಮೀಪಕ್ಕೆ ಬಂದೆನು. ಅಯ್ಯಾ ದೇವೇಶನೇ! ಇದರ ತತ್ವವು ಯಾವುದು ? ಹೇಳು. ನನಗೆ ಕುತೂಹಲವಾಗಿದೆ " ಎಂದನು. ಸರ್ವಲೋಕಪಿತಾಮಹನಾದ ಬ್ರಹ್ಮನು ಷಣ್ಮುಖನ ಈ ಮಾತನ್ನು ಕೇಳಿ ಬ್ರಹ್ಮನು ಹೇಳುತ್ತಾನೆ.

೫೨–೫೩. ಒಳ್ಳೆಯ ಪುಣ್ಯಶಾಲಿಯಾಗಿದ್ದೀ ನಿನಗೆ ಸಮಾನರು ಬೇರೆ ಯಾರೂ ಇಲ್ಲ. ಪುಣ್ಯಕಾರ್ಯಮಾಡಿ ಸತ್ಕಾರ ಹೊಂದಿದ ಪುಣ್ಯಾತ್ಮರಿಬ್ಬರನ್ನೂ ನೀದು ದರ್ಶನ ಮಾಡಿದುದೇ ಪುಣ್ಯಕರವಾದುದು. ಅಯ್ಯಾ ಮಗು! ಸೂರ್ಯನು ಹೇಳಿದಂತೆಯೇ ಹೊರತು ಅದರಲ್ಲಿ ಬೇರೆ ಯಾವ ತತ್ವವೂ ಇಲ್ಲ. ಪುತ್ರಾ! ಯಾವುದು ಲೋಕಪೂಜಿತ ವಾದ ನನ್ನ ಮೊದಲ ಮುಖವೋ ಅದರಿಂದ.

೫೪. ಲೋಕಗಳಿಗೆ ಕ್ಷೇಮವಾಗಬೇಕೆಂಬ ಇಚ್ಛೆಯಿಂದ ಈ ಸಮಸ್ತ ಇತಿಹಾಸ ಪುರಾಣಗಳೂ ಸರ್ವತ್ರ ಪ್ರಕಟವಾಗುವುವು.

ಯಥೈತಾನಿ ಮಮೇಷ್ಟಾನಿ ಪುರಾಣಾನಿ ಮಹಾಮತೇ ।
ನ ತಥಾ ಹ್ಯೈ ಚತುರ್ವೇದೀ ನ ಚಾಂಗಾನಿ ಮಹಾಮತೇ ॥ ೫೫ ॥

ಶ್ರುಣ್ವಂತ್ಯೇತಾನಿ ಯೇ ಭಕ್ತ್ಯಾ ನಿತ್ಯಂ ಶ್ರದ್ಧಾಸಮನ್ವಿತಾಃ ।
ದತ್ವಾ ತು ವಾಚಕೇ ವೃತ್ತಿಂ ತೇ ಗಚ್ಛಂತಿ ಪರಂ ಪದಂ ॥ ೫೬ ॥

ಧರ್ಮಾರ್ಥಕಾಮಮೋಕ್ಷಾಣಾಂ ಸೃಷ್ಟಿಕಾರಣಮುತ್ತಮಂ ।
ಇತಿಹಾಸಪುರಾಣಾನಿ ಮಯಾ ಸೃಷ್ಟಾನಿ ಸುವ್ರತ ॥ ೫೭ ॥

ಚತ್ವಾರೋ ಯ ಇಮೇ ವೇದಾ ಗೂಢಾರ್ಥಾ ಸತತಂ ಸ್ಮೃತಾಃ ।
ಅತಸ್ತ್ವೇತಾನಿ ಸೃಷ್ಟಾನಿ ಬೋಧಾಯ್ಯೇಷಾಂ ಮಹಾಮತೇ ॥ ೫೮ ॥

ಯಸ್ತು ಕಾರಯತೇ ನಿತ್ಯಂ ಧರ್ಮಶ್ರವಣಮುತ್ತಮಂ ।
ಆದಿತ್ಯಾದ್ಭಾಸ್ಕರಂ ಪ್ರಾಪ್ಯ ಯಾತಿ ತತ್ಪರಮಂ ಪದಂ ॥ ೫೯ ॥

---

೫೫. ಎಲೈ ಮಹಾಬುದ್ಧಿಶಾಲಿಯೇ! ಈ ಪುರಾಣಗಳು ಪ್ರಿಯವಾಗುವಷ್ಟು ಚತುರ್ವೇದಗಳೂ, ವೇದಾಂಗಗಳೂ ಇವು ಯಾವುವೂ ನನಗೆ ಪ್ರಿಯವಿಲ್ಲ.

೫೬. ಯಾರು ಪ್ರತಿದಿನವೂ ಇವುಗಳನ್ನು ಭಕ್ತಿಯಿಂದಲೂ, ಶ್ರದ್ಧೆಯಿಂದಲೂ ಕೂಡಿದವರಾಗಿ ಕೇಳುತ್ತಾರೋ, ಅವರು ಪುರಾಣವಾಚಕನಿಗೆ ಜೀವನವನ್ನು ಕಲ್ಪಿಸಿದವರಾಗಿ ಪರಮಪದಕ್ಕೆ ಹೋಗುತ್ತಾರೆ.

೫೭. ಎಲೈ ಸುವ್ರತನೇ ! ಇತಿಹಾಸಪುರಾಣಗಳು ಧರ್ಮಾರ್ಥ ಕಾಮಮೋಕ್ಷಗಳ ಸೃಷ್ಟಿಗೆ ಕಾರಣವೆಂಬುದನ್ನು ನಾನು ನಂಬಿದ್ದೇನೆ.

೫೮. ಈ ನಾಲ್ಕು ವೇದಗಳೂ ಗೂಢಾರ್ಥವುಳ್ಳದ್ದೆಂದು ಭಾವಿಸಲ್ಪಟ್ಟಿರುವ ಕಾರಣ ಅವುಗಳ ಪ್ರಕಾಶನಕ್ಕಾಗಿ ಈ ಪುರಾಣಗಳು ರಚಿತವಾದುವು.

೫೯. ಉತ್ತಮವಾದ ಪುರಾಣಶ್ರವಣವನ್ನು ಮಾಡಿಸುವಾತನು ಸೂರ್ಯಮಂಡಲ ದ್ವಾರಾ ಭಾಸ್ಕರಸಾನ್ನಿಧ್ಯವನ್ನು ತಲಪಿ ಪರಮಪದಕ್ಕೆ ಹೋಗುತ್ತಾನೆ.

ದತ್ವಾ ತು ದಕ್ಷಿಣಾಂ ತತ್ರ ಆದಿತ್ಯಸ್ಯ ಪುರಂ ವ್ರಜೇತ್ ।
ಕಿಮಾಶ್ಚರ್ಯಂ ಸುರಶ್ರೇಷ್ಠ ದಾನಪಾತ್ರಂ ಹಿ ತತ್ಪರಂ ॥ ೬೦ ॥

ಯಥಾ ದೇವವರೋ ಲೇಖೋ ಯಥಾ ಹೇತಿಃ ಪರಂ ರವಿಃ ।
ಬ್ರಾಹ್ಮಣಾನಾಂ ತಥಾ ಶ್ರೇಷ್ಠೋ ವಾಚಕೋ ನಾತ್ರ ಸಂಶಯಃ ॥ ೬೧ ॥

ಹೇತಿರ್ಯಥಾ ತೇಜಸಾಂ ತು ಸರಸಾಂ ಸಾಗರೋ ಯಥಾ ।
ತಥಾ ಸರ್ವದ್ವಿಜೇಭ್ಯಸ್ತು ವಾಚಕಃ ಪ್ರವರಃ ಸ್ಮೃತಃ ॥ ೬೨ ॥

ವಾಚಕಂ ಪೂಜಯೇದ್ಯಸ್ತು ನರೋ ಭಕ್ತಿಪುರಸ್ಸರಂ ।
ಪೂಜಿತಂ ಸಕಲಂ ತೇನ ಭವೇನ್ನೈವಾತ್ರ ಸಂಶಯಃ ॥ ೬೩ ॥

ಸತ್ಯಮುಕ್ತಂ ನ ಸಂದೇಹೋ ಭಾನುನಾ ಮತ್ಕುಲೋದ್ವಹ ।
ವಾಚಕೇನ ಸಮಂ ಪಾತ್ರಂ ನ ಜಾತ್ವನ್ಯದ್ಭವೇತ್ಕ್ವಚಿತ್ ॥ ೬೪ ॥

---

೬೦. ವಾಚಕನಿಗೆ ದಕ್ಷಿಣೆಕೊಟ್ಟವನೂ ಆದಿತ್ಯಲೋಕಕ್ಕೆ ತಲಪುವನು. ಎಲೈ ಸುರಶ್ರೇಷ್ಠನೇ! ವಾಚಕನು ಶ್ರೇಷ್ಠವಾದ ದಾನಪಾತ್ರವೆಂಬುದರಲ್ಲಿ ಏನಾಶ್ಚರ್ಯ?

೬೧. ಲೇಖನು ದೇವಶ್ರೇಷ್ಠನೆನಿಸುವ ಹಾಗೂ, ಹೇತಿಯು (ಕಿರಣ) ಸೂರ್ಯಸ್ವರೂಪನೆನಿಸುವ ಹಾಗೂ ಪುರಾಣವಾಚಕನು ಬ್ರಾಹ್ಮಣಶ್ರೇಷ್ಠನೆಂಬುದರಲ್ಲಿ ಸಂಶಯವಿಲ್ಲ.

೬೨. ಸೂರ್ಯಕಿರಣವು ತೇಜಸ್ಸುಗಳಲ್ಲಿ ಹೇಗೆ ಶ್ರೇಷ್ಠವೋ, ಸಮುದ್ರವು ಜಲಾಶಯಗಳಲ್ಲಿ ಹೇಗೆ ಶ್ರೇಷ್ಠವೋ, ಹಾಗೆ ಪುರಾಣವಾಚಕನು ಬ್ರಾಹ್ಮಣರಲ್ಲಿ ಶ್ರೇಷ್ಠನೆಂದು ತಿಳಿಯಬೇಕು.

೬೩. ಪುರಾಣವಾಚಕನನ್ನು ಭಕ್ತಿಪೂರ್ವಕವಾಗಿ ಪೂಜಿಸುವ ಮನುಷ್ಯನು ಸಕಲ ಜಗತ್ತನ್ನೂ ಪೂಜಿಸಿದಂತಾಗುವುದೆಂಬುದರಲ್ಲಿ ಸಂದೇಹವಿಲ್ಲ.

೬೪. ಎಲೈ ದೇವಕುಲಸಂಭೂತನಾದ ಕುಮಾರಾ! ಸೂರ್ಯನು ಯಥಾರ್ಥವಾದ ವಿಷಯವನ್ನೇ ಹೇಳಿದನು. ಇದರಲ್ಲಿ ಸಂದೇಹವಿಲ್ಲ. ವಾಚಕನಿಗೆ ಸಮವಾದ ಬೇರೇ ಯೋಗ್ಯಪಾತ್ರವು ಎಲ್ಲಿಯೂ ಇಲ್ಲ.

ತಚ್ಛ್ರುತ್ವಾ ಬ್ರಹ್ಮಣೋ ವಾಕ್ಯಂ ಕುಮಾರೋ ವಾಕ್ಯಮಬ್ರವೀತ್
॥ ೬೫ ॥
ಅಹೋ ಹಿ ಧನ್ಯತಾ ತಸ್ಯ ಪುಣ್ಯಶ್ರವಣಕಾರಿಣಃ ।
ದಾನಂ ಚ ದದತೋಽತ್ಯರ್ಥಂ ಪುಣ್ಯತಾ ವಾಚಕಾಯ ವೈ ॥ ೬೬ ॥

॥ ಬ್ರಹ್ಮೋವಾಚ ॥
ಇತ್ಥಂ ದಿಂಡೇ ಸದಾ ಯಸ್ತು ದೇವದೇವಸ್ಯ ಮಂದಿರೇ ।
ಕುರ್ಯಾತ್ತು ಧರ್ಮಶ್ರವಣಂ ಸ ಯಾತಿ ಪರಮಾಂ ಗತಿಂ ॥ ೬೭ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ
ಪುಣ್ಯಶ್ರವಣ ಮಾಹಾತ್ಮ್ಯವರ್ಣನಂ ನಾಮ
ಚತುರ್ನವತಿತಮೋಽಧ್ಯಾಯಃ.



೬೫. ಆಗ ಕುಮಾರನು ಬ್ರಹ್ಮನು ಹೇಳಿದ ಮಾತನ್ನು ಕೇಳಿ ಮುಂದೆ ಮಾತನಾಡುವವನಾಗಿ ಹೀಗೆಂದನು.

೬೬. ಪುಣ್ಯಕರವಾದ ಈ ಪುರಾಣಶ್ರವಣ ಮಾಡಿದವನ ಪುಣ್ಯವು ಆಶ್ಚರ್ಯಕರವಾದುದು. ವಾಚಕನಿಗೆ ದಾನಕೊಟ್ಟವನ ಧನ್ಯತೆಯು ಅತ್ಯಂತಾಶ್ಚರ್ಯಕರವಾಗಿದೆ.

೬೭. ಬ್ರಹ್ಮನು ಹೇಳುತ್ತಾನೆ—ಎಲೈ ದಿಂಡಿಯೇ! ಯಾವನು ಸದಾ ಹೀಗೆ ದೇವದೇವನಾದ ಸೂರ್ಯನ ಆಲಯದಲ್ಲಿ ಪುರಾಣಶ್ರವಣ ಮಾಡುತ್ತಾನೋ ಅವನು ಉತ್ತಮಗತಿಯನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ
ಪುಣ್ಯಶ್ರವಣಮಹಾತ್ಮೆಯ ವರ್ಣನೆಯೆಂಬ ತೊಂಬತ್ತನಾಲ್ಕ
ನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಪಂಚನವತಿತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ತ್ರಿಸ್ತು ಪ್ರದಕ್ಷಿಣಂ ಕೃತ್ವಾ ಯೋ ನಮಸ್ಕುರುತೇ ರವಿಂ ।
ಭೂಮೌ ಗತೇನ ಶಿರಸಾ ಸ ಯಾತಿ ಪರಮಾಂ ಗತಿಂ ॥ ೧ ॥

ಸೋಪಾನತ್ಕೋ ದೇವಗೃಹಂ ಪ್ರವಿಶೇದ್ಯಸ್ತುಮಾನವಃ ।
ಸ ಯಾತಿ ನರಕಂ ಘೋರಂ ತಮಿಸ್ರಂ ನಾಮ ನಾಮತಃ ॥ ೨ ॥

ಶ್ಲೇಷ್ಮ ಮೂತ್ರಪುರೀಷಾಣಿ ಸಮುತ್ಸೃಜತಿ ಯಸ್ತು ವೈ ।
ದೇವಸ್ಯಾಯತನೇ ಭಾನೋಃ ಸ ಗಚ್ಛೇನ್ನರಕಂ ಕ್ರಮಾತ್ ॥ ೩ ॥

---

## ತೊಂಭತ್ತೈದನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಯಾವನು ಆತ್ಮಾರ್ಥವಾಗಿ ಸೂರ್ಯನಿಗೆ ಮೂರು ಪ್ರದಕ್ಷಿಣೆ ಮಾಡಿ ತಲೆಯು ನೆಲಕ್ಕೆ ಸೋಕುವಂತೆ ನಮಸ್ಕರಿಸುವನೋ, ಅವನು ಉತ್ತಮಗತಿಯನ್ನು ಹೊಂದುತ್ತಾನೆ.

೨. ಯಾವ ಮನುಷ್ಯನು ಪಾದರಕ್ಷೆಯನ್ನು ಮೆಟ್ಟಿಕೊಂಡು ಸೂರ್ಯದೇವಾಲಯವನ್ನು ಪ್ರವೇಶಮಾಡುವನೋ ಅವನು ತಮಿಸ್ರವೆಂದು ಪ್ರಖ್ಯಾತಿಹೊಂದಿದ ಭಯಂಕರವಾದ ನರಕಕ್ಕೆ ಹೋಗುತ್ತಾನೆ.

೩. ಸೂರ್ಯದೇವಾಲಯದಲ್ಲಿ ಯಾವನು ಶ್ಲೇಷ್ಮ, ಮೂತ್ರ, ಮಲ ಇವನ್ನು ವಿಸರ್ಜನೆಮಾಡುವನೋ ಅವನು ಕಾಲಕ್ರಮದಲ್ಲಿ ನರಕಕ್ಕೆ ಹೋಗುತ್ತಾನೆ.

ಘೃತಂ ಮಧು ಪಯಸ್ತೋಯಂ ತಥೇಕ್ಷುರಸಮುತ್ತಮಂ ।
ಸ್ನಪನಾರ್ಥಂ ತು ದೇವಸ್ಯ ಯೋ ದದಾತೀಹ ಮಾನವಃ ॥
ಸರ್ವಾನ್ ಕಾಮಾನವಾಪ್ಯೇಹ ಸ ಯಾತಿ ರವಿಮಂಡಲಂ ॥ ೪ ॥

ಸ್ನಾಪ್ಯಮಾನಂ ರವಿಂ ಭಕ್ತ್ಯಾ ಯೇ ಪಶ್ಯಂತಿ ವೃಷಧ್ವಜ ।
ತೇಽಶ್ವಮೇಧಫಲಂ ಪ್ರಾಪ್ಯ ಲಯಂ ಯಾಂತಿ ವೃಷಧ್ವಜೇ, ॥ ೫ ॥

ಸ್ನಪನಂ ಯೇ ಚ ಕುರ್ವಂತಿ ಭಾನೋರ್ಭಕ್ತಿ ಸಮನ್ವಿತಾಃ ।
ಲಭಂತೇ ತತ್ಫಲಂ ಭೀಮ ರಾಜಸೂಯಾಶ್ವಮೇಧಯೋಃ ॥ ೬ ॥

ಯಥಾ ನ ಲಂಘಯೇತ್ಕಶ್ಚಿತ್ ಸ್ನಪನಂ ಭಾಸ್ಕರಸ್ಯ ತು ।
ತಥಾ ಕಾರ್ಯಂ ಪ್ರಯತ್ನೇನ ಲಂಘಿತಂ ಹ್ಯಸುಖಾವಹಂ ॥ ೭ ॥

---

೪. ಯಾವ ಮನುಷ್ಯನು ಸೂರ್ಯದೇವನ ಅಭಿಷೇಕಕ್ಕಾಗಿ ತುಪ್ಪ, ಜೇನು ತುಪ್ಪ, ಹಾಲು, ನೀರು, ಉತ್ತಮವಾದ ಕಬ್ಬಿನಹಾಲು ಇವುಗಳನ್ನು ತಂದುಕೊಡುವನೋ ಅವನು ಸಮಸ್ತ ಇಷ್ಟಾರ್ಥಗಳನ್ನೂ ಹೊಂದಿ ಸೂರ್ಯಮಂಡಲವನ್ನು ಸೇರುತ್ತಾನೆ.

೫. ಎಲೈ ದಿಂಡಿಯೆ ! ಅಭಿಷೇಕವಾಗುತ್ತಿರುವಾಗ ಪ್ರತಿಮಾವಿಷ್ಟನಾದ ಸೂರ್ಯನನ್ನು ಯಾರು ಭಕ್ತಿಯಿಂದ ದರ್ಶನಮಾಡುತ್ತಾರೋ, ಅವರು ಅಶ್ವಮೇಧಫಲವನ್ನು ಹೊಂದಿ ಪರಮೇಶ್ವರನಲ್ಲಿ ಐಕ್ಯವಾಗುತ್ತಾರೆ.

೬. ಅಯ್ಯಾ ಭೀಮಸ್ವರೂಪನಾದ ದಿಂಡಿಯೇ ! ಭಕ್ತಿಯಿಂದ ಕೂಡಿದವರಾಗಿ ಯಾರು ಸೂರ್ಯಪ್ರತಿಮೆಗೆ ಅಭಿಷೇಕಮಾಡುತ್ತಾರೆಯೋ ಅವರು ರಾಜಸೂಯ ಮತ್ತು ಅಶ್ವಮೇಧ ಎಂಬ ಎರಡು ಯಾಗಮಾಡಿದ್ದರಿಂದ ಪ್ರಾಪ್ತವಾಗುವ ಫಲವನ್ನು ಹೊಂದುವರು.

೭. ಸೂರ್ಯನ ಅಭಿಷೇಕ ನಡೆಯುತ್ತಿದ್ದರೂ ಅದನ್ನು ದರ್ಶನಮಾಡದೇ ಯಾವನಾದರೂ ಉಲ್ಲಂಘನಮಾಡಿ ಹೋದರೆ ಅವನಿಗೆ ಕಷ್ಟಪ್ರಾಪ್ತಿಯಾಗುವುದು. ಆದುದರಿಂದ ಅದು ಉಲ್ಲಂಘಿತವಾಗದಂತೆ ಪ್ರಯತ್ನಿಸಬೇಕು.

ತಾಮಿಸ್ರಂ ನರಕಂ ಯಾತಿ ರೌರವಾಖ್ಯಂ ಚ ಲಂಘಯನ್ ।
ತಸ್ಮಾತ್ಸರ್ವಪ್ರಯತ್ನೇನ ಕಾರ್ಯಂ ಸ್ನಪನಮಾದಿತಃ　　॥ ೮ ॥

ಘೃತೇನ ಸ್ನಪಯನ್ ದೇವಂ ಕೆಂಜಜಂ ಪ್ರಾಪ್ನುಯಾನ್ನರಃ ।
ಮಧುನಾ ಪ್ರಿಯಮಾಯಾತಿ ತೋಯೇನಾಪಿ ದಿನೇಶ್ವರಂ　　॥ ೯ ॥

ಇಕ್ಷುದ್ರವೇಣ ಸಂಸ್ನಾಪ್ಯ ಪಯಸಾ ಚಿಂತಿತಂ ಲಭೇತ್ ।
ಏವಮೇಭಿಃ ಸ್ನಾಪಯಿತ್ವಾ ರವಿಂ ವಾಂಛಿತಮಾಪ್ನುಯಾತ್　　॥ ೧೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಆದಿತ್ಯಾಲಯ ಮಾಹಾತ್ಮ್ಯವರ್ಣನಂ ನಾಮ ಪಂಚನವತಿತಮೋಽಧ್ಯಾಯಃ



---

೮. ಸೂರ್ಯಸ್ನಪನ ದರ್ಶನಮಾಡದೇ ಉಲ್ಲಂಘನಮಾಡಿದವನು ಅಂಧಕಾರ ಮಯವಾದ ತಾಮಿಸ್ರ ನರಕವನ್ನು ಹೊಂದುತ್ತಾನೆ. ಆದ್ದರಿಂದ ಸರ್ವಪ್ರಯತ್ನ ಮಾಡಿ ಪ್ರಾರಂಭದಿಂದಲೂ ಸೂರ್ಯಾಭಿಷೇಕವನ್ನು ದರ್ಶನಮಾಡಬೇಕು.

೯. ತುಪ್ಪದಿಂದ ಸೂರ್ಯನಿಗೆ ಅಭಿಷೇಕಮಾಡಿದಾತನು ಬ್ರಹ್ಮಸಾಯುಜ್ಯ ವನ್ನು ಪಡೆಯುತ್ತಾನೆ. ಸೂರ್ಯನಿಗೆ ಜೇನುತುಪ್ಪದಿಂದಲೂ, ಜಲದಿಂದಲೂ ಅಭಿ ಷೇಕಮಾಡಿದವನು ತನಗೆ ಪ್ರಿಯವಾದುದನ್ನೆಲ್ಲಾ ಹೊಂದುತ್ತಾನೆ.

೧೦. ಕಬ್ಬಿನ ಹಾಲಿನಿಂದಲೂ, ಕ್ಷೀರದಿಂದಲೂ ಸೂರ್ಯನಿಗೆ ಅಭಿಷೇಕಮಾಡಿ ದವನು ಮನಸ್ಸಿನಲ್ಲಿ ಚಿಂತಿಸಿದುದನ್ನೆಲ್ಲಾ ಹೊಂದುವನು. ಈ ರೀತಿ ಈ ದ್ರವಗಳಿಂದ ಸೂರ್ಯನಿಗೆ ಅಭಿಷೇಕಮಾಡಿದವನು ತನ್ನ ಇಷ್ಟಾರ್ಥವನ್ನು ಪಡೆಯುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಆದಿ ತ್ಯಾಲಯ ಮಾಹಾತ್ಮೆಯ ವರ್ಣನೆಯೆಂಬ ತೊಂಬತ್ತೈದನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಷಣ್ಣವತಿತಮೋಽಧ್ಯಾಯಃ

---

॥ ದಿಂಡಿರುವಾಚ ॥

ಯಸ್ತ್ವೇತಾಃ ಸಪ್ತಸಪ್ತಮ್ಯೋ ಭವತಾ ಕಥಿತಾ ಮಮ ।
ತಾಸಾಂ ಯಾ ಪ್ರಥಮಾದೇವ ಕಥಿತಾ ಸಾ ಸವಿಸ್ತರಾ ॥ ೧ ॥

ಯಾಸ್ತ್ವನ್ಯಾ ದೇವಶಾರ್ದೂಲ ತಾಃ ಸರ್ವಾಃ ಕಥಯಸ್ವ ಮೇ ।
ಯೇನೋಪೋಷ್ಯ ತತಸ್ತಾಸ್ತು ವ್ರಜೇಹಂ ಹೇಲಿಸದ್ಮ ವೈ ॥ ೨ ॥

॥ ಬ್ರಹ್ಮೋವಾಚ ॥

ಶುಕ್ಲಪಕ್ಷಸ್ಯ ಸಪ್ತಮ್ಯಾಂ ನಕ್ಷತ್ರಂ ಪಂಚತಾರಕಂ ।
ಯದಾ ಸ್ಯಾತ್ತಾ ತದಾ ಜ್ಞೇಯಾ ಜಯಾ ನಾಮೇತಿ ಸಪ್ತಮೀ ॥ ೩ ॥

---

### ತೊಂಭತ್ತಾರನೆಯ ಅಧ್ಯಾಯ

೧. ದಿಂಡಿಯು ಹೇಳುತ್ತಾನೆ—ಯಾವ ಏಳು ಬಗೆಯ ಸಪ್ತಮಿಗಳನ್ನು ಕುರಿತು ನೀನು ನನಗೆ ಹೇಳಿವೆಯೋ ಅವುಗಳಲ್ಲಿ ಮೊದಲನೆಯ ಸಪ್ತಮಿಯ ವಿಚಾರ ವನ್ನು ನನಗೆ ನೀನು ವಿಸ್ತರದಿಂದ ಹೇಳಿದೆ.

೨. ಅಯ್ಯಾ ದೇವಶ್ರೇಷ್ಠನೇ! ಇನ್ನು ಬೇರೆ ಬೇರೆ ಸಪ್ತಮಿಗಳು ಉಂಟಷ್ಟೆ ಅವೆಲ್ಲವನ್ನೂ ನನಗೆ ಹೇಳು. ನಿನ್ನ ಉಪದೇಶದಂತೆ ಆ ಸಪ್ತಮಿಗಳಲ್ಲಿಯೂ ನಾನು ಉಪವಾಸಮಾಡಿ ಸೂರ್ಯಲೋಕಕ್ಕೆ ಹೋಗುತ್ತೇನೆ ಎಂದನು.

೩. ಬ್ರಹ್ಮನು ಹೇಳುತ್ತಾನೆ—ಶುಕ್ಲಪಕ್ಷದ ಸಪ್ತಮಿಯು ರೋಹಿಣೀನಕ್ಷತ್ರ ಯುಕ್ತವಾಗಿದ್ದರೆ ಅದನ್ನು ಜಯವೆಂಬ ಹೆಸರಿನದು (ಜಯಸಪ್ತಮಿ) ಯೆಂದು ತಿಳಿಯ ಬೇಕು.

ತಸ್ಯಾಂ ದತ್ತಂ ಹುತಂ ಜಾಪಸ್ತರ್ಪಣಂ ದೇವಪೂಜನಂ ।
ಸರ್ವಂ ಶತಗುಣಂ ಪ್ರೋಕ್ತಂ ಪೂಜಾ ಚಾಪಿ ದಿವಾಕರೇ ॥ ೪ ॥

ಭಾಸ್ಕರಸ್ಯ ಪ್ರಿಯಾ ಹ್ಯೇಷಾ ಸಪ್ತಮೀ ಪಾಪನಾಶಿನೀ ।
ಧನ್ಯಾ ಯಶಸ್ಯಾ ಪುತ್ರ್ಯಾ ಚ ಕಾಮದಾ ಕಂಜಜಾವಹಾ ॥ ೫ ॥

ವಿಧಿನಾನೇನ ಕರ್ತವ್ಯಾ ತಿಥಿರ್ಯಾ ಮಮ ವಿದ್ಯತೇ ।
ತಂ ಶ್ರುಣುಷ್ವ ವಿಧಿಂ ಮತ್ತೋ ಯೇನ ಕೃತ್ವಾರ್ಥಮಶ್ನುತೇ ॥ ೬ ॥

ಹಂಸೇ ಹಂಸಸಮಾರೂಢೇ ಶುಕ್ಲೇಯಂ ಸಪ್ತಮೀ ಪುರಾ ।
ಸಮುಪೋಷ್ಯ ಚ ಕರ್ತವ್ಯಾ ವಿಧಿನಾನೇನ ಶಂಕರ ॥ ೭ ॥

ತೃತೀಯಾ ಪಾರಣಾ ಚ ಸ್ಯಾತ್ ಕಥಿತಾ ಗೋವೃಷಾವಹಾ ।
ಪ್ರಥಮಂ ಚತುರೋ ಮಾಸಾನ್ ಪಾರಣಂ ಕಥಿತಂ ಬುಧೈಃ ॥ ೮ ॥

---

೪. ಆದಿನದಲ್ಲಿ ದಾನಕೊಟ್ಟದ್ದು, ಹೋಮಮಾಡಿದ್ದು, ಜಪಮಾಡಿದ್ದು, ತರ್ಪಣಮಾಡಿದ್ದು. ದೇವರ ಪೂಜೆಮಾಡಿದ್ದು, ಸೂರ್ಯಪೂಜೆ ಇವೆಲ್ಲವೂ ನೂರಷ್ಟು ಫಲದಾಯಕ ಎಂದು ಹೇಳಿದೆ.

೫. ಇದು ಸೂರ್ಯನಿಗೆ ಪ್ರಿಯವಾದ ಪಾಪನಾಶಕರವಾದ ಸಪ್ತಮಿಯಾಗಿದೆ. ಪುಣ್ಯಪ್ರದವೂ, ಕೀರ್ತಿಪ್ರದವೂ, ಪುತ್ರೇಚ್ಛಾಪೂರಕವಾದ್ದೂ (ತನಗೆ ಪುತ್ರರಾಗ ಬೇಕೆಂಬ ಇಚ್ಛೆಯನ್ನು ಪೂರಣ ಮಾಡುವುದೂ) ಈ ಸಪ್ತಮಿಯೇ ಆಗಿದೆ. ಮತ್ತು ಇಷ್ಟಾರ್ಥಪ್ರದವೂ ಸಂಪತ್ಪ್ರದವೂ ಆದುದು.

೬. ನನಗೆ ಪ್ರಿಯವಾದ ಈ ಜಯಸಪ್ತಮಿಯನ್ನು ಈ ವಿಧಿಯಂತೆ ನಡೆಯಿಸಬೇಕು. ಅರ್ಥ (ದ್ರವ್ಯ) ವನ್ನು ಹೊಂದಬೇಕಾದವನು ಅನುಸರಿಸಬೇಕಾದ ವಿಧಿಯನ್ನು ನನ್ನಿಂದ ಕೇಳು.

೭. ಎಲೈ ಶಂಕರನೇ ! ಹಂಸನು ಹಂಸಾರೂಢನಾಗಿರಲು ತತ್ಪೂರ್ವದಲ್ಲಿ ಉಪವಾಸಮಾಡಿ. ಈ ಶುಕ್ಲಸಪ್ತಮಿಯ ವ್ರತವನ್ನು ಮೇಲೆ ಹೇಳಿದ ವಿಧಿಯಿಂದ ಮಾಡಬೇಕು.

೮. ಮೂರನೆಯದಿನದಲ್ಲಿ ಮಾಡುವ ಪಾರಣೆಯು ಪುಣ್ಯಕರವೆಂದು ಹೇಳಿದೆ. ಮೊದಲಿನ ನಾಲ್ಕು ತಿಂಗಗಳಿ ಒಂದು ಪಾರಣವನ್ನು ಹೇಳಿದಾರೆ.

ಕಥಿತಾನ್ಯತ್ರ ಪುಷ್ಪಾಣಿ ಕರವೀರಸ್ಯ ಸುವ್ರತ ।
ಚಂದನಂ ಚ ತಥಾ ರಕ್ತಂ ಧೂಪಾರ್ಥಂ ಗುಗ್ಗುಲಂ ಪರಂ ॥ ೯ ॥

ಕಾಂಸಾರಂ ತು ಸುಪಕ್ವಂ ಚ ನೈವೇದ್ಯಂ ಭಾಸ್ಕರಸ್ಯ ವೈ ।
ವಿಧಿನಾನೇನ ಸಂಪೂಜ್ಯ ಮಾರ್ತಂಡಂ ವಿಬುಧಾಧಿಪಂ ॥ ೧೦ ॥

ಪೂಜಯೇದ್ಬ್ರಾಹ್ಮಣಾನ್ ಭೀಮ ಭಕ್ಷ್ಯಭೋಜ್ಯೈರ್ಯಥಾವಿಧಿ ।
ಕಾಂಸಾರಂ ಭೋಜಯೇದ್ವಿಪ್ರಾನ್ ಪಾರಣೇಽಸ್ಮಿನ್ ವಿಚಕ್ಷಣಃ ॥ ೧೧ ॥

ಸ್ವಯಮೇವ ತಥಾಶ್ನೀಯಾತ್ಪ್ರಯತೋ ಮೌನಮಾಶ್ರಿತಃ ।
ಪಂಚಮ್ಯಾಮೇಕಭುಕ್ತಂ ತು ಷಷ್ಠ್ಯಾಂ ನಕ್ತಂ ಪ್ರವರ್ತತೇ ॥
ಕೃತ್ವೋಪವಾಸಂ ಸಪ್ತಮ್ಯಾಮಷ್ಟಮ್ಯಾಂ ಪಾರಣಂ ಭವೇತ್ ॥ ೧೨ ॥

ಷಷ್ಠ್ಯಾ ಸಮೇತಾ ಕರ್ತವ್ಯಾ ನಾಷ್ಟಮ್ಯೇಯಂ ಕದಾಚನ ।
ಸಪ್ತಮ್ಯುಪೋಷಣಾಯೈವ ಷಷ್ಠ್ಯಾಮಾಹುರುಪೋಷಣಂ ॥ ೧೩ ॥

---

೯. ಈ ವ್ರತದಲ್ಲಿ ಪೂಜೆಗೆ ಕಣಿಗಲೆ ಹೂಗಳನ್ನು ಲೇಪನಕ್ಕೆ ಕೆಂಪುಚಂದನದ ಗಂಧವನ್ನೂ, ಧೂಪಕ್ಕೆ ಗುಗ್ಗುಳನ್ನೂ ಉಪಯೋಗಿಸಬೇಕೆಂದು ವಿದ್ವಾಂಸರು ಹೇಳುತ್ತಾರೆ.

೧೦. ಬಳಿಕ ಚೆನ್ನಾಗಿ ಪಕ್ವವಾಗಿರುವ ಕಾಂಸಾರವನ್ನು ಸೂರ್ಯನಿಗೆ ನೈವೇದ್ಯ ಮಾಡಬೇಕು. ದೇವಾಧಿಪನಾದ ಸೂರ್ಯನನ್ನು ಈ ವಿಧಿಯಿಂದ ಪೂಜಿಸಬೇಕು.

೧೧. ಬ್ರಾಹ್ಮಣರಿಗೆ ಭಕ್ಷ್ಯಭೋಜ್ಯಗಳಿಂದ ಭೋಜನಮಾಡಿಸಬೇಕು. ವಿಚಕ್ಷಣನಾದವನು ಈ ಪಾರಣೆಯಲ್ಲಿ ಬ್ರಾಹ್ಮಣರಿಗೆ ಕಾಂಸಾರ ಭಕ್ಷ್ಯದಿಂದಲೇ ಭೋಜನ ಮಾಡಿಸಬೇಕು.

೧೨. ಪರಿಶುದ್ಧನಾಗಿ ಮೌನದಿಂದ ತಾನೂ ಸಹ ಅದನ್ನೇ ಭೋಜನ ಮಾಡಬೇಕು. ಪಂಚಮಿಯದಿನದಲ್ಲಿ ಏಕಭುಕ್ತವನ್ನೂ (ಒಪ್ಪತ್ತು ಭೋಜನ) ಷಷ್ಠಿಯದಿನ ನಕ್ತಭೋಜನವನ್ನೂ ಮಾಡಬೇಕು. ಸಪ್ತಮಿಯದಿನ ಉಪವಾಸ ಮಾಡಿ ಅಷ್ಟಮಿಯದಿನ ಪಾರಣೆ ಮಾಡಬೇಕು.

೧೩. ಷಷ್ಠೀಯುಕ್ತವಾದ ಸಪ್ತಮಿಯೇ ಈ ವ್ರತಕ್ಕೆ ಗ್ರಾಹ್ಯವು. ಅಷ್ಟಮೀಯುಕ್ತವಾದ ಸಪ್ತಮಿಯು ಎಂದಿಗೂ ಒಳ್ಳೆಯದಲ್ಲ. ಸಪ್ತಮಿಯಲ್ಲಿ ವ್ರತಾಂಗನಾದ ಉಪವಾಸವೆಂದೂ ಪೂರ್ವದಿನವಾದ ಷಷ್ಠಿಯಲ್ಲೇ ನಿಯಮಪೂರ್ವಕವಾದ ಉಪವಾಸವೆಂದೂ ಹೇಳುತ್ತಾರೆ.

ಯಥೈಕಾದಶ್ಯಾಂ ಕುರ್ವಂತಿ ಉಪವಾಸಂ ಮನೀಷಿಣಃ ।
ಪಾರಣಾಯ್ಯೈವ ದ್ವಾದಶ್ಯಾಂ ತಥೇಯಂ ಪರಿಕೀರ್ತಿತಾ ॥ ೧೪ ॥

ಸಿದ್ಧಾರ್ಥಕೈಃ ಸ್ನಾನವಿಧಿಃ ಪ್ರಾಶನಂ ಗೋಮಯಸ್ಯ ತು ।
ಭಾನುರ್ಮೇ ಪ್ರೀಯತಾಮತ್ರ ದಂತಕಾಷ್ಠಂ ತಥಾರ್ಕಜಂ ॥ ೧೫ ॥

ಇತ್ಯೇಷಕಥಿತಸ್ತಾತ ಪ್ರಥಮೋ ಪಾರಣೇ ವಿಧಿಃ ।
ದ್ವಿತೀಯಂ ಶ್ರೂಯತಾಂ ಭೀಮ ಪಾರಣಂ ಗದತೋ ಮಮ ॥ ೧೬ ॥

ಮಾಲತೀಕುಸುಮಾನೀಹ ಶ್ರೀಖಂಡಂ ಚಂದನಂ ತಥಾ ।
ನೈವೇದ್ಯಂ ಪಾಯಸಂ ಭಾನೋರ್ಧೂಪಂ ವಿಜಯಮಾದಿಶೇತ್ ॥ ೧೭ ॥

ಬ್ರಾಹ್ಮಣಾನ್ಭೋಜಯೇಚ್ಚಾಪಿ ತಥಾಶ್ನೀಯಾತ್ಸ್ವಯಂ ವಿಭೋ ।
ರವಿರ್ಮೇ ಪ್ರೀಯತಾಮತ್ರ ನಾಮ ದೇವಸ್ಯ ಕೀರ್ತಯೇತ್ ॥ ೧೮ ॥

---

೪೧. ತಿಳಿದವರು ದ್ವಾದಶೀ ಪಾರಣೆಗಾಗಿ ಹೇಗೆ ಏಕಾದಶೀದಿನ ಉಪವಾಸ ಮಾಡುವರೋ, ಹಾಗೆ ಅಷ್ಟಮಿಾ ಪಾರಣೆಗಾಗಿ ಸಪ್ತಮಿಯದಿನ ಉಪವಾಸಮಾಡಬೇಕು ಎಂದು ಹೇಳಿದೆ.

೧೫. ಈ ಕಲ್ಪವನ್ನು ಆಚರಿಸುವವನು ಬಿಳಿಯ ಸಾಸುವೆಯನ್ನು ಅರೆದು ಹಚ್ಚಿಕೊಂಡು ಸ್ನಾನಮಾಡುವುದು ; ಗೋಮಯವನ್ನು ಪ್ರಾಶನ (ಸೇವನ) ಮಾಡುವುದು. ಎಕ್ಕದಕಡ್ಡಿಯಿಂದ ಹಲ್ಲುಉಜ್ಜುವುದು ; ಇವು ಅನುಸರಿಸಬೇಕಾದ ಅವಶ್ಯ ವಿಧಿಯಾಗಿದೆ. ಇದರಿಂದ ಸೂರ್ಯನು ಸುಪ್ರೀತನಾಗಲಿ ಎಂದು ಹೇಳಬೇಕು.

೧೬. ಅಪ್ಪಾ ದಿಂಡಿ! ಮೊದಲನೆಯ ಪಾರಣೆಯಲ್ಲಿ ನಡೆಸಬೇಕಾದ ಈ ವಿಧಿಯನ್ನು ಹೇಳಿದುದಾಯಿತು. ಎರಡನೇಯ ಪಾರಣೆಯನ್ನು ಹೇಳುತ್ತೇನೆ ಕೇಳು.

೧೭. ಈ ಎರಡನೆಯ ಪಾರಣೆಯಲ್ಲಿ ಜಾಜಿಯ ಹೂ, ಶ್ರೀಗಂಧ, ರಕ್ತಚಂದನ, ವಿಜಯಧೂಪ, ಪಾಯಸದ ನೈವೇದ್ಯ ಇವುಗಳನ್ನು ಸಮರ್ಪಿಸಬೇಕೆಂದು ಹೇಳಿದೆ.

೧೮. ಹೀಗೆ ಪೂಜೆಮಾಡಿದಮೇಲೆ ಬ್ರಾಹ್ಮಣರಿಗೆ ಭೋಜನಮಾಡಿಸಿ ತಾನೂ ಭೋಜನಮಾಡಬೇಕು. 'ಸೂರ್ಯನು ನನ್ನಲ್ಲಿ ಸುಪ್ರೀತನಾಗಲಿ' ಎಂಬದಾಗಿ ಹೇಳಿ ಬಳಿಕ ದೇವರ ನಾಮಕೀರ್ತನೆ ಮಾಡಬೇಕು.

ದ್ವಿತೀಯೇ ಪಾರಣೇ ವೀರ ವಿಧಿರುಕ್ತೋ ಮಯಾಧುನಾ ।
ತೃತೀಯಂ ಪಾರಣಂ ಚಾಪಿ ಕಥ್ಯಮಾನಂ ನಿಬೋಧ ಮೇ ॥ ೧೯ ॥

ಪ್ರಾಶಯೇತ್ಪಂಚಗವ್ಯಂ ತು ಖದಿರಂ ದಂತಧಾವನೇ ।
ಅಗಸ್ತಿಕುಸುಮೈರತ್ರ ಭಾಸ್ಕರಂ ಪೂಜಯೇದ್ಬುಧಃ ॥ ೨೦ ॥

ಸಮಾಲಂಭನಮತ್ರೋಕ್ತಂ ಶ್ರೀಖಂಡಂ ಕುಂಕುಮಂ ತಥಾ ।
ಸಿಹ್ಲಕೋ ಧೂಪ ಉದ್ದಿಷ್ಟೋ ಭಾನೋಃ ಪ್ರೀತಿಕರಃ ಪರಃ ॥ ೨೧ ॥

ಶಾಲ್ಯೋದನಂ ತು ನೈವೇದ್ಯಂ ರಸಾಲೋಪರಿ ಸಂಯುತಂ ।
ಬ್ರಾಹ್ಮಣಾನಾಂ ತು ದಾತವ್ಯಂ ಭಕ್ಷಯೇತ ತಥಾತ್ಮನಾ ॥ ೨೨ ॥

ಕುಶೋದಕಪ್ರಾಶನಂ ತು ಬದರ್ಯಾ ದಂತಧಾವನಂ ।
ವಿಕರ್ತನಃ ಪ್ರೀಯತಾಂ ಮೇ ನಾಮ ದೇವಸ್ಯ ಕೀರ್ತಯೇತ್ ॥ ೨೩ ॥

---

೧೯. ಅಯ್ಯಾ ವೀರನೇ! ಎರಡನೆಯಪಾರಣೆಯಲ್ಲಿ ನಡೆಯಿಸಬೇಕಾದ ವಿಧಿಯನ್ನು ಹೇಳಿಯಾಯಿತು. ಮೂರನೆಯಪಾರಣೆಯ ವಿಚಾರವನ್ನು ಕುರಿತು ನಾನು ಹೇಳುವುದನ್ನು ಕೇಳು.

೨೦. ಈ ಮೂರನೆಯ ಪಾರಣೆಯಲ್ಲಿ ಪಂಚಗವ್ಯಪ್ರಾಶನಮಾಡಿ ಕಗ್ಗಲಿಯ ಕಡ್ಡಿಯಲ್ಲಿ ಹಲ್ಲನ್ನು ಉಜ್ಜಿಕೊಳ್ಳಬೇಕು. ತಿಳಿವಳಿಕೆಯುಳ್ಳವನು ಈ ಕಲ್ಪದಲ್ಲಿ ಅಗಸೆ ಹೂಗಳಿಂದ ಸೂರ್ಯನನ್ನು ಪೂಜಿಸಬೇಕು.

೨೧. ಶ್ರೀ ಗಂಧವನ್ನೂ ಕುಂಕುಮಕೇಸರಿಯನ್ನೂ ವಿಲೇಪನಕ್ಕೆ ಉಪಯೋಗಿಸಬೇಕು. ಸೂರ್ಯಪ್ರೀತಿಗಾಗಿ ಸಾಮ್ರಾಣಿಯ ಧೂಪವನ್ನು ಹಾಕಬೇಕು.

೨೨. ಶಾಲ್ಯನ್ನ ಮಾವಿನಹಣ್ಣು ಇವನ್ನು ನಿವೇದನಮಾಡಬೇಕು. ಅದನ್ನೇ ಬ್ರಾಹ್ಮಣರಿಗೆ ದಾನಮಾಡಲೂಬೇಕು. ಮತ್ತು ತಾನೂ ಅದನ್ನೇ ತಿನ್ನಬೇಕು.

೨೩. ಎಗಚಿಯ ಕಡ್ಡಿಯಿಂದ ಹಲ್ಲನ್ನು ಉಜ್ಜಿ ದರ್ಭೆಯ ನೀರನ್ನು ಪ್ರಾಶನಮಾಡಬೇಕೆಂದೂ ಕೆಲವರ ಮತ. ಪುನರರ್ಘ್ಯಕೊಡುವಾಗ "ವಿಕರ್ತನನು ನನ್ನಲ್ಲಿ ಸುಪ್ರೀತನಾಗಲಿ" ಎಂಬದಾಗಿ ಹೇಳಿ ಬಳಿಕ ದೇವರ ನಾಮಕೀರ್ತನ ಮಾಡಬೇಕು.

ವರ್ಷಾಸು-ದೇವದೇವಸ್ಯ ಪೂಜಾ ಕಾರ್ಯಾ ವಿಧಾನತಃ ।
ಗಂಧಪುಷ್ಪೋಪಹಾರೈಸ್ತು ನಾನಾಪ್ರೇಕ್ಷಣಕೈಸ್ತಥಾ ॥ ೨೪ ॥

ಗೋದಾನೈರ್ಭೂಮಿದಾನೈರ್ವಾ ಬ್ರಾಹ್ಮಣಾನಾಂ ಚ ತರ್ಪಣೈಃ ।
ಇತ್ಥಂ ಸಂಪೂಜ್ಯ ದೇವೇಶಂ ದೇವಸ್ಯ ಪುರತಃ ಸ್ಥಿತಃ ॥ ೨೫ ॥

ಕಾರಯೇತ್ಪರಮಂ ಪುಣ್ಯಂ ಧನ್ಯಂ ಪುಸ್ತಕವಾಚನಂ ।
ವಸ್ತ್ರೈರ್ಗಂಧೈಸ್ತಥಾ ಧೂಪೈರ್ವಾಚಕಂ ಪೂಜಯೇತ್ತತಃ ॥ ೨೬ ॥

ದೇವಸ್ಯ ಪುರತಃ ಸ್ಥಿತ್ವಾ ತತೋ ಮಂತ್ರಮುದೀರಯೇತ್ ।
ದೇವದೇವ ಜಗನ್ನಾಥ ಸರ್ವರೋಗಾರ್ತಿನಾಶನ ॥
ಗ್ರಹೇಶ ಲೋಕನಯನ ವಿಕರ್ತನ ತಮೋಽಪಹ ॥ ೨೭ ॥

---

೨೪. ವರ್ಷಋತುವಿನಲ್ಲಿ ಶಾಸ್ತ್ರೋಕ್ತವಿಧಾನದಿಂದ ಗಂಧಪುಷ್ಪ ಉಪಹಾರಗಳಿಂದ ಆರಾಧಿಸಿ ಬಹುಬಗೆಯ (ನೋಟ) ದೃಶ್ಯಗಳನ್ನೇರ್ಪಡಿಸಿ ಸಂತೋಷದಿಂದ ಪೂಜೆಯನ್ನು ನೆರವೇರಿಸಬೇಕು.

೨೫. ಬ್ರಾಹ್ಮಣರಿಗೆ ಗೋದಾನ ಭೂದಾನಾದಿಗಳನ್ನು ಮಾಡಬೇಕು. ಬ್ರಾಹ್ಮಣ ಭೋಜನವನ್ನು ಮಾಡಿಸಿ ಪೂಜೆಯನ್ನು ಸಾಂಗವಾಗಿ ನೆರವೇರಿಸಿ ಇದರಿಂದ ಸೂರ್ಯನು ನನ್ನಲ್ಲಿ ಪ್ರೀತನಾಗಲಿ ಎಂದು ದೇವರ ಕೀರ್ತನಮಾಡಬೇಕು. ಈ ಪ್ರಕಾರ ದೇವೇಶನನ್ನು ಪೂಜಿಸಿ ದೇವರ ಸಮ್ಮುಖದಲ್ಲಿದ್ದು

೨೬. ಅತಿಪುಣ್ಯಕರವೂ ಧನ್ಯವೂ ಆದ ಪುರಾಣ ಪುಸ್ತಕವಾಚನವನ್ನು ಮಾಡಿಸಬೇಕು. ಆಮೇಲೆ ಆ ಪುರಾಣವಾಚಕನಿಗೆ (ಪೌರಾಣಿಕನಿಗೆ) ವಸ್ತ್ರ, ಗಂಧ, ಧೂಪ, ಮೊಲಾದುವುಗಳನ್ನು ಸಮರ್ಪಿಸಿ ಸತ್ಕರಿಸಬೇಕು.

೨೭. ಆಮೇಲೆ ದೇವರ ಮುಂದೆ ನಿಂತುಕೊಂಡು ಈ ಅರ್ಥವುಳ್ಳ ಮಂತ್ರವನ್ನು ಹೇಳಬೇಕು. "ದೇವದೇವನೇ ಜಗನ್ನಾಥನೇ, ಸರ್ವರೋಗಸಂಕಟಪಾಪಪರಿಹಾರಕನೇ, ಗ್ರಹಗಳಿಗೆ ಅಧಿಪತಿಯೂ, ಸರ್ವಲೋಕಗಳಿಗೂ ಕಣ್ಣಾದವನೂ ವಿಕರ್ತನಸಂಜ್ಞಕನೂ ಕತ್ತಲೆಯನ್ನು ಪರಿಹರಿಸತಕ್ಕವನೂ ಆದ ಸೂರ್ಯನೇ."

ಕೃತೇಯಂ ದೇವದೇವೇಶ ಜಯಾನಾಮೇಹ ಸಪ್ತಮೀ ।
ಮಯಾ ತವ ಪ್ರಸಾದೇನ ಧನ್ಯಾ ಪಾಪಹರಾ ಶಿವಾ ॥ ೨೮ ॥

ಅನೇನ ವಿಧಿನಾ ವೀರ ಯಃ ಕುರ್ಯಾತ್ಸಪ್ತಮೀಮಿಮಾಂ ।
ತಸ್ಯ ಸ್ನಾನಾದಿಕಂ ಸರ್ವಂ ಭವೇಚ್ಛತಗುಣಂ ವಿಭೋ ॥ ೨೯ ॥

ಕೃತ್ವೇಮಾಂ ಸಪ್ತಮೀಂ ವೀರ ಪುರುಷಃ ಪ್ರಾಪ್ನುಯಾದ್ಯಶಃ ।
ಧನಂ ಧಾನ್ಯಂ ಸುವರ್ಣಂ ಚ ಪುತ್ರಮಾಯುರ್ಬಲಂ ಶ್ರಿಯಂ ॥ ೩೦ ॥

ಪ್ರಾಪ್ಯೇಹ ದೇವಶಾರ್ದೂಲ ಸೂರ್ಯಲೋಕಂ ಸ ಗಚ್ಛತಿ ।
ತಸ್ಮಾದೇತ್ಯ ಪುನರ್ಭೂಮೌ ರಾಜರಾಜೋ ಭವೇದ್ಬುಧಃ ॥ ೩೧ ॥

---

೨೮. "ನಿನ್ನ ಅನುಗ್ರಹದಿಂದ ಧನ್ಯವೂ, ಪಾಪಹರವೂ, ಮಂಗಳಕರವೂ ಆದ ಜಯಸಪ್ತಮಿಯ ವ್ರತವನ್ನು ಮಾಡಿದೆನು. ನಿನಗೆ ಇದು ಪ್ರೀತಿಯಾಗಲಿ" ಎನ್ನಬೇಕು.

೨೯. ಅಯ್ಯಾ ವಿಭುವೇ, ಈ ವಿಧಿಯಿಂದ ಜಯಸಪ್ತಮೀ ವ್ರತವನ್ನು ಯಾವನು ಮಾಡುತ್ತಾನೋ ಅವನು ಮಾಡಿದ ಸ್ನಾನಾದಿ ಕಾರ್ಯಗಳೆಲ್ಲವೂ ಸಿದ್ಧಿಸಿ ನೂರ್ಮಡಿಯಾಗಿ ಫಲವುಂಟಾಗುವುದು.

೩೦-೩೧. ಅಯ್ಯಾ ವೀರನಾದ ದಿಂಡಿಯೇ, ಈ ಜಯಸಪ್ತಮೀವ್ರತವನ್ನು ಮಾಡಿದ ಮನುಷ್ಯನು ಯಶಸ್ಸು, ಸಂಪತ್ತು, ಧಾನ್ಯಸಮೃದ್ಧಿ, ಸುವರ್ಣ, ಪುತ್ರರು, ಆಯುಸ್ಸು, ಶಕ್ತಿ, ಯಶಸ್ಸು, ಶ್ರೀ, ಇವುಗಳನ್ನು ಈ ಲೋಕದಲ್ಲಿ ಹೊಂದಿ, ಆಮೇಲೆ ಸೂರ್ಯಲೋಕಕ್ಕೆ ಹೋಗುತ್ತಾನೆ. ಅಲ್ಲಿಂದ ಪುನಃ ಭೂಲೋಕದಲ್ಲಿ ಜನಿಸಿ ರಾಜಾಧಿರಾಜನಾಗುತ್ತಾನೆ. ಇಲ್ಲವೇ ವಿದ್ವಾಂಸನೆನಿಸುತ್ತಾನೆ.

ಇತ್ಯೇಷಾ ಕಥಿತಾ ವೀರ ಜಯಾನಾಮೇಹ ಸಪ್ತಮೀ ।
ಕೃತಾ ಸ್ಮೃತಾ ಶ್ರುತಾ ಸಾ ತು ಹೇಲಿಲೋಕಪ್ರದಾ ಭವೇತ್ ॥ ೩೨ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ
ಕಲ್ಪೇ ಜಯಾನಾಮಸಪ್ತಮೀ ಮಾಹಾತ್ಮ್ಯವರ್ಣನಂ
ನಾಮ ಷಣ್ಣವತಿತಮೋಽಧ್ಯಾಯಃ.



---

೩೨. ಅಯ್ಯಾ ವೀರನೇ! ಈ ಪ್ರಕಾರ ಜಯಸಪ್ತಮೀ ವ್ರತವಿಚಾರವನ್ನು ಹೇಳಿ ಆಯಿತು. ಇದನ್ನು ಆಚರಣೆಮಾಡಿದರೂ ಕಿವಿಯಲ್ಲಿ ಕೇಳಿದರೂ ಮನದಲ್ಲಿ ಸ್ಮರಿಸಿದರೂ ಅದು ಸೂರ್ಯಲೋಕವನ್ನು ಕೊಡುವುದು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ ಜಯ ಸಪ್ತಮೀ ಮಾಹಾತ್ಮ್ಯವರ್ಣನೆಯೆಂಬ ತೊಂಬತ್ತಾರನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಸಪ್ತನವತಿತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಮಾಘಸ್ಯ ಶುಕ್ಲಪಕ್ಷೇ ತು ಸಪ್ತಮೀ ಯಾ ತ್ರಿಲೋಚನ ।
ಜಯಂತೀ ನಾಮ ಸಾ ಪ್ರೋಕ್ತಾ ಪುಣ್ಯಾ ಪಾಪಹರಾ ಶಿವಾ ॥ ೧ ॥

ಸೋಽಪೋಷ್ಯಾ ಯೇನಾ ವಿಧಿನಾ ಶೃಣು ತಂ ಪಾರ್ವತೀಪ್ರಿಯ ।
ಪಾರಣಾನಿ ಚ ಚತ್ವಾರಿ ಕಥಿತಾನ್ಯತ್ರ ಪಂಡಿತೈಃ ॥ ೨ ॥

ಪಂಚಮ್ಯಾಮೇಕಭಕ್ತಂ ತು ಷಷ್ಠ್ಯಾಂ ನಕ್ತಂ ಪ್ರಕೀರ್ತಿತಂ ।
ಉಪವಾಸಸ್ತು ಸಪ್ತಮ್ಯಾಂ ಅಷ್ಟಮ್ಯಾಂ ಪಾರಣಂ ಭವೇತ್ ॥ ೩ ॥

---

### ತೊಂಭತ್ತೇಳನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಎಲೈ ಶಿವಸ್ವರೂಪನಾದ ದಿಂಡಿಯೇ! ಮಾಘಮಾಸದ ಶುಕ್ಲಪಕ್ಷದ ಸಪ್ತಮಿಯು ಪಾಪಹರವೂ, ಮಂಗಳಕರವೂ, ಆದ ಜಯಂತೀಸಪ್ತಮಿ ಎನಿಸಿಕೊಳ್ಳುವುದು.

೨. ಎಲೈ ಪಾರ್ವತೀ ಪ್ರಿಯಸ್ವರೂಪನೇ! ಆ ಜಯಂತಿಸಪ್ತಮಿಯಲ್ಲಿ ಯಾವ ವಿಧಿಯಿಂದ ಉಪವಾಸಮಾಡಬೇಕೋ ಅದನ್ನು ಹೇಳುವೆನು ಕೇಳು, ಈ ವ್ರತದಲ್ಲಿ ನಾಲ್ಕುಪಾರಣೆಯನ್ನು ನಡೆಸಬೇಕೆಂದು ಪಂಡಿತರು ಹೇಳಿದ್ದಾರೆ.

೩. ಪಂಚಮಿಯಲ್ಲಿ ಹಗಲು ಒಪ್ಪೊತ್ತು ಮಾತ್ರ ಊಟ, ಷಷ್ಠಿಯಲ್ಲಿ ರಾತ್ರಿ ಭೋಜನ, ಸಪ್ತಮಿಯಲ್ಲಿ ಶುದ್ಧ ಉಪವಾಸ, ಅಷ್ಟಮಿಯದಿನ ಪಾರಣೆ, ಹೀಗೆ ಪ್ರತಿ ಪಾರಣೆಯಲ್ಲಿಯೂ ಆಚರಿಸಬೇಕೆಂದು ಹೇಳಿದೆ.

ಮಾಘೇ ಚ ಫಾಲ್ಗುನೇ ಮಾಸಿ ತಥಾ ಚೈತ್ರೇ ಚ ಸುವ್ರತ ।
ಬಕಪುಷ್ಪಾಣಿ ರಮ್ಯಾಣಿ ಕುಂಕುಮಂ ಚ ವಿಲೇಪನಂ ॥ ೪ ॥

ನೈವೇದ್ಯಂ ಮೋದಕಾಂಶ್ಚಾತ್ರ ಧೂಪ ಆಜ್ಯಮುದಾಹೃತಃ ।
ಪ್ರಾಶನಂ ಪಂಚಗವ್ಯಸ್ಯ ಪವಿತ್ರೀಕರಣಂ ಪರಂ ॥ ೫ ॥

ಮೋದಕೈರ್ಭೋಜಯೇದ್ವಿಪ್ರಾನ್ ಯಥಾಶಕ್ತಿ ಗಣಾಧಿಪ ।
ಶಾಲ್ಯೋದನಂ ಚ ಭೂತೇಶ ದದ್ಯಾಚ್ಛಕ್ತ್ಯಾ ದ್ವಿಜೇಷು ವೈ ॥ ॥ ೬ ॥

ಇತ್ಥಂ ಸಂಪೂಜಯೇದ್ಯಸ್ತು ಭಾಸ್ಕರಂ ಲೋಕಪೂಜಿತಂ ।
ಸರ್ವಸ್ಮಿನ್ ಪಾರಣೇ ವೀರ ಸೋಽಶ್ವಮೇಧಫಲಂ ಲಭೇತ್ ॥ ೭ ॥

ದ್ವಿತೀಯೇ ಪಾರಣೇ ಪೂಜ್ಯ ರಾಜಸೂಯಫಲಂಲಭೇತ್ ।
ವೈಶಾಖಾಷಾಢ ಜ್ಯೇಷ್ಠೇಷು ಶ್ರಾವಣೇ ಮಾಸಿ ಸುವ್ರತ
ಪೂಜಾರ್ಥಮಥ ಭಾನೋರ್ವೈ ಶತಪತ್ರಾಣಿ ಸುವ್ರತ । ॥ ೮ ॥

---

೪-೫. ಅಯ್ಯಾ ಗಣಾಧಿಪನೂ, ಸುವ್ರತನೂ ಆದ ದಿಂಡಿಯೇ! ಮಾಘ, ಫಾಲ್ಗುಣ, ಚೈತ್ರ ಈ ತಿಂಗಳುಗಳಲ್ಲಿ ಆತನ ಪೂಜೆಗೆ ಸೊಗಸಾದ ಬಕಪುಷ್ಪಗಳು, ಕುಂಕುಮಕೇಸರಿಯನ್ನು ಅರೆದ ಗಂಧ, ನೈವೇದ್ಯಕ್ಕೆ ಮೋದಕಗಳು. ಆಜ್ಯಮಿಶ್ರವಾದ ದಶಾಂಗಧೂಪ ಇವು ಪ್ರಶಸ್ತಗಳಾದುವು. ಪಂಚಗವ್ಯಪ್ರಾಶನವು ಈ ಕಲ್ಪದಲ್ಲಿ ದೇಹಶುದ್ಧಿಕರವು.

೬. ಗಣಾಧಿಪನೂ, ಭೂತೇಶೂ ಆದ ದಿಂಡಿಯೇ! ಕೇಳು, ಮೋದಕಭಕ್ಷ್ಯಗಳನ್ನು ಮಾಡಿ ಬಡಿಸಿ ಶಕ್ತ್ಯನುಸಾರ ಆದಷ್ಟು ಮಂದಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಅಲ್ಲದೆ ತನಗೆ ಅನುಕೂಲವಿದ್ದಷ್ಟು ಮಂದಿ ಬ್ರಾಹ್ಮಣರಿಗೆ ಶಾಲ್ಯನ್ನವನ್ನು ದಾನಮಾಡಬೇಕು.

೭. ಅಯ್ಯಾ ವೀರನೇ! ಲೋಕಪೂಜಿತನಾದ ಭಾಸ್ಕರನನ್ನು ಎಲ್ಲಾ ಪಾರಣೆಯ ದಿನಗಳಲ್ಲಿಯೂ, ಹೀಗೆ ಪೂಜಿಸಿದಾತನು ಅಶ್ವಮೇಧಯಜ್ಞ ಮಾಡುವುದರಿಂದ ಪಡೆಯುವಷ್ಟು ಫಲವನ್ನು ಹೊಂದುತ್ತಾನೆ.

೮. ಅಯ್ಯಾ ಪೂಜ್ಯನೇ! ಎರಡನೆಯ ಪಾರಣೆಯನ್ನು ಈ ಪ್ರಕಾರಮಾಡಿದ ಮನುಷ್ಯನು ರಾಜಸೂಯಯಾಗ ಮಾಡಿದುದರಿಂದ ಪಡೆಯುವಷ್ಟು ಫಲವನ್ನು ಹೊಂದುತ್ತಾನೆ.

ಶ್ವೇತಂ ಚ ಚಂದನಂ ಭೀಮ ಧೂಪೋ ಗುಗ್ಗುಲುರುಚ್ಯತೇ
ನೈವೇದ್ಯಂ ಗುಡಪೂಪಾಸ್ತು ಪ್ರಾಶನಂ ಗೋಮಯಸ್ಯ ತು ।
ಭೋಜನೇ ಚಾಪಿ ವಿಪ್ರಾಣಾಂ ಗುಡಪೂಪಾಃ ಪ್ರಕೀರ್ತಿತಃ ॥ ೯ ॥

ದ್ವಿತೀಯಮಿದಮಾಖ್ಯಾತಂ ಪಾರಣಂ ಪಾಪನಾಶನಂ ।
ರಾಜಸೂಯಾಶ್ವಮೇಧಾಭ್ಯಾಂ ಯತ್ಫಲಂ ತದ್ಭವೇನ್ನನು ॥ ೧೦ ॥

ತೃತೀಯಂ ಶೃಣು ದೇವಸ್ಯ ಪೂಜಾರ್ಥೇ ಭಾಸ್ಕರಸ್ಯ ತು ।
ಮಾಸಿ ಭಾದ್ರಪದೇ ವೀರ ತಥಾಚಾಶ್ವಯುಜೇ ವಿಭೋ ॥ ೧೧ ॥

ಕಾರ್ತಿಕೇಚಾಪಿ ಮಾಸೇ ತು ರಕ್ತಚಂದನಮಾದಿಶೇತ್ ।
ಮಾಲತೀಕುಸುಮಾನೀಹ ಧೂಪೋ ವಿಜಯ ಉಚ್ಯತೇ ॥ ೧೨ ॥

ನೈವೇದ್ಯಂ ಘೃತಪೂಪಾಸ್ತು ಭೋಜನಂ ಚ ದ್ವಿಜನ್ಮನಾಂ ।
ಕುಶೋದಕಪ್ರಾಶನಂ ತು ಕಾಯಶುದ್ಧಿಕರಂ ಪರಂ ॥ ೧೩ ॥

---

೯. ಅಯ್ಯಾ ಸುವ್ರತನೂ, ಭೀಮೇಶಸ್ವರೂಪನೂ ಆದ ದಿಂಡಿಯೇ ! ವೈಶಾಖ, ಜ್ಯೇಷ್ಠ, ಆಷಾಢ, ಶ್ರಾವಣ ಈ ಮಾಸಗಳಲ್ಲಿ ಶತಪತ್ರಕಮಲಗಳನ್ನೂ, ಶ್ವೇತಚಂದನವನ್ನೂ, ಗುಗ್ಗುಳ ಧೂಪವನ್ನೂ ಸೂರ್ಯಾರಾಧನೆಗಾಗಿ ಉಪಯೋಗಿಸಬೇಕೆಂದು ಹೇಳಿದೆ. ನೈವೇದ್ಯಕ್ಕೆ ಬೆಲ್ಲಹಾಕಿ ಮಾಡಿದ ಅಪೂಪವು ಶ್ರೇಷ್ಠವೆಂದೂ, ಬ್ರಾಹ್ಮಣ ಭೋಜನಕ್ಕೂ ಅಪೂಪವನ್ನೇ ಮಾಡಿ ಒಡಿಸಬೇಕೆಂದೂ ದೇಹಶುದ್ಧಿಗಾಗಿ ಗೋಮಯ ಪ್ರಾಶನ ಮಾಡಬೇಕೆಂದೂ ಹೇಳಿದೆ.

೧೦. ಇದು ಪಾಪನಾಶಕವಾದ ಎರಡನೆಯ ಪಾರಣೆಯೆನಿಸಿಕೊಳ್ಳುವುದು. ಇದನ್ನು ಆಚರಿಸುವುದರಿಂದ ರಾಜಸೂಯಯಾಗ, ಅಶ್ವಮೇಧಯಾಗಗಳನ್ನು ಮಾಡಿದರೆ ಯಾವ ಫಲವುಂಟಾಗುವುದೋ ಅದೇ ಫಲವೇ ಉಂಟಾಗುವುದು.

೧೧. ಅಯ್ಯಾ ವೀರನೇ ! ಸೂರ್ಯಾರಾಧನೆಗಾಗಿ ಮಾಡುವ ಮೂರನೆಯ ಪಾರಣೆಯ ವಿಧಾನವನ್ನು ಹೇಳುವೆನು ಕೇಳು. ಭಾದ್ರಪದ, ಆಶ್ವಯುಜ, ಕಾರ್ತಿಕ ಈ ಮೂರು ಮಾಸಗಳಲ್ಲಿ ರಕ್ತಚಂದನವಿಲೇಪನ, ಜಾಜಿಯಹೂ, ಇವುಗಳಿಂದ ಪೂಜಿಸಿ, ವಿಜಯ ಎಂಬ ಧೂಪವನ್ನು ಸಮರ್ಪಿಸ ತುಪ್ಪದಲ್ಲಿ ಕರಿದ ಅಪೂಪವನ್ನು ನಿವೇದನಮಾಡಬೇಕು. ಅದನ್ನೇ ಬ್ರಾಹ್ಮಣಭೋಜನಕ್ಕೆ ಒಡಿಸಬೇಕು. ಈ ಕಲ್ಪದಲ್ಲಿ ತನ್ನ ಶರೀರಶುದ್ಧಿಗಾಗಿ ಕುಶೋದಕವನ್ನು ಪ್ರಾಶನಮಾಡಬೇಕು.

ತೃತೀಯಮಪಿ ಚಾಖ್ಯಾತಂ ಪಾರಣಂ ಪಾಪನಾಶನಂ ।
ರಾಜಸೂಯಾಶ್ವಮೇಧಾಭ್ಯಾಂ ಫಲದಂ ಭಾಸ್ಕರಪ್ರಿಯಂ ॥ ೧೪ ॥

ಚತುರ್ಥಮಪಿ ತೇ ವಚ್ಮಿ ಪಾರಣಂ ಪಾಪನಾಶನಂ ।
ರಾಜಸೂಯಾಶ್ವಮೇಧಾಭ್ಯಾಂ ಫಲದಂ ಭಾಸ್ಕರಪ್ರಿಯಂ ॥ ೧೫ ॥

ತದದ್ಯ ದೇವಶಾರ್ದೂಲ ಪಾರಣಂ ಶ್ರೇಯಸೇ ಶೃಣು ।
ಮಾಸಿ ಮಾರ್ಗಶಿರೇ ವೀರ ಪೌಷೇ ಮಾಸಿ ತಥಾ ಶಿವ ॥ ೧೬ ॥

ಮಾಘೇ ಚ ದೇವಶಾರ್ದೂಲ ಶೃಣುಪುಣ್ಯಾನ್ಯಶೇಷತಃ ।
ಕರವೀರಾಣಿ ರಕ್ತಾನಿ ತಥಾ ರಕ್ತಂ ಚ ಚಂದನಂ ॥ ೧೭ ॥

ಅಮೃತಾಖ್ಯಸ್ತಥಾ ಧೂಪೋ ನೈವೇದ್ಯಂ ಪಾಯಸಂ ಪರಂ ।
ಅರ್ಜನೀಯಂ ತಥಾ ನಕ್ತಂ ಪ್ರಾಶನಂ ಪರಮಂ ಸ್ಮೃತಂ ॥ ೧೮ ॥

---

೧೪. ಈರೀತಿ ಮಾಡಿದರೆ ರಾಜಸೂಯ, ಅಶ್ವಮೇಧ ಎಂಬ ಎರಡು ಯಜ್ಞಗಳ ಫಲವು ಲಭಿಸುವುದು. ಪಾಪನಾಶಕವಾದ ಈ ಮೂರು ಪಾರಣೆಯ ವಿಧಾನವನ್ನು ಹೇಳಿದುದಾಯಿತು.

೧೫. ಸೂರ್ಯನಿಗೆ ಪ್ರಿಯವೂ, ಪಾಪನಾಶಕವೂ ಮೇಲೆ ಹೇಳಿದ ಯಜ್ಞಫಲಗಳನ್ನು ಕೊಡತಕ್ಕುದೂ ಆದ, ನಾಲ್ಕನೆಯ ಪಾರಣೆಯ ವಿಚಾರವನ್ನು ಹೇಳುತ್ತೇನೆ.

೧೬. ಅಯ್ಯಾ ದೇವಶ್ರೇಷ್ಠನಾದ ದಿಂಡಿಯೇ ! ನಿನ್ನ ಶ್ರೇಯಸ್ಸಿಗೋಸ್ಕರ ಈ ಪಾರಣೆಯ ವಿಧಾನವನ್ನು ಕೇಳು. ಮಾರ್ಗಶಿರ, ಪುಷ್ಯ, ಮಾಘ ಈ ಮಾಸಗಳಲ್ಲಿ ನಡೆಸತಕ್ಕ ಪಾರಣೆಗಳ ಪುಣ್ಯವನ್ನೂ ಮತ್ತು ಆ ಪಾರಣೆಯ ವಿಧಾನವನ್ನೂ ಸಮಗ್ರವಾಗಿ ಕೇಳು. ಈ ಪಾರಣೆಯ ಪೂಜೆಗೆ ಕಣಗಲೆಹೂ, ರಕ್ತಚಂದನ ಇವನ್ನೂ

೧೭–೧೮. ಅಮೃತಧೂಪವನ್ನೂ ಪಾಯಸ ನೈವೇದ್ಯವನ್ನೂ ಸಮರ್ಪಿಸಬೇಕು. ಆ ದಿನ ರಾತ್ರಿ ಭೋಜನವನ್ನು ಮಾಡಬಹುದು. ಪ್ರಾಶನವು ಶ್ರೇಷ್ಠವೆಂದು ಹೇಳಿದೆ.

ಅಗುರುಂ ಚಂದನಂ ಮುಸ್ತಂ ಸಿಲ್ಹಕಂ ತ್ರ್ಯೂಷಣಂ ತಥಾ ।
ಸಮಭಾಗೈಸ್ತು ಕರ್ತವ್ಯಮಿದಂ ಚಾಮೃತಮುಚ್ಯತೇ ॥ ೧೯ ॥

ನಾಮಾನಿ ಕಥಿತಾನ್ಯತ್ರ ಭಾಸ್ಕರಸ್ಯ ಮಹಾತ್ಮನಃ ।
ಚಿತ್ರಭಾನುಸ್ತಥಾ ಭಾನುರಾದಿತ್ಯೋ ಭಾಸ್ಕರಸ್ತಥಾ ॥ ೨೦ ॥

ಪ್ರೀಯತಾಮಿತಿ ಸರ್ವಸ್ಮಿನ್ಪಾರಣೇ ವಿಧಿಮಾದಿಶೇತ್ ।
ಅನೇನ ವಿಧಿನಾ ಯಸ್ತು ಕುರ್ಯಾತ್ಪೂಜಾಂ ವಿಭಾವಸೋಃ ॥ ೨೧ ॥

ತಸ್ಯಾಂ ತಿಥೌ ದೇವದೇವ ಸ ಯಾತಿ ಪರಮಂ ಪದಂ ।
ಕೃತ್ವೈವಂ ಸಪ್ತಮೀಂ ಭೀಮ ಸರ್ವಕಾಮಾನವಾಪ್ನುತೇ ॥ ೨೨ ॥

ಪುತ್ರಾರ್ಥೀ ಲಭತೇ ಪುತ್ರಾನ್ ಧನಾರ್ಥೀ ಲಭತೇ ಧನಂ ।
ಸರೋಗೋ ಮುಚ್ಯತೇ ರೋಗಾತ್ ಶುಭಮಾಪ್ನೋತಿ ಪುಷ್ಕಲಂ ॥ ೨೩ ॥

---

೧೯. ಅಗಿಲು, ಚಂದನ, ಕೊನ್ನಾರಿಗೆಡ್ಡೆ, ಸಿಲ್ಹಕ, ತ್ರ್ಯೂಷಣ ಇವನ್ನು ಸಮಭಾಗವಾಗಿ ಸೇರಿಸಿದರೆ ಅಮೃತಧೂಪವಾಗುತ್ತದೆ.

೨೦. ಒಂದೊಂದು ಪಾರಣೆಯಲ್ಲಿಯೂ ಕ್ರಮವಾಗಿ ಚಿತ್ರಭಾನು, ಭಾನು, ಆದಿತ್ಯ, ಭಾಸ್ಕರ ಈ ಸಂಜ್ಞೆಗಳುಳ್ಳ ಸೂರ್ಯನ ಹೆಸರನ್ನು ಪ್ರಿಯತಾಂ ಎಂಬುದರ ಸಮೇತ ಹೇಳಿ ಸಮರ್ಪಣೆಮಾಡಬೇಕು.

೨೧. ಎಲೈ ದಿಂಡಿಯೇ! ಈ ಹೇಳಿದ ವಿಧಿಯಿಂದ ಆ ತಿಥಿಯಲ್ಲಿ ಸೂರ್ಯಪೂಜೆ ಮಾಡುವ ಮಾನವನು.

೨೨. ನಿಜವಾಗಿ ಪರಮಪದವನ್ನು ಹೊಂದುವನು. ಹೀಗೆ ಸಪ್ತಮೀವ್ರತವನ್ನು ಮಾಡಿದವನು ತನ್ನ ಎಲ್ಲಾ ಇಷ್ಟಾರ್ಥಗಳನ್ನೂ ಹೊಂದುತ್ತಾನೆ.

೨೩. ಪುತ್ರೇಚ್ಛೆಯುಳ್ಳವನು, ಪುತ್ರರನ್ನೂ ಧನೇಚ್ಛೆಯುಳ್ಳವನು ಧನವನ್ನೂ ಹೊಂದುತ್ತಾನೆ. ರೋಗಪೀಡಿತನು ರೋಗದಿಂದ ಬಿಡುಗಡೆಹೊಂದುತ್ತಾನೆ. ಅಲ್ಲದೆ ಶುಭವನ್ನೂ, ಸಮೃದ್ಧಿಯನ್ನೂ ಹೊಂದುತ್ತಾನೆ.

ಪೂರ್ಣೇ ಸಂವತ್ಸರೇ ಭೀಮ ಕಾರ್ಯಾ ಪೂಜಾ ದಿವಾಕರೇ ।
ಗಂಧಪುಷ್ಪೋಪಹಾರೈಸ್ತು ಬ್ರಾಹ್ಮಣಾನಾಂ ಚ ಭೋಜನೈಃ ॥ ೨೪ ॥

ನಾನಾವಿಧೈಃ ಪ್ರೇಕ್ಷಣಕೈಃ ಪೂಜಯಾ ವಾಚಕಸ್ಯ ಚ ।
ಇತ್ಥಂ ಸಂಪೂಜ್ಯ ದೇವೇಶಂ ಬ್ರಾಹ್ಮಣಾಂಶ್ಚಾಭಿಪೂಜ್ಯ ಚ ।
ವಾಚಕಂ ಚ ದ್ವಿಜಂ ಪೂಜ್ಯ ಇದಂ ವಾಕ್ಯಮುದೀರಯೇತ್ ॥ ೨೫ ॥

ಧರ್ಮಕಾರ್ಯೇಷು ಮೇ ದೇವ ಅರ್ಥಕಾರ್ಯೇಷು ನಿತ್ಯಶಃ ।
ಕಾಮಕಾರ್ಯೇಷು ಸರ್ವೇಷು ಜಯೋ ಭವತು ಸರ್ವದಾ ॥ ೨೬ ॥

ತತೋ ವಿಸರ್ಜಯೇದ್ವಿಪ್ರಾನ್ ವಾಚಕಂ ಚ ದ್ವಿಜೋತ್ತಮಂ ।
ಇತ್ಥಂ ಕುರ್ಯಾದಿದಂ ಯಸ್ತು ಸ ಸತ್ಯಂ ಪ್ರಾಪ್ನುಯಾತ್ಫಲಂ ।
ಸರ್ವಪಾಪವಿಶುದ್ಧಾತ್ಮಾ ಸೂರ್ಯಲೋಕಂ ಸ ಗಚ್ಛತಿ ॥ ೨೭ ॥

---

೨೪-೨೫. ಹೀಗೆ ಒಂದು ಸಂವತ್ಸರಪೂರ್ಣವಾಗಲು ಗಂಧಪುಷ್ಪೋಪಹಾರಗಳಿಂದಲೂ ಬ್ರಾಹ್ಮಣಭೋಜನಗಳಿಂದಲೂ, ಬಗೆಬಗೆಯಾದ ದೃಶ್ಯಗಳಿಂದಲೂ, ಪುರಾಣಶ್ರವಣ, ವಾಚನ, ಪೂಜೆ ಇವುಗಳಿಂದಲೂ ಸೂರ್ಯನನ್ನು ತುಷ್ಟಿಪಡಿಸಬೇಕು. ಹೀಗೆ ದೇವದೇವೇಶನಾದ ಸೂರ್ಯನನ್ನು ಪೂಜಿಸಿ ವಾಚಕನಾದ ಬ್ರಾಹ್ಮಣನಿಗೆ ಪೂಜೆ ಮಾಡಿ ಇತರ ಬ್ರಾಹ್ಮಣರನ್ನೂ ಸತ್ಕರಿಸಿ ಪ್ರಾರ್ಥಿಸುವವನಾಗಿ.

೨೬. "ಸ್ವಾಮಿ ಭೂಸುರೋತ್ತಮರೆ! ನನಗೆ ಯಾವಾಗಲೂ ಸರ್ವ ಧರ್ಮಕಾರ್ಯ ಮತ್ತು ಅರ್ಥಸಂಪಾದನ ಕಾರ್ಯಗಳಲ್ಲೂ ಮತ್ತು ಕಾಮಕೃತ್ಯಗಳಲ್ಲೂ ಯಾವಾಗಲೂ ಜಯವಾಗಲಿ" ಎಂದು ಹೇಳಬೇಕು.

೨೭. ಆಮೇಲೆ ಬ್ರಾಹ್ಮಣರನ್ನೂ ವಾಚಕನಾದ ಬ್ರಾಹ್ಮಣನನ್ನೂ ಕಳುಹಿಸಿ ಕೊಡಬೇಕು. ಹೀಗೆ ಮಾಡುವವನು ನಿಶ್ಚಯವಾಗಿಯೂ ಫಲವನ್ನು ಹೊಂದುತ್ತಾನೆ.

**ವಿಮಾನವರಮಾರೂಢಃ ಕಂಜಜಸ್ಥಾನಮುತ್ತಮಂ ।**
**ತೇಜಸಾ ರವಿಸಂಕಾಶಃ ಪ್ರಭಯಾ ಪತಗೋಪಮಃ ॥ ೨೮ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಕರ್ಮಣಿ ಸಪ್ತಮೀಾ ಕಲ್ಪೇ ಜಯಂತೀಕಲ್ಪವರ್ಣನಂ ನಾಮ ಸಪ್ತನವತಿತಮೋಽಧ್ಯಾಯಃ**



---

೨೮. ಮತ್ತು ಸರ್ವಪಾಪವಿನಿರ್ಮುಕ್ತಿಯಿಂದ ಶುದ್ಧಾತ್ಮನಾಗಿ, ಸೂರ್ಯಲೋಕಕ್ಕೆ ಹೋಗುತ್ತಾನೆ. ತೇಜಸ್ಸಿನಲ್ಲಿ ಸೂರ್ಯನಿಗೆ ಸಮನಾದವನೂ, ಪ್ರಭೆಯಲ್ಲಿ ಮಾರ್ತಂಡ ಸಮನೂ ಆಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಾಕಲ್ಪದಲ್ಲಿ ಜಯಂತೀ ಕಲ್ಪವರ್ಣನೆಯೆಂಬ ತೊಂಬತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಅಷ್ಟನವತಿತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಮಾಸಿ ಭಾದ್ರಪದೇ ಶುಕ್ಲಾ ಸಪ್ತಮೀ ಯಾ ಗಣಾಧಿಪ ।
ಅಪರಾಜಿತೇತಿ ವಿಖ್ಯಾತಾ ಮಹಾಪಾತಕನಾಶಿನೀ ॥ ೧ ॥

ಚತುರ್ಥ್ಯಾಮೇಕಭಕ್ತಂ ತು ಪಂಚಮ್ಯಾಂ ನಕ್ತಮಾದಿಶೇತ್ ।
ಉಪವಾಸಂ ತಥಾ ಷಷ್ಠ್ಯಾಂ ಸಪ್ತಮ್ಯಾಂ ಪಾರಣಂ ಸ್ಮೃತಂ ॥ ೨ ॥

ಪಾರಣಾನ್ಯತ್ರ ಚತ್ವಾರಿ ಕಥಿತಾನಿ ಮನೀಷಿಭಿಃ ।
ಪುಷ್ಪಾಣಿ ಕರವೀರಸ್ಯ ತಥಾ ರಕ್ತಂ ಚ ಚಂದನಂ ॥ ೩ ॥

---

### ತೊಂಭತ್ತೆಂಟನೆಯ ಅಧ್ಯಾಯವು

೧. ಬ್ರಹ್ಮನು ಹೇಳುತ್ತಾನೆ—ಅಯ್ಯಾ ಗಣಾಧಿಪನಾದ ದಿಂಡಿಯೇ! ಭಾದ್ರಪದಮಾಸದ ಶುಕ್ಲ ಸಪ್ತಮಿಯು ಅಪರಾಜಿತಸಪ್ತಮಿಯೆಂದು ಪ್ರಸಿದ್ಧವಾಗಿದೆ. ಅದು ಮಹಾಪಾಪವನ್ನು ನಾಶಮಾಡತಕ್ಕದ್ದೂ ಆಗಿದೆ.

೨. ಈ ವ್ರತದಲ್ಲಿ ಚತುರ್ಥಿಯದಿನ ಹಗಲು ಒಪ್ಪೊತ್ತು ಮಾತ್ರ ಭೋಜನ. ಪಂಚಮೀದಿನ ರಾತ್ರಿ ಒಂದುಹೊತ್ತು ಮಾತ್ರ ಊಟ, ಷಷ್ಠಿಯದಿನ ಶುದ್ಧ ಉಪವಾಸ, ಸಪ್ತಮಿಯದಿನ ಪಾರಣೆ ಈ ಪ್ರಕಾರವಾಗಿ ನಡೆಸಬೇಕು.

೩–೪. ಈ ವ್ರತಾಂಗವಾಗಿ ನಾಲ್ಕು ಪಾರಣೆಗಳನ್ನು ನಡೆಸತಕ್ಕದ್ದೆಂದು ವಿದ್ವಾಂಸರು ಹೇಳಿದಾರೆ. ಭಾದ್ರಪದ ಮೊದಲಾದ ತಿಂಗಳಲ್ಲಿ ಮಾಡುವ ಸೂರ್ಯಾರಾ

ಧೂಪಕ್ರಿಯಾ ಗುಗ್ಗುಲೇನ ನೈವೇದ್ಯಂ ಗುಡಪೂಪಕಾಃ ।
ಭಾದ್ರಪದಾದಿಮಾಸೇಷು ವಿಧಿರೇಷ ಪ್ರಕೀರ್ತಿತಃ ॥ ೪ ॥

ಶ್ವೇತಾನಿ ಭೀಮ ಪುಷ್ಪಾಣಿ ತಥಾ ಶ್ವೇತಂ ಚ ಚಂದನಂ ।
ಧೂಪಮಾಜ್ಯಮಿಹಾಖ್ಯಾತಂ ನೈವೇದ್ಯಂ ಪಾಯಸಂ ರವೇಃ ॥ ೫ ॥

ಮಾರ್ಗಶೀರ್ಷಾದಿಮಾಸೇಷು ವಿಧಿರೇಷ ಪ್ರಕೀರ್ತಿತಃ ।
ತತೋಽಗಸ್ತ್ಯಸ್ಯ ಪುಷ್ಪಾಣಿ ಕುಂಕುಮಂ ಚ ವಿಲೇಪನಂ ॥ ೬ ॥

ಧೂಪಾರ್ಥಂ ಸಿಲ್ಹಕಂ ಪ್ರೋಕ್ತಂ ಅಥವಾ ರವಿವರ್ಣಕಂ ।
ಶಾಲ್ಯೋದನಂ ಚ ನೈವೇದ್ಯಂ ಸರಸಂ ಫಾಲ್ಗುನಾದಿಷು ॥ ೭ ॥

ರಕ್ತೋತ್ಪಲಾನಿ ಭೂತೇಶ ಸಾಗರುಂ ಚಂದನಂ ತಥಾ ।
ಅನಂತೋ ಧೂಪ ಉದ್ದಿಷ್ಟೋ ನೈವೇದ್ಯಂ ಖಂಡಪೂಪಕಾಃ ॥ ೮ ॥

---

ಧನೆಯಲ್ಲಿ, ಕಣಗಲೆಹೂ, ರಕ್ತಚಂದನ, ಗುಗ್ಗುಲಧೂಪ, ಬೆಲ್ಲದ ಎರೆಯಪ್ಪದ ನೈವೇದ್ಯ ಇವನ್ನು ಸಮರ್ಪಿಸಬೇಕೆಂದು ಹೇಳಿದೆ.

೫. ಅಯ್ಯಾ ಭೀಮೇಶಸ್ವರೂಪಿಯೇ! ಮಾರ್ಗಶೀರ್ಷ ಮೊದಲಾದ ಮಾಸಗಳಲ್ಲಿ ಸೂರ್ಯನಿಗೆ ಬಿಳಿಯ ಹೂಗಳು, ಬಿಳಿಯಗಂಧ (ಶ್ರೀಗಂಧ) ಆಜ್ಯದ ಹೊಗೆಯ ಧೂಪ, ಪಾಯಸ ನೈವೇದ್ಯ ಈ ವಿಧಿಪ್ರಕಾರ ನಡೆಸುವುದೆಂದು ಹೇಳಿದೆ.

೬=೭. ಅಯ್ಯಾ ದಿಂಡಿಯೇ! ಫಾಲ್ಗುಣ ಮೊದಲಾದ ಮಾಸಗಳಲ್ಲಿ ಸೂರ್ಯನಿಗೆ ಅಗಸೆಯ ಹೂ, ಕುಂಕುಮಕೇಸರಿಯ ವಿಲೇಪನ, ಸಿಲ್ಹಕ (ಸಾಮ್ರಾಣಿ) ಧೂಪ ಅಥವಾ ರವಿವರ್ಣಕಧೂಪ, ಮಧುರ ರಸಯುಕ್ತವಾದ ಶಾಲ್ಯೋದನ ನೈವೇದ್ಯ ಇವುಗಳನ್ನು ಸಮರ್ಪಿಸಬೇಕು.

೮-೧೦. ಅಯ್ಯಾ ಸುವ್ರತನೇ! ಜ್ಯೇಷ್ಠ ಮುಂತಾದ ಮಾಸಗಳಲ್ಲಿ ಸೂರ್ಯ ಪೂಜೆಗೆ ಕೆಂಪುನೈದಿಲೆಯ ಪುಷ್ಪಗಳು, ಅಗುರುಯುಕ್ತವಾದ ಚಂದನ, ಅನಂತಧೂಪ

ಶ್ರೀಖಂಡಂ ಗ್ರಂಥಿಸಹಿತಂ ಅಗರುಃ ಸಿಲ್ಹಕಂ ತಥಾ ।
ಮುಸ್ತಾ ತಥೇಂದ್ರಂ ಭೂತೇಶ ಶರ್ಕರಾ ಗೃಹ್ಯತೇ ತ್ರ್ಯಹಂ ॥ ೯ ॥

ಇತ್ಯೇಷ ಧೂಪೋಽನಂತಸ್ತು ಕಥಿತೋ ದೇವಸತ್ತಮ ।
ಜ್ಯೇಷ್ಠಾದಿ ಮಾಸೇಷು ತಥಾ ವಿಧಿರುಕ್ತೋ ಮನೀಷಿಭಿಃ ॥ ೧೦ ॥

ಶೃಣು ನಾಮಾನಿ ದೇವಸ್ಯ ಪ್ರಾಶನಾನಿ ಚ ಸುವ್ರತ ।
ಸುಧಾಂಶುರರ್ಯಮಾ ಚೈವ ಸವಿತಾತ್ರಿ ಪುರಾಂತಕಃ ॥ ೧೧ ॥

ಪಾರಣೇಷ್ವೇವ ಸರ್ವೇಷು ಪ್ರೀಯತಾಮಿತಿ ಕೀರ್ತಯೇತ್ ।
ಗೋಮೂತ್ರಂ ಪಂಚಗವ್ಯಂ ತು ಘೃತಂ ಚೋಷ್ಣಂ ಪಯೋ ದಧಿ ॥ ೧೨ ॥

ಯಸ್ತ್ವೇತಾಂ ಸಪ್ತಮೀಂ ಕುರ್ಯಾದನೇನ ವಿಧಿನಾ ನರಃ ।
ಅಪರಾಜಿತೋ ಭವೇತ್ಸೋಽಸೌ ಸದಾ ಶತ್ರುಭಿರಾಹವೇ ॥ ೧೩ ॥

---

ಕರಿಗಡುಬಿನ ನೈವೇದ್ಯ ಇವುಗಳನ್ನು ಸಮರ್ಪಿಸಬೇಕೆಂದು ವಿದ್ವಾಂಸರು ಈ ವಿಧಿಯನ್ನು ಹೇಳಿದ್ದಾರೆ. ಅನಂತಧೂಪವೆಂದರೆ ಗಂಟಿರುವ ಗಂಧದಚಕ್ಕೆ, ಅಗಿಲುಚಕ್ಕೆ, ಸಿಲ್ಹಕ (ಸಾಮ್ರಾಣಿ) ಕೊನ್ನಾರಿಗೆಡ್ಡೆ, ಸಕ್ಕರೆ ಇವುಗಳನ್ನು ಚೂರ್ಣಮಾಡಿ ಮೂರು ದಿನ ಬೆರಸಿ ಇಟ್ಟಿದ್ದರೆ ಅನಂತಧೂಪವಾಗುವುದೆಂದು ಹೇಳಿದೆ.

೧೧. ಅಯ್ಯಾ ತ್ರಿಪುರಾಂತಕಸ್ವರೂಪನಾದ ದಿಂಡಿಯೇ! ನಾಲ್ಕು ಪಾರಣೆಗಳಲ್ಲಿ ಕ್ರಮವಾಗಿ ಹೇಳಬೇಕಾದ ದೇವರ ನಾಮುಗಳನ್ನೂ, ಪ್ರಾಶನ ದ್ರವ್ಯಗಳನ್ನೂ, ಪ್ರಾಶನ ವಿಧಿಯನ್ನೂ ಹೇಳುವೆನು ಕೇಳು.

೧೨. ಸುಧಾಂಶು, ಅರ್ಯಮಾ, ಸವಿತಾ, ತ್ರಿಪುರಾಂತಕ ಈ ಪ್ರತಿಯೊಂದು ನಾಮದ ಕೊನೆಯಲ್ಲಿಯೂ ಪ್ರೀಯತಾಂ ಎಂಬ ಪದವನ್ನು ಸೇರಿಸಿ ಹೇಳಬೇಕು. ಈ ನಾಲ್ಕು ಪಾರಣಾಂಗವಾಗಿ ದೇಹ ಶುದ್ಧಿಗೆ ಗೋಮೂತ್ರ, ಪಂಚಗವ್ಯ, ತುಪ್ಪ, ಬಿಸಿಯ ಹಾಲು, ಮೊಸರು ಇವು ಪ್ರಾಶನಮಾಡುವ ದ್ರವ್ಯಗಳು.

೧೩. ಯಾವನು ಈ ವಿಧಿಯಿಂದ ಸಪ್ತಮಿಯನ್ನು ನಡೆಯಿಸುತ್ತಾನೆಯೋ ಅವನು ಶತ್ರುಗಳೊಡನೆ ಯುದ್ಧಮಾಡುವುದರಲ್ಲಿ ಯಾವಾಗಲೂ ಸೋಲದೆ ಅವರನ್ನು ಜಯಿಸುವನು.

ಜಿತ್ವಾ ಶತ್ರೂಂ ಲಭೇತಾಪಿ ತ್ರಿವರ್ಗಂ ನಾತ್ರ ಸಂಶಯಃ ।
ತ್ರಿವರ್ಗಮಥ ಸಂಪ್ರಾಪ್ಯ ಸ್ವರ್ಭಾನೋಃ ಪುರಮಶ್ನುತೇ ॥ ೧೪ ॥

ತತಃ ಪೂರ್ಣೇಷು ಮಾಸೇಷು ಪೂಜಯೇಚ್ಛಕ್ತಿತಃ ಖಗಂ ।
ಗಂಧಪುಷ್ಪೋಪಹಾರೈಸ್ತು ಪುರಾಣಶ್ರವಣೇನ ಚ ॥ ೧೫ ॥

ಅಶ್ವದಾನೇನ ಚ ವಿಭೋ ಬ್ರಾಹ್ಮಣಾನಾಂ ಚ ತರ್ಪಣೈಃ ।
ವಾಚಕಂ ಪೂಜಯಿತ್ವಾ ಚ ಭಾಸ್ಕರಸ್ಯ ಪ್ರಿಯಂ ಸದಾ ॥ ೧೬ ॥

ಭಾಸ್ಕರಾಯ ಧ್ವಜಾನ್ ದದ್ಯಾತ್ ನಾನಾರತ್ನವಿಭೂಷಿತಾನ್ ।
ಯ ಇತ್ಥಂ ಕುರುತೇ ವೀರ ಸಪ್ತಮೀಂ ಯತ್ನತಃ ಸದಾ ॥ ೧೭ ॥

ಸ ಪರಾಜಿತ್ಯ ವೈ ಶತ್ರೂನ್ ಯಾತಿ ಹಂಸ ಸಲೋಕತಾಂ ॥ ೧೮ ॥

---

೧೪. ಮತ್ತು ಧರ್ಮ, ಅರ್ಥ, ಕಾಮಗಳೆಂಬ ತ್ರಿವರ್ಗಗಳನ್ನು ಪಡೆಯುವನು. ಇದರಲ್ಲಿ ಸಂಶಯವಿಲ್ಲ. ಹೀಗೆ ತ್ರಿವರ್ಗವನ್ನು ಹೊಂದಿ ಸ್ವರ್ಗಲೋಕದಲ್ಲಿ ಭಾನುವಿನ ಪುರವನ್ನು ಸೇರುತ್ತಾನೆ.

೧೫. ಆಮೇಲೆ ತಿಂಗಳು ತುಂಬುವ ಪರ್ಯಂತ ಶಕ್ತ್ಯನುಸಾರವಾಗಿ ಸೂರ್ಯನನ್ನು ಭಕ್ತಿಯಿಂದ ಗಂಧ, ಹೂ, ನಿವೇದನದ್ರವ್ಯಗಳಿಂದ ಆರಾಧಿಸಿ ಪುರಾಣಶ್ರವಣ ಮಾಡಿಸುವುದರಿಂದಲೂ.

೧೬-೧೭. ಅಶ್ವದಾನಮಾಡುವುದರಿಂದ ಸೂರ್ಯದೇವನನ್ನೂ ಸಂತರ್ಪಣೆ ಮಾಡುವುದರಿಂದ ಬ್ರಾಹ್ಮಣರನ್ನೂ ತೃಪ್ತಿಪಡಿಸಬೇಕು. ಸೂರ್ಯನಿಗೆ ಅತ್ಯಂತ ಪ್ರಿಯನಾದ ಪುರಾಣವಾಚಕನನ್ನೂ ಪೂಜಿಸಿ, ಸೂರ್ಯಪ್ರೀತಿಗಾಗಿ ನಾನಾ ರತ್ನಗಳಿಂದ ಅಲಂಕೃತವಾದ ಧ್ವಜಗಳನ್ನು ದಾನಕೊಡಬೇಕು.

೧೮. ಎಲೈ ವೀರನೇ! ಯಾವನು ಈ ಪ್ರಕಾರ ಸಪ್ತಮೀವ್ರತವನ್ನು ಯತ್ನದಿಂದ ಮಾಡುತ್ತಾನೆಯೋ ಅವನು ಯಾವಾಗಲೂ ಶತ್ರುವನ್ನು ಸೋಲಿಸಿ ಹಂಸ (ಸೂರ್ಯ) ಸಾಲೋಕ್ಯವನ್ನು ಹೊಂದುತ್ತಾನೆ.

**ಶುಕ್ಲಾಶ್ವಯುಕ್ತಯಾನೇನ ಆಪಗೇನ ಪತಾಕಿನಾ ।**
**ಆಪಗಾಧಿಪಸಂಕಾಶಃ ಆಪಗಾನುಚರೋ ಭವೇತ್ ॥ ೧೯ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮಿಾ ಕಲ್ಪೇ ಅಪರಾಜಿತಾವರ್ಣನಂ ನಾಮ ಅಷ್ಟನವತಿತಮೋಽಧ್ಯಾಯಃ**



---

೧೯. ಹೀಗೆ ಅವನು ಹೋಗುವಾಗ ಬಿಳಿಯ ಕುದುರೆಗಳನ್ನು ಕಟ್ಟಿರುವುದೂ, ನೀರಿನಮೇಲೆ ಸಾಗುವಂಥದೂ ಆದ ರಥದಿಂದ ಕೂಡಿದವನಾಗಿ ವರುಣ ನಾಮಕ ಸೂರ್ಯನ ಸದೃಶನಾಗಿ ಅವನ ಸಹಚರನೇ ಆಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಅಪರಾಜಿತ ಸಪ್ತಮೀವ್ರತ ವರ್ಣನವೆಂಬ ತೊಂಬತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಏಕೋನಶತತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಶುಕ್ಲಪಕ್ಷೇ ತು ಸಪ್ತಮ್ಯಾಂ ಯದಾ ಸಂಕ್ರಮತೇ ರವಿಃ ।
ಮಹಾ ಜಯಾ ತದಾ ಸಾ ವೈ ಸಪ್ತಮೀ ಭಾಸ್ಕರಪ್ರಿಯಾ ॥ ೧ ॥

ಸ್ನಾನಂ ದಾನಂ ಜಪೋ ಹೋಮಃ ಪಿತೃದೇವಾಭಿಪೂಜನಂ ।
ಸರ್ವಂ ಕೋಟಿಗುಣಂ ಪ್ರೋಕ್ತಂ ಭಾಸ್ಕರಸ್ಯ ವಚೋ ಯಥಾ ॥ ೨ ॥

ಯಸ್ತಸ್ಯಾಂ ಮಾನವೋ ಭಕ್ತ್ಯಾ ಘೃತೇನ ಸ್ನಪಯೇದ್ರವಿಂ ।
ಸೋಽಶ್ವಮೇಧಫಲಂ ಪ್ರಾಪ್ಯ ಸ್ವರ್ಗಲೋಕಮವಾಪ್ನುಯಾತ್ ॥ ೩ ॥

---

### ತೊಂಭತ್ತೊಂಭತ್ತನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಶುಕ್ಲಪಕ್ಷದ ಸಪ್ತಮಿಯದಿವಸ ಸೂರ್ಯನಿಗೆ ಯಾವ ರಾಶಿಯೊಡನೆಯಾದರೂ ಸಂಕ್ರಮಣವಾದರೆ ಅದನ್ನು ಸೂರ್ಯನಿಗೆ ಪ್ರಿಯವಾದ ಮಹಾಜಯಾಸಪ್ತಮಿ ಎನ್ನುವರು.

೨. ಆ ದಿನ ಮಾಡುವ ಸ್ನಾನ, ಜಪ, ಹೋಮ, ಪಿತೃಪೂಜೆ, ದೇವಪೂಜೆ ಇವೆಲ್ಲಕ್ಕೂ ಒಂದಕ್ಕೆ ಕೋಟಿಪಾಲು ಹೆಚ್ಚು ಫಲವೆಂದು ಸೂರ್ಯನೇ ಹೇಳಿದ್ದಾನೆ.

೩. ಆ ಮಹಾಜಯಸಪ್ತಮಿಯಲ್ಲಿ ಭಕ್ತಿಯಿಂದ ಸೂರ್ಯನಿಗೆ ತುಪ್ಪವನ್ನು ಅಭಿಷೇಕಮಾಡಬೇಕು. ಹೀಗೆ ಮಾಡಿದವನು ಅಶ್ವಮೇಧಫಲವನ್ನು ಹೊಂದಿ ಸ್ವರ್ಗ ಲೋಕವನ್ನು ಸೇರುತ್ತಾನೆ.

ಪಯಸಾ ಸ್ನಾಪಯೇದ್ಯಸ್ತು ಭಾಸ್ಕರಂ ಭಕ್ತಿಮಾನ್ನರಃ ।
ವಿಮುಕ್ತಃ ಸರ್ವಪಾಪೇಭ್ಯೋ ಯಾತಿ ಸೂರ್ಯಸಲೋಕತಾಂ ॥ ೪ ॥

ಕಾರ್ಪೂರೇಣ ವಿಮಾನೇನ ಕಿಂಕಿಣೀಜಾಲಮಾಲಿನಾ ।
ತೇಜಸಾ ಹರಿಸಂಕಾಶಃ ಕಾಂತ್ಯಾ ಸೂರ್ಯಸಮಸ್ತಥಾ ॥ ೫ ॥

ಸ್ಥಿತ್ವಾ ತತ್ರ ಚಿರಂ ಕಾಲಂ ರಾಜಾ ಭವತಿ ಚಾಂಜಸಾ ।
ಮಹಾಜಯ್ಯೈಷಾ ಕಥಿತಾ ಸಪ್ತಮೀ ತ್ರಿಪುರಾಂತಕ ॥ ೬ ॥

ಯಾಮುಪೋಷ್ಯ ನರೋ ಭಕ್ತ್ಯಾ ಭವತೇ ಸೂರ್ಯಲೋಕಗಃ ।
ತತೋ ಯಾತಿ ಪರಂ ಬ್ರಹ್ಮ ಯತ್ರ ಗತ್ವಾ ನ ಶೋಚತಿ ॥ ೭ ॥

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಮಹಾಜಯ ಕಲ್ಪವರ್ಣನಂ ನಾಮ ಏಕೋನಶತತಮೋಽಧ್ಯಾಯಃ.**

---

೪. ಯಾವ ಮನುಷ್ಯನು ಆ ಸಪ್ತಮಿಯದಿನ ಭಕ್ತಿಯಿಂದ ಸೂರ್ಯನಿಗೆ ಕ್ಷೀರಾಭಿಷೇಕವನ್ನು ಮಾಡಿಸುವನೋ ಅವನು ಸಮಸ್ತ ಪಾಪಗಳಿಂದಲೂ ಬಿಡುಗಡೆಹೊಂದಿ ಸೂರ್ಯ ಸಾಲೋಕ್ಯವನ್ನು ಹೊಂದುತ್ತಾನೆ.

೫-೬. ಇಂಥ ಫಲವನ್ನು ಪಡೆದ ಮನುಷ್ಯನು ಕಿರುಗಂಟೆಗಳ ಗುಂಪಿನ ಮಾಲೆಗಳುಳ್ಳ ಕಾರ್ಪೂರ ವಿಮಾನವನ್ನೇರಿ ತೇಜಸ್ಸಿನಿಂದ ಹರಿಗೆ ಸಮಾನನೂ ಕಾಂತಿಯಿಂದ ಸೂರ್ಯನಿಗೆ ಸಮಾನನೂ ಆಗಿ ಅಲ್ಲಿ ಬಹುಕಾಲವಿದ್ದು ಬಳಿಕ ಭೂಲೋಕದಲ್ಲಿ ಜನಿಸಿ ರಾಜನಾಗುತ್ತಾನೆ.

೭. ಅಯ್ಯಾ ತ್ರಿಪುರಾಂತಕಸ್ವರೂಪನಾದ ದಿಂಡಿಯೇ ! ಈ ರೀತಿಯಾಗಿ ಮಹಾಜಯಸಪ್ತಮಿಯ ವಿಚಾರವನ್ನು ಹೇಳಿಯಾಯಿತು. ಇದರಲ್ಲಿ ಭಕ್ತಿಯಿಂದ ಉಪವಾಸ ಮಾಡಿದ ಮನುಷ್ಯನು ಸೂರ್ಯಲೋಕಕ್ಕೆ ಹೋಗುತ್ತಾನೆ. ಆಮೇಲೆ ಪರಬ್ರಹ್ಮವನ್ನು ಹೊಂದುತ್ತಾನೆ. ಅಲ್ಲಿಗೆ ಹೋದಮೇಲೆ ಇವನಿಗೆ ಶೋಕಕ್ಕೆ ಅವಕಾಶವೇ ಇಲ್ಲ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸಪ್ತಮೀಕಲ್ಪದಲ್ಲಿ ಮಹಾಜಯ ಕಲ್ಪವರ್ಣನವೆಂಬ ತೊಂಭತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಶತತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಯಾ ತು ಮಾರ್ಗಶಿರೇ ಮಾಸಿ ಶುಕ್ಲಪಕ್ಷೇ ತು ಸಪ್ತಮೀ ।
ನಂದಾ ಸಾ ಕಥಿತಾ ವೀರ ಸರ್ವಾನಂದಕರೀ ಶುಭಾ ॥ ೧ ॥

ಪಂಚಮ್ಯಾಮೇಕ ಭಕ್ತಂ ತು ಷಷ್ಠ್ಯಾಂ ನಕ್ತಂ ಪ್ರಕೀರ್ತಿತಂ ।
ಸಪ್ತಮ್ಯಾಮುಪವಾಸಂ ತು ಕೀರ್ತಯಂತಿ ಮನೀಷಿಣಃ ॥ ೨ ॥

ಪಾರಣಾನ್ಯತ್ರ ವೈ ತ್ರೀಣಿ ಶಂಸಂತೀಹ ಮನೀಷಿಣಃ ।
ಮಾಲತೀಕುಸುಮಾನೀಹ ಸುಗಂಧಂ ಚಂದನಂ ತಥಾ ॥ ೩ ॥

---

## ನೂರನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಮಾರ್ಗಶಿರಮಾಸದ ಶುಕ್ಲಪಕ್ಷದಲ್ಲಿ ಬರುವ ಸಪ್ತಮಿಯು ಸರ್ವರಿಗೂ ಆನಂದವನ್ನು ಉಂಟುಮಾಡತಕ್ಕುದಾದ ನಂದಸಪ್ತಮೀ ಎನಿಸಿಕೊಳ್ಳುವುದು.

೨. ಈ ವ್ರತ ಮಾಡುವವರು ಪಂಚಮಿಯದಿನ ಹಗಲು ಒಪ್ಪೊತ್ತು ಊಟವನ್ನೂ, ಷಷ್ಠಿಯಲ್ಲಿ ನಕ್ತಭೋಜನವನ್ನೂ, ಸಪ್ತಮಿಯಲ್ಲಿ ಉಪವಾಸವನ್ನೂ ಮಾಡಿ, ಮಾರನೇದಿನ ಪಾರಣೆಯನ್ನು ಮಾಡಬೇಕು. ಎಂದು ವಿದ್ವಾಂಸರು ಹೇಳಿದ್ದಾರೆ.

೩. ಈ ವಿಧಿಯಲ್ಲಿ ಮೂರು ಪಾರಣೆಯನ್ನು ನಡೆಸತಕ್ಕದ್ದೆಂದು ಪ್ರಾಜ್ಞರು ಹೇಳುತ್ತಾರೆ. ಈ ಕಲ್ಪದಲ್ಲಿ ಸೂರ್ಯನ ಪೂಜೆಗೆ ಜಾಜಿಯ ಹೂವು ಸುವಾಸನಾಯುಕ್ತವಾದ ಶ್ರೀಗಂಧ ಇವನ್ನೂ.

**ಕರ್ಪೂರಾಗರುಸಂಮಿಶ್ರಂ ಧೂಪಂ ಚಾತ್ರ ವಿನಿರ್ದಿಶೇತ್ !**
**ದಧ್ಯೋದನಂ ಸಖಂಡಂ ಚ ನೈವೇದ್ಯಂ ಭಾಸ್ಕರಪ್ರಿಯಂ** ॥ ೪ ॥

**ತಮೇವ ದದ್ಯಾದ್ವಿಪ್ರೇಭ್ಯೋಽಶ್ನೀಯಾಚ್ಚ ತದನು ಸ್ವಯಂ ।**
**ಧೂಪಾರ್ಥಂ ಭಾಸ್ಕರಸ್ಯೈಷ ಪ್ರಥಮೋ ಪಾರಣೇ ವಿಧಿಃ** ॥ ೫ ॥

**ಪಲಾಶಪುಷ್ಪಾಣಿ ವಿಭೋ ಧೂಪೋ ಯಃ ಶಕ್ಯ ಏವ ಚ ।**
**ಕರ್ಪೂರಂ ಚಂದನಂ ಕುಷ್ಟ ಅಗರುಸ್ಸಿಲ್ಹಕಂ ತಥಾ** ॥ ೬ ॥

**ಸಗ್ರಂಥಿ ವೃಷಣಂ ಭೀಮ ಕುಂಕುಮಂ ಗೃಂಜನಂ ತಥಾಃ ।**
**ಹರೀತಕೀ ತಥಾ ಭೀಮ ಏಷ ಪಕ್ಷಕ ಉಚ್ಯತೇ** ॥ ೭ ॥

**ಧೂಪಃ ಪ್ರಬೋಧ ಆದಿಷ್ಟೋ ನೈವೇದ್ಯಂ ಖಂಡಮಂಡಕಾಃ ।**
**ಕೃಷ್ಣಾಗರುಃ ಸಿತಂ ಕಂಜಂ ಬಾಲಕಂ ವೃಷಣಂ ತಥಾ** ॥ ೮ ॥

---

೪. ಪಚ್ಚಕರ್ಪೂರ, ಅಗಿಲು, ಇವುಗಳ ಧೂಪ; ಇವುಗಳನ್ನು ಸಮರ್ಪಿಸತಕ್ಕದ್ದೆಂದು ಹೇಳಿದೆ. ಕೆನೆಮೊಸರು ಹಾಕಿದ ಮೊಸರನ್ನವನ್ನು ಸೂರ್ಯನ ಪ್ರೀತ್ಯರ್ಥವಾಗಿ ನಿವೇದನಮಾಡಬೇಕು.

೫. ಹಾಗೆ ನೈವೇದ್ಯ ಮಾಡಿದ ದಧ್ಯನ್ನವನ್ನೇ ಬ್ರಾಹ್ಮಣರಿಗೆ ದಾನಮಾಡಿ ತಾನೂ ಭೋಜನ ಮಾಡಬೇಕು. ಪ್ರಥಮ ಪಾರಣೆಯಲ್ಲಿ ಸೂರ್ಯನ ಅರ್ಚನೆಗೆ ಇದು ವಿಧಿಯು.

೬. ಎಲೈ ವಿಭುವೇ! ಈ ವ್ರತದಲ್ಲಿ ಮುತ್ತುಗದ ಹೂಗಳನ್ನು ಮತ್ತು ಯಾವ ಧೂಪವು ಸಂಪಾದನೆಮಾಡಲು ಶಕ್ಯವೋ ಅಂಥ ಧೂಪ ಕರ್ಪೂರ, ಚಂದನ, ಅಗಿಲು ಚಕ್ಕೆ, ಸಾಮ್ರಾಣಿ, ಚಂಗಲಕೋಷ್ಠ, ಪಕ್ಷ, ಗಂಟುಳ್ಳವೃಷಣ, ಅಳಲೇಕಾಯಿ, ಕುಂಕುಮಕೇಸರಿ, ಬೆಳ್ಳುಳ್ಳಿ ಇವುಗಳನ್ನು ಸೇರಿದರೆ ಪಕ್ಷಕ ಧೂಪವೆಂದು ಹೇಳುತ್ತಾರೆ.

೭-೮. ಈ ವಿಧಿಯಲ್ಲಿ ಪ್ರಬೋಧ ಧೂಪವನ್ನೂ ನೈವೇದ್ಯಕ್ಕಾಗಿ ಕರಿಗಡುಬು ಮಂಡಿಗೆ ಇವುಗಳನ್ನೂ ಸಮರ್ಪಿಸಬೇಕು. ಕೆಂಪುಅಗಿಲು, ಬಿಳಿಯನೈದಿಲೆ, ಬಾಲ ವೃಷಣ? ಚಂದನ, ತಗರ, ಕೊನ್ನಾರಿಗೆಡ್ಡೆ, ಶರ್ಕರಾ ಇವೆಲ್ಲವನ್ನೂ ಸಮಪ್ರಮಾಣದಲ್ಲಿ ಕೂಡಿಸಿದರೆ ಪ್ರಬೋಧ ಧೂಪವಾಗುವುದು.

ಚಂದನಂ ತಗರೋಮುಸ್ತಾ ಪ್ರಭೋಧಃ ಶರ್ಕರಾನ್ವಿತಾ ।
ಭೋಜಯೇದ್ಬ್ರಾಹ್ಮಣಾಂಶ್ಚಾಪಿ ಖಂಡಖಾದ್ಯೈರ್ಗಣಾಧಿಪ ॥ ೯ ॥

ನಿಂಬಪತ್ರಂ ತು ಸಂಪ್ರಾಶ್ಯ ತತೋ ಭುಂಜೀತ ವಾಗ್ಯತಃ ।
ಪಾರಣೇಽಸ್ಯ ದ್ವಿತೀಯಸ್ಯ ವಿಧಿರೇಷ ಪ್ರಕೀರ್ತಿತಃ ॥ ೧೦ ॥

ನೀಲೋತ್ಪಲಾನಿ ರಮ್ಯಾಣಿ ಧೂಪಂ ಗುಗ್ಗುಳಮಾದಿಶೇತ್ ।
ನೈವೇದ್ಯಂ ಪಾಯಸಂ ಮುಖ್ಯಂ ಪ್ರೀತಯೇ ಭಾಸ್ಕರಸ್ಯ ತು ॥ ೧೧ ॥

ವಿಲೇಪನಂ ಚಂದನಂ ತು ಪ್ರಾಶನೇ ವಿಧಿರುಚ್ಯತೇ ।
ತೃತೀಯಸ್ಯಾಪಿ ತೇ ವೀರ ಕಥಿತೋ ವಿಧಿರುತ್ತಮಃ ॥ ೧೨ ॥

ಶೃಣು ನಾಮಾನಿ ದೇವಸ್ಯ ಪಾವನಾನಿ ನೃಣಾಂ ಸದಾ ।
ವಿಷ್ಣುರ್ಭಗಸ್ತಥಾ ಧಾತಾ ಪ್ರೀಯತಾಮುದ್ಗಿರೇಚ್ಚ ವೈ ॥ ೧೩ ॥

---

೯–೧೦. ಅಯ್ಯಾ ಗಣಾಧಿಪನೇ! ಕರಿಗಡುಬಿನ ಭಕ್ಷ್ಯಗಳಿಂದ ಬ್ರಾಹ್ಮಣ ಭೋಜನ ಮಾಡಿಸಬೇಕು. ದೇಹಶುದ್ಧಿಗೆ ಬೇವಿನ ಎಲೆಯನ್ನು ಪ್ರಾಶನಮಾಡಿ ಆಮೇಲೆ ಮೌನದಿಂದ ಭೋಜನ ಮಾಡಬೇಕು. ಎರಡನೆಯ ಪಾರಣೆಯ ಈ ವಿಧಿಯನ್ನು ಹೇಳಿ ಆಯಿತು.

೧೧. ಅಯ್ಯಾ ವೀರನೇ! ಮೂರನೆಯ ಪಾರಣೆಯಲ್ಲಿ ಸೂರ್ಯಪೂಜೆಗೆ ಮನೋಹರವಾದ ನೀಲೋತ್ಪಲ ಪುಷ್ಪಗಳು, ಚಂದನದ ವಿಲೇಪನ, ಗುಗ್ಗುಳಧೂಪ ಇವುಗಳನ್ನು ಸಮರ್ಪಿಸಿ ಸೂರ್ಯನಿಗೆ ಬಹು ಪ್ರೀತಿಕರವೂ ಮುಖ್ಯವೂ ಆದ ಪಾಯಸವನ್ನು ನೈವೇದ್ಯ ಮಾಡಬೇಕೆಂದು ವಿಧಿಯಿದೆ.

೧೨. ಎಲೈ ವೀರನೇ! ಮೂರನೆಯ ಪಾರಣೆಯ ಉತ್ತಮವಾದ ಈ ವಿಧಿಯನ್ನು ಹೇಳಿ ಆಯಿತು. ಮನುಷ್ಯನನ್ನು ಯಾವಾಗಲೂ ಪರಿಶುದ್ಧಿ ಮಾಡತಕ್ಕ ಸೂರ್ಯದೇವನ ಹೆಸರುಗಳನ್ನು ಕೇಳು.

೧೩. ಮೂರನೇ ಪಾರಣೆಯಲ್ಲಿಯೂ ಕ್ರಮವಾಗಿ ವಿಷ್ಣು, ಭಗ, ಧಾತಾ, ಎಂಬ ನಾಮಗಳನ್ನು ಅವುಗಳ ಮುಂದೆ ಪ್ರೀಯತಾಂ ಎಂಬುದನ್ನು ಸೇರಿಸಿ ಒಂದೊಂದು ಪಾರಣೆಯಲ್ಲಿ ಒಂದೊಂದು ನಾಮದಂತೆ ಹೇಳಿ ಸಮರ್ಪಿಸಬೇಕು.

**ಅನೇನ ವಿಧಿನಾ ಯಸ್ತು ಕುರ್ಯಾತ್ಪ್ರಯತಮಾನಸಃ ।**
**ಸ ಕಾಮಾನಿಹ ಸಂಪ್ರಾಪ್ಯ ನಂದತೇ ಶಾಶ್ವತೀಃ ಸಮಾಃ　　॥ ೧೪ ॥**

**ತತಃ ಸೂರ್ಯಸದೋ ಗತ್ವಾ ನಂದತೇ ನಂದವರ್ಧನ ।**
**ಏಷಾ ತು ನಂದಜನನೀ ತವಾಖ್ಯಾತಾ ಮಯಾ ಶಿವಾ　　॥ ೧೫ ॥**

**ಯಾಮುಪೋಷ್ಯ ತತೋ ಭುಕ್ತ್ವಾ ನಂದತೇ ಹಂಸಮಾಪ್ಯ ವೈ　　॥ ೧೬ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ನಂದಸಪ್ತಮೀ ವರ್ಣನಂನಾಮ ಶತತಮೋಽಧ್ಯಾಯಃ**



---

೧೪. ಅಯ್ಯಾ ಆನಂದ ಹೆಚ್ಚಿಸುವ ದಿಂಡಿಯೇ! ಪರಿಶುದ್ಧವಾದ ಮನಸ್ಸಿನಿಂದ ಈ ವಿಧಿಪ್ರಕಾರ ಯಾರು ಮಾಡುತ್ತಾರೆಯೋ ಅವರು ಇಲ್ಲಿ ಇಷ್ಟಾರ್ಥಗಳನ್ನೆಲ್ಲಾ ಹೊಂದಿ ಬಹುಕಾಲ ಸಂತೋಷವಾಗಿರುತ್ತಾರೆ. ಆಮೇಲೆ ಸೂರ್ಯನ ಲೋಕಕ್ಕೆ ಹೋಗಿ ಆನಂದಪಡುತ್ತಾರೆ.

೧೫. ಅಯ್ಯಾ ಶಿವಸ್ವರೂಪನೇ! ಸಂತೋಷಕರವಾದ ಈ ನಂದಸಪ್ತಮಿಯನ್ನು ನಿನಗೆ ಹೇಳಿಯಾಯಿತು. ಆ ದಿನ ಉಕ್ತವಾದ ರೀತಿಯಲ್ಲಿ ಉಪವಾಸಮಾಡಿ ಅನಂತರ ಭೋಜನ ಮಾಡಿದರೆ ಸೂರ್ಯಸಾಯುಜ್ಯವನ್ನು ಹೊಂದಿ ಆನಂದ ಪಡುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸಪ್ತಮೀಕಲ್ಪದಲ್ಲಿ ನಂದಸಪ್ತಮಿವರ್ಣನೆ ಎಂಬ ನೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಏಕಶತತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಶುಕ್ಲಪಕ್ಷೇ ತು ಸಪ್ತಮ್ಯಾಂ ನಕ್ಷತ್ರಂ ಸವಿತುರ್ಭವೇತ್ ।
ಯದಾ ಪ್ರಥಮತಾ ಚೈವ ತದಾ ವೈ ಭದ್ರತಾಂ ವ್ರಜೇತ್ ॥ ೧ ॥

ಸ್ನಪನಂ ತಸ್ಯ ದೇವಸ್ಯ ಘೃತೇನ ಕಥಿತಂ ಬುಧೈಃ ।
ಕ್ಷೀರೇಣ ಚ ತಥಾ ವೀರ ಪುನರಿಕ್ಷುರಸೇನ ಚ ॥ ೨ ॥

ಸ್ಥಾಪಯಿತ್ವಾ ತು ದೇವೇಶಂ ಚಂದನೇನ ವಿಲೇಪಯೇತ್ ।
ದಗ್ಧ್ವಾತು ಗುಗ್ಗುಲಂ ತಸ್ಯ ದದ್ಯಾದ್ಭದ್ರಂ ತಥಾಗ್ರತಃ ॥ ೩ ॥

---

### ನೂರೊಂದನೆಯ ಅಧ್ಯಾಯ

೧. ಶುಕ್ಲಪಕ್ಷದ ಸಪ್ತಮಿಯಲ್ಲಿ ಹಸ್ತ ನಕ್ಷತ್ರ ಬಂದರೆ ಆ ಸಪ್ತಮಿಯು ಭದ್ರತೆಯನ್ನು ಹೊಂದುವುದು. ಎಂದರೆ ಭದ್ರಸಪ್ತಮಿಯೆನಿಸುವುದು.

೨. ಆದಿನ ಸೂರ್ಯದೇವನಿಗೆ ತುಪ್ಪ, ಹಾಲು ಮತ್ತು ಕಬ್ಬಿನರಸ ಇವುಗಳಿಂದ ಅಭಿಷೇಕ ಮಾಡಬೇಕೆಂದು ವಿದ್ವಾಂಸರು ಹೇಳುತ್ತಾರೆ.

೩. ದೇವದೇವನಾದ ಸೂರ್ಯನಿಗೆ ಸ್ನಾನಮಾಡಿಸಿ ಗಂಧಲೇಪನಮಾಡಬೇಕು. ಅನಂತರ ಗುಗ್ಗುಳವನ್ನೂ ಭದ್ರಧೂಪವನ್ನೂ ಹಾಕಬೇಕು.

**ಗೋಧೂಮಚೂರ್ಣಂ ನಿವಪನ್ ವಿಮಲಂ ಶಶಿಸನ್ನಿಭಂ ।**
**ಸವಜ್ರಂ ಸಗುಡಂ ಚೈವ ರಕ್ತಪುಷ್ಪೋಪಶೋಭಿತಂ ॥ ೪ ॥**

**ಯದಸ್ಯ ಶೃಂಗಾಮೀಶಾನಂ ತತ್ರ ವೈ ಮೌಕ್ತಿಕಂ ನ್ಯಸೇತ್ ।**
**ಯದಾಗ್ನೇಯಂ ತು ಮಾಣಿಕ್ಯಂ ನ್ಯಸೇದ್ವಾ ಲೋಹಿತಂ ಮಣಿಂ ॥ ೫ ॥**

**ನೈಋತ್ಯೇ ಮರಕತಂ ದದ್ಯಾತ್ ವಾಯವ್ಯೇಪದ್ಮ ರಾಗಿಣಂ ।**
**ಗಾಂಗೇಯಮಂತತಸ್ತಸ್ಯ ಸ್ವಶಕ್ತ್ಯಾ ವಿನ್ಯಸೇದ್ಬುಧಃ ॥ ೬ ॥**

**ಚತುರ್ಥ್ಯಾಮೇಕಭಕ್ತಂ ತು ಪಂಚಮ್ಯಾಂ ನಕ್ತಮಾದಿಶೇತ್ ।**
**ಷಷ್ಠ್ಯಾಮಯಾಚಿತಂ ಪ್ರೋಕ್ತಂ ಉಪವಾಸೋ ಹ್ಯತಃ ಪರಃ ॥ ೭ ॥**

**ಪಾಷಂಡಿನೋ ವಿಕರ್ಮಸ್ಥಾನ್ ಬೈಡಾಲವ್ರತಿಕಾಂಸ್ತ್ಯಜೇತ್ ।**
**ಸಪ್ತಮ್ಯಾಂ ಪಾಲಯೇತ್ಪ್ರಾಜ್ಞೋ ದಿವಾ ಸ್ವಾಪಂ ವಿವರ್ಜಯೇತ್ ॥ ೮ ॥**

---

೪. ನಿರ್ಮಲವಾಗಿ ಚಂದ್ರನಂತೆ ಬೆಳ್ಳಗಿರುವ ಗೋಧಿಯ ಹಿಟ್ಟಿಗೆ ಬೆಲ್ಲಹಾಕಿ ಕಲಸಿ ತಟ್ಟಿ ಅದನ್ನು ಕೆಂಪು ಹೂಗಳಿಂದ ಅಲಂಕರಿಸಬೇಕು.

೫-೬. ಪ್ರಾಜ್ಞನು ಅದರ ಈಶಾನ್ಯಭಾಗದ ಶೃಂಗದಲ್ಲಿ ಒಂದು ಮುತ್ತನ್ನೂ ಆಗ್ನೇಯಭಾಗದ ಮೂಲೆಯಲ್ಲಿ ಒಂದು ಮಾಣಿಕ್ಯ ಎಂದರೆ ಕೆಂಪುರತ್ನವನ್ನೂ ನೈಋತ್ಯಮೂಲೆಯಲ್ಲಿ ಮತಕತಮಣಿ (ಪಚ್ಚೆ) ಯನ್ನೂ ವಾಯುವ್ಯದಲ್ಲಿ ಪದ್ಮರಾಗವನ್ನೂ ಸುತ್ತಲೂ ಕೊನೆಯಲ್ಲಿ ಚಿನ್ನವನ್ನೂ ತನ್ನ ಶಕ್ತ್ಯನುಸಾರ ಇಟ್ಟು ಅಲಂಕಂಸಿ ಸಿದ್ಧ ಮಾಡಬೇಕು.

೭. ಚತುರ್ಥಿಯದಿನ ಹಗಲು ಒಪ್ಪೊತ್ತು ಊಟವನ್ನೂ, ಪಂಚಮಿಯ ದಿನ ರಾತ್ರಿ ಒಪ್ಪೊತ್ತು ನಕ್ತಭೋಜನವನ್ನೂ ಷಷ್ಠಿಯಲ್ಲಿ ಯಾರನ್ನೂ ಯಾಚಿಸದೇ ತಾವಾಗಿ ಕೊಟ್ಟದ್ದನ್ನೂ ಸೇವಿಸುವುದು, ಸಪ್ತಮಿಯದಿನ ಉಪವಾಸವನ್ನು ಮಾಡಿ ಮಾರನೆಯದಿನ ಪಾರಣೆ ಮಾಡಬೇಕು.

೮. ಈ ಅಯಾಚಿತ ವ್ರತದಲ್ಲಿ ನಾಸ್ತಿಕರು, ವಿರುದ್ಧಕರ್ಮಾಚರಣಪರರು, ಬೆಕ್ಕಿನಂತೆ ಕದ್ದು ತಿನ್ನುವವರು, ಇಂಥ ಜನಗಳು ಕೊಟ್ಟದ್ದನ್ನು ಗ್ರಹಿಸಬಾರದು. ಪ್ರಾಜ್ಞನಾದವನು ಸಪ್ತಮಿಯಲ್ಲಿ ಈ ವಿಧಿಯನ್ನು ಅಲಕ್ಷ್ಯಮಾಡದೆ ನಡೆಸಬೇಕಲ್ಲದೆ ಹಗಲು ನಿದ್ದೆಮಾಡಬಾರದು.

ಅನೇನ ವಿಧಿನಾ ಯಸ್ತು ಕುರ್ಯಾದ್ವೈ ಭದ್ರಸಪ್ತಮೀಂ ।
ತಸ್ಮೈ ಸರ್ವಾಣಿ ಭದ್ರಾಣಿ ಯಚ್ಛಂತಿ ಶುಭವಃ ಸದಾ ॥ ೯ ॥

ಭದ್ರಂ ದದಾತಿ ಯಸ್ತ್ವಸ್ಯಾಂ ಭದ್ರಸ್ತಸ್ಯ ಸುತೋ ಭವೇತ್ ।
ಭದ್ರಮಾಸಾದ್ಯ ಭೂತೇಶ ಸದಾ ಭದ್ರೇಣ ತಿಷ್ಠತಿ ॥ ೧೦ ॥

॥ ದಿಂಡಿರುವಾಚ ॥

ಕೋಽಯಂ ಭದ್ರ ಇತಿಪ್ರೋಕ್ತಃ ಕಥಂ ಕಾರ್ಯಂ ಪ್ರಭೂಷಣಂ ।
ದತ್ವಾ ಚ ಕಿಂ ಫಲಂ ವಿದ್ಯಾತ್ ವಿಧಿನಾ ಕೇನ ದೀಯತೇ ॥ ೧೧ ॥

॥ ಬ್ರಹ್ಮೋವಾಚ ॥

ವ್ಯೋಮ ಭದ್ರಮಿತಿ ಪ್ರೋಕ್ತಂ ದೇವಚಿಹ್ನಮನೂಪಮಂ ।
ಯದ್ಧೃತ್ವೇಹ ನರಃ ಸೂರ್ಯಂ ಮುಚ್ಯತೇ ಸರ್ವಕಿಲ್ಬಿಷೈಃ ॥ ೧೨ ॥

ಶಾಲಪಿಂಡಮಯಂ ಕಾರ್ಯಂ ಚತುಷ್ಕೋಣಮನೂಪಮಂ ।
ಗವ್ಯೇನ ಸರ್ಪಿಷಾ ಯುಕ್ತಂ ಖಂಡಶರ್ಕರಯಾನ್ವಿತಂ ॥ ೧೩ ॥

---

೯-೧೦. ಯಾರು ಈ ವಿಧಿಯಿಂದ ಭದ್ರಸಪ್ತಮಿಯನ್ನು ಆಚರಿಸುವರೋ ಅವರಿಗೆ ಋಭುಗಳು ಸಮಸ್ತ ಸನ್ಮಾನಗಳನ್ನು ಕೊಡುತ್ತಾರೆ. ಈ ಸಪ್ತಮಿಯಲ್ಲಿ ಯಾರು ಭದ್ರವನ್ನು (ಸರ್ವತೋ ಭದ್ರವನ್ನು) ದಾನ ಮಾಡುತ್ತಾರೋ ಅವರಿಗೆ ಮಂಗಳಕರನಾದ ಮಗನಾಗುತ್ತಾನೆ. ಅಯ್ಯಾ ಭೂತೇಶನೇ! ಆ ಮಗನು ಶುಭ ಲಕ್ಷಣಗಳನ್ನು ಹೊಂದಿ ಸದಾ ಶುಭಯುತನಾಗಿರುತ್ತಾನೆ.

೧೧. ದಿಂಡಿಯು ಕೇಳುತ್ತಾನೆ:—ಭದ್ರವೆಂದರೇನು? ಆ ಭದ್ರವನ್ನು ಅಲಂಕರಿಸುವುದು ಹೇಗೆ? ಅದನ್ನು ದಾನ ಕೊಟ್ಟರೆ ಯಾವ ಫಲ ಬರುವುದು. ದಾನ ಕೊಡುವ ವಿಧಾನವೇನು? ಎಂದನು.

೧೨. ಬ್ರಹ್ಮನು ಹೇಳುತ್ತಾನೆ:—ಆಕಾಶವನ್ನೇ ಭದ್ರವೆಂದು ಹೇಳುವರು. ಅದು ಅಸದೃಶವಾದುದು. ದೇವತಾಚಿಹ್ನವುಳ್ಳದ್ದು. ಆ ಆಕಾಶವು ಈ ಲೋಕದಲ್ಲಿ ಸೂರ್ಯನನ್ನು ಧರಿಸಿರುವುದರಿಂದ ಅವನ ಪ್ರೀತ್ಯರ್ಥವಾಗಿ ಕಾಲಕ್ಕೆ ಸರಿಯಾಗಿ ಕರ್ಮಾಚರಣೆ ಮಾಡುವ ಮನುಷ್ಯನು ಸಮಸ್ತ ಪಾಪಗಳಿಂದ ಬಿಡುಗಡೆ ಹೊಂದುತ್ತಾನೆ.

೧೩-೧೪. ಅಯ್ಯಾ ಗಣಾಧಿಪನಾದ ದಿಂಡಿಯೇ! ತುಂಬ ದ್ರಾಕ್ಷಿಹಣ್ಣು, ತೆಂಗಿನಕಾಯಿ ತುರಿ ಹಾಕಿ, ಏಲಕ್ಕಿ ಮುಂತಾದುದರಿಂದ ಸುವಾಸನೆಯಾದ ಅಕ್ಕಿಯ

ಚಾತುರ್ಜಾತಕಪೂರ್ಣಂ ತು ದಾಕ್ಷಾಭಿಶ್ಚ ವಿಶೇಷತಃ ।
ನಾಳಿಕೇರಫಲೈಶ್ಚೈವ ಸುಗಂಧಂ ಚ ಗಣಾಧಿಪ ॥ ೧೪ ॥

ಮಧ್ಯೇಂದ್ರನೀಲಂ ಭದ್ರಸ್ಯ ನ್ಯಸೇತ್ಪ್ರಾಜ್ಞಃ ಸ್ವಶಕ್ತಿತಃ ।
ಪುಷ್ಯರಾಗಂ ಮರಕತಂ ಪದ್ಮರಾಗಂ ತಥೈವ ಚ ॥ ೧೫ ॥

॥ ಬ್ರಹ್ಮೋವಾಚ ॥

ಅನೌಪಮ್ಯಂ ಚ ಮಾಣಿಕ್ಯಂ ಕ್ರಮಾತ್ಕೋಣೇಷು ವಿನ್ಯಸೇತ್ ।
ವಾಚಕಾಯಾಥ ವಾ ದತ್ವಾತ್ ಅಥ ವಾ ಭೋಜಕೇ ಸ್ವಯಂ ॥ ೧೬ ॥

ಅನೇನ ವಿಧಿನಾ ಯಸ್ತು ಕೃತ್ವಾ ಭದ್ರಂ ಪ್ರಯಚ್ಛತಿ ।
ಸ ಹಿ ಭದ್ರಾಣಿ ಸಂಪ್ರಾಪ್ಯ ಗಚ್ಛೇದ್ಗೋಪತಿಮಂದಿರಂ ॥ ೧೭ ॥

ಬ್ರಹ್ಮಲೋಕಂ ತತೋ ಗಚ್ಛೇದ್ಯಾನಾರೂಢೋ ನ ಸಂಶಯಃ ।
ತೇಜಸಾ ಗೋಜಸಂಕಾಶಃ ಕಾಂತ್ಯಾ ಗೋಜಸಮಸ್ತಥಾ ॥ ೧೮ ॥

---

ಹಿಟ್ಟನಿಂದ ಚೌಕನಾಗಿ ಅಸದೃಶವಾದ ಸರ್ವತೋಭದ್ರಾಕೃತಿಯನ್ನು ಮಾಡಿ ಹಸು ವಿನ ತುಪ್ಪವನ್ನು ಸವರಿ, ಕಲ್ಲುಸಕ್ಕರೆಯನ್ನು ಮೆಟ್ಟಬೇಕು.

೧೪. ನಾಲ್ಕು ಬಗೆಯ ರತ್ನಗಳು ಎಂದರೆ ಸರ್ವತೋಭದ್ರಮಂಡಲದ ಮಧ್ಯೆ ಇಂದ್ರನೀಲವನ್ನೂ, ನಾಲ್ಕು ಮೂಲೆಗಳಲ್ಲಿಯೂ, ಪುಷ್ಯರಾಗ, ಪಚ್ಚೆ, ಪದ್ಮರಾಗ, ಒಳ್ಳೆಯ ಮುತ್ತು, ಇವನ್ನೂ ತನ್ನ ಶಕ್ತ್ಯನುಸಾರವಾಗಿ ಇಡಬೇಕು.

೧೬–೧೭. ಪುರಾಣವಾಚಕನಿಗೋ, ಅಥವಾ ಭೋಜಕನಿಗೋ ಆ ಸರ್ವತೋಭದ್ರಾಕೃತಿಯನ್ನು ದಾನಮಾಡಬೇಕು. ಈ ವಿಧಿಯಿಂದ ಯಾವನು ಭದ್ರಮಂಡಲ ವನ್ನು ರಚಿಸಿ ದಾನಮಾಡುತ್ತಾನೋ ಅವನು ಅನೇಕ ಶುಭಗಳನ್ನು ಹೊಂದಿ ಸೂರ್ಯ ಲೋಕಕ್ಕೆ ಹೋಗುತ್ತಾನೆ.

೧೮. ಅಲ್ಲಿಂದ ವಿಮಾನವನ್ನೇರಿ ಬ್ರಹ್ಮಲೋಕಕ್ಕೆ ಹೋಗುತ್ತಾನೆ, ಇದರಲ್ಲಿ ಸಂಶಯವಿಲ್ಲ. ಅವನು ತೇಜಸ್ಸು ಕಾಂತಿಗಳಲ್ಲಿ ಸೂರ್ಯನಿಗೆ ಸಮನಾಗಿಯೂ.

ಪ್ರಭಯಾ ಗೋಪತೇಸ್ತುಲ್ಯ ಊರ್ಜಸಾ ಗೋಪರಸ್ಯ ಚ ।
ತಸ್ಮಾದೇತ್ಯ ಪುನರ್ಭೂಮೌ ಗೋಪತಿಸ್ಸ್ಯಾನ್ನ ಸಂಶಯಃ ।
ಪ್ರಸಾದಾದ್ಗೋಪತೇರ್ವೀರ ಸರ್ವಜ್ಞಾಧಿಪಪೂಜಿತಃ ॥ ೧೯ ॥

ಇತ್ಯೇಷಾ ಕಥಿತಾ ಭೀಮ ಭದ್ರಾ ನಾಮೇಹ ಸಪ್ತಮೀ ।
ಯಾಮುಪೋಷ್ಯ ನರೋ ಭೀಮ ಬ್ರಹ್ಮಲೋಕಮವಾಪ್ನುಯಾತ್ ॥ ೨೦ ॥

ಶೃಣ್ವಂತಿ ಯೇ ಪಠಂತೀಹ ಕುರ್ವಂತಿ ಚ ಗಣಾಧಿಪ ।
ತೇ ಸರ್ವೇ ಭದ್ರಮಾಸಾದ್ಯ ಯಾಂತಿ ತದ್ಬ್ರಹ್ಮ ಶಾಶ್ವತಂ ॥ ೨೧ ॥

॥ ಸುಮಂತುರುವಾಚ ॥

ಇತ್ಯುಕ್ತವಾನ್ ಪುರಾ ಬ್ರಹ್ಮಾ ದಿಂಡಿನೇ ಸಪ್ತಮೀವ್ರತಂ ।
ಮಯಾಪ್ಯುಕ್ತಂ ತವ ವಿಭೋ ಯಥಾ ಜ್ಞಾತಂ ಯಥಾ ಶ್ರುತಂ. ॥ ೨೨ ॥

---

೧೯. ಕಳೆಯಲ್ಲಿ ಗೋಪತಿ ಎಂದರೆ ಭೂದೇವಿಯ ಪತಿಯಾದ ವಿಷ್ಣುವಿಗೆ ಸಮನಾಗಿಯೂ, ಬಲದಲ್ಲಿ ಗೋಪರ ಎಂದರೆ ವೃಷಭಾಸಕ್ತನಾದ ಶಿವನಿಗೆ ಸಮನಾಗಿಯೂ ಇರುತ್ತಾನೆ. ಅಯ್ಯಾ ವೀರನೇ! ಸೂರ್ಯನ ಅನುಗ್ರಹದಿಂದ ಸರ್ವಜ್ಞರಾದ ಮುಖಂಡರಿಂದ ಪೂಜಿತನಾಗಿ ಅಲ್ಲಿಂದ ಮತ್ತೆ ಭೂಲೋಕಕ್ಕೆ ಬಂದು, (ಗೋ ಎಂದರೆ ಭೂಮಿ) ಗೋಪತಿಯು (ಭೂಮಿಪತಿಯು) ಆಗುವುದರಲ್ಲಿ ಸಂಶಯವಿಲ್ಲ.

೨೦. ಅಯ್ಯಾ ಭೀಮಸ್ವರೂಪನಾದ ದಿಂಡಿಯೇ! ಭದ್ರಾಸಪ್ತಮಿಯ ವಿಷಯವನ್ನು ಹೀಗೆ ಹೇಳಿದುದಾಯಿತು. ಈ ಭದ್ರಾಸಪ್ತಮಿಯಲ್ಲಿ ಉಪವಾಸ ಮಾಡಿದ ಮನುಷ್ಯನು ಬ್ರಹ್ಮಲೋಕವನ್ನು ಹೊಂದುತ್ತಾನೆ.

೨೧. ಅಯ್ಯಾ ಗಣಾಧಿಪನೇ! ಈ ವಿಚಾರವನ್ನು ಯಾರು ಓದುತ್ತಾರೆಯೋ, ಯಾರು ಕೇಳುತ್ತಾರೆಯೋ ಯಾರು, ಆಚರಿಸುತ್ತಾರೆಯೋ ಅವರೆಲ್ಲರೂ ಶುಭಗಳನ್ನು ಹೊಂದಿ ಶಾಶ್ವತವಾದ ಆ ಬ್ರಹ್ಮನ ಸಾಕ್ಷಾತ್ಕಾರವನ್ನು ಹೊಂದುತ್ತಾರೆ ಎಂದನು.

೨೨ ಸುಮಂತು ಮುನಿವರ್ಯರು ಹೇಳುತ್ತಾರೆ—"ಪೂರ್ವದಲ್ಲಿ ಬ್ರಹ್ಮನು ದಿಂಡಿಗೆ ಸಪ್ತಮೀವ್ರತವನ್ನು ಕುರಿತು ಈ ಪ್ರಕಾರ ಹೇಳಿದ್ದನು. ನಾನೂ ಕೂಡ ಕೇಳಿ ತಿಳಿದಿದ್ದ ಪುಟ್ಟಿಗೆ ನಿನಗೆ ಹೇಳಿದ್ದೇನೆ."

ಗೃಹೀತ್ವಾ ಸಪ್ತಮೀಂ ಕಲ್ಪಂ ಮಾನವೋ ಯಸ್ತು ಭೂತಲೇ ।
ತ್ಯಜೇತ್ಕಾಮಾದ್ಭಯಾದ್ವಾಪಿ ಸ ಜ್ಞೇಯಃ ಪತಿತೋಽಬುಧಃ ॥ ೨೩ ॥

ತಸ್ಮಾದ್ಧಾರಯ ತದ್ವೀರ ನ ತ್ಯಾಜ್ಯಂ ಸಪ್ತಮೀವ್ರತಂ ।
ತ್ಯಜಮಾನೋ ಭವೇದ್ವೀರ ಆರೂಢಪತಿತೋ ನರಃ ॥ ೨೪ ॥

ಶ್ರಾವಯೇದ್ಯಸ್ತು ಭಕ್ತ್ಯಾ ಚ ಸಪ್ತಮೀಂ ಕಲ್ಪಮಾದಿತಃ ।
ಸೋಽಶ್ವಮೇಧಫಲಂ ಪ್ರಾಪ್ಯ ತತೋ ಯಾತಿ ಪರಂ ಪದಂ ॥ ೨೫ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ ಭದ್ರಾಕಲ್ಪವರ್ಣನಂ ನಾಮ ಏಕಾಧಿಕಶತತಮೋಽಧ್ಯಾಯಃ.



---

೨೩. ಯಾವ ಮನುಷ್ಯನು ಈ ಸಪ್ತಮೀಕಲ್ಪವನ್ನು ಗ್ರಹಣ ಮಾಡಿ ಆ ಮೇಲೆ ಕಾಮಾಭಿಲಾಷೆಯಿಂದಲೋ ಭಯದಿಂದಲೋ ಪರಿತ್ಯಾಗಮಾಡಿದ್ದೇ ಆದರೆ ಅವನನ್ನು ಪತಿತನೆಂದೂ, ಪ್ರಾಜ್ಞನಲ್ಲವೆಂದೂ ಹೇಳಬೇಕು.

೨೪. ಅಯ್ಯಾ ವೀರನೇ! ಆದ್ದರಿಂದ ಸಪ್ತಮೀವ್ರತವನ್ನು ಧಾರಣೆ ಮಾಡು. ಇದನ್ನು ಎಂದಿಗೂ ಬಿಡಕೂಡದು. ಇದನ್ನು ಗ್ರಹಣಮಾಡಿ ಬಿಟ್ಟವನು ಮರ ವನ್ನೇರಿ ಬಿದ್ದವನಂತೆ (ಆ ರೂಢ ಪತಿತನೆನಿಸಿ) ದುಃಖಭಾಗಿಯಾಗುತ್ತಾನೆ.

೨೫. ಯಾವನು ಈ ಕಲ್ಪವನ್ನು ಮೊದಲಿನಿಂದ ಶ್ರವಣ ಮಾಡಿಸುವನೋ ಅವನು ಅಶ್ವಮೇಧಯಜ್ಞದ ಫಲವನ್ನು ಹೊಂದಿ ಆ ಮೇಲೆ ಪರಮಪದವನ್ನು (ಮೋಕ್ಷವನ್ನು) ಹೊಂದುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸಪ್ತಮೀಕಲ್ಪದಲ್ಲಿ ಭದ್ರಾ ಕಲ್ಪವರ್ಣನ ಎಂಬ ನೂರೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ದ್ವ್ಯಧಿಕಶತತಮೋಽಧ್ಯಾಯಃ

---

॥ ಸುಮಂತುರುವಾಚ ॥

ಏವಂ ಯಾ ದೇವದೇವಸ್ಯ ಸಪ್ತಮಿೀ ಭಾಸ್ಕರಸ್ಯ ತು ।
ಯಥಾ ಬಹೂನಾಂ ಭಾರ್ಯಾಣಾಂ ಭರ್ತುಃ ಕಾಚಿತ್ಪ್ರಿಯಾ ಭವೇತ್ ॥ ೧ ॥

ಸರ್ವಾಶ್ಚ ತಿಥಯೋ ಹ್ಯಸ್ಯ ಪ್ರಿಯಾಃ ಸೂರ್ಯಸ್ಯ ಭಾರತ ।
ತಸ್ಮಾದಸ್ಯಾಂ ನರೇಣೇಹ ಪೂಜನೀಯೋ ದಿವಾಕರಃ ॥ ೨ ॥

॥ ಶತಾನೀಕ ಉವಾಚ ॥

ತಿಥೀನಾಮಧಿಪಃ ಸೂರ್ಯಃ ಸರ್ವಾಸಾಂ ಕಥಿತೋ ಯದಿ ।
ಸಪ್ತಮ್ಯಾಮೇವ ಯಾಗೋಽಸ್ಯ ಕಿಮರ್ಥಂ ಕ್ರಿಯತೇ ಬುಧೈಃ ॥ ೩ ॥

---

## ನೂರೆರಡನೆಯ ಅಧ್ಯಾಯ

೧-೨. ಸುಮಂತುಮುನಿವರ್ಯರು ಹೇಳುತ್ತಾರೆ—ಲೋಕದಲ್ಲಿ ಒಬ್ಬ ಗಂಡನಿಗೆ ಇರುವ ಅನೇಕ ಹೆಂಡಿರಲ್ಲಿ ಯಾವಳೋ ಒಬ್ಬಳು ಮಾತ್ರ ಹೇಗೆ ಅತ್ಯಂತ ಪ್ರಿಯಳಾಗಿರುವಳೋ ಹಾಗೆಯೇ ಎಲ್ಲಾ ತಿಥಿಗಳೂ ದೇವದೇವನಾದ ಆ ಸೂರ್ಯನಿಂದ ಹುಟ್ಟಿದವುಗಳಾಗಿ ಸಮಾನ ಪ್ರಿಯಗಳೇ ಆಗಬೇಕಾಗಿದ್ದರೂ, ಸಪ್ತಮಿಯು ಮಾತ್ರ ಅವನಿಗೆ ವಿಶೇಷ ಪ್ರಿಯವಾಗಿರುವುದರಿಂದ ಆ ತಿಥಿಯಲ್ಲಿ ಸೂರ್ಯದೇವನನ್ನು ಮನುಷ್ಯರು ಆರಾಧಿಸಬೇಕು.

೩. ಶತಾನೀಕರಾಜನು ಕೇಳುತ್ತಾನೆ—ಸೂರ್ಯನು ಎಲ್ಲಾ ತಿಥಿಗಳಿಗೂ ಅಧಿಪನೆಂದು ಹೇಳಿಸಿಕೊಳ್ಳುತ್ತಿದ್ದರೂ ಪ್ರಾಜ್ಞರು ಸಪ್ತಮೀ ದಿನವೇ ಏತಕ್ಕೆ ಸೂರ್ಯನಿಗೆ ಆರಾಧನೆಯನ್ನು ಮಾಡುತ್ತಾರೆ ?

॥ ಸುಮಂತುರುವಾಚ ॥

ಇದಮರ್ಥಂ ಪುರಾ ಪೃಷ್ಟಃ ಸುರಜ್ಯೇಷ್ಠೋ ದಿವಿ ಸ್ಥಿತಃ ।
ವಿಷ್ಣುನಾ ಕುರುಶಾರ್ದೂಲ ತೇನೋಕ್ತಂ ಹರಯೇ ಯಥಾ ॥
ತಥಾ ತೇ ಸರ್ವಮಾಖ್ಯಾಸ್ಯೇ ಶೃಣುಷ್ವೈಕಮನಾ ವಿಭೋ ॥ ೪ ॥

ಸುಖಾಸೀನಂ ಸುರಜ್ಯೇಷ್ಠ ಪುರಾ ದೇವಂ ಪಿತಾಮಹಂ ।
ಪ್ರಣಮ್ಯ ಶಿರಸಾದೇವ ಕೃಷ್ಣೋ ವಚನಮಬ್ರವೀತ್ ॥ ೫ ॥

ಯದ್ಯೇಷ ಭಾನುಮಾನ್ ದೇವಃ ತಿಥೀನಾಮಧಿಪಃ ಸ್ಮೃತಃ ।
ಕಿಮರ್ಥಂ ಪೂಜ್ಯತೇ ಬ್ರಹ್ಮನ್ ಸಪ್ತಮ್ಯಾಂ ಬ್ರೂಹಿ ಮೇ ವಿಭೋ ॥ ೬ ॥

ಏವಮುಕ್ತಸ್ಸುರಜ್ಯೇಷ್ಠೋ ವಿಷ್ಣುನಾ ಪ್ರಭವಿಷ್ಣುನಾ ।
ಪ್ರಹಸ್ಯ ಭಗವಾನ್‌ದೇವ ಇದಂ ವಚನಮಬ್ರವೀತ್ ॥ ೭ ॥

---

೪. ಅಯ್ಯಾ ಕುರುಕುಲ ಶ್ರೇಷ್ಠನೇ! ಬಹುಕಾಲದ ಹಿಂದೆ ದೇವಲೋಕದಲ್ಲಿದ್ದ ಬ್ರಹ್ಮನನ್ನು ಕುರಿತು ವಿಷ್ಣುವು ಈ ವಿಚಾರವನ್ನು ಕೇಳಿದಾಗ ಬ್ರಹ್ಮನು ಈ ವಿಚಾರವಾಗಿ ಹೇಗೆ ಹೇಳಿದ್ದನೋ ಅದನ್ನು ಹಾಗೆಯೇ ನಾನೂ ನಿನಗೆ ಹೇಳುತ್ತೇನೆ. ಅಯ್ಯಾ ರಾಜನೇ, ಒಂದೇ ಮನಸ್ಸಿನಲ್ಲಿ ಕೇಳು.

೫. ಪೂರ್ವಕಾಲದಲ್ಲಿ ಒಂದು ದಿನ ಸುರಜ್ಯೇಷ್ಠನೂ, ಪಿತಾಮಹನೂ ಎನಿಸಿದ ಬ್ರಹ್ಮನು ಸುಖವಾಗಿ ಕುಳಿತಿರುವಾಗ ಶ್ರೀ ಕೃಷ್ಣನು ಶಿರಸ್ಸನ್ನು ಬಾಗಿ ನಮಸ್ಕಾರ ಮಾಡಿ ಈ ಮುಂದೆ ಹೇಳುವ ರೀತಿ ಮಾತನಾಡಿದನು.

೬. ಅಯ್ಯಾ ವಿಭುವಾದ ಬ್ರಹ್ಮನೇ! ಪ್ರಕಾಶಮಾನನಾದ ಸೂರ್ಯದೇವನು ಎಲ್ಲಾ ತಿಥಿಗಳಿಗೂ ಅಧಿಪನೆಂದು ತಿಳಿದಿದ್ದರೂ ಸಪ್ತಮಿಯಲ್ಲಿ ಪೂಜಿಸುವುದೇ ಏಕೆ ವಿಶೇಷವಾಗಿದೆ ಎಂಬುದನ್ನು ನನಗೆ ಹೇಳು.

೭. ಹೀಗೆಂದು ಪ್ರಭಾವಶಾಲಿಯಾದ ವಿಷ್ಣುವು ಕೇಳಲಾಗಿ ಆಗ ಸುರಜ್ಯೇಷ್ಠನಾದ ಬ್ರಹ್ಮನು ನಕ್ಕು ಈ ಮಾತನ್ನು ಹೇಳಿದನು.

॥ ಬ್ರಹ್ಮೋವಾಚ ॥

ದೇವೇಭ್ಯಸ್ತಿಥಯೋ ದತ್ತಾ ಭಾಸ್ಕರೇಣ ಮಹಾತ್ಮನಾ ।
ಮುಕ್ತ್ವೈತಾಂ ಸಪ್ತಮೀಂ ಸರ್ವಾಃ ಸಮ್ಯಗಾರಾಧನೇನ ವೈ ॥ ೮ ॥

ಯಸ್ಯೈವ ಯದ್ದಿನಂ ದತ್ತಂ ಸ ತಸ್ಯೈವಾಧಿಪಃ ಸ್ಮೃತಃ ।
ಸ್ವದಿನೇ ಪೂಜಿತಸ್ತಸ್ಮಾತ್ ಸ್ವಮಂತ್ರೈರ್ವರದೋ ಭವೇತ್ ॥ ೯ ॥

॥ ವಿಷ್ಣುರುವಾಚ ॥

ಅರ್ಕೇಣ ಕತರತ್ಕಸ್ಮೈ ದಿನಂ ದತ್ತಂ ಮಹಾತ್ಮನಾ ।
ಸ್ವದಿನೇ ಪೂಜಿತೇಽಸ್ಮಿನ್ ವೈ ಸ್ವಮಂತ್ರೈರ್ಜಾಯತೇ ಶುಭಂ ॥ ೧೦ ॥

॥ ಬ್ರಹ್ಮೋವಾಚ ॥

ಅಗ್ನಯೇ ಪ್ರತಿಪದ್ದತ್ತಾ ದ್ವಿತೀಯಾ ಬ್ರಹ್ಮಣೇ ತಥಾ ।
ತೃತೀಯಾ ಯಕ್ಷರಾಜಾಯ ಗಣೇಶಾಯ ಚತುರ್ಥ್ಯಪಿ ॥ ೧೧ ॥

---

೮. ಮಹಾತ್ಮನಾದ ಸೂರ್ಯನು ಸಪ್ತಮಿಯನ್ನು ಒಂದನ್ನು ಬಿಟ್ಟು ಮಿಕ್ಕ ಎಲ್ಲಾ ತಿಥಿಗಳನ್ನೂ ದೇವತೆಗಳಿಗೆ ಕೊಟ್ಟನು. ಅವರು ತನ್ನನ್ನು ಚೆನ್ನಾಗಿ ಆರಾಧನೆ ಮಾಡಿದುದರಿಂದ ಸೂರ್ಯನು ಹೀಗೆ ಮಾಡಿದನು.

೯. ಯಾರುಯಾರಿಗೆ ಯಾವಯಾವ ದಿನ ತಿಥಿ ಕೊಡಲ್ಪಟ್ಟಿತೋ ಅವರೇ ಅದಕ್ಕೆ ಅಧಿಪತಿ ಎಂದು ಗೊತ್ತಾಯಿತು. ತನ್ನ ಅಧಿಪತ್ಯಕ್ಕೊಳಗಾದ ಆಯಾ ತಿಥಿಗಳಲ್ಲಿ ಆದರ ಅಧಿಪನು ತನ್ನ ಮಂತ್ರಪೂರ್ವಕವಾಗಿ ನಡೆದ ಪೂಜೆಯನ್ನು ಸ್ವೀಕರಿಸಿ ವರವನ್ನು ಕೊಡುವನು.

೧೦. ವಿಷ್ಣುವು ಹೇಳುತ್ತಾನೆ—ಮಹಾತ್ಮನಾದ ಸೂರ್ಯನು ಯಾವ ದೇವನಿಗೆ ಯಾವ ತಿಥಿಯನ್ನು ಕೊಟ್ಟನೋ ಆ ದೇವನನ್ನು ಆ ತಿಥಿಯಲ್ಲಿ ಅವನ ಮಂತ್ರಗಳಿಂದ ಪೂಜಿಸಿದರೆ ನಿಜವಾಗಿಯೂ ಶುಭವಾಗಲೇಬೇಕು ಎಂದನು.

೧೧. ಬ್ರಹ್ಮನು ಹೇಳುತ್ತಾನೆ—ಪ್ರತಿಪತ್ತಿಥಿಯನ್ನು ಅಗ್ನಿಗೂ, ದ್ವಿತೀಯೆಯನ್ನು ಬ್ರಹ್ಮನಿಗೂ, ತೃತೀಯೆಯನ್ನು ಕುಬೇರನಿಗೂ, ಚತುರ್ಥಿಯನ್ನು ಗಣೇಶನಿಗೂ ಕೊಟ್ಟನು.

**ಪಂಚಮೀಂ ನಾಗರಾಜಾಯ ಕಾರ್ತಿಕೇಯಾಯ ಷಷ್ಠ್ಯಪಿ**
**ಸಪ್ತಮೀಂ ಸ್ಥಾಪಿತಾತ್ಮಾರ್ಥಂ ದತ್ವಾ ರುದ್ರಾಯ ಚಾಷ್ಟಮೀಂ ॥ ೧೨ ॥**

**ದುರ್ಗಾಯೈ ನವಮೀಂ ದತ್ವಾ ಯಮಾಯ ದಶಮೀಂ ಸ್ವಯಂ ।**
**ವಿಶ್ವೇಭ್ಯಶ್ಚಾಥ ದೇವೇಭ್ಯೋ ದತ್ವಾ ಚೈಕಾದಶೀ ಸದಾ ॥ ೧೩ ॥**

**ದ್ವಾದಶೀ ವಿಷ್ಣವೇ ದತ್ವಾ ಮದನಾಯ ತ್ರಯೋದಶೀ ।**
**ಚತುರ್ದಶೀ ಶಂಕರಾಯ ದತ್ವಾ ಸೋಮಾಯ ಪೂರ್ಣಿಮಾ ॥ ೧೪ ॥**

**ಪಿತೃಣಾಂ ಭಾನುನಾ ದತ್ವಾ ಪುಣ್ಯಾ ಪಂಚದಶೀ ಸದಾ ।**
**ತಿಥ್ಯಃ ಪಂಚದಶ್ಯೈತಾಸ್ತು ಸೋಮಸ್ಯ ಪರಿಕೀರ್ತಿತಾ ॥ ೧೫ ॥**

**ಪ್ರೀಯತೇ ಕೃಷ್ಣಪಕ್ಷೇ ತು ಸುರ್ವೈರೇಭಿರ್ಯಥೋದಿತೈಃ ।**
**ಶುಕ್ಲಪಕ್ಷೇ ಪ್ರಪೂರ್ಯಂತೇ ಷೋಡಶ್ಯಾ ಕಲಯಾ ಸಹ ॥ ೧೬ ॥**

---

೧೨. ಪಂಚಮಿಯನ್ನು ನಾಗರಾಜನಿಗೂ, ಷಷ್ಠಿಯನ್ನು ಷಣ್ಮುಖನಿಗೂ, ಕೊಟ್ಟು ಸಪ್ತಮಿಯನ್ನು ತನಗೆ ಇಟ್ಟುಕೊಂಡನು. ಅಷ್ಟಮಿಯನ್ನು ರುದ್ರನಿಗೆ ಕೊಟ್ಟನು.

೧೩. ದುರ್ಗೆಗೆ ನವಮಿಯೂ, ಯಮನಿಗೆ ದಶಮಿಯೂ, ವಿಶ್ವೇದೇವತೆಗಳಿಗೆ ಏಕಾದಶಿಯೂ ದತ್ತವಾದುವು.

೧೪. ವಿಷ್ಣುವಿಗೆ ದ್ವಾದಶಿಯೂ, ಮನ್ಮಥನಿಗೆ ತ್ರಯೋದಶಿಯೂ, ಶಿವನಿಗೆ ಚತುರ್ದಶಿಯೂ, ಚಂದ್ರನಿಗೆ ಪೂರ್ಣಿಮೆಯೂ ಕೊಡಲ್ಪಟ್ಟುವು.

೧೫. ಪುಣ್ಯಕರವೆನಿಸಿದ ಅಮಾವಾಸ್ಯೆ ಎಂಬ ಹದಿನೈದನೆಯ ತಿಥಿಯು ಸೂರ್ಯನಿಂದ ಪಿತೃಗಳಿಗೆ ಕೊಡಲ್ಪಟ್ಟಿತು. ಈ ಹದಿನೈದು ತಿಥಿಗಳೂ ಚಂದ್ರನವೆಂದು ತಿಳಿಯಬೇಕು.

೧೬. ಕೃಷ್ಣಪಕ್ಷದಲ್ಲಿ ಹಿಂದೆ ಹೇಳಿದ ಕ್ರಮದಲ್ಲೇ ಆಯಾ ದೇವತೆಗಳಿಂದಲೇ ಆಯಾ ತಿಥಿಗಳ ಕಲೆಗಳು ದಾನಮಾಡಲ್ಪಡುತ್ತವೆ. ಶುಕ್ಲಪಕ್ಷದಲ್ಲಿ ಹದಿನಾರನೆಯ ಕಲೆಯೊಡನೆ ಅವು ಪೂರ್ಣಗಳಾಗುತ್ತವೆ.

ಅಕ್ಷಯಾ ಸಾ ಸದೈಕೈಕಾ ತತ್ರ ಸಾಕ್ಷಾತ್ ಸ್ಥಿತೋ ರವಿಃ ।
ಕ್ಷಯವೃದ್ಧಿಕರೋಹ್ಯೇವಂ ತೇನಾಸೌ ತತ್ಪತಿಃ ಸ್ಮೃತಃ ॥ ೧೭ ॥

ದದಾತಿಗತಿಮಕ್ಷೀಣಾಂ ಧ್ಯಾನಮಾತ್ರಸ್ಥಿತೋ ರವಿಃ ।
ಅನ್ಯೇಪೀಷ್ಟಾನ್ಯಥಾಕಾಮಾನ್ ಪ್ರಯಚ್ಛಂತಿ ಸುಖಂ ನನು ॥ ೧೮ ॥

ತಥಾ ಸರ್ವಂ ಪ್ರವಕ್ಷ್ಯಾಮಿ ಕೃಷ್ಣ ಸಂಕ್ಷೇಪತಃ ಶೃಣು ।
ಅಗ್ನಿಮಿಷ್ಟ್ವಾ ಚ ಹುತ್ವಾ ಚ ಪ್ರತಿಪದ್ಯಮೃತಂ ಘೃತಂ ।
ಹವಿಷಾ ಸರ್ವಧಾನ್ಯಾನಿ ಪ್ರಾಪ್ನುಯಾದಮಿತಂ ಧನಂ ॥ ೧೯ ॥

ಬ್ರಹ್ಮಾಣಂ ಚ ದ್ವಿತೀಯಾಯಾಂ ಸಂಪೂಜ್ಯ ಬ್ರಹ್ಮಚಾರಿಣಂ ।
ಭೋಜಯಿತ್ವಾ ಚ ವಿದ್ಯಾನಾಂ ಸರ್ವಸಾಂ ಪಾರಗೋ ಭವೇತ್ ॥ ೨೦ ॥

ತೃತೀಯಾಯಾಂ ಚ ವಿತ್ತೇಶಂ ವಿತ್ತಾಢ್ಯೋ ಜಾಯತೇ ಧ್ರುವಂ ।
ಕ್ರಯಾದಿ ವ್ಯವಹಾರೇಷು ಲಾಭೋ ಬಹುಗುಣೋ ಭವೇತ್ ॥ ೨೧ ॥

---

೧೭. ಆ ಹದಿನಾರನೆಯ ಕಲೆಯೊಂದೇ ಅಕ್ಷಯವಾದುದು. ಅದರಲ್ಲಿ ಸೂರ್ಯನು ಪ್ರತ್ಯಕ್ಷನಾಗಿರುವನು. ಹೀಗೆ ಸೂರ್ಯನು ಕ್ಷಯವೃದ್ಧಿಕರನಾದುದರಿಂದಲೇ ಆ ತಿಥಿಗಳಿಗೆ ಪತಿ ಎನಿಸಿಕೊಂಡಿದ್ದಾನೆ.

೧೮. ನಮ್ಮ ಧ್ಯಾನದಲ್ಲಿ ನಿಂತ ಸೂರ್ಯನು ನಮಗೆ ಅಕ್ಷೀಣವಾದ ಗತಿಯನ್ನು ಕೊಡುತ್ತಾನೆ. ಇತರ ದೇವರುಗಳು ಬೇಕಾದ ಹಾಗೆ ಇಷ್ಟಗಳನ್ನು ಸುಖವಾಗಿ ಕೊಡುತ್ತಾರೆ.

೧೯. ಎಲೈ ಕೃಷ್ಣನೇ! ಎಲ್ಲವನ್ನೂ ಸಂಕ್ಷೇಪವಾಗಿ ಹೇಳುತ್ತೇನೆ ಕೇಳು. ಪ್ರತಿಪತ್ತಿಥಿಯಲ್ಲಿ ಅಗ್ನಿಯನ್ನು ಪೂಜಿಸಿ ಅಮೃತವೆನಿಸಿದ ತುಪ್ಪವೆಂಬ ಹೋಮ ದ್ರವ್ಯದಿಂದ ಹೋಮ ಮಾಡಿ ಅಧಿಕವಾದ ಧನವನ್ನು ಹೊಂದುತ್ತಾನೆ.

೨೦. ದ್ವಿತೀಯಾ ತಿಥಿಯಲ್ಲಿ ಬ್ರಹ್ಮನನ್ನು ಪೂಜಿಸಿ ಬ್ರಾಹ್ಮಣರಿಗೆ ಭೋಜನ ಮಾಡಿಸಿದರೆ ಸರ್ವ ವಿದ್ಯೆಗಳಲ್ಲೂ ಪಾರಂಗತನಾಗುವನು.

೨೧ ತೃತೀಯಾತಿಥಿಯಲ್ಲಿ ಕುಬೇರನನ್ನು ಪೂಜಿಸಿದರೆ ನಿಜವಾಗಿಯೂ ದ್ರವ್ಯವಂತನಾಗುವನು. ಕ್ರಯಾದಿ ವ್ಯವಹಾರಗಳಲ್ಲಿ ಒಂದಕ್ಕೆ ಅನೇಕದಷ್ಟು ಲಾಭ ಬರುವುದು.

ಗಣೇಶ ಪೂಜನಂ ಕುರ್ಯಾಚ್ಚತುರ್ಥ್ಯಾಂ ಸರ್ವಕರ್ಮಸು ।
ಅವಿಘ್ನಂ ವಿದ್ವಿಷಾಂ ವಿಘ್ನಂ ಕುರ್ಯಾಚ್ಚಾಸ್ಯ ನ ಸಂಶಯಃ ॥ ೨೨ ॥

ನಾಗಾನಿಷ್ಟ್ವಾ ಚ ಪಂಚಮ್ಯಾಂ ನ ವಿಷೈರಭಿಭೂಯತೇ ।
ಸ್ತ್ರಿಯಂ ಚ ಲಭತೇ ಪುತ್ರಾನ್ ಪರಾಂ ಚ ಶ್ರಿಯಮಾಪ್ನುಯಾತ್ ॥ ೨೩ ॥

ಸಂಪೂಜ್ಯ ಕಾರ್ತಿಕೇಯಂ ತು ಷಷ್ಠ್ಯಾಂ ಶ್ರೇಷ್ಠಃ ಪ್ರಜಾಯತೇ ।
ಮೇಧಾವೀ ರೂಪಸಂಪನ್ನೋ ದೀರ್ಘಾಯುಃ ಕೀರ್ತಿವರ್ಧನಃ ॥ ೨೪ ॥

ಸಪ್ತಮ್ಯಾಂ ಪೂಜ್ಯ ರಕ್ಷೇಶಂ ಚಿತ್ರಭಾನುಂ ದಿವಾಕರಂ ।
ಅಷ್ಟಮ್ಯಾಂ ಪೂಜಿತೋ ದೇವೋ ಗೋವೃಷಾಭರಣೋ ಹರಃ ॥ ೨೫ ॥

ಜ್ಞಾನಂ ದದಾತಿ ವಿಪುಲಂ ಕಾಂತಿಂ ಚ ವಿಪುಲಂ ತಥಾ ।
ಮೃತ್ಯುಹಾ ಜ್ಞಾನದಶ್ಚೈವ ಪಾಪಹಾ ಚ ಪ್ರಪೂಜಿತಃ ॥ ೨೬ ॥

---

೨೨. ಎಲ್ಲಾ ಕರ್ಮಗಳ ಆರಂಭದಲ್ಲೂ, ಚತುರ್ಥಿಯ ದಿನದಲ್ಲಿಯೂ ಗಣೇಶನ ಪೂಜೆಮಾಡಬೇಕು. ಇದರಿಂದ ತನ್ನ ಕಾರ್ಯಗಳಿಗೆ ಅವಿಘ್ನವೂ ಶತ್ರುಕಾರ್ಯಕ್ಕೆ ವಿಘ್ನವೂ ಉಂಟಾಗುವುದು ಸಂಶಯವಿಲ್ಲ.

೨೩. ಅಲ್ಲದೆ ಪಂಚಮಿಯಲ್ಲಿ ನಾಗಪೂಜೆ ಮಾಡಿದರೆ ವಿಷಗಳಿಂದ ತೊಂದರೆಯಾಗುವುದಿಲ್ಲ. ಸ್ತ್ರೀಪ್ರಾಪ್ತಿ, ಪುತ್ರಪ್ರಾಪ್ತಿ, ಉತ್ತಮ ಸಂಪತ್ಪ್ರಾಪ್ತಿ ಇವು ಆಗುವುವು.

೨೪. ಷಷ್ಠಿಯ ದಿನ ಷಣ್ಮುಖನನ್ನು ಪೂಜಿಸಿದವನು ಶ್ರೇಷ್ಠನಾಗುತ್ತಾನೆ.

೨೫-೨೬. ಸಪ್ತಮಿಯ ದಿನ ರಕ್ಷೇಶನಾದ ಚಿತ್ರಭಾನು ಎಂದರೆ ಸೂರ್ಯನನ್ನು ಪೂಜಿಸಿ ಪ್ರಶಸ್ತವಾದ ಮೇಧಾಶಕ್ತಿಯುಳ್ಳವನೂ ರೂಪವುಳ್ಳವನೂ ದೀರ್ಘಾಯುಷ್ಮಂತನೂ ಕೀರ್ತಿವೃದ್ಧಿಕರನೂ ಆಗುವವನು. ಅಷ್ಟಮಿಯದಿನ ವೃಷಭಕೇತನನಾದ ಶಿವನನ್ನು ಪೂಜಿಸಿದರೆ, ಹೆಚ್ಚಾದ ಜ್ಞಾನವನ್ನೂ ಹೆಚ್ಚಾದ ಕಾಂತಿಯನ್ನೂ ಪಡೆವನು. ಪೂಜಾಫಲದಿಂದ ಮೃತ್ಯುಭಯವನ್ನು ತಪ್ಪಿಸಿಕೊಂಡು ಪಾಪರಹಿತನಾಗುವನು.

ದುರ್ಗಾಂ ಸಂಪೂಜ್ಯ ದುರ್ಗಾಣಿ ನವಮ್ಯಾಂತ ರತೀಚ್ಛಯಾ ।
ಸಂಗ್ರಾಮೇ ವ್ಯವಹಾರೇ ಚ ಸದಾ ವಿಜಯಮಶ್ನುತೇ ॥ ೨೭ ॥

ದಶಮ್ಯಾಂ ಯಮಮಾತಿಷ್ಠೇತ್ಸರ್ವವ್ಯಾಧಿಹರೋ ಧ್ರುವಂ ।
ನರಕಾದಥ ಮೃತೋಶ್ಚ ಸಮುದ್ಧರತಿ ಮಾನವಂ ॥ ೨೮ ॥

ಏಕಾದಶ್ಯಾಂ ಯಥೋದ್ದಿಷ್ಟಾಃ ವಿಶ್ವೇದೇವಾ ಪ್ರಪೂಜಿತಾಃ ।
ಪ್ರಜಾಂ ಪಶುಂ ಧನಂ ಧಾನ್ಯಂ ಪ್ರಯಚ್ಛಂತಿ ಮಹೀಂ ತಥಾ ॥ ೨೯ ॥

ದ್ವಾದಶ್ಯಾಂ ವಿಷ್ಣುಮಿಷ್ಟ್ವೇಹ ಸರ್ವದಾ ವಿಜಯೀ ಭವೇತ್ ।
ಪೂಜ್ಯಶ್ಚ ಸರ್ವಲೋಕಾನಾಂ ಯಥಾ ಗೋಪತಿಗೋಕರಃ ॥ ೩೦ ॥

ಕಾಮದೇವಂ ತ್ರಯೋದಶ್ಯಾಂ ಸುರೂಪೋ ಜಾಯತೇ ಧ್ರುವಂ ।
ಇಷ್ಟಾಂ ರೂಪವತೀಂ ಭಾರ್ಯಾಂ ಲಭೇತ್ಕಾಮಾಂಶ್ಚ ಪುಷ್ಕಲಾನ್ ॥ ೩೧ ॥

---

೨೭. ನವಮಿಯಲ್ಲಿ ದುರ್ಗಾ ಪೂಜೆಮಾಡಿದರೆ, ಮಹಾ ಕಷ್ಟಗಳಿಂದ ಲೀಲಾಜಾಲವಾಗಿ ಪಾರಾಗುತ್ತಾನೆ. ಯುದ್ಧದಲ್ಲೂ ವ್ಯವಹಾರದಲ್ಲೂ ಯಾವಾಗಲೂ ವಿಜಯವನ್ನು ಹೊಂದುತ್ತಾನೆ.

೨೮. ದಶಮಿಯ ದಿನ ಸರ್ವರೋಗಃ ಹರನಾದ ಯಮನನ್ನು ಪೂಜಿಸಿದರೆ, ಅವನ ಸರ್ವರೋಗಗಳೂ ಖಂಡಿತವಾಗಿ ಪರಿಹಾರವಾಗುವುವು. ಆ ಯಮನು ಮನುಷ್ಯನನ್ನು ನರಕದಿಂದಲೂ, ಮೃತ್ಯುವಿನಿಂದಲೂ ಉದ್ಧರಿಸುತ್ತಾನೆ.

೨೯. ಏಕಾದಶಿಯ ದಿನ ಆ ತಿಥಿಗೆ ಉದ್ದಿಷ್ಟರಾದ ವಿಶ್ವದೇವರನ್ನು ಪೂಜಿಸಿದರೆ ಅವರು ಸಂತತಿಯನ್ನೂ, ದನಕರುಗಳನ್ನೂ, ಧನ ಧಾನ್ಯಗಳನ್ನೂ ಭೂಮಿಯನ್ನೂ ಕೊಡುವರು.

೩೦. ದ್ವಾದಶಿಯಲ್ಲಿ ವಿಷ್ಣು ಪೂಜೆಯನ್ನು ಮಾಡಿದರೆ ಸರ್ವದಾ ವಿಜಯಶಾಲಿಯಾಗುವನು. ಸರ್ವಭೂಮಿಗೆ ಪತಿಯೂ, ಕಿರಣಪ್ರಸಾರಕನೂ ಆದ ಸೂರ್ಯನಂತೆ ಸರ್ವಜನರಿಗೂ ಪೂಜ್ಯನಾಗುವನು.

೩೧ ತ್ರಯೋದಶಿಯ ದಿನ ಕಾಮದೇವನನ್ನು ಪೂಜಿಸಲು ಬಹು ಸುಂದರನಾಗುವನು. ಮತ್ತು ರೂಪವತಿಯಾದ ಹೆಂಡತಿ ಸಿಕ್ಕುವಳು. ವಿಶೇಷವಾಗಿ ಅವನ ಆಶೆಗಳು ನೆರವೇರುವುವು.

ದೃಷ್ಟ್ವೇಶ್ವರಂ ಚತುರ್ದಶ್ಯಾಂ ಸರ್ವೈರೈಶ್ವರ್ಯಸಮನ್ವಿತಃ ।
ಬಹುಪುತ್ರೋ ಬಹುಧನೋ ತಥಾಸ್ಯಾನ್ನಾತ್ರಸಂಶಯಃ ॥ ೩೨ ॥

ಪೌರ್ಣಮಾಸ್ಯಾಂ ತು ಯಃ ಸೋಮಂ ಪೂಜಯೇದ್ಭಕ್ತಿಮಾನ್ನರಃ ।
ಸ್ವಾಧಿಪತ್ಯಂ ಭವೇತ್ತಸ್ಯ ಸಂಪೂರ್ಣಂ ಚ ನ ಹೀಯತೇ ॥ ೩೩ ॥

ಪಿತರಃ ಸ್ವದಿನೇ ದಿಂಡೇ ಹೃಷ್ಟಾಃ ಕುರ್ವಂತಿ ಸರ್ವದಾ ।
ಪ್ರಜಾವೃದ್ಧಿಂ ಧನಂ ರಕ್ಷಾಂ ಚಾಯುಷ್ಯಂ ಬಲಮೇವ ಚ ॥ ೩೪ ॥

ಉಪವಾಸಂ ವಿನಾಪ್ಯೇತೇ ಭವಂತ್ಯುಕ್ತಫಲಪ್ರದಾಃ ।
ಪೂಜಯಾ ಜಪಹೋಮೈಶ್ಚ ತೋಷಿತಾ ಭಕ್ತಿತಃ ಸದಾ ॥ ೩೫ ॥

ಮೂಲಮಂತ್ರೈಶ್ಚ ಸಂಜ್ಞಾಭಿರಂಶಮಂತ್ರೈಶ್ಚ ಕೀರ್ತಿತಾಃ ।
ಪೂರ್ವವತ್ಪದ್ಮಮಧ್ಯಸ್ಥಾಃ ಕರ್ತವ್ಯಾಶ್ಚ ತಿಥೀಶ್ವರಾಃ ॥ ೩೬ ॥

---

೩೨. ಚತುರ್ದಶಿಯ ದಿನ ಪ್ರದೋಷದಲ್ಲಿ ಈಶ್ವರ ದರ್ಶನ ಮಾಡಿದರೆ ಸರ್ವೈಶ್ವರ್ಯಯುಕ್ತನೂ, ಬಹು ಪುತ್ರವಂತನೂ, ಬಹು ಧನಿಕನೂ ಆಗುವನು ಸಂದೇಹವಿಲ್ಲ.

೩೩. ಪೌರ್ಣಮಿಯದಿನ ಯಾವನು ಚಂದ್ರನನ್ನು ಪೂಜಿಸುವನೋ ಅವನಿಗೆ ಎಲ್ಲಾ ವಿಷಯದಲ್ಲೂ ಸ್ವಾಧಿಪತ್ಯ ಉಂಟಾಗುವುದು. ಮತ್ತು ಸಂಪೂರ್ಣವಾಗಿ ಆತನು ಯಾವ ವಿಷಯದಲ್ಲೂ ಯಾರಿಗೂ ಕಡೆಯಾಗುವುದಿಲ್ಲ.

೩೪. ಅಯ್ಯಾ ದಿಂಡಿಯೇ! ಪಿತೃದೇವತೆಗಳು ತಮ್ಮ ಮೃತತಿಥಿಯ ದಿನದಲ್ಲಿ ಮತ್ತು ಅಮಾವಾಸ್ಯೆಯಲ್ಲಿ ಹೃಷ್ಟರಾಗಿ ಪ್ರಜಾವೃದ್ಧಿಯನ್ನೂ, ಧನವನ್ನೂ, ರಕ್ಷೆಯನ್ನೂ, ಆಯುಸ್ಸನ್ನೂ, ಬಲವನ್ನೂ ಯಾವಾಗಲೂ ಉಂಟುಮಾಡುತ್ತಾರೆ.

೩೫-೩೬. ಆಯಾ ತಿಥಿಗಳಲ್ಲಿ ಉಪವಾಸ ಮಾಡದಿದ್ದರೂ ಇವರು ಉಕ್ತ ಫಲವನ್ನು ಕೊಡುತ್ತಾರೆ. ಪೂಜೆಯಿಂದಲೂ, ಜಪದಿಂದಲೂ, ಹೋಮದಿಂದಲೂ ಸಂತುಷ್ಟರಾಗುವರು. ಮೂಲಮಂತ್ರಗಳಿಂದಲೂ, ನಾಮೋಚ್ಚಾರಣನಿಂದಲೂ, ಅಂಶಮಂತ್ರಗಳಿಂದಲೂ ಕೀರ್ತನ ಮಾಡಿ ಮೊದಲಿನಂತೆ ತಿಥ್ಯಧಿಪತಿಗಳನ್ನು ಪದ್ಮಮಧ್ಯದಲ್ಲಿ ಇರುವಂತೆ ಭಾವಿಸಬೇಕು.

ಗಂಧಪುಷ್ಪೋಪಹಾರೈಶ್ಚ ಯಥಾಶಕ್ತಿ ವಿಧೀಯತೇ ।
ಪೂಜಾ ಬಾಹ್ಯೇನ ವಿಧಿನಾ ಕೃತಾಪಿ ಚ ಫಲಪ್ರದಾ ॥ ೩೭ ॥

ಆಜ್ಯಧಾರಾಸಮಿದ್ಭಿಶ್ಚ ದಧಿಕ್ಷೀರಾನ್ನಮಾಕ್ಷಿಕೈಃ ।
ಯಥೋಕ್ತಫಲದೋ ಹೋಮೋ ಜಪಃ ಶಾಂತೇನ ಚೇತಸಾ ॥ ೩೮ ॥

ಮೂಲಮಂತ್ರಾಶ್ಚ ಸಂಜ್ಞಾಭಿರಂಗಮಂತ್ರಾಶ್ಚ ಕೀರ್ತಿತಾಃ ।
ಕೃತ್ವಾ ಯಜ್ಞಾನ್ ದಶ ದ್ವೌ ಚ ಫಲಾನ್ಯೇತಾನಿ ಭಕ್ತಿತಃ ॥ ೩೯

ಯಥೋಕ್ತಾನಿ ತಥೋಕ್ತಾನಿ ಲಭೇತೇಹಾಧಿಕಾನ್ಯಪಿ ।
ಇಹ ಯಸ್ಮಾದ್ಯಥಾನ್ಯಸ್ಮಿನ್ಲೋಕೇ ವಸೇತ್ಸ ಸುಖೀ ಭವೇತ್ ॥ ೪೦ ॥

ತೇಷಾಂ ಲೋಕೇಷು ಮಂತ್ರಜ್ಞೋ ಯಾವತ್ತೇಷಾಂ ತಿಥಿಃ ಸ್ಥಿತಾ ।
ದಹೇತ್ತಸ್ಮಾತ್ತಥಾರಿಷ್ಟಂ ತದ್ರೂಪೋ ಜಾಯತೇ ನರಃ ॥ ೪೧ ॥

---

೩೭. ತನಗೆ ಅನುಕೂಲವಿದ್ದಷ್ಟುಮಟ್ಟಿಗೆ ಗಂಧ, ಹೂವು, ನೈವೇದ್ಯದ್ರವ್ಯ ಇವುಗಳಿಂದ ಆರಾಧಿಸಬೇಕು. ಈ ಪೂಜೆಯನ್ನು ಬಾಹ್ಯವಿಧಿಯಿಂದ ಮಾಡಿದವರೂ ಫಲವನ್ನು ಹೊಂದುತ್ತಾರೆ.

೩೮. ತುಪ್ಪದ ಧಾರೆ, ಸಮಿತ್ತುಗಳು, ಮೊಸರು, ಕ್ಷೀರಾನ್ನ, ಜೇನುತುಪ್ಪ ಈ ದ್ರವ್ಯಗಳಿಂದ ಹೋಮ ಮಾಡಿದರೂ ಶಾಂತಚಿತ್ತನಾಗಿ ಜಪಮಾಡಿದರೂ ಯಥೋಕ್ತವಾದ ಫಲವುಂಟಾಗುವುದು.

೩೯-೪೦. ಹೋಮಕ್ಕೆ ಸಂಜ್ಞಾಯುಕ್ತಗಳಾದ ಮೂಲಮಂತ್ರಗಳನ್ನೂ ಮತ್ತು ಅಂಗ ಮಂತ್ರಗಳನ್ನೂ ತಿಳಿಸಿದುದಾಯಿತು. ಈ ಮಂತ್ರಪುರಸ್ಸರವಾಗಿ ಹನ್ನೆರಡು ಯಜ್ಞಗಳನ್ನೂ ಭಕ್ತಿಯಿಂದ ಮಾಡಿದವನು, ಶಾಸ್ತ್ರದಲ್ಲಿ ಉಕ್ತವಾದ ಫಲಗಳನ್ನೂ ಇನ್ನೂ ಅಧಿಕವಾದ ಫಲಗಳನ್ನೂ ಹೊಂದುತ್ತಾನೆ. ಯಾವ ಕರ್ಮದಿಂದಲೇ ಆಗಲಿ ಈ ಲೋಕದಲ್ಲಿ ಹೇಗೆ ಫಲ ಹೊಂದುವನೋ, ಪರಲೋಕದಲ್ಲಿಯೂ ಕೂಡ ಹಾಗೆಯೇ ಫಲ ಹೊಂದಿ ಸುಖಿಯಾಗುವನು.

೪೧. ಎಷ್ಟು ಕಾಲದವರೆಗೆ ಆ ದೇವತೆಗಳ ತಿಥಿಯು ಪ್ರಚಾರದಲ್ಲಿರುವುದೋ ಅಷ್ಟು ಕಾಲದವರೆಗೆ ಮಂತ್ರವನ್ನು ತಿಳಿದವನು ಆ ತಿಥ್ಯಭಿಮಾನ ದೇವತೆಗಳ ಲೋಕವಲ್ಲಿ ವಾಸಮಾಡುತ್ತಾನೆ. ಮತ್ತು ತನ್ನ ಅರಿಷ್ಟಗಳನ್ನು ಹೋಗಲಾಡಿಸಿಕೊಳ್ಳುವುದಲ್ಲದೆ, ಆ ಲೋಕದ ದೇವತೆಯ ರೂಪವನ್ನೇ ಹೊಂದಿರುತ್ತಾನೆ.

ಸುರೂಪೋ ಧರ್ಮಸಂಪನ್ನೋ ಕ್ಷಪಿತಾರಿರ್ಮಹೀಪತಿಃ ।
ಸ್ತ್ರೀ ವಾ ನಪುಂಸಕೋ ವಾಪಿ ಜಾಯತೇ ಪುರುಷೋತ್ತಮಃ ॥ ೪೨ ॥

ಇತ್ಯೇತಾಃ ಕಥಿತಾಃ ಕೃಷ್ಣ ತಿಥಯೋ ಯಾ ಮಯಾ ತವ ।
ನಕ್ಷತ್ರದೇವತಾಃ ಸರ್ವಾ ನಕ್ಷತ್ರೇಷು ವ್ಯವಸ್ಥಿತಾಃ ॥ ೪೩ ॥

ಇಷ್ಟಾನ್ ಕಾಮಾನ್ ಪ್ರಯಚ್ಛಂತಿ ಯಸ್ತಾನ್ ವಕ್ಷ್ಯೇ ಮಹೀಧರ ।
ಚಂದ್ರಮಾ ಯತ್ರ ತಾರಾಯಾಂ ಮಹಾವೃದ್ಧ್ಯಾ ಸ್ಥಿತಃ ಸದಾ ॥ ೪೪ ॥

ಉಕ್ತಸ್ತು ದೇವತಾಯಜ್ಞಸ್ತದಾಸ್ಯಾಂ ಫಲದೋ ಭವೇತ್ ।
ದೇವತಾಶ್ಚ ಪ್ರವಕ್ಷ್ಯಾಮಿ ನಕ್ಷತ್ರಾಣಾಂ ಯಥಾಕ್ರಮಂ ॥ ೪೫ ॥

ನಕ್ಷತ್ರಾಣಿ ಚ ಸರ್ವಾಣಿ ಯಜ್ಞಾಂಶ್ಚೈವ ಪೃಥಕ್ಪೃಥಕ್ ।
ಅಶ್ವಿನ್ಯಾಮಶ್ವಿನಾವಿಷ್ಟ್ವಾ ದೀರ್ಘಾಯುರ್ಜಾಯತೇ ನರಃ ॥ ೪೬ ॥

---

೪೨. ಉಕ್ತಕ್ರಮದಂತೆ ಪೂಜೆಮಾಡಿದರೆ ಪೂಜೆಮಾಡಿದ ವ್ಯಕ್ತಿಯು ಸ್ತ್ರೀಯಾಗಲೀ ನಪುಂಸಕನಾಗಲೀ ಈ ಪೂಜಾಫಲದಿಂದ ಶ್ರೇಷ್ಠನಾದ ಪುರುಷನಾಗಿ ಜನಿಸುತ್ತಾನೆ.

೪೩. ಅಯ್ಯಾ ಮಹೀಧರನಾದ ಕೃಷ್ಣನೇ! ಹೀಗೆ ನಾನು ಯಾವ ತಿಥಿಗಳನ್ನು ಹೇಳಿದೆನೋ ಆ ತಿಥಿಗಳಿಗೂ ಮತ್ತು ಎಲ್ಲಾ ನಕ್ಷತ್ರಗಳಿಗೂ ಗೊತ್ತಾದ ದೇವತೆಗಳ ಹೆಸರುಗಳು, ಆರಾಧಕರಿಗೆ ಅವರು ಕೊಡುವ ಫಲಗಳು, ಇವುಗಳನ್ನು ಈಗ ಹೇಳುತ್ತೇನೆ ಕೇಳು.

೪೪. ಚಂದ್ರನು ಯಾವ ನಕ್ಷತ್ರದಲ್ಲಿ ಮಹಾವೃದ್ಧಿಯಿಂದ ಇರುತ್ತಾನೆಯೋ ಆ ತಾರೆಯಲ್ಲಿ ಉಕ್ತವಾದ ದೇವತಾಯಜ್ಞವು ಫಲಪ್ರಾಪ್ತವಾಗುವುದು.

೪೫ ಇನ್ನು ನಕ್ಷತ್ರಗಳ ದೇವತೆಗಳನ್ನು ಕ್ರಮವಾಗಿ ಹೇಳುತ್ತೇನೆ. ಎಲ್ಲಾ ನಕ್ಷತ್ರಗಳನ್ನೂ, ನಕ್ಷತ್ರದೇವತೆಗಳಿಗೆ ಮಾಡುವ ಪೂಜಾವಿಧಾನ, ಪೂಜಾಫಲ ಇವುಗಳನ್ನೂ ಪ್ರತ್ಯೇಕಪ್ರತ್ಯೇಕವಾಗಿ ಹೇಳುತ್ತೇನೆ.

೪೬. ಅಶ್ವಿನೀ ನಕ್ಷತ್ರದಲ್ಲಿ ಅಶ್ವಿನೀದೇವತೆಗಳನ್ನು ಪೂಜೆಮಾಡಿದರೆ ಆತನಿಗೆ ದೀರ್ಘಾಯುಸ್ಸು ಉಂಟಾಗುವುದು.

ವ್ಯಾಧಿಭಿರ್ಮುಚ್ಯತೇ ಕ್ಷಿಪ್ರಮತ್ಯರ್ಥಂ ವ್ಯಾಧಿಪೀಡಿತಃ ।
ಭರಣ್ಯಾಂ ಯಮ ಇಷ್ಟಸ್ತು ಕುಸುಮೈರಸಿತೈಃ ಶುಭೈಃ ॥ ೪೭ ॥

ತಥಾ ಗಂಧಾದಿಭಿಃ ಶುದ್ಧೈರಪಮೃತ್ಯೋರ್ವಿಮೋಚಯೇತ್ ॥ ೪೮ ॥

ಅನಲಃ ಕೃತ್ತಿಕಾಯಾಂ ತು ಇಹ ಸಂಪೂಜಿತಃ ಪರಃ ।
ರಕ್ತಮಾಲ್ಯಾದಿಭಿರ್ದದ್ಯಾತ್ ಫಲಂ ಹೋಮೇನ ಚ ಧ್ರುವಂ ॥ ೪೯ ॥

ಪೂಜ್ಯಃ ಪ್ರಜಾಪತಿಃ ಪ್ರೀತ ಇಷ್ಟೋ ದದ್ಯಾತ್ಪಶೂನ್ ಬಹೂನ್ ।
ರೋಹಿಣ್ಯಾಂ ದೇವಶಾರ್ದೂಲ ಪೂಜನಾದಿಹ ಗೋಪತೇ ॥
ಮೃಗಶೀರ್ಷೇಽರ್ಚಿತಃ ಸೋಮೋ ಜ್ಞಾನಾರೋಗ್ಯಪ್ರದೋ ಭವೇತ್ ॥ ೫೦ ॥

---

೪೭. ಅಲ್ಲದೆ ರೋಗದಿಂದ ತುಂಬ ನರಳುತ್ತಿರುವವರು ಬೇಗ ಗುಣ ಪೊಂದುತ್ತಾರೆ.

೪೮ ಭರಣೀ ನಕ್ಷತ್ರಕ್ಕೆ ಯಮನು ದೇವತೆ ಎಂದು ಗೊತ್ತಾಗಿದೆ. ಆ ನಕ್ಷತ್ರದ ದಿನ ಮಂಗಳಕರವಾದ ನೀಲೋತ್ಪಲ ಮುಂತಾದ ನೀಲಪುಷ್ಪಗಳಿಂದಲೂ ಮತ್ತು ಸ್ವಚ್ಛವಾದ ಗಂಧ ಮೊದಲಾದವುಗಳಿಂದಲೂ ಪೂಜಿತನಾದ ಯಮನು ಅಪಮೃತ್ಯುವನ್ನು ಪರಿಹಾರ ಮಾಡುತ್ತಾನೆ.

೪೯. ಕೃತ್ತಿಕಾ ನಕ್ಷತ್ರದಲ್ಲಿ ಆ ನಕ್ಷತ್ರಾಧಿಪನಾದ ಅಗ್ನಿದೇವನನ್ನು ರಕ್ತಮಾಲ್ಯಾದಿಗಳಿಂದ ಪೂಜಿಸಿ ಉಕ್ತವಾದ ಹೋಮವನ್ನು ನಡೆಸುವುದರಿಂದ ಅಗ್ನಿಯು ತೃಪ್ತನಾಗಿ ಶಾಶ್ವತವಾದ ಫಲವನ್ನು ಕೊಡುತ್ತಾನೆ.

೫೦. ದೇವಶಾರ್ದೂಲನೂ! ಗೋಪತಿಯೂ ಆದ ದಿಂಡಿಯೇ! ರೋಹಿಣೀ ನಕ್ಷತ್ರದಲ್ಲಿ ಅದಕ್ಕೆ ದೇವತೆಯೂ, ಪೂಜ್ಯನೂ ಆದ ಬ್ರಹ್ಮನು ಪೂಜೆ ಹೊಂದಿ ಸುಪ್ರೀತನಾಗಿ, ಪಶುಗಳನ್ನು ಸಮೃದ್ಧಿಯಾಗಿ ಕೊಡುತ್ತಾನೆ. ಮೃಗಶಿರಾ ನಕ್ಷತ್ರದಲ್ಲಿ ಅದರ ದೇವತೆಯಾದ ಚಂದ್ರನನ್ನು ಪೂಜಿಸಿದರೆ ಜ್ಞಾನವನ್ನೂ ಆರೋಗ್ಯವನ್ನೂ ಕೊಡುತ್ತಾನೆ.

**ಆರ್ದ್ರಾಯಾಂ ತು ಶಿವಂ ಪೂಜ್ಯ ಪಶ್ಚಾದ್ವಿಜಯಮಾಪ್ನುಯಾತ್ ।**
**ಪದ್ಮಾದಿಭಿಃ ಸ ದಿವ್ಯೈಶ್ಚ ಪೂಜಿತಃ ಶಂ ಪ್ರಯಚ್ಛತಿ ॥ ೫೧ ॥**

**ತಥಾ ಪುನರ್ವಸ್ವದಿತಿಃ ಸದಾ ಸಂಪೂಜ್ಯತೇ ದಿವಿ ।**
**ಗುರುಣಾ ತರ್ಪಿತಾ ಚೈವ ಮಾತೇವ ಪರಿರಕ್ಷತಿ ॥ ೫೨ ॥**

**ಪುಷ್ಯೇರ್ಬೃಹಸ್ಪತಿರ್ಬುದ್ಧಿಂ ದದಾತಿ ವಿಪುಲಾಂ ಶುಭಾಂ ।**
**ಗೀತೈರ್ಗಂಧಾದಿಭಿರ್ನಾಗಾ ಆಶ್ಲೇಷಾಯಾಂ ಪ್ರಪೂಜಿತಾಃ ॥ ೫೩ ॥**

**ತರ್ಪಿತಾಶ್ಚ ಯಥಾನ್ಯಾಯಂ ಭಕ್ಷ್ಯೈರ್ಮಧುರೈಃ ಸಿತೈಃ ।**
**ರೂಕ್ಷಾಮಿಷಾದಿಭಿಸ್ತೈಸ್ತೈಃ ಪ್ರೀತಿಂ ಕುರ್ವಂತಿ ಮಾನದ ॥ ೫೪ ॥**

**ಮಘಾಸು ಪಿತರಃ ಸರ್ವೇ ಹವ್ಯೈಃ ಕವ್ಯೈಶ್ಚ ಪೂಜಿತಾಃ ।**
**ಪ್ರಯಚ್ಛಂತಿ ಧನಂ ಧಾನ್ಯಂ ಭೃತ್ಯಾನ್ ಪುತ್ರಾನ್ಪಶೂಂಸ್ತಥಾ ॥ ೫೫ ॥**

---

೫೧. ಆರಿದ್ರಾ ನಕ್ಷತ್ರದಲ್ಲಿ ಅದರ ದೇವನಾದ ಶಿವನನ್ನು ಶ್ರೇಷ್ಠವಾದ ಪದ್ಮ ಮುಂತಾದ ಪುಷ್ಪಗಳಿಂದ ಪೂಜಿಸಿದವನು ವಿಜಯವನ್ನು ಹೊಂದುತ್ತಾನೆ. ಪೂಜಿತನಾದ ಶಿವನು ಸುಖವನ್ನೂ ಕೊಡುತ್ತಾನೆ.

೫೨. ಪುನರ್ವಸು ನಕ್ಷತ್ರ ದೇವತೆಯಾದ ಅದಿತಿಯು ಸ್ವರ್ಗದಲ್ಲಿ ಯಾವಾಗಲೂ ಪೂಜಿಸಲ್ಪಡುತ್ತಾಳೆ. ದೇವಗುರುವಿನಿಂದಲೂ ಪೂಜಿತಳಾದ ಅವಳು ತಾಯಿಯು ಮಕ್ಕಳನ್ನು ಸಲಹುವಂತೆ ಪೂಜಕರನ್ನು ಕಾಪಾಡುತ್ತಾಳೆ.

೫೩. ಅಯ್ಯಾ ಗೌರವಪ್ರದನಾದ ವಿಷ್ಣುವೇ! ಪುಷ್ಯ ನಕ್ಷತ್ರದಲ್ಲಿ ಅದರ ದೇವತೆಯಾದ ಬೃಹಸ್ಪತಿಯನ್ನು ಪೂಜಿಸಿದರೆ ಅವನು ಸಮೃದ್ಧಿಯಾಗಿ ಸದ್ಬುದ್ಧಿಯನ್ನು ಕೊಡುತ್ತಾನೆ.

೫೪. ಆಶ್ಲೇಷಾ ನಕ್ಷತ್ರದಲ್ಲಿ ಅದರ ದೇವತೆಯಾದ ಸರ್ಪಗಳನ್ನು ಗಾನಪೂರ್ವಕವಾಗಿ ಪೂಜಿಸಿ ಸುಗಂಧಯುಕ್ತವೂ, ಮಧುರವೂ, ಶುಭ್ರವೂ ಆದ ಭಕ್ಷ್ಯ, ಕಠಿನಗಳಾದ ಮಾಂಸ ಇವುಗಳನ್ನು ಆಯಾ ನಾಗಗಳಿಗೆ ನ್ಯಾಯರೀತ್ಯಾ ಸಮರ್ಪಿಸಿ ಪೂಜಿಸಿದರೆ ಅವು ಸುಪ್ರೀತಗಳಾಗುವುವು.

೫೫. ಮಘಾ ನಕ್ಷತ್ರದಲ್ಲಿ ಅದರ ದೇವತೆಯೆನಿಸಿದ ಪಿತೃದೇವತೆಗಳನ್ನೆಲ್ಲರನ್ನೂ ಹವ್ಯದಿಂದಲೂ, ಕವ್ಯದ್ರವ್ಯಗಳಿಂದಲೂ, ಪೂಜಿಸಿದರೆ ಅವರು ಧನ, ಧಾನ್ಯ, ಪುತ್ರ, ಭೃತ್ಯ, ಪಶು, ಮುಂತಾದವುಗಳೆಲ್ಲವನ್ನೂ ಸಮೃದ್ಧಿಯಾಗಿ ಕೊಡುತ್ತಾರೆ.

ಫಾಲ್ಗುನ್ಯಾಮಥ ವೈ ಪೂಷಾ ಇಷ್ಟಃ ಪುಷ್ಪಾದಿಭಿಃ ಶುಭೈಃ ।
ಪೂರ್ವಾಯಾಂ ವಿಜಯಂ ದತ್ಯಾದುತ್ತರಾಯಾಂ ಭಗಂ ತಥಾ ॥ ೫೬ ॥

ಭರ್ತಾರಮೀಪ್ಸಿತಂ ದದ್ಯಾತ್ ಕನ್ಯಾಯೈ ಪುರುಷಾಯ ತಾಂ ।
ಇಹ ಜನ್ಮನಿ ಯುಜ್ಯೇತ ರೂಪದ್ರವಿಣಸಂಪದಾ ॥ ೫೭ ॥

ಪೂಜಿತಃ ಸವಿತಾ ಹಸ್ತೇ ವಿಶ್ವತೇಜೋನಿಧಿಃ ಸದಾ ।
ಗಂಧಪುಷ್ಪಾದಿಭಿಃ ಸರ್ವಂ ದದಾತಿ ವಿಪುಲಂ ಧನಂ ॥ ೫೮ ॥

ರಾಜ್ಯಂ ತು ತ್ವಷ್ಟಾ ಚಿತ್ರಾಯಾಂ ನಿಃಸಪತ್ನಂ ಪ್ರಯಚ್ಛತಿ ।
ಇಷ್ಟಃ ಸಂತರ್ಪಿತಃ ಪ್ರೀತಃ ಸ್ವಾತ್ಯಾಂ ವಾಯುರ್ಬಲಂ ಪರಂ ॥ ೫೯ ॥

---

೫೬. ಪೂರ್ವ ಫಲ್ಗುನಿ, ಉತ್ತರ ಫಲ್ಗುನಿ ನಕ್ಷತ್ರಗಳಲ್ಲಿ ಅದರ ಅಧಿಪತಿಯಾದ ಪೂಷಾದೇವತೆಯನ್ನು ಶುಭಕರವಾದ ಪುಷ್ಪ ಮೊದಲಾದವುಗಳಿಂದ ಪೂಜಿಸಿದರೆ ಪೂರ್ವ ಫಲ್ಗುನಿ ಪೂಜೆಯಿಂದ ವಿಜಯವನ್ನೂ ಉತ್ತರ ಫಲ್ಗುನೀ ಪೂಜೆಯಿಂದ ಭಾಗ್ಯವನ್ನೂ ಹೊಂದುತ್ತಾನೆ.

೫೭. ಕನ್ಯೆಯು ಈ ದೇವತೆಯನ್ನು ಪೂಜಿಸಿದರೆ ತಾನು ಅಪೇಕ್ಷಿಸಿದಂಥ ವರನನ್ನು ಪಡೆಯುವಳು. ಅವಿವಾಹಿತನಾದ ಪುರುಷನು ಪೂಜಿಸಿದರೆ ತನಗೆ ಅನುರೂಪಳಾದ ಕನ್ಯೆಯನ್ನು ಪಡೆಯುವನು. ಅಲ್ಲದೆ ಈ ಜನ್ಮದಲ್ಲಿ ಸೌಂದರ್ಯ, ದ್ರವ್ಯಸಂಪತ್ತು, ಇವುಗಳನ್ನೂ ಪಡೆಯುತ್ತಾನೆ.

೫೮. ಹಸ್ತ ನಕ್ಷತ್ರದಲ್ಲಿ ಅದರ ಅಧಿಪತಿಯೂ, ಸಮಸ್ತ ತೇಜೋನಿಧಿಯೂ ಆದ ಸವಿತೃವನ್ನು (ಸೂರ್ಯನನ್ನು) ಗಂಧ ಪುಷ್ಪಾದಿಗಳಿಂದ ಪೂಜಿಸಿದರೆ ಸಮಸ್ತ ಧನ ಸಂಪತ್ತನ್ನೂ ಕೊಡುತ್ತಾನೆ.

೫೯. ಚಿತ್ರಾ ನಕ್ಷತ್ರದಲ್ಲಿ ಅದರ ಅಧಿಪನಾದ ತ್ವಷ್ಟೃ ದೇವತೆಯನ್ನು ಪೂಜೆ ಮಾಡಿದರೆ, ನಿಷ್ಕಂಟಕವಾದ ರಾಜ್ಯವನ್ನು ಹೊಂದುವನು. ಸ್ವಾತೀ ನಕ್ಷತ್ರದಲ್ಲಿ ಅದರ ಅಧಿಪತಿಯಾದ ವಾಯುದೇವನನ್ನು ಪೂಜೆಯಿಂದ ತೃಪ್ತಿಪಡಿಸಿದರೆ, ಅವನು ಶ್ರೇಷ್ಠವಾದ ಬಲವನ್ನು ಸಮೃದ್ಧಿಯಾಗಿ ಕೊಡುತ್ತಾನೆ.

ಇಂದ್ರಾಗ್ನೀ ಚ ವಿಶಾಖಾಯಾಂ ಜಾತಭಕ್ತಿಃ ಪ್ರಪೂಜ್ಯ ಚ ।
ಧನಧಾನ್ಯಾದಿ ಲಬ್ಧ್ವೇಹ ತೇಜಸ್ವೀ ನಿವಸೇತ್ಸದಾ ॥ ೬೦ ॥

ರಕ್ತೈರ್ಮಿತ್ರಮನೂರಾಧಾಸ್ವೇವಂ ಸಂಪೂಜ್ಯ ಭಕ್ತಿತಃ ।
ಶ್ರೇಯೋ ಭಜಂತಿ ಸರ್ವೇಷಾಂ ಚಿರಂ ಜೀವಂತಿ ಸರ್ವದಾ ॥ ೬೧ ॥

ಜ್ಯೇಷ್ಠಾಯಾಂ ಪೂರ್ವವಚ್ಛಕ್ರಮಿಷ್ಟ್ವಾ ಪುಷ್ಟಿಮವಾಪ್ನುಯಾತ್ ।
ಗುಣೈರ್ಜ್ಯೇಷ್ಠಶ್ಚ ಸರ್ವೇಷಾಂ ಕರ್ಮಣಾ ಚ ಧನೇನ ಚ ॥ ೬೨ ॥

ಮೂಲೇ ದೇವಪಿತೄನ್ ಸರ್ವಾನ್ ಭಕ್ತ್ಯಾ ಸಂಪೂಜ್ಯ ಪೂರ್ವವತ್ ।
ಪೂರ್ವವತ್ಫಲಮಾಪ್ನೋತಿ ಸ್ವರ್ಗಸ್ಥಾನೇ ಧ್ರುವೋ ಭವೇತ್ ॥ ೬೩ ॥

ಪೂರ್ವಾಷಾಢೇ ಹ್ಯಪೋಽಭ್ಯರ್ಚ್ಯ ಹುತ್ವಾ ತತ್ರೈವ ಪೂರ್ವವತ್ ।
ಸಂತಾಪಾನ್ಮುಚ್ಯತೇ ಕ್ಷಿಪ್ರಂ ಶಾರೀರಾನ್ಮಾನಸಾಂಸ್ತಥಾ ॥ ೬೪ ॥

---

೬೦. ವಿಶಾಖಾ ನಕ್ಷತ್ರದಲ್ಲಿ ಅದರ ಅಧಿಪತಿಗಳಾದ ಇಂದ್ರಾಗ್ನಿಗಳನ್ನು ಭಕ್ತಿಪುರಸ್ಸರವಾಗಿ ಪೂಜಿಸಿದರೆ, ಆ ಮಾನವನು ಈ ಲೋಕದಲ್ಲಿ ಸರ್ವದಾ ಧನಧಾನ್ಯಗಳನ್ನು ಪಡೆದು ತೇಜಸ್ವಿಯಾಗಿ ವಾಸಿಸುತ್ತಾನೆ.

೬೧. ಅನೂರಾಧಾ ನಕ್ಷತ್ರದಲ್ಲಿ ಅದರ ದೇವನಾದ ಮಿತ್ರನನ್ನು, ರಕ್ತಗಂಧಾದಿಗಳಿಂದ ಭಕ್ತಿಪೂರ್ವಕವಾಗಿ ಪೂಜಿಸಿದರೆ, ಹಾಗೆ ಪೂಜಿಸಿದ ಎಲ್ಲರೂ ಯಾವಾಗಲೂ ಶ್ರೇಯಸ್ಸನ್ನು ಪಡೆದು ಬಹುಕಾಲ ಬದುಕುವರು.

೬೨. ಜೇಷ್ಠಾ ನಕ್ಷತ್ರದಲ್ಲಿ ಅದರ ಅಧಿಪತಿಯಾದ ಇಂದ್ರನನ್ನು ಹಿಂದೆ ಹೇಳಿದಂತೆ ಪೂಜಿಸಿದರೆ, ಕರ್ಮಗಳನ್ನು ಆಚರಿಸುವವನಾಗಿ ಕರ್ಮಸಾಧನೆಯಿಂದಲೂ ಧನದಿಂದಲೂ ಎಲ್ಲರಿಗಿಂತ ಹೆಚ್ಚು ಗುಣವಂತನಾಗಿ ಪುಷ್ಟಿ ಹೊಂದುತ್ತಾನೆ.

೬೩. ಮೂಲಾ ನಕ್ಷತ್ರದಲ್ಲಿ ಅದರ ಅಧಿಪರಾದ ಸಮಸ್ತ ದೇವಪಿತೃಗಳನ್ನು ಹಿಂದಿನಂತೆ ಪೂಜಿಸಿದರೆ, ಪೂರ್ವೋಕ್ತವಾದ ಫಲವನ್ನು ಹೊಂದುವುದಲ್ಲದೆ ಸ್ವರ್ಗದಲ್ಲಿ ಶಾಶ್ವತವಾಗಿ ನೆಲಸುತ್ತಾನೆ.

೬೪. ಪೂರ್ವಾಷಾಢ ನಕ್ಷತ್ರದಲ್ಲಿ ಅದರ ಅಧಿಪನಾದ ಜಲದೇವತೆಯನ್ನು ಪೂಜಿಸಿ ಹಿಂದಿನಂತೆ ಹೋಮಾದಿಗಳನ್ನು ಮಾಡಿದರೆ, ಶಾರೀರಕವೂ, ಮಾನಸಿಕವೂ ಆದ ತಾಪಗಳಿಂದ ಜಾಗ್ರತೆಯಾಗಿ ಬಿಡುಗಡೆ ಹೊಂದುತ್ತಾನೆ.

ಆಷಾಢಾಸು ತಥಾ ವಿದ್ವಾನ್ ಉತ್ತರಾಷಾಢಯೋಗತಃ ।
ವಿಶ್ವೇಶಂ ಪೂಜ್ಯ ಪುಷ್ಪಾದ್ಯೈಃ ಸರ್ವಮಾಪ್ನೋತಿ ಮಾನವಃ ॥ ೬೫ ॥

ಶ್ರವಣೇ ತು ಸಿತೈರ್ವಿಷ್ಣುಂ ಪೀತೈರ್ನೀಲೈಶ್ಚ ಭಕ್ತಿತಃ ।
ಸಂಪೂಜ್ಯ ಶ್ರಿಯಮಾಪ್ನೋತಿ ಪರಂ ವಿಜಯಮೇವ ಚ ॥ ೬೬ ॥

ಧನಿಷ್ಠಾಸು ವಸೂನಿಷ್ಟ್ವಾ ನ ಭಯಂ ಭಜತೇ ಕ್ವಚಿತ್ ।
ಮಹತೋಽಪಿ ಭಯಾಚ್ಛ್ವೇತೈರ್ಗಂಧಪುಷ್ಪಾದಿಭಿಃ ಶುಭೈಃ ॥ ೬೭ ॥

ಇಂದ್ರಂ ಶತಭಿಷಾಯಾಂ ಚ ವ್ಯಾಧಿಭಿರ್ಮುಚ್ಯತೇ ಧ್ರುವಂ ।
ಆತುರಃ ಪುಷ್ಟಿಮಾಪ್ನೋತಿ ಸ್ವಾಸ್ಥ್ಯಮೈಶ್ವರ್ಯಮೇವ ಚ ॥ ೬೮ ॥

ಅಜಂ ಭಾದ್ರಪದಾಯಾಂ ತು ಶುದ್ಧಸ್ಫಟಿಕ ಸನ್ನಿಭಂ ।
ಸಂಪೂಜ್ಯ ಭಕ್ತಿಮಾಪ್ನೋತಿ ಪರಂ ವಿಜಯಮೇವ ಚ ॥ ೬೯ ॥

---

೬೫. ಪೂರ್ವಾಷಾಢ, ಉತ್ತರಾಷಾಢ ನಕ್ಷತ್ರಗಳಲ್ಲಿ ಅದರ ದೇವನಾದ ವಿಶ್ವೇಶನನ್ನು, ಪ್ರಾಜ್ಞನಾದವನು ಪುಷ್ಪಾದಿಗಳಿಂದ ಪೂಜಿಸಿದರೆ, ಆ ಮನುಷ್ಯನು ತನಗೆ ಬೇಕಾದುದೆಲ್ಲವನ್ನೂ ಪಡೆಯುವನು.

೬೬. ಶ್ರವಣ ನಕ್ಷತ್ರದಲ್ಲಿ ಅದರ ಸ್ವಾಮಿಯಾದ ವಿಷ್ಣುವನ್ನು ಬಿಳಿಯ ಹೂ, ನೀಲಿ ಹೂವು, ಹಳದಿಯ ಹೂವು, ಇವುಗಳಿಂದ ಭಕ್ತಿಪೂರ್ವಕವಾಗಿ ಪೂಜಿಸಿದರೆ. ಉತ್ಕೃಷ್ಟವಾದ ಸಂಪತ್ತನ್ನೂ ಮತ್ತು ವಿಜಯವನ್ನೂ ಹೊಂದುತ್ತಾನೆ.

೬೭. ಧನಿಷ್ಠಾ ನಕ್ಷತ್ರದಲ್ಲಿ ಅದರ ದೇವತೆಗಳಾದ ವಸುಗಳನ್ನು ಮಂಗಳಕರವಾದ ಬಿಳಿಯ ಬಣ್ಣದ ಪುಷ್ಪಗಳಿಂದಲೂ, ಗಂಧದಿಂದಲೂ ಪೂಜಿಸಿದರೆ ಯಾವ ಕಡೆಯಿಂದಲೇ ಆಗಲಿ ಮಹತ್ತಾದ ಭಯ, ಕ್ಷುದ್ರಭಯ ಇವು ಸ್ವಲ್ಪವೂ ಇರುವುದಿಲ್ಲ.

೬೮. ಶತಭಿಷಾ ನಕ್ಷತ್ರದಲ್ಲಿ ಅದರ ಅಧಿಪತಿಯಾದ ಇಂದ್ರನನ್ನು ಪೂಜಿಸಿದರೆ ನಿಶ್ಚಯವಾಗಿ ವ್ಯಾಧಿಗಳಿಂದ ಮುಕ್ತನಾಗುತ್ತಾನೆ. ರೋಗಿಯಾದವನಿಗೆ ಮನಸ್ವಾಸ್ಥ್ಯ, ಪುಷ್ಟಿ, ಐಶ್ವರ್ಯ ಇವು ಲಭಿಸುತ್ತವೆ.

೬೯. ಪೂರ್ವಾಭಾದ್ರ ನಕ್ಷತ್ರದಲ್ಲಿ ಅದರ ಅಧಿಪತಿಯೂ, ಶುದ್ಧ ಸ್ಫಟಿಕಕ್ಕೆ ಸಮನಾದ ಕಾಂತಿಯುಳ್ಳವನೂ ಆದ ಅಜನನ್ನು ಪೂಜಿಸಿದರೆ, ನಿಶ್ಚಲವಾದ ಭಕ್ತಿಯನ್ನೂ, ಶ್ರೇಷ್ಠವಾದ ವಿಜಯವನ್ನೂ ಹೊಂದುತ್ತಾನೆ.

ಉತ್ತರಾಯಾಮಹಿರ್ಬುಧ್ನ್ಯಂ ಪರಾಂ ಶಾಂತಿಮವಾಪ್ನುಯಾತ್ ।
ರೇವತ್ಯಾಂ ಪೂಜಿತಃ ಪೂಷಾ ದದಾತಿ ಸತತಂ ಶುಭಂ ॥
ಸಿತೈಃ ಪುಷ್ಪೈಃ ಸ್ಥಿತಿಂ ಚೈವ ಧೃತಿಂ ವಿಜಯಮೇವ ಚ ॥ ೭೦ ॥

ತದ್ವೈವೈತೇ ಸಮಾಖ್ಯಾತಾಃ ಯಜ್ಞಾಃ ಸಂಕ್ಷೇಪತೋ ಮಯಾ ।
ನಕ್ಷತ್ರದೇವತಾನಾಂ ಚ ಸಾಧಕಾನಾಂ ಹಿತಾಯ ವೈ ॥
ಭಕ್ತ್ಯಾ ವಿತ್ತಾನುಸಾರೇಣ ಭವಂತಿ ಫಲದಾಃ ಸದಾ ॥ ೭೧ ॥

ಗಂತುಮಿಚ್ಛೇದನಂತ್ಯಂ ವಾ ಕ್ರಿಯಾಂ ಪ್ರಾರಬ್ಧ ಮೇವ ಚ ।
ನಕ್ಷತ್ರದೇವತಾಯಜ್ಞಂ ಕೃತ್ವಾ ತತ್ಸರ್ವಮಾಚರೇತ್ ॥ ೭೨ ॥

ಏವಂ ಕೃತೇ ಹಿ ತತ್ಸರ್ವಂ ಯಾತ್ರಾಫಲಮವಾಪ್ನುಯಾತ್ ।
ಕ್ರಿಯಾಫಲಂ ಚ ಸಂಪೂರ್ಣಮಿತ್ಯುಕ್ತಂ ಭಾನುನಾ ಸ್ವಯಂ ॥ ೭೩ ॥

---

೭೦. ಉತ್ತರಾಭಾದ್ರ ನಕ್ಷತ್ರದಲ್ಲಿ ಅದರ ದೇವನಾದ ಅಹಿರ್ಬುಧ್ನ್ಯನನ್ನು ಪೂಜಿಸಿದರೆ, ಶ್ರೇಷ್ಠವಾದ ಕಾಂತಿಯನ್ನು ಹೊಂದುತ್ತಾನೆ. ರೇವತೀ ನಕ್ಷತ್ರದಲ್ಲಿ ಅದರ ಅಧಿಪನಾದ ಪೂಷನನ್ನು ಬಿಳಿಯ ಹೂವುಗಳಿಂದ ಪೂಜಿಸಿದರೆ ಉತ್ತಮಸ್ಥಿತಿ, ಧೈರ್ಯ ವಿಜಯ, ಶುಭ ಇವನ್ನು ಯಾವಾಗಲೂ ಹೊಂದುತ್ತಾನೆ.

೭೧. ಸಾಧಕರ ಹಿತಕ್ಕಾಗಿ ಹೀಗೆ ನಾನು ನಿನಗೆ ನಕ್ಷತ್ರ ದೇವತೆಗಳ ಯಜ್ಞಗಳನ್ನು ಸಂಕ್ಷೇಪವಾಗಿ ಹೇಳಿದುದಾಯಿತು. ಭಕ್ತಿಯಿಂದಲೂ ತಮಗೆ ದೊರೆತಷ್ಟು ಅನುಕೂಲ್ಯದಿಂದಲೂ ಈ ರೀತಿ ಯಜ್ಞ ಮಾಡಿದರೆ ಆ ದೇವತೆಗಳು ಯಾವಾಗಲೂ ಫಲ ಕೊಡುತ್ತಾರೆ.

೭೨ ನಕ್ಷತ್ರ ದೇವತಾ ಯಜ್ಞವನ್ನು ಸರಿಯಾದ ಕ್ರಮದಲ್ಲಿ ನಡೆಸಿದರೆ ಮೋಕ್ಷವನ್ನು ಅಪೇಕ್ಷಿಸಿದವನು ಮೋಕ್ಷವನ್ನೇ ಪಡೆಯಬಹುದು. ಅಥವಾ ತನ್ನ ಪ್ರಾರಬ್ಧಕರ್ಮವನ್ನು ಹೋಗಲಾಡಿಸಿಕೊಳ್ಳಲು ಅಪೇಕ್ಷಿಸಿದರೆ ಅದನ್ನಾದರೂ ನಿವೃತ್ತಿ ಮಾಡಿಕೊಳ್ಳಬಹುದು.

೭೩ ಹೀಗೆ ಎಲ್ಲಾ ನಕ್ಷತ್ರಾಧಿಪರ ಆರಾಧನೆ ಮಾಡಿದರೆ ಮಹಾಯಾತ್ರೆಯನ್ನು ಮಾಡಿದ ಫಲವನ್ನು ಹೊಂದುತ್ತಾನೆ. ಅವನು ಮಾಡಿದ ಕ್ರಿಯೆಗಳಿಗೆಲ್ಲಾ ಸಂಪೂರ್ಣ ಫಲವುಂಟಾಗುವುದೆಂದು ಸೂರ್ಯನೇ ಸಾಕ್ಷಾತ್ತಾಗಿ ಹೇಳಿದ್ದಾನೆ.

ಯಜ್ಞಾತ್ಸವಿಜಯಂ ಕುರ್ಯಾತ್ ಪ್ರಿಯಾಂ ಕುರ್ಯಾದ್ಯಥೇಪ್ಸಿತಾಂ ।
ಕಾಲಚಕ್ರೇಽಥವಾ ಸೂರ್ಯಂ ರಾಶಿಚಕ್ರೇ ಕಲಾತ್ಮನಾ ॥ ೭೪ ॥

ವಿಶ್ವತೇಜೋನಿಧಿಂ ಧ್ಯಾತ್ವಾ ಸರ್ವಂ ಕುರ್ಯಾದ್ಯಥೇಪ್ಸಿತಂ ।
ವಿಭೂತಿರೇಷಾ ಚೋದ್ದಿಷ್ಟಾ ಕ್ರಿಯಾಭಿಃ ಸಾಧ್ಯತೇ ಧ್ರುವಂ ॥ ೭೫ ॥

ಉದ್ದಿಷ್ಟಾಭಿಃ ಪ್ರಯತ್ನೇನ ಮುಕ್ತಿಯೋಗೇನ ಸಾಧ್ಯತೇ ।
ಭಾನೋರಾರಾಧನಾಚ್ಚಾಪಿ ಪ್ರಾಪ್ಯತೇ ಮುಕ್ತಿರೇವ ಹಿ ॥
ತಸ್ಮಾದಾರಾಧಯ ರವಿಂ ಭಕ್ತ್ಯಾ ತ್ವಂ ಮಧುಸೂದನ ॥ ೭೬ ॥

ಇಜ್ಯಾ ಪೂಜಾ ನಮಸ್ಕಾರ ಶುಶ್ರೂಷಾಭಿರಹರ್ನಿಶಂ ।
ವ್ರತೋಪವಾಸೈರ್ವಿವಿಧೈಃ ಬ್ರಾಹ್ಮಣಾನಾಂ ಚ ಭೋಜನೈಃ ॥ ೭೭ ॥

---

೭೪. ತಿಳಿದವರು ಈ ಪೂಜೆಮಾಡಿ ವಿಜಯವನ್ನು ಸಂಪಾದಿಸಿಕೊಳ್ಳಬೇಕು. ಇಷ್ಟವಾದ ಸಂಪತ್ತುಗಳನ್ನು ಗಳಿಸಬೇಕು. ಕಾಲಚಕ್ರದಲ್ಲಿ ಅಥವಾ ರಾಶಿಚಕ್ರದಲ್ಲಿ ಸೂರ್‍ಯನನ್ನು ಕಲಾತ್ಮನೆಂದು ಭಾವನೆಮಾಡಬೇಕು.

೭೫. ಸರ್ವತೇಜಸ್ಸಿಗೂ ನಿಧಿಯಾದ ಸೂರ್ಯದೇವನನ್ನು ಧ್ಯಾನಿಸಿ ಇಚ್ಛಾನುಸಾರವಾಗಿ ಎಲ್ಲವನ್ನೂ ಮಾಡಬೇಕು. ಹೀಗೆ ಮಾಡುವುದರಿಂದ ಮನಸೋದ್ದಿಷ್ಟವಾದ ಸಂಪತ್ತನ್ನು ಹೊಂದಲು ಸಾಧ್ಯವಾಗುವುದು.

೭೬. ಹೀಗೆ ಉಕ್ತವಾದ ಕಾರ್ಯಾಚರಣೆಯಿಂದಲೂ, ಮುಕ್ತಿಯೋಗಕ್ಕೆ ಪ್ರಯತ್ನಪಡುವುದರಿಂದಲೂ ಉದ್ದಿಷ್ಟವಾದ ಅದು ನಿಜವಾಗಿ ಸಾಧ್ಯವಾಗುತ್ತದೆ.

೭೭. ಸೂರ್ಯಾರಾಧನೆಯಿಂದಲೂ ಮುಕ್ತಿಯೇ ಲಭಿಸುವುದು. ಅಯ್ಯಾ ಮಧುಸೂದನನೇ! ಈ ಕಾರಣದಿಂದ ನೀನು ಸೂರ್ಯನನ್ನು ಭಕ್ತಿಯಿಂದ ಪೂಜಿಸು. ಹಗಲಿನಲ್ಲೂ, ರಾತ್ರಿಯಲ್ಲಿಯೂ, ಯಾಗ, ಪೂಜೆ, ನಮಸ್ಕಾರ ಇವುಗಳಿಂದಲೂ ನಾನಾ ಬಗೆಯ ವ್ರತೋಪವಾಸಗಳಿಂದಲೂ, ಬ್ರಾಹ್ಮಣಸಂತರ್ಪಣೆಯ ಮೂಲಕವೂ ಸೂರ್ಯನನ್ನು ತೃಪ್ತಿಪಡಿಸಬೇಕು.

ಯಃ ಕಾರಯತಿ ದೇವಾರ್ಚಾಂ ಹೃದಯಾಲಂಬನಂ ರವೇಃ ।
ಸ ನರೋ ಭಾನುಸಾಲೋಕ್ಯಮುಪೈತಿ ಗತಕಲ್ಮಷಃ　　　　॥ ೨೮ ॥

ಇತಿ ಶ್ರೀಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣೇ ಸಪ್ತಮೀಕಲ್ಪೇ
ನಕ್ಷತ್ರಪೂಜಾ ವಿಧಿವರ್ಣನಂ ನಾಮ ದ್ವ್ಯಧಿಕಶತತಮೋಽಧ್ಯಾಯಃ.



---

೨೮. ಸೂರ್ಯನ ಮನಸ್ಸಿಗೆ ಸಂತೋಷವಾಗುವಂತೆ ಪೂಜೆಯನ್ನು ಯಾವನು ಆಚರಿಸುವನೋ ಆವನು ಪಾಪರಹಿತನಾಗಿ ಸೂರ್ಯಲೋಕವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸಪ್ತಮೀಕಲ್ಪದಲ್ಲಿ
ನಕ್ಷತ್ರಪೂಜಾ ವಿಧಾನವೆಂಬ ನೂರೆರಡನೆಯ ಅಧ್ಯಾಯವು ಮುಗಿದುದು.





॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ತ್ರ್ಯಧಿಕಶತತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಯಶ್ಚ ದೇವಾಲಯಂ ಭಕ್ತ್ಯಾ ಭಾನೋಃ ಕಾರಯತೇ ಸ್ಥಿರಂ ।
ಸ ಸಪ್ತಪುರುಷಾನ್ ಲೋಕಾದ್ಭಾನೋರ್ನಯತಿ ಮಾನವಃ ॥ ೧ ॥

ಯಾವತ್ಸ್ವಬ್ದೇಷು ದೇವಾರ್ಚಾ ರವೇರ್ಭವತಿ ಮಂದಿರೇ ।
ತಾವದ್ವರ್ಷಸಹಸ್ರಾಣಿ ಸೂರ್ಯಲೋಕೇ ಸ ಮೋದತೇ ॥ ೨ ॥

ದೇವಾರ್ಚಾ ಲಕ್ಷಣೋಪೇತಾ ಯದ್ಗೃಹೇ ಸತತಂ ಭವೇತ್ ।
ನಿಷ್ಕಾಮಂ ವಾ ಮನೋ ಯಸ್ಯ ಸ ಯಾತಿ ಸಮತಾಂ ರವೇಃ ॥ ೩ ॥

---

## ಇನ್ನೂರಮೂರನೆಯ ಅಧ್ಯಾಯ

೧ ಬ್ರಹ್ಮನು ಹೇಳುತ್ತಾನೆ—ಯಾವನು ಭಕ್ತಿಯಿಂದ ಸೂರ್ಯದೇವಾಲಯವನ್ನು ಸ್ಥಿರವಾಗುವಂತೆ ಮಾಡಿಸುವನೋ ಅವನು ತನ್ನ ವಂಶದ ಏಳು ತಲೆಮಾರಿನವರನ್ನು ಸೂರ್ಯಲೋಕಕ್ಕೆ ಕರೆದುಕೊಂಡು ಹೋಗುತ್ತಾನೆ.

೨. ಆ ದೇವಾಲಯದಲ್ಲಿ ಎಷ್ಟು ವರ್ಷಗಳು ಸೂರ್ಯಪೂಜೆ ನಡೆಯುತ್ತಿರುವುದೋ, ಅಷ್ಟು ಸಹಸ್ರ ವರ್ಷಗಳು ಪೂರ್ತಾ ಇವನು ಸೂರ್ಯಲೋಕದಲ್ಲಿ ಸಂತೋಷಪಡುತ್ತಾನೆ.

೩. ಯಾವನ ಮನೆಯಲ್ಲಿ ಅವಿಚ್ಛಿನ್ನವಾಗಿ ಸಲಕ್ಷಣವಾಗಿ ಸೂರ್ಯಾರಾಧನೆ ನಡೆಯುವುದೋ, ಅಥವಾ ಯಾವನ ಮನಸ್ಸು ನಿಷ್ಕಾಮವಾಗಿ ಇರುತ್ತದೆಯೋ ಅವನು ಸೂರ್ಯನ ಸಮತ್ವವನ್ನು ಹೊಂದುತ್ತಾನೆ.

ಪುಷ್ಪಾಣ್ಯತಿಸುಗಂಧೀನಿ ಮನೋಜ್ಞಾನಿ ಚ ಯಃ ಪುಮಾನ್ ।
ಪ್ರಯಚ್ಛತಿ ಹಿ ದೇವ್ರೋಯಂ ತದ್ಭಾವಗತಮಾನಸಃ ॥ ೪ ॥

ಧೂಪಾಂಶ್ಚ ವಿವಿಧಾಂ ಸ್ತಾಂಸ್ತಾನ್ಗಂ ಧಾಢ್ಯಂ ಚಾನುಲೇಪನಂ ।
ದೀಪಬಲ್ಯುಪಹಾರಾಂಶ್ಚ ಯಚ್ಚಾಭೀಷ್ಟಮಥಾತ್ಮನಃ ॥ ೫ ॥

ನರಃ ಸೋಽನುದಿನಂ ಯಜ್ಞಾತ್ಪ್ರಾಪ್ನೋತ್ಯಾರಾಧನಾದ್ರವೇಃ ।
ಯಜ್ಞೇಶೋ ಭಗವಾನ್ಭಾನುರ್ಮಖೈರಪಿ ಚ ತೋಷ್ಯತೇ ॥ ೬ ॥

ಬಹೂಪಕರಣಾ ಯಜ್ಞಾ ನಾನಾಸಂಭಾರವಿಸ್ತರಾಃ ।
ಪ್ರಾಪ್ಯಂತೇ ತೈರ್ಧನಯುಕ್ತೈರ್ಮನುಷ್ಯೈರ್ಲೋಕಸಂಚಯೈಃ ॥ ೭ ॥

ಭಕ್ತ್ಯಾ ತು ಪುರುಷೈಃ ಪೂಜಾ ಕೃತಾ ದೂರ್ವಾಂಕುರೈರಪಿ ।
ರವೇರ್ದದಾತಿ ಚ ಫಲಂ ಸರ್ವಯಜ್ಞೈಃ ಸುದುರ್ಲಭಂ ॥ ೮ ॥

---

೪-೫. ಯಾವ ಮನುಷ್ಯನು ಸೂರ್ಯಭಾವವನ್ನು ಹೊಂದಬೇಕೆಂಬ ಮನಸ್ಸುಳ್ಳವನಾಗಿ ಸೂರ್ಯ ದೇವನಿಗೆ ಸುಗಂಧಯುಕ್ತಗಳೂ, ಮನೋಹರಗಳೂ ಆದ ಪುಷ್ಪ, ಮತ್ತು ಬಗೆ ಬಗೆಯಾದ ಧೂಪಗಳು, ಸುಗಂಧಯುಕ್ತಗಳಾದ ಅನುಲೇಪನ, ದೀಪ, ಬಲಿ, ಉಪಹಾರ (ನೈವೇದ್ಯ) ಇವುಗಳನ್ನು ಸಮರ್ಪಣೆ ಮಾಡುವನೋ ಅವನು ಪ್ರತಿದಿನವೂ ಮಾಡುವ ಸೂರ್ಯಾರಾಧನ ರೂಪವಾದ ಯಜ್ಞದಿಂದ ತನಗೆ ಅಭೀಷ್ಟವಾದವುಗಳನ್ನೆಲ್ಲಾ ಹೊಂದುತ್ತಾನೆ.

೬. ಯಜ್ಞಾಧಿಪತಿಯೂ, ಷಡ್ಗುಣೈಶ್ವರ್ಯಸಂಪನ್ನನೂ, ಆದ ಸೂರ್ಯನು ಮಖರೂಪವಾದ ದೊಡ್ಡ ಯಜ್ಞಗಳಿಂದಲೂ ಸಂತೋಷ ಹೊಂದುತ್ತಾನೆ.

೭. ಧನ ಸಹಾಯ, ಜನಸಹಾಯವಿರತಕ್ಕವರು ಅನೇಕ ಉಪಕರಣಗಳನ್ನೂ, ವಿಸ್ತಾರವಾದ ಸಂಭಾರಗಳನ್ನೂ ಹೊಂದಿಸಿಕೊಂಡು ಅಂಥ ದೊಡ್ಡ ಯಜ್ಞಗಳನ್ನು ನಡೆಯಿಸುವರು.

೮. ಸಾಮಾನ್ಯ ಮನುಷ್ಯರು ಭಕ್ತಿಯುಕ್ತರಾಗಿ ಸೂರ್ಯದೇವನನ್ನು ಎಳೆಯ ಗರಿಕೆಯಿಂದ ಪೂಜೆಮಾಡಿದ ಮಾತ್ರದಿಂದ ಸರ್ವಯಜ್ಞಮಾಡಿದ್ದರಿಂದ ಸಂಪಾದಿಸಲು ದುರ್ಲಭವಾದ ಫಲವು ಕೂಡ ಲಭಿಸುವುದು.

ಯಾನಿ ಪುಷ್ಪಾಣಿ ಭಕ್ಷ್ಯಾಣಿ ಧೂಪಗಂಧಾದಿಕಂ ಚ ಯತ್ ।
ದಯಿತಂ ಭೂಷಣಂ ಯಚ್ಚ ರಕ್ತಕೇ ಚೈವ ವಾಸಸೀ ॥ ೯ ॥

ಯಾನಿ ಚಾಭ್ಯವಹಾರಾಣಿ ಭಕ್ಷ್ಯಾಣಿ ಚ ಫಲಾನಿ ಚ ।
ಪ್ರಯಚ್ಛ ತಾನಿ ದೇವಾಯ ಭವ ತ್ವಂ ಚೈವ ತನ್ಮನಾಃ ॥ ೧೦ ॥

ಆದ್ಯಂ ತಂ ಯಜ್ಞಪುರುಷಂ ಯಥಾಶಕ್ತಿ ಪ್ರಸಾಧಯ ।
ಆರಾಧ್ಯ ಸ್ಥಾಪಿತಂ ದೇವಂ ತಸ್ಮಿನ್ನೇವ ನರಾಲಯೇ ॥ ೧೧ ॥

ಪುಣ್ಯೈಸ್ತೀರ್ಥೋರ್ಕಕೈರ್ಗಂಧೈರ್ಮಧುನಾ ಸರ್ಪಿಷಾ ತಥಾ ।
ಕ್ಷೀರೇಣ ಸ್ನಾಪಯೇದ್ದೇವಂ ಚಿತ್ರಭಾನುಂ ದಿವಾಕರಂ ॥ ೧೨ ॥

ದಧಿಕ್ಷೀರಪ್ರದಾನ್ಯಾತಿ ಸ್ವರ್ಗಲೋಕಾನ್ಮಧುಚ್ಯುತಾನ್ ।
ಪ್ರಯಾಸ್ಯತಿ ಯದುಶ್ರೇಷ್ಠ ಶಾಶ್ವತೀಂ ನಿರ್ವೃತಿಂ ತಥಾ ॥ ೧೩ ॥

---

೯-೧೦. ಹೂಗಳು, ಭಕ್ಷ್ಯಗಳು, ಧೂಪ, ಗಂಧಪ್ರಿಯವಾದ ಆಭರಣ, ಎರಡು ರಕ್ತವಸ್ತ್ರಗಳು ಮೊದಲಾದವುಗಳನ್ನೂ, ಭೋಜ್ಯವಸ್ತುಗಳು, ತಿನ್ನಲು ಅರ್ಹವಾದ ಭಕ್ಷ್ಯಗಳು, ಹಣ್ಣುಗಳು ಮುಂತಾದುವನ್ನೂ, ದೇವರಿಗೆ ಸಮರ್ಪಿಸಿ, ಅವನಲ್ಲಿಯೇ ಮನಸ್ಸನ್ನು ಇಡಬೇಕು.

೧೧. ಅಯ್ಯಾ ನರನೇ! ಆದಿಸ್ವರೂಪನೂ, ಯಜ್ಞಪುರುಷನೂ, ಆ ಆಲಯ ದಲ್ಲಿಯೇ ಸ್ಥಾಪಿತನೂ ಆದ ದೇವನನ್ನು ಶಕ್ತಿಯಿದ್ದಷ್ಟು ಮಟ್ಟಿಗೆ ಸಂಭಾರಗಳಿಂದ ಪೂಜಿಸಿ ಪ್ರಸನ್ನನನ್ನಾಗಿ ಮಾಡಿಕೊಳ್ಳಬೇಕು.

೧೨. ಚಿತ್ರಭಾನುವೆನಿಸಿದ ಸೂರ್ಯನನ್ನು ಪುಣ್ಯಕರವಾದ ತೀರ್ಥಗಳು, ಜೇನು ತುಪ್ಪ, ಹಾಲು, ಆಜ್ಯ, ಗಂಧೋದಕ ಇವುಗಳಿಂದ ಅಭಿಷೇಕಮಾಡಬೇಕು.

೧೩. ಹೀಗೆ ಅಭಿಷೇಕಮಾಡಿದವನು ಸ್ವರ್ಗಲೋಕದಿಂದ ಮಧುರರಸಸ್ರವಿ ಸುತ್ತಿರುವ ಹಾಲು, ಮೊಸರು, ಇವುಗಳ ಮಡುಗಳನ್ನೇ ಹೊಂದುತ್ತಾನೆ. ಅಯ್ಯಾ ಯದುಶ್ರೇಷ್ಠನೇ! ಹಾಗೆಯೇ ಸ್ಥಿರವಾದ ಮೋಕ್ಷಸುಖವನ್ನೂ ಹೊಂದುತ್ತಾನೆ.

**ಸ್ತೋತ್ರೈರ್ಗೀತೈಸ್ತಥಾ ವಾದ್ಯೈಃ ಬ್ರಾಹ್ಮಣಾನಾಂ ಚ ಭೋಜನೈಃ ।**
**ಮನಸಶ್ಚೈಕತಾಯೋಗಾದಾರಾಧಯ ವಿಭಾವಸುಂ ॥ ೧೪ ॥**

**ಆರಾಧ್ಯ ತಂ ವಿದೇಹಾನಾಂ ಪುರುಷಾಃ ಸಪ್ತಸಪ್ತತಿಃ ।**
**ಹೈಹಯಾನಾಂ ಚ ಪಂಚಾಶದಮೃತತ್ವಂ ಸಮಾಗತಾಃ ॥ ೧೫ ॥**

**ಸ ತ್ವಮೇಭಿಃ ಪ್ರಕಾರೈಸ್ತಮುಪವಾಸೈಸ್ತು ಭಾಸ್ಕರಂ ।**
**ಸಂತೋಷಯ ಹಿ ತುಷ್ಟೋಽಸೌ ಭಾನುರ್ಭವತಿ ಶಾಂತಿದಃ ॥ ೧೬ ॥**

**॥ ಕೃಷ್ಣ ಉವಾಚ ॥**

**ಉಪವಾಸೈಶ್ಚಿತ್ರಭಾನುಃ ಕಥಂ ತುಷ್ಟಃ ಪ್ರಜಾಯತೇ ।**
**ಪರಿಚರ್ಯಾ ಕಥಂ ಕಾರ್ಯಾ ಯಾ ಕಾರ್ಯಾ ಚೋಪವಾಸಿನಾ ॥ ೧೭ ॥**

**ಯದ್ಯತ್ಕಾರ್ಯಂ ಯದಾ ಚೈವ ಭಾನೋರಾರಾಧನಂ ನರೈಃ ।**
**ತತ್ಸರ್ವಂ ವಿಸ್ತರಾದ್ಬ್ರಹ್ಮನ್ ಯಥಾವದ್ವಕ್ತುಮರ್ಹಸಿ ॥ ೧೮ ॥**

---

೧೪. ಗಾನರೂಪಗಳಾದ ಸ್ತೋತ್ರಗಳಿಂದಲೂ, ವಾದ್ಯವಾದನದಿಂದಲೂ, ಬ್ರಾಹ್ಮಣ ಸಂತರ್ಪಣೆಯಿಂದಲೂ, ಸೂರ್ಯನಲ್ಲಿಯೇ ಮನಸ್ಸು ಐಕ್ಯ ಹೊಂದುವಂತೆ ಮಾಡುವುದರಿಂದಲೂ, ಸೂರ್ಯನನ್ನು ಆರಾಧಿಸು.

೧೫. ವಿದೇಹ ದೇಶ ನಿವಾಸಿಗಳಾದ ಎಪ್ಪತ್ತೇಳು ಮಂದಿ ಪುರುಷರೂ, ಹೇಹಯ ದೇಶವಾಸಿಗಳಾದ ಐವತ್ತು ಮಂದಿ ಪುರುಷರೂ, ಈ ರೀತಿ ಸೂರ್ಯನನ್ನು ಆರಾಧಿಸಿ ಮುಕ್ತಿಯನ್ನು ಹೊಂದಿದರು.

೧೬. ನೀನೂ ಈ ಪ್ರಕಾರವಾಗಿ ಉಪವಾಸ ಪೂಜೆ ಮೊದಲಾದುವುಗಳಿಂದ ಸೂರ್ಯನನ್ನು ಸಂತೋಷಪಡಿಸು. ಇವುಗಳಿಂದ ಸೂರ್ಯನು ಸಂತುಷ್ಟನಾಗಿ ಶಾಂತಿಯನ್ನು ಹೊಂದುತ್ತಾನೆ ಎಂದನು.

೧೭. ಕೃಷ್ಣನು ಹೇಳುತ್ತಾನೆ—ಉಪವಾಸಗಳಿಂದ ಸೂರ್ಯನು ಹೇಗೆ ಸಂತುಷ್ಟನಾಗುತ್ತಾನೆ? ಹೀಗೆ ಉಪವಾಸವಿದ್ದರೆ ಸೂರ್ಯನಿಗೆ ಮಾಡಬೇಕಾದ ಶುಶ್ರೂಷೆಯನ್ನು ಹೇಗೆ ಮಾಡಲಾದೀತು ?

೧೮. ಎಲೈ ಬ್ರಹ್ಮನೇ ! ಮನುಷ್ಯರು ಸೂರ್ಯನನ್ನು ಯಾವ ಯಾವ ರೀತಿ ಆರಾಧಿಸಬೇಕು ? ಅದೆಲ್ಲವನ್ನೂ ವಿಸ್ತರದಿಂದ ಕ್ರಮವಾಗಿ ಹೇಳು" ಎಂದನು.

॥ ಬ್ರಹ್ಮೋವಾಚ ॥

ಸ್ಮೃತಃ ಸಂಪೂಜಿತೋ ಧೂಪಪುಷ್ಪಾದ್ಯೈಃ ಸ ಸದಾ ರವಿಃ ।
ಭೋಗಿನಾಮುಪಕಾರಾಯ ಕಿಂ ಪುನಶ್ಚೋಪವಾಸಿನಾಂ ॥ ೧೯ ॥

ಉಪಾವೃತ್ತಸ್ತು ಪಾಪೇಭ್ಯೋ ಯಸ್ತು ವಾಸೋ ಗುಣೈಃ ಸಹ ।
ಉಪವಾಸಃ ಸ ವಿಜ್ಞೇಯಃ ಸರ್ವಭೋಗವಿವರ್ಜಿತಃ ॥ ೨೦ ॥

ಏಕರಾತ್ರಂ ದ್ವಿರಾತ್ರಂ ವಾ ತ್ರಿರಾತ್ರಮಥ ವಾ ಹರೇ ।
ಉಪವಾಸೀ ರವಿಂ ಯಸ್ತು ಭಕ್ತ್ಯಾ ಧ್ಯಾಯತಿ ಮಾನವಃ ॥ ೨೧ ॥

ತನ್ನಾಮವಾಚೀ ತತ್ಕರ್ಮಾರತಸ್ತದ್ಗತಮಾನಸಃ ।
ನಿಷ್ಕಾಮಃ ಪೂಜಯಿತ್ವಾ ತಂ ಪರಂ ಬ್ರಹ್ಮಾಧಿಗಚ್ಛತಿ ॥ ೨೨ ॥

---

೧೯. ಬ್ರಹ್ಮನು ಹೇಳುತ್ತಾನೆ—ಧೂಪ, ಪುಷ್ಪ ಮೊದಲಾದುವುಗಳಿಂದ ಅವನನ್ನು ಪೂಜಿಸಿ ತಾವು ಪ್ರಸಾದ ತೆಗೆದುಕೊಂಡು ಭೋಗಿಸತಕ್ಕವರಿಗೂ, ಸ್ಮರಣೆ ಮಾಡತಕ್ಕವರಿಗೂ, ಸೂರ್ಯನು ಇಷ್ಟಾರ್ಥ ಕೊಡುವನು ಎಂದಮೇಲೆ, ನಿಯಮದಿಂದ ಪೂಜೆ ಮಾಡಿ ಉಪವಾಸ ಮಾಡಿದವನಿಗೆ ಫಲ ಪ್ರಾಪ್ತಿಯ ವಿಷಯವನ್ನು ಹೇಳತಕ್ಕದ್ದೇನಿದೆ?

೨೦. ಪಾಪಗಳಿಂದ ನಿವೃತ್ತನಾಗಿ, ಗುಣಗಳಿಂದ ಕೂಡಿ ವಾಸಿಸುವುದೇ ಸರ್ವ ಭೋಗಗಳನ್ನು ವರ್ಜಿಸಿದ ಉಪವಾಸ ಎಂದು ತಿಳಿಯಬೇಕು.

೨೧. ಅಯ್ಯಾ, ಹರಿಯೇ! ಒಂದು ರಾತ್ರಿಯೋ, ಎರಡು ರಾತ್ರಿಯೋ ಅಥವಾ ಮೂರು ರಾತ್ರಿಯೋ ಉಪವಾಸ ಮಾಡಿ ಯಾವನು ಭಕ್ತಿಯಿಂದ ಸೂರ್ಯನನ್ನು ಧ್ಯಾನ ಮಾಡುವನೋ.

೨೨. ಅಥವಾ ಅವನ ಹೆಸರನ್ನು ಉಚ್ಚರಿಸುವನೋ, ಮತ್ತು ಅವನ ಸೇವಾ ಪೂಜಾದಿ ಕೆಲಸಗಳಲ್ಲಿ ಆಸಕ್ತಿ ವಹಿಸಿ ಆತನಲ್ಲೇ ಮನಸ್ಸಿಟ್ಟವನೂ, ಆಗಿ ನಿಷ್ಕಾಮವಾಗಿ ಪೂಜಿಸಿದರೆ ಪರಬ್ರಹ್ಮವನ್ನು ಹೊಂದುತ್ತಾನೆ.

**ಯಂ ಚ ಕಾಮಮಭಿಧ್ಯಾಯ ಭಾಸ್ಕರಾರ್ಪಿತಮಾನಸಃ ।**
**ಉಪೋಷತಿ ತಮಾಪ್ನೋತಿ ಪ್ರಸನ್ನೇ ತು ವೃಷಧ್ವಜೇ ॥ ೨೩ ॥**

**॥ ಶ್ರೀ ಕೃಷ್ಣ ಉವಾಚ ॥**

**ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಶೂದ್ರೈಃ ಸ್ತ್ರೀಭಿಸ್ತಥಾ ವಿಭೋ ।**
**ಸಂಸಾರಗರ್ತಪಂಕಸ್ಥೈಃ ಸುಗತಿಃ ಪ್ರಾಪ್ಯತೇ ಕಥಂ ॥ ೨೪ ॥**

**॥ ಬ್ರಹ್ಮೋವಾಚ ॥**

**ಅಥಾರಾಧ್ಯ ಜಗನ್ನಾಥಂ ಭಾಸ್ಕರಂ ತಿಮಿರಾಪಹಂ ।**
**ನಿರ್ವ್ಯಲೀಕೇನ ಚಿತ್ತೇನ ಪ್ರಯಾಸ್ಯತಿ ಚ ಸದ್ಗತಿಂ ॥ ೨೫ ॥**

**ವಿಷಯಗ್ರಾಹವ್ಯೈಷಮ್ಯಂ ನ ಚಿತ್ತಂ ಭಾಸ್ಕರಾರ್ಪಣಂ ।**
**ಸ ಕಥಂ ಪಾಪಕರ್ತಾ ವೈ ನರೋ ಯಾಸ್ಯತಿ ಸದ್ಗತಿಂ ॥ ೨೬ ॥**

**ಯದಿ ಸಂಸಾರದುಃಖಾರ್ತಃ ಸುಗತಿಂ ಗಂತುಮಿಚ್ಛಸಿ ।**
**ತದಾರಾಧಯ ಸರ್ವೇಶಂ ಗ್ರಹೇಶಂ ಲೋಕಪೂಜಿತಂ ॥ ೨೭ ॥**

---

೨೩. ಸೂರ್ಯನಲ್ಲಿ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸಿ ಯಾವ ಇಷ್ಟಾರ್ಥವನ್ನು ಬಯಸಿ ಉಪವಾಸ ಮಾಡುವನೋ ಅಂಥವನಿಗೆ ಧರ್ಮಧ್ವಜನಾದ ಸೂರ್ಯನು ಪ್ರಸನ್ನನಾಗುವುದರಿಂದ ಸಫಲ ಮನೋರಥನಾಗುತ್ತಾನೆ ಎಂದನು.

೨೪. ಕೃಷ್ಣನು ಹೇಳುತ್ತಾನೆ—ಅಯ್ಯಾ ವಿಭುವೇ! ಸಂಸಾರವೆಂಬ ಕೆಸರಿನಲ್ಲಿ ಸಿಕ್ಕಿಬಿದ್ದಿರುವ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು ಈ ವರ್ಣಗಳ ಹೆಂಗಸರು ಗಂಡಸರು ಇವರಿಗೆಲ್ಲಾ ಸದ್ಗತಿ ಹೇಗೆ ದೊರೆಯುವುದು ? ಎಂದನು.

೨೫-೨೬. ಬ್ರಹ್ಮನು ಹೇಳುತ್ತಾನೆ—ಹಾಗಿರುತ್ತಿದ್ದರೂ ಅವರು ಅಂಧಕಾರ ನಾಶಕನಾದ ಸೂರ್ಯ ದೇವನನ್ನು ಪರಿಶುದ್ಧವಾದ ಮನಸ್ಸಿನಿಂದ ಆರಾಧನೆ ಮಾಡಿದಗೆ ಸದ್ಗತಿಯನ್ನು ಹೊಂದುತ್ತಾರೆ. ವಿಷಯಗಳನ್ನು ಗ್ರಹಿಸುವ ಚಪಲ ಸ್ಥಿತಿಯುಳ್ಳದ್ದಾಗಿ, ಚಿತ್ತವು ಸೂರ್ಯನಲ್ಲಿ ನೆಲಸದೇ ಹೋದಾಗ, ಮಾನವನು ಅನೇಕ ಪಾಪಕೃತ್ಯಗಳನ್ನು ಆಚರಿಸುವನು. ಅಂಥವನು ಸದ್ಗತಿಯನ್ನು ಹೇಗೆ ಹೊಂದುವನೆಂದರೆ:—

೨೭. ಹಾಗೆ ಸಂಸಾರದುಃಖದಿಂದ ಪೀಡಿತನಾಗಿದ್ದರೂ ಮುಕ್ತಿಯನ್ನು ಹೊಂದಬೇಕೆಂದು ಅಪೇಕ್ಷೆ ಪ್ರಬಲವಾಗಿ ಇದ್ದರೆ, ಗ್ರಹಗಳಿಗೆ ಅಧಿಪನೂ, ಲೋಕಪೂಜಿತನೂ, ಸರ್ವಕ್ಕೂ ಈಶನೂ ಆದ ಸೂರ್ಯನನ್ನು ಆರಾಧಿಸತಕ್ಕದ್ದು.

ಪುಷ್ಪೈಃ ಸುಗಂಧೈ ರ್ಹೃದ್ಯೈಶ್ಚ ಧೂಪೈಃ ಸಾಗರುಚಂದನೈಃ ।
ವಾಸೋ ವಿಭೂಷಣೈರ್ಭಕ್ಷ್ಯೈರುಪವಾಸಪರಾಯಣಃ ॥ ೨೮ ॥

ಯದಿ ಸಂಸಾರನಿರ್ವೇದಾದಭಿವಾಂಛಸಿ ಸದ್ಗತಿಂ ॥
ತಥಾರಾಧಯ ಕಾಲೇಶಂ ಯಚ್ಚೇಷ್ಟಂ ತವ ಚೇತಸಾ ॥ ೨೯ ॥

ಪುಷ್ಪಾಣಿ ಯದಿ ತೇ ನಸ್ಯುಃ ಶಸ್ತಂ ಪಾದಪಪಲ್ಲವೈಃ ।
ದೂರ್ವಾಂಕುರೈರಪಿ ಕೃಷ್ಣ ತದಭಾವೇsರ್ಚಯೇದ್ರವಿಂ ॥ ೩೦ ॥

ಪತ್ರಪುಷ್ಪಾಂಬುಭಿರ್ಧೂಪೈರ್ಯಥಾವಿಭವಮಾತ್ಮನಃ ।
ಪೂಜಿತಸ್ತುಷ್ಟಿಮತುಲಾಂ ಭಕ್ತ್ಯಾ ಯಾತ್ಯೇಕಚೇತಸಾಂ ॥ ೩೧ ॥

ಯಃ ಸದಾssಯತನೇ ಭಾನೋಃ ಕುರ್ಯಾತ್ಸಂಮಾರ್ಜನಂ ನರಃ ।
ಸಪಾಂಸುದೇಹಸಂಯೋಗಾತ್ಸರ್ವಪಾಪೈಃ ಪ್ರಮುಚ್ಯತೇ ॥ ೩೨ ॥

---

೨೮–೨೯. ಸಂಸಾರದಲ್ಲಿ ಬೇಸರಹುಟ್ಟಿ ಸದ್ಗತಿಯನ್ನು ಅಪೇಕ್ಷಿಸಿದ್ದೇ ಆದರೆ ಸುವಾಸನಾಯುಕ್ತವೂ,-ಮನೋಹರವೂ ಆದ ಗಂಧಪುಷ್ಪಗಳಿಂದಲೂ, ವಸ್ತ್ರ ಆಭರಣ ಮೊದಲಾದವುಗಳಿಂದಲೂ, ಅಗರು ಚಂದನ ಮೊದಲಾದ ಧೂಪ ಸಮರ್ಪಣೆ ಯಿಂದಲೂ, ಭಕ್ಷ್ಯಗಳ ನಿವೇದನದಿಂದಲೂ, ಪೂಜಿಸಿ ನೀನು ಉಪವಾಸ ಪರಾಯಣ ನಾಗಿ ಇರುತ್ತಾ ನಿನಗೆ ಯಾವ ವಸ್ತು ಇಷ್ಟವಾಗಿದೆಯೋ ಆ ವಸ್ತುಗಳನ್ನು ಸ್ವಾಮಿಗೆ ಸಮರ್ಪಿಸುವ ಮೂಲಕ ಕಾಲಾಧಿಪನಾದ ಸೂರ್ಯನನ್ನು ಆರಾಧಿಸು.

೩೦. ಸುವಾಸನೆಯಾದ ಹೂಗಳು ದೊರೆಯದೇ ಹೋದರೆ ಗಿಡದ ತಳಿರು ಗಳಿಂದ ಪೂಜಿಸುವುದು ಪ್ರಶಸ್ತವು. ಅಯ್ಯಾ ಕೃಷ್ಣನೇ! ಆ ತಳಿರೂ ದೊರೆಯದೇ ಹೋದರೆ ಗರಿಕೆಯ ಚಿಗುರುಗಳಿಂದ ಸೂರ್ಯನನ್ನು ಪೂಜಿಸಬೇಕು.

೩೧. ಎಲೆಗಳು, ಹೂಗಳು, ಶುದ್ಧೋದಕ, ಧೂಪಗಳು, ಮುಂತಾದವು ಗಳಿಂದ ತನ್ನ ವಿಭವಕ್ಕೆ ಅನುಸಾರವಾಗಿ ಪೂಜಿಸಿದರೆ; ಭಕ್ತಿಯಿಂದ ಸೂರ್ಯನಲ್ಲಿ ಏಕ ಮನಸ್ಕರಾದವರಿಗೆ ಯಾವ ಪ್ರಕಾರವಾದ ತುಷ್ಟಿಯಾಗುವುದೋ ಆ ಪ್ರಕಾರವಾದ ತುಷ್ಟಿಯನ್ನು ಇವನೂ ಹೊಂದುತ್ತಾನೆ.

೩೨. ಸೂರ್ಯದೇವಾಲಯದಲ್ಲಿ ಕಸವನ್ನು ಗುಡಿಸುವ ಮನುಷ್ಯನು, ಆ ದೇವಾ ಲಯದ ಧೂಳು ಇವನ ದೇಹಕ್ಕೆ ಸೋಂಕುವುದರಿಂದ ಸರ್ವ ಪಾಪಗಳಿಂದಲೂ ಮುಕ್ತ ನಾಗುತ್ತಾನೆ.

**ಯಾವತ್ಯಃ ಪಾಂಸುಕಣಿಕಾಃ ಮಾರ್ಜ್ಯಂತೇ ಭಾಸ್ಕರಾಲಯೇ ।**
**ದಿನಾನಿ ದಿವಿ ದಿವ್ಯಾನಿ ತಾವಂತ್ಯಾ ಮೋದತೇ ನರಃ ॥ ೩೩ ॥**

**ಸಬಾಹ್ಯಾಭ್ಯಂತರಂ ವೇಶ್ಮ ಮಾರ್ಜತೇ ಭಾಸ್ಕರಸ್ಯ ಯಃ ।**
**ಸ ಬಾಹ್ಯಾಭ್ಯಂತರಸ್ತಸ್ಯ ಕಾಯೋ ನಿಷ್ಕಲ್ಮಷೋ ಭವೇತ್ ॥ ೩೪ ॥**

**ಯಶ್ಚಾನುಲೇಪನಂ ಕುರ್ಯಾತ್ ಭಾನೋರಾಯಾತನೇ ನರಃ ।**
**ಸ ಹೇಲಿಲೋಕಮಾಸಾದ್ಯ ಮೋದತೇ ಗೋಪತೌ ಹರೌ ॥ ೩೫ ॥**

**ಮೃದಾ ವಾ ಮೃದ್ವಿಕಾರೈರ್ವಾ ವರ್ಣಕೈರ್ಗೋಮಯೇನ ವಾ ।**
**ಅನುಲೇಪನಕೃದ್ಭಕ್ತ್ಯಾ ನರೋ ಗೋಪತಿಮಾಪ್ನುಯಾತ್ ॥ ೩೬ ॥**

**ಉದಕಾಭ್ಯುಕ್ಷಣಂ ಭಾನೋರ್ಯಃ ಕರೋತಿ ತಥಾ ಕ್ಷಯೇ ।**
**ಸಗಚ್ಛತಿ ನರಃ ಕೃಷ್ಣ ಯತ್ರಾಸ್ತೇ ಗೋಪತಿಃ ಸದಾ ॥ ೩೭ ॥**

---

೩೩. ಸೂರ್ಯಾಲಯದಲ್ಲಿ ಎಷ್ಟು ಧೂಳಿನ ಕಣವನ್ನು ಗುಡಿಸುವನೋ ಅಷ್ಟು ದೇವಮಾನದಿನಗಳ ಪರ್ಯಂತ ಈ ಮನುಷ್ಯನು ಸಂಪೂರ್ಣಸಂತೋಷವನ್ನು ಹೊಂದುತ್ತಾನೆ.

೩೪. ಯಾವನು ಹೊರಭಾಗ ಒಳಭಾಗ ಎರಡು ಕಡೆಯೂ ಸೂರ್ಯಾಲಯವನ್ನು ಗುಡಿಸುವನೋ, ಅವನ ಶರೀರದ ಒಳಭಾಗ ಹೊರಭಾಗಗಳೆರಡೂ ನಿಷ್ಕಲ್ಮಷವಾಗುವುವು.

೩೫. ಯಾವನು ಸೂರ್ಯಾಲಯದ ನೆಲವನ್ನು ಸಾರಿಸುವನೋ, ಅವನು ಸೂರ್ಯಲೋಕವನ್ನು ಹೊಂದಿ, ವಿಷ್ಣುವು ಗೋಪಾಲನಾಗಿರುವವರೆಗೆ (ಆತ್ಮನು ಇಂದ್ರಿಯ ನಿಯಾಮಕನಾಗಿ ಇಂದ್ರಿಯಾಧಿಪತಿಯಾಗಿರುವವವರೆಗೆ) ಸಂತೋಷಪಡುತ್ತಾನೆ.

೩೬. ಮಣ್ಣಿನಿಂದಾಗಲಿ, ಮಣ್ಣಿನ ರೂಪವಾಗಿರುವ ವಸ್ತುಗಳಿಂದಲಾಗಲಿ, ಬಣ್ಣಗಳಿಂದಲಾಗಲಿ, ಗೋಮಯದಿಂದಲಾಗಲಿ, ಭಕ್ತಿಯಿಂದ ಸಾರಿಸಿದವನು ಕಿರಣಾಧಿಪತಿಯಾದ ಸೂರ್ಯನನ್ನು ಹೊಂದುವನು.

೩೭ ಅಯ್ಯಾ, ಕೃಷ್ಣನೇ! ಯಾವನು ಸೂರ್ಯಾಲಯದಲ್ಲಿ ನೀರನ್ನು ಚುಮುಕಿಸುವನೋ, ಅವನು ಕಿರಣಾಧಿಪತಿಯಾದ ಸೂರ್ಯನು ಸರ್ವದಾ ಇರುವ ಸ್ಥಳಕ್ಕೆ ಹೋಗುತ್ತಾನೆ.

ಪುಷ್ಪಪ್ರಕರಮುತ್ಕರ್ಷಂ ಸುಗಂಧಂ ಭಾಸ್ಕರಾಲಯೇ ।
ಅನುಲಿಪ್ತೇ ನರೋ ದದ್ಯಾತ್ ತ್ಪೂಷೋತ್ತರಗೃಹಂ ವ್ರಜೇತ್ ॥ ೩೮ ॥

ವಿಮಾನವರಮಭ್ಯೇತ್ಯ ಸರ್ವರತ್ನಮಯಂ ದಿವಿ ।
ಸಂಪ್ರಾಪ್ನೋತಿ ನರೋ ದತ್ವಾ ದೀಪಕಂ ಭಾಸ್ಕರಾಲಯೇ ॥ ೩೯ ॥

ಯಸ್ತು ಸಂವತ್ಸರಂ ಪೂರ್ಣಂ ತಿಲಪಾತ್ರಪ್ರದೋ ನರಃ ।
ಧ್ವಜಂ ಚ ಭಾಸ್ಕರೇ ದದ್ಯಾತ್ ಸಮಮತ್ರ ಫಲಂ ಲಭೇತ್ ॥ ೪೦ ॥

ವಿಧುನೋತ್ಯತಿವಾತೇನ ದಾತುರಜ್ಞಾನತಃ ಕೃತಂ ।
ಪಾಪಂ ದಾತುರ್ಗೃಹೇ ಭಾನುರ್ದಿವಾರಾತ್ರೌ ನ ಸಂಶಯಃ ॥ ೪೧ ॥

ಗೀತವಾದ್ಯಾದಿಭಿರ್ದೇವಂ ಯ ಉಪಾಸ್ತೇ ವಿಭಾವಸುಂ ।
ಗಂಧರ್ವನೃತ್ಯೈರ್ವಾದ್ಯೈಶ್ಚ ವಿಮಾನಸ್ಥೋ ನಿಷೇವ್ಯತೇ ॥ ೪೨ ॥

---

೩೮. ಯಾವನು ಸಾರಿಸಿದ ಸೂರ್ಯ ದೇವಾಲಯದಲ್ಲಿ ಅತಿ ಸುಗಂಧಯುಕ್ತಗಳಾದ ಪುಷ್ಪಸಮೂಹದಿಂದ ಅಲಂಕರಿಸುವನೋ ಅವನು ಪೂಷನ ಶ್ರೇಷ್ಠವಾದ ಗೃಹವನ್ನು ಸೇರುತ್ತಾನೆ.

೩೯. ಸೂರ್ಯಾಲಯದಲ್ಲಿ ದೀಪವನ್ನಿಟ್ಟು ಸೇವಿಸಿದ ಮನುಷ್ಯನು, ಶ್ರೇಷ್ಠವಾದ ವಿಮಾನವನ್ನೇರಿ ಸಮಸ್ತ ರತ್ನ ಸಮೂಹಗಳಿಂದ ಯುಕ್ತವಾದ ಸೂರ್ಯಲೋಕವನ್ನು ಸೇರುತ್ತಾನೆ.

೪೦. ಒಂದು ಸಂವತ್ಸರ ಪೂರ್ತಿಯಾಗುವಷ್ಟು ಕಾಲ ತಿಲಪಾತ್ರೆಯನ್ನೂ, ಧ್ವಜವನ್ನೂ ಸೂರ್ಯಪ್ರೀತಿಗಾಗಿ ದಾನಮಾಡಿದವನು, ಎರಡು ದಾನಗಳಿಗೂ ಸಮನಾದ ಫಲವನ್ನು ಹೊಂದುತ್ತಾನೆ.

೪೧. ಬಿರುಗಾಳಿಯು ಧೂಳುಗಳನ್ನು ಹಾರಿಸುವಂತೆ, ಯಜಮಾನನು ದಿವಾರಾತ್ರಿ ಅಜ್ಞಾನ ವಶದಿಂದ ಆಚರಿಸುವ ಪಾಪಗಳನ್ನು, ಸೂರ್ಯನು ಹೋಗಲಾಡಿಸುತ್ತಾನೆ.

೪೨. ಗೀತ ವಾದ್ಯ ಮುಂತಾದವುಗಳಿಂದ ಯಾವನು ಸೂರ್ಯ ದೇವನನ್ನು ಸೇವಿಸುವನೋ, ಅವನು ದಿವ್ಯ ವಿಮಾನವನ್ನು ಪಡೆದು, ಅದರಲ್ಲಿ ಕುಳಿತು ಗಂಧರ್ವರ ನೃತ್ಯ ಮೊದಲಾದುವುಗಳಿಂದ ಸೇವಿಸಲ್ಪಡುತ್ತಾನೆ.

ಜಾತಿಸ್ಮರತ್ವಂ ವೃದ್ಧಿಂ ಚ ತತಸ್ತು ಪರಮಾಂ ಗತಿಂ ।
ಪ್ರಾಪ್ನೋತಿ ಹೇಲೇರಾಯತನೇ ಪುಣ್ಯಾಖ್ಯಾನಕಥಾಕರಃ ॥ ೪೩ ॥

ತಸ್ಮಾತ್ಕುರ್ಯಾತ್ಪ್ರಯತ್ನೇನ ಪೂಜನಂ ಚಾಪಿವಾಚನಂ ।
ನಾನ್ಯತ್ಪ್ರೀತಿಕರಂ ಭಾನೋಃ ಪುಣ್ಯಾಖ್ಯಾನಾದೃತೇ ಕ್ವಚಿತ್ ॥ ೪೪ ॥

ಏಕೋಽಪಿ ಹೇಲೇಃ ಸುಕೃತಃ ಪ್ರಣಾಮೋ ।
ದಶಾಶ್ವಮೇಧಾವ ಭೃಥೈರ್ನ ತುಲ್ಯಃ ॥
ದಶಾಶ್ವಮೇಧೀ ಪುನರೇತಿ ಜನ್ಮ ।
ಹೇಲಿಪ್ರಣಾಮೀ ನ ಪುನರ್ಭವಾಯ ॥ ೪೫ ॥

ಏವಂ ದೇವೇಶ್ವರೋ ಭಕ್ತ್ಯಾ ಯೇನ ಭಾನುರುಪಾಸಿತಃ ।
ಸ ಪ್ರಾಪ್ನೋತಿ ಗತಿಂ ಶ್ಲಾಘ್ಯಾಂ ಯಾಮಿಚ್ಛತಿ ಚ ಚೇತಸಾ ॥ ೪೬ ॥

---

೪೩. ಸೂರ್ಯಾಲಯದಲ್ಲಿ ಪುಣ್ಯಕಥೆಯನ್ನು ನಡೆಯಿಸುವವನು, ತಾನು ಪೂರ್ವಜನ್ಮದಲ್ಲಿ ಏನಾಗಿದ್ದೆನೆಂಬುದನ್ನು ಸ್ಮರಿಸಿಕೊಳ್ಳುವ ಶಕ್ತಿಯನ್ನು ಪಡೆದು, ವೃದ್ಧಿಯನ್ನೂ ಶ್ರೇಷ್ಠವಾದ ಗತಿಯನ್ನೂ ಹೊಂದುತ್ತಾನೆ.

೪೪. ಆದುದರಿಂದ ಸರ್ವಪ್ರಯತ್ನದಿಂದಲೂ ಸೂರ್ಯಾರಾಧನೆಯನ್ನೂ ಪುರಾಣ ವಾಚನೆಯನ್ನೂ ಮಾಡಬೇಕು. ಈ ಪುಣ್ಯಕಥಾ ವಾಚನೆಯನ್ನು ಬಿಟ್ಟರೆ ಮತ್ತೆ ಯಾವುದೂ ಯಾವಾಗಲೂ ಸೂರ್ಯನಿಗೆ ಅಷ್ಟು ಪ್ರಿಯವಾಗುವುದಿಲ್ಲ.

೪೫ ಸೂರ್ಯನಿಗೆ ಒಂದು ನಮಸ್ಕಾರ ಮಾಡಿದುದರಿಂದ ಬರುವ ಪುಣ್ಯವು, ಹತ್ತು ಅಶ್ವಮೇಧ ಮಾಡಿ, ಅವಭೃಥ ಸ್ನಾನಮಾಡಿದುದರಿಂದ ಬರುವ ಪುಣ್ಯಕ್ಕಿಂತ, ಹೆಚ್ಚೇ ವಿನಾ ಅದಕ್ಕೆ ಸಮವೆಂದಿಗೂ ಅಲ್ಲ. ಹತ್ತು ಅಶ್ವಮೇಧಗಳನ್ನು ಮಾಡಿದವನು ಮತ್ತೆ ಜನ್ಮವನ್ನು ಎತ್ತುವನು. ಸೂರ್ಯ ನಮಸ್ಕಾರವಾದರೋ ಪುನರ್ಜನ್ಮವೇ ಇಲ್ಲದಂತೆ ಮಾಡಬಲ್ಲದು.

೪೬. ಹೀಗೆ ಯಾವನು ದೇವೇಶನಾದ ಸೂರ್ಯನನ್ನು ಉಪಾಸನೆ ಮಾಡುತ್ತಾನೆಯೋ, ಅವನು ಯಾವ ಗತಿ ಬೇಕೆಂದು ಮನಸ್ಸಿನಲ್ಲಿ ಅಪೇಕ್ಷಿಸುವನೋ ಆ ಗತಿಯನ್ನು ಹೊಂದುತ್ತಾನೆ.

ತಮಾರಾಧ್ಯ ಮಯಾ ಪ್ರಾಪ್ತಂ ಬ್ರಹ್ಮತ್ವಂ ಲೋಕಪೂಜಿತಂ ।
ಸೂರ್ಯಾದ್ಯಥೇಪ್ಸಿತಂ ಪ್ರಾಪ್ತಂ ತ್ವಯಾ ತಸ್ಮಾತ್ಪುರಾನಘ ॥ ೪೭ ॥

ಬ್ರಹ್ಮಹತ್ಯಾಭಿಭೂತಸ್ತು ಗೋಕ್ಶೃತ್ಯಾಭರಣೋ ಹರಃ ।
ತಮಾರಾಧ್ಯ ರವಿಂ ಭಕ್ತ್ಯಾ ಮುಕ್ತೋಽಸ ಬ್ರಹ್ಮಹತ್ಯಯಾ ॥ ೪೮ ॥

ದೇವತ್ವಂ ಮನುಜೈಃ ಕೈಶ್ಚಿತ್ ಗಂಧರ್ವತ್ವಂ ತಥಾಪರೈಃ ।
ವಿದ್ಯಾಧರತ್ವಮಪರೈರೇವಾಪ್ತಂ ಹಿ ದಿವಾಕರಾತ್ ॥ ೪೯ ॥

ಲೇಖಃ ಕ್ರತುಶತೇನೇಶಮಾರಾಧ್ಯೈನಂ ದಿವಾಕರಂ ।
ಇಂದ್ರತ್ವಮಗಮತ್ತಸ್ಮಾನ್ನಾನ್ಯಃ ಪೂಜ್ಯೋ ದಿವಾಕರಾತ್ ॥ ೫೦ ॥

ದೇವೇಭ್ಯೋಽಪ್ಯತಿ ಪೂಜ್ಯಸ್ತು ಸ್ವಗುರುರ್ಬ್ರಹ್ಮಚಾರಿಣಾಂ ।
ತಥಾ ಸ ಯಜ್ಞಪುರುಷೋ ವಿವಸ್ವಾನ್ಪೂಜ್ಯ ಏವ ಹಿ ॥ ೫೧ ॥

---

೪೭-೪೯. ನಾನೂ ಕೂಡ ಅವನನ್ನು ಆರಾಧಿಸಿಯೇ ಲೋಕ ಪೂಜಿತವಾದ ಈ ಬ್ರಹ್ಮ ಪದವಿಯನ್ನು ಪಡೆದೆನು. ಅಯ್ಯಾ, ಪಾಪರಹಿತನಾದ ಕೃಷ್ಣನೇ ! ಪೂರ್ವದಲ್ಲಿ ನೀನೂ ಆ ಸೂರ್ಯನಿಂದ ಇಷ್ಟಾರ್ಥವನ್ನು ಪಡೆದೆ. ಮತ್ತು ಬ್ರಹ್ಮಹತ್ಯಾ ದೋಷದಿಂದ ತಿರಸ್ಕೃತನಾಗಿದ್ದ ಸರ್ಪಾಭರಣನಾದ ಹರನೂ ಸೂರ್ಯನನ್ನಾರಾಧಿಸಿ ಬ್ರಹ್ಮಹತ್ಯೆಯಿಂದ ಮುಕ್ತನಾದನು. ಹಾಗೆಯೇ ಕೆಲವು ಮನುಷ್ಯರು ದೇವತ್ವವನ್ನೂ, ಮತ್ತೆ ಕೆಲವರು ಗಂಧರ್ವತ್ವವನ್ನೂ ಇನ್ನು ಕೆಲವರು ವಿದ್ಯಾರಧತ್ವವನ್ನೂ ಸೂರ್ಯನ ಕೃಪೆಯಿಂದ ಹೊಂದಿದರು.

೫೦. ಇಂದ್ರನು ನೂರು ಯಜ್ಞಗಳಿಂದ ಸೂರ್ಯನನ್ನು ಆರಾಧಿಸಿ ಇಂದ್ರಪದವಿಯನ್ನು ಹೊಂದಿದನು. ಆದುದರಿಂದ ಸೂರ್ಯನಿಗಿಂತ ಪೂಜಾರ್ಹನಾದವನು ಬೇರೆ ಯಾವನೂ ಇಲ್ಲ.

೫೧. ಬ್ರಹ್ಮಚರ್ಯಾಶ್ರಮವನ್ನು ಅನುಷ್ಠಾನ ಮಾಡುವವರಿಗೆ ತಮ್ಮ ಗುರುವು ದೇವರಿಗಿಂತಲೂ ಅತಿ ಪೂಜ್ಯನು. ಹಾಗೆಯೇ ಯಜ್ಞಪುರುಷನಾದ ಸೂರ್ಯನು ಸರ್ವರಿಗೂ ಪೂಜ್ಯನೇ ಅಲ್ಲವೇ ?

ಸ್ತ್ರಿಯಾಶ್ಚ ಭರ್ತಾರಮೃತೇ ಪೂಜ್ಯೋಽತ್ಯಂತಂ ವಿಭಾವಸುಃ ।
ಭರ್ತುರ್ಗೃಹಸ್ಥಸ್ಯ ಸತಃ ಪೂಜ್ಯೋ ಗೋಪತಿರಂಶುಮಾನ್ ॥ ೫೨ ॥

ವನ್ಯಾನಾ ಮಪಿ ಚಾರಾಧ್ಯಸ್ತಪೋಭಿಸ್ತಮನಾಶನಃ ।
ಧ್ಯೇಯಃ ಪರಿವ್ರಾಜಿಕಾನಾಂ ಸದಾ ದೇವೋ ವಿಭಾವಸುಃ ॥ ೫೩ ॥

ಏವಂ ಸರ್ವಾಶ್ರಮಣಾಂ ಹಿ ಚಿತ್ರಭಾನುಃ ಪರಾಯಣಂ ।
ಸರ್ವೇಷಾಂ ಚೈವ ವರ್ಣಾನಾಂ ಸ ಏವ ಪರಮಾಗತಿಃ ॥ ೫೪ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮಿೀ ಕಲ್ಪೇ ಸೂರ್ಯಪೂಜಾಮಹಿಮಾವರ್ಣನಂ ನಾಮ ತ್ರ್ಯಧಿಕಶತತಮೋಽಧ್ಯಾಯಃ.



---

೫೨. ಸುಮಂಗಲಿ ಸ್ತ್ರೀಯರಿಗೆ ತಮ್ಮ ಪತಿಯೇ ಸರ್ವಥಾ ಪೂಜ್ಯನು. ತಮ್ಮ ಗಂಡಂದಿರ ವಿಚಾರವಾದ ಮೇಲೆ ಅವರಿಗೆ ಸೂರ್ಯನೇ ಅತ್ಯಂತ ಪೂಜ್ಯನು. ಗೃಹಸ್ಥಾಶ್ರಮಿಯಾದ ಯಜಮಾನನಿಗೆ ಪ್ರಕಾಶಮಾನನೂ, ಕಿರಣಾಧಿಪನೂ ಆದ ಸೂರ್ಯನೇ ಪೂಜ್ಯನು.

೫೩. ವಾನಪ್ರಸ್ಥರೂ ಸಹ ಅಂಧಕಾರನಾಶಕನಾದ ಸೂರ್ಯನನ್ನೇ ಆರಾಧಿಸಿ ಕೃತಾರ್ಥರಾಗುವರು. ಸನ್ಯಾಸಿಗಳಿಗೆ ಕೂಡ ಯಾವಾಗಲೂ ಸೂರ್ಯನೇ ಧ್ಯಾನ ವಿಷಯನಾಗಿರುತ್ತಾನೆ.

೫೪. ಹೀಗೆ ಸೂರ್ಯನು ಎಲ್ಲಾ ಆಶ್ರಮಗಳವರಿಗೂ ಮುಖ್ಯಗತಿಯೂ, ಎಲ್ಲಾ ವರ್ಣಗಳವರಿಗೂ ಅವನೇ ಪರಮ ಪ್ರಾಪ್ಯಸ್ಥಾನನೂ ಆಗಿರುವನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮಿೀ ಕಲ್ಪದಲ್ಲಿ ಸೂರ್ಯಮಹಿಮಾ ವರ್ಣನೆ ಎಂಬ ನೂರಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಚತುರಧಿಕಶತತಮೋಽಧ್ಯಾಯಃ

ಶೃಣುಷ್ವ ಸಂಯತಃ ಕಾಮಾನುಪವಾಸಾಂಸ್ತಥಾಪರಾನ್ ।
ತಾಂಸ್ತಾನಾಶ್ರಿತ್ಯ ಯತ್ಕಾಮಾನ್ ಲಭತೇ ಶುದ್ಧಮಾನಸಃ ॥ ೧ ॥

ಸಪ್ತಮ್ಯಾಂ ಶುಕ್ಲಪಕ್ಷೇ ತು ಫಾಲ್ಗುನಸ್ಯೇಹ ಮಾನವಃ ।
ಜಪನ್ಹೇಲೀತಿ ದೇವಸ್ಯ ನಾಮ ಭಕ್ತ್ಯಾ ಪುನಃ ಪುನಃ ॥ ೨ ॥

ದೇವಾರ್ಚನೇ ಚಾಷ್ಟಶತಂ ಕೃತ್ವೈತಜ್ಜ ಜಪೇಚ್ಛುಚಿಃ ।
ಸ್ನಾತಃ ಪ್ರಸ್ಥಾನಕಾಲೇ ತು ಉತ್ಥಾನೇ ಸ್ಖಲಿತೇ ಕ್ಷುತೇ ॥ ೩ ॥

---

## ನೂರನಾಲ್ಕನೆಯ ಅಧ್ಯಾಯ

೧. ಕಾಮ್ಯಗಳಾಗಿ(ಫಲಾಪೇಕ್ಷೆಯಿಂದ ಕೂಡಿ) ಮಾಡುವ ಬೇರೆ ಬಗೆಯಾದ ಉಪವಾಸ ವಿಚಾರಗಳನ್ನು ನಿಯಮವಿಶಿಷ್ಟನಾಗಿ ಕೇಳು. ಆಯ್ಯಾ ಪರಿಶುದ್ಧ ಮನಸ್ಕನಾಗಿ ಕಾಮ್ಯೋಪವಾಸಗಳನ್ನು ಮಾಡಿದರೆ ಯಾವ ಅಪೇಕ್ಷೆಗಳನ್ನು ಹೊಂದುವನೋ ಅದನ್ನು ಕೇಳು.

೨. ಪ್ರತಿಯೊಬ್ಬ ಮನುಷ್ಯನೂ ಫಾಲ್ಗುಣ ಶುದ್ಧ ಸಪ್ತಮಿಯಲ್ಲಿ ಸೂರ್ಯದೇವನ ನಾಮವಾದ " ಹೇಲಿ " ಎಂಬುದನ್ನು ಬಹುಸಾರಿ ಜಪಿಸಬೇಕು.

೩. ಶುಚಿರ್ಭೂತನಾಗಿ ದೇವರನ್ನು ಪೂಜಿಸುವಾಗ ಹೇಲಿ ನಾಮ ಮಂತ್ರವನ್ನು ಎಂಟುನೂರು ಸಲ ಜಪಮಾಡಬೇಕು. ಸ್ನಾನ ಮಾಡುವಾಗಲೂ, ಪ್ರಯಾಣ ಕಾಲದಲ್ಲಿಯೂ, ಕುಳಿತಿದ್ದು ಏಳುವಾಗಲೂ, ಎಡವಿದಾಗಲೂ, ಶೀನು ಬಂದಾಗಲೂ ಈ ನಾಮವನ್ನೇ ಉಚ್ಚರಿಸಬೇಕು.

ಪಾಖಂಡಾನ್ ಪತಿತಾಂಶ್ಚೈವ ತಥೈವಾನ್ಯಾಯಕಾರಿಣಃ ।
ನಾಲಪೇತ ತಥಾ ಭಾನುಮರ್ಚಯೇ ಚ್ಛ್ರದ್ಧಯಾನ್ವಿತಃ ॥
ಇದಂ ಚೋದಾಹರೇದ್ಧ್ಯಾನೌ ಮನಃ ಸಂಧಾಯ ತತ್ಪರಃ ॥ ೪ ॥

ಹಂಸ ಹಂಸ ಕೃಪಾಲುಸ್ತ್ವಮಗತೀನಾಂ ಗತಿರ್ಭವ ।
ಸಂಸಾರಾರ್ಣವಮಗ್ನಾನಾಂ ತ್ರಾತಾ ಭವ ದಿವಾಕರ ॥ ೫ ॥

ಏವಂ ಪ್ರಸಾದ್ಯೋಪವಾಸಂ ಕೃತ್ವಾ ನಿಯತಮಾನಸಃ ।
ಪೂರ್ವಾಹ್ನ ಏವ ಚ ಸಕೃದಾಚಾಮೇದ್ವಾರಿ ನಿರ್ಮಲಂ ॥ ೬ ॥

ಸ್ನಾತ್ವಾಚಯಿತ್ವಾ ಹಂಸೇತಿ ಪುನರ್ನಾಮ ಪ್ರಕೀರ್ತಯೇತ್ ।
ವಸ್ರುಧಾರಾತ್ರಯಂ ಚೈವ ಕ್ಷಿಪೇತ್ತ್ರಿರ್ದೇವಪಾದಯೋಃ ॥ ೭ ॥

ಚೈತ್ರ ವೈಶಾಖಯೋಶ್ಚೈವ ತದ್ವಜ್ಜ್ಯೇಷ್ಠೇ ಚ ಪೂಜಯೇತ್ ।
ಮರ್ತ್ಯಲೋಕೇ ಗತಿಂ ಶ್ರೇಷ್ಠಾಂ ಕೃಷ್ಣ ಪ್ರಾಪ್ನೋತಿ ವೈ ನರಃ ॥ ೮ ॥

---

೪. ದೇವರೇ ಇಲ್ಲವೆನ್ನುವ ನಾಸ್ತಿಕರು, ಆಚಾರ ಭ್ರಷ್ಟರಾದವರು, ಅನ್ಯಾಯವನ್ನೇ ಆಚರಿಸುವವರು, ಇವರೊಡನೆ ಮಾತನಾಡನೆ ಶ್ರದ್ಧೆಯಿಂದ ಕೂಡಿದವನಾಗಿ ಸೂರ್ಯನನ್ನು ಪೂಜಿಸಬೇಕು.

೫. ಮನಸ್ಸನ್ನು ಸೂರ್ಯನಲ್ಲಿಟ್ಟು ಸೂರ್ಯನಲ್ಲೇ ಆಸಕ್ತನಾಗಿ "ಹಂಸ, ಹಂಸ ಎಂದು ಹೆಸರುಳ್ಳ ಸೂರ್ಯದೇವನೇ! ಗತಿಹೀನರಿಗೆ ಕೃಪಾಳುವಾದ ನೀನೇ ಗತಿಯಾಗು. ಅಯ್ಯಾ, ದಿವಾಕರನೇ ! ಸಂಸಾರ ಸಮುದ್ರದಲ್ಲಿ ಮುಳುಗಿದವರಿಗೆ ರಕ್ಷಕನಾಗು."

೬. ಎಂದು ಪ್ರಾರ್ಥನೆಮಾಡಿ ಸೂರ್ಯನನ್ನು ಪ್ರಸನ್ನನನ್ನಾಗಿ ಮಾಡಿಕೊಂಡು ಮನೋನಿಗ್ರಹದಿಂದ ಉಪವಾಸ ಮಾಡಿ, ಪೂರ್ವಾಹ್ನದಲ್ಲಿ ಒಂದುಸಾರಿ ನಿರ್ಮಲವಾದ ಜಲದಿಂದ ಆಚಮನಮಾಡಬೇಕು.

೭. ಸ್ನಾನ ಮಾಡಿ ಪೂಜೆಯನ್ನು ನೆರವೇರಿಸಿ ಹಂಸ ಎಂಬ ಹೆಸರನ್ನು ಉಚ್ಚರಿಸಬೇಕು. ಸೂರ್ಯದೇವನ ಪಾದದಲ್ಲಿ ತುಪ್ಪವನ್ನು ಧಾರೆಯಾಗಿ ಮೂರುಸಾರಿ ಹನಿಸಬೇಕು.

೮. ಎಲೈ ಕೃಷ್ಣನೇ ! ಸೂರ್ಯನನ್ನು ಆರಾಧಿಸಬೇಕೆಂದಿರುವ ಮನುಷ್ಯನು ಚೈತ್ರ ವೈಶಾಖ ಮಾಸಗಳಲ್ಲೂ, ಅದರಂತೆಯೇ ಜ್ಯೇಷ್ಠ ಮಾಸದಲ್ಲೂ ಸೂರ್ಯನನ್ನು ಪೂಜಿಸಿದರೆ ಮರ್ತ್ಯಲೋಕದಲ್ಲಿ ಶ್ರೇಷ್ಠವಾದ ಗತಿಯನ್ನು ಹೊಂದುತ್ತಾನೆ.

ಉತ್ಕ್ರಾಂತಸ್ತು ವ್ರಜೇತ್ಕೃಷ್ಣ ದಿವ್ಯಂ ಹಂಸಾಲಯಂ ಶುಭಂ ।
ವೃಷಧ್ವಜ ಪ್ರಸಾದಾದ್ಯೈಃ ಸಂಕ್ರಂದನ ಶ್ರಿಯಾವೃತಃ ॥ ೯ ॥

ಆಷಾಢೇ ಶ್ರಾವಣೇ ಚೈವ ಮಾಸಿ ಭಾದ್ರಪದೇ ತಥಾ ।
ತಥೈವಾಶ್ವಯುಜೇ ಚೈವ ಅನೇನ ವಿಧಿನಾ ನರಃ ॥ ೧೦ ॥

ಉಪೋಷ್ಯ ಸಂಪೂಜ್ಯ ತಥಾ ಮಾರ್ತಂಡೇತಿ ಚ ಕೀರ್ತಯೇತ್ ।
ಗೋಮೂತ್ರಪ್ರಾಶನಾತ್ಪೂತೋ ಧನೀ ಧನಪುರಂ ವ್ರಜೇತ್ ॥ ೧೧ ॥

ಆರಾಧಿತಸ್ಯ ಜಗತಾಮೀಶ್ವರಸ್ಯಾವ್ಯಯಾತ್ಮನಃ ।
ಉತ್ಕ್ರಾಂತಿಕಾಲೇ ಸ್ಮರಣಂ ಭಾಸ್ಕರಸ್ಯ ತಥಾSಪ್ನುಯಾತ್ ॥ ೧೨ ॥

ಕ್ಷೀರಸ್ಯ ಪ್ರಾಶನಂ ಕೃಷ್ಣ ವಿಧಿಂ ಚೈವ ಯಥೋದಿತಂ ।
ಕಾರ್ತಿಕಾದಿ ಯಥಾನ್ಯಾಯಂ ಕುರ್ಯಾನ್ಮಾಸಚತುಷ್ಟಯಂ ॥ ೧೩ ॥

---

೯. ಎಲೈ ಕೃಷ್ಣನೇ! ಅಂಥಾ ಮನುಷ್ಯನು ಪ್ರಾಣೋತ್ಕ್ರಮಣವಾದ ಮೇಲೆ ಸೂರ್ಯಾನುಗ್ರಹದಿಂದ ಇಂದ್ರ ವೈಭವಯುಕ್ತನಾಗಿ ದಿವ್ಯವೂ, ಶುಭಕರವೂ ಆದ ಹಂಸಾಲಯಕ್ಕೆ ಹೋಗುತ್ತಾನೆ.

೧೦. ಆಷಾಢ, ಶ್ರಾವಣ, ಭಾದ್ರಪದ, ಆಶ್ವಯುಜ ಈ ಮಾಸಗಳಲ್ಲಿ ಮನುಷ್ಯನು ಈ ವಿಧಿ ಪ್ರಕಾರ ಉಪವಾಸ ಮಾಡಿ ಮಾರ್ತಂಡ ಎಂದು ಕೀರ್ತನ ಮಾಡಬೇಕು.

೧೧. ಮತ್ತು ಗೋಮೂತ್ರ ಪ್ರಾಶನಮಾಡಬೇಕು. ಈ ವ್ರತದಿಂದ ಇವನು ಪರಿಶುದ್ಧನೂ, ಧನವಂತನೂ ಆಗಿ ಧನಪುರವನ್ನು ಹೊಂದುವನು.

೧೨. ಆತನು ಪ್ರಾಣೋತ್ಕ್ರಮಣ ಕಾಲದಲ್ಲಿ ತನ್ನಿಂದ ಆರಾಧಿತನೂ, ಜಗದೀಶ್ವರನೂ, ನಾಶರಹಿತಸ್ವರೂಪನೂ ಆದ ಸೂರ್ಯನ ಸ್ಮರಣವನ್ನು ಹೊಂದುವನು.

೧೩. ಎಲೈ ಕೃಷ್ಣನೇ! ಬಳಿಕ ಕ್ರಮವಾಗಿ ಕಾರ್ತಿಕ ಮೊದಲಾದ ನಾಲ್ಕು ಮಾಸಗಳಲ್ಲಿ ಕ್ಷೀರಪ್ರಾಶನೆಯನ್ನೂ ಪೂರ್ವೋಕ್ತವಿಧಿಯಿಂದ ವ್ರತವನ್ನೂ ಆಚರಿಸಬೇಕು.

ತೇನೈವ ವಿಧಿನಾ ಕೃಷ್ಣ ಭಾಸ್ಕರೇತಿ ಚ ಕೀರ್ತಯೇತ್ ।
ಸ ಯಾತಿ ಭಾನುಸಾಲೋಕ್ಯಂ ಭಾಸ್ಕರಂ ಸ್ಮರತಿ ಕ್ಷಯೇ ॥ ೧೪ ॥

ಪ್ರತಿಮಾಸಂ ದ್ವಿಜಾತಿಭ್ಯೋ ದದ್ಯಾದ್ದಾನಂ ಯಥೇಪ್ಸಿತಂ ।
ಚಾತುರ್ಮಾಸ್ಯೇ ತು ಸಂಪೂರ್ಣೇ ಕೃತ್ವಾಪುಸ್ತಕವಾಚನಂ ॥ ೧೫ ॥

ಕಥಾಂ ತು ಭಾಸ್ಕರಸ್ಯೇಹ ಸಂಗೀತಕಮಥಾಪಿ ವಾ ।
ಧರ್ಮಶ್ರವಣಮಭೀಷ್ಟಂಚ ಸದಾ ಧರ್ಮಧ್ವಜಸ್ಯ ತು ॥ ೧೬ ॥

ವಾಚಕಂ ಪೂಜಯಿತ್ವಾ ತು ತಸ್ಮಾತ್ಕಾರ್ಯಂ ವಿಪಶ್ಚಿತಾ ।
ಶ್ರಾದ್ಧಮನ್ನೇನ ಪಕ್ವೇನ ವಾಚಕೇನ ದ್ವಿಜೇನ ತು ॥
ದಿವ್ಯೇನ ಚ ಯಥಾಯುಕ್ತಮಭೀಷ್ಟಂ ಭಾಸ್ಕರಸ್ಯ ಹಿ ॥ ೧೭ ॥

ಏವ ಮೇವ ಗತಿಂ ಶ್ರೇಷ್ಠಾಂ ದೇವಾನಾಮನುಕೀರ್ತನಾತ್ ।
ಪ್ರಾಪ್ನುಯಾತ್ತ್ರಿವಿಧಾಂ ಕೃಷ್ಣ ತ್ರಿಲೋಕಾಖ್ಯಾಂ ನರಃ ಸದಾ ॥ ೧೮ ॥

---

೧೪. ಈ ವಿಧಿಯಿಂದಲೇ "ಭಾಸ್ಕರ" ಎಂದು ಕೀರ್ತನ ಮಾಡಬೇಕು. ಹೀಗೆ ಮಾಡಿದವನು ಸೂರ್ಯ ಸಾಲೋಕ್ಯವನ್ನು ಹೊಂದುತ್ತಾನೆ. ಉತ್ಕ್ರಮಣ ಕಾಲದಲ್ಲಿ ಭಾಸ್ಕರನನ್ನು ಸ್ಮರಿಸುತ್ತಾನೆ.

೧೫. ಈ ವ್ರತ ಮಾಡುವವನು ಪ್ರತಿ ತಿಂಗಳಲ್ಲೂ ಬ್ರಾಹ್ಮಣರಿಗೆ ಬೇಕಾದ ದಾನವನ್ನು ಕೊಡಬೇಕು. ಚಾತುರ್ಮಾಸ್ಯವು (ನಾಲ್ಕು ತಿಂಗಳ ವ್ರತವು) ಪೂರ್ಣವಾಗುತ್ತಲು ಪುಸ್ತಕ ವಾಚನವನ್ನು ಮಾಡಿಸಬೇಕು.

೧೬. ವಿದ್ವಾಂಸನಾದವನು ಸೂರ್ಯನ ಕಥೆಯನ್ನೂ, ಅಥವಾ ಸಂಗೀತ ಸೇವೆಯನ್ನೂ, ಮತ್ತು ಇಷ್ಟವಾದ ಸೂರ್ಯನ ಪುರಾಣ ಶ್ರವಣವನ್ನೂ, ಮಾಡಿಸಿ ಪುರಾಣ ವಾಚಕನಾದ ಬ್ರಾಹ್ಮಣನನ್ನು ಪೂಜಿಸಬೇಕು.

೧೭. ದಿವ್ಯಬ್ರಾಹ್ಮಣನೊಡನೆ ವಾಚಕ ಬ್ರಾಹ್ಮಣನನ್ನೂ ಭೋಜನಕ್ಕೆ ಆಹ್ವಾನಿಸಿ ಬಳಿಕ ಅನ್ನವನ್ನು ಪಕ್ವಮಾಡಿ ಅದರಿಂದ ಸೂರ್ಯೇಷ್ಟವಾದ ಶ್ರಾದ್ಧವನ್ನು ಮಾಡಬೇಕು.

೧೮. ಎಲೈ ಕೃಷ್ಣನೇ ! ದೇವರುಗಳನ್ನು ಕೀರ್ತನೆ ಮಾಡುವುದರಿಂದ ಮನುಷ್ಯನು ಯಾವಾಗಲೂ ತ್ರಿಲೋಕ ಎಂದು ಹೆಸರುಳ್ಳದ್ದೂ ಶ್ರೇಷ್ಠವೂ ಆದ ಮೂರು ಬಗೆಯಾದ ಗತಿಯನ್ನು ಹೊಂದುತ್ತಾನೆ.

ಕಥಿತಂ ಪಾರಣಂ ಯತ್ತೇ ಪ್ರಥಮಂ ಗೋಧರಾಯುತಂ ।
ಆಧಿಪತ್ಯಂ ತಥಾ ಭೋಗಾಂಸ್ತತಃ ಪ್ರಾಪ್ನೋತಿ ಮಾನುಷಃ ॥ ೧೯ ॥

ದ್ವಿತೀಯೇನ ತಥಾ ಯೋಗಂ ಗೋಪತೇಃ ಪ್ರಾಪ್ನುಯಾನ್ನರಃ ।
ಸೂರ್ಯಲೋಕಂ ತೃತೀಯೇನ ಪಾರಣೇನ ತಥಾSಽಪ್ನುಯಾತ್ ॥ ೨೦ ॥

ಏವಮೇತತ್ಸಮಾಖ್ಯಾತಂ ಗತಿಪ್ರಾಪಕಮುತ್ತಮಂ ।
ವಿಧಾನಂ ದೇವಶಾರ್ದೂಲ ಯದುಕ್ತಂ ಸಪ್ತಮೀವ್ರತೇ ॥ ೨೧ ॥

ಯಃ ಶ್ವೇತಾಂ ಸಪ್ತಮೀಂ ಕುರ್ಯಾತ್ ಸುಗತಿಂ ಶ್ರದ್ಧಯಾನ್ವಿತಃ ।
ತಥಾ ಭಕ್ತ್ಯಾ ಚ ವೈ ನಾರೀ ಪ್ರಾಪ್ನೋತಿ ತ್ರಿವಿಧಾಂ ಗತಿಂ ॥ ೨೨ ॥

ಏಷಾ ಧನ್ಯಾ ಪಾಪಹರಾ ತಿಥಿರ್ನಿತ್ಯ ಮುಪಾಸಿತಾ ।
ಆರಾಧನಾಯ ಯಸ್ತೇಷಾಂ ಯದಾ ಭಾನೋರ್ಧರಾಧಿಪ ॥ ೨೩ ॥

---

೧೯. ಮೊದಲನೆಯದಾಗಿ ಯಾವ ಪಾರಣೆಯನ್ನು ಹೇಳಿದೆನೋ ಅದನ್ನು ಆಚರಿಸುವುದರಿಂದ ಮನುಷ್ಯನು ಗೋಭೂಮಿಯುಕ್ತವಾದ ಆಧಿಪತ್ಯವನ್ನೂ, ಭೋಗಗಳನ್ನೂ ಹೊಂದುತ್ತಾನೆ.

೨೦. ಮನುಷ್ಯನು ಎರಡನೆಯ ಪಾರಣೆಯಿಂದ ಗೋಪತಿಯಾದ ಸೂರ್ಯನ ಸಂಬಂಧವನ್ನು ಹೊಂದುವನು. ಮೂರನೆಯ ಪಾರಣೆಯಿಂದ ಹಾಗೆಯೇ ಸೂರ್ಯಲೋಕವನ್ನು ಹೊಂದುತ್ತಾನೆ.

೨೧. ಅಯ್ಯಾ, ದೇವ ಶ್ರೇಷ್ಠನೇ! ಸಪ್ತಮೀ ವ್ರತದಲ್ಲಿ ಹೇಗೆ ಆಚರಿಸಬೇಕೆಂದು ಉಕ್ತವಾಗಿಯೋ ಅಂತಹ, ಉತ್ತಮವಾದದೂ ಮತ್ತು ಸದ್ಗತಿಯನ್ನು ಕೊಡತಕ್ಕದ್ದೂ ಆದ ಈ ವಿಧಾನವನ್ನು ಹೇಳಿದ್ದೇನೆ.

೨೨. ಶ್ರದ್ಧೆಯಿಂದ ಕೂಡಿ ಸದ್ಗತಿಪ್ರದವಾದ ಈ ಶ್ವೇತ ಸಪ್ತಮಿಯನ್ನು ಆಚರಿಸುವ ಪುರುಷನಿಗೂ ಅದೇ ರೀತಿಯಲ್ಲಿ ಆಚರಿಸುವ ಸ್ತ್ರೀಗೂ ಈ ವಿಧವಾದ ಸದ್ಗತಿಗಳೇ ಬರುತ್ತವೆ.

೨೩–೨೪. ಅಯ್ಯಾ, ಭೂಮಿಯನ್ನು ಧರಿಸಿರುವ ವಿಷ್ಣುವೇ ! (ಭೂದೇವಿಪತಿಯಾದ ವಿಷ್ಣುವೇ) ಈ ತಿಥಿಯು ಧನ್ಯವೂ ಪಾಪಹರವೂ ಆದುದು. ಪ್ರತಿಸಲವೂ

**ಪಠತಾಂ ಶೃಣ್ವತಾಂ ಚಾಪಿ ಸರ್ವಪಾಪಭಯಾಪಹಾ ।**
**ತಥಾ ಧನ್ಯಾ ಚ ಪುಣ್ಯಾ ಚ ತ್ರಿವರ್ಗಾದೀಷ್ಟದಾ ಸದಾ ॥ ೨೪ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ ತ್ರಿವರ್ಗಸಪ್ತಮೀ ವ್ರತನಿರೂಪಣಂ ನಾಮ ಚತುರಧಿಕ ಶತತಮೋऽಧ್ಯಾಯಃ.**



---

ಈ ತಿಥಿಯಲ್ಲಿ ಸೂರ್ಯೋಪಾಸನ ಮಾಡಿದವರಿಗೂ ಉಪಾಸನರೂಪವಾದ ಪಠನ ಶ್ರವಣಾದಿಗಳನ್ನು ಮಾಡಿದವರಿಗೂ, ಸಮಸ್ತ ಪಾಪಗಳ ಭಯವೂ ನಿವಾರಣೆಯಾಗುವುದು. ಮತ್ತು ಇದು ಧನ್ಯವೂ ಪುಣ್ಯವೂ ಸರ್ವದಾ ತ್ರಿವರ್ಗ ಮೊದಲಾದ ಇಷ್ಟಗಳನ್ನು ಕೊಡತಕ್ಕದ್ದೂ ಆಗಿರುತ್ತದೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ ತ್ರಿವರ್ಗ ಸಪ್ತಮೀವ್ರತ ನಿರೂಪಣೆಯೆಂಬ ನೂರನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಪಂಚಾಧಿಕಶತತಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಫಾಲ್ಗುನಾಮಲಪಕ್ಷಸ್ಯ ಸಪ್ತಮ್ಯಾಂ ಕ್ಷ್ಮಾಧರಾವ್ಯಯ ।
ಉಪೋಷಿತೋ ನರೋ ನಾರೀ ಸಮಭ್ಯರ್ಚ್ಯ ತಮೋಪಹಂ ॥ ೧ ॥

ಸೂರ್ಯನಾಮ ಜಪನ್ ಭಕ್ತ್ಯಾ ಮಿತಭೋಕ್ತಾ ಜಿತೇಂದ್ರಿಯಃ ।
ಉತ್ತಿಷ್ಠನ್ ಪ್ರಸ್ವಪಂ ಶ್ಚೈವ ಸೂರ್ಯಮೇವಾಭಿಕೀರ್ತಯೇತ್ ॥ ೨ ॥

ತತೋಽನ್ಯ ದಿವಸೇ ಪ್ರಾಪ್ತೇ ತ್ವಷ್ಟಮ್ಯಾಂ ಪ್ರಯತೋ ರವಿಂ ।
ಸ್ನಾತ್ವಾ ದೇವಂ ಸಮಭ್ಯರ್ಚ್ಯ ದದ್ಯಾದ್ವಿಪ್ರಾಯ ದಕ್ಷಿಣಾಂ ॥ ೩ ॥

---

## ನೂರೈದನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಭೂದೇವಿಯನ್ನು ಧರಿಸಿದವನೂ, ನಾಶರಹಿತನೂ ಆದ ಕೃಷ್ಣನೇ! ಪುರುಷನು ಅಥವಾ ಸ್ತ್ರೀಯು ಫಾಲ್ಗುಣ ಶುದ್ಧ ಸಪ್ತಮಿಯಲ್ಲಿ ಉಪವಾಸವಿದ್ದು ಅಂಧಕಾರ ವಿನಾಶಕನಾದ ಸೂರ್ಯನನ್ನು ಆರಾಧಿಸಬೇಕು.

೨. ಸೂರ್ಯನಾಮವನ್ನು ಭಕ್ತಿಯಿಂದ ಜಪಿಸುತ್ತಾ ಮಿತವಾಗಿ ಭೋಜನ ಮಾಡಿ ಜಿತೇಂದ್ರಿಯರಾಗಿ ಮಲಗುವಾಗಲೂ ಏಳುವಾಗಲೂ ಸೂರ್ಯನನ್ನೇ ಕೀರ್ತನ ಮಾಡಬೇಕು.

೩. ಮೂರನೆಯ ದಿನ ಎಂದರೆ ಅಷ್ಟಮಿಯಲ್ಲಿ ಸ್ನಾನಾದಿಗಳಿಂದ ಪರಿಶುದ್ಧನಾಗಿ ಸೂರ್ಯದೇವನನ್ನು ಭಜಿಸಿ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡಬೇಕು.

ರವಿಮುದ್ದಿಶ್ಯ ವೈ ಚಾಗ್ನೌ ಘೃತಹೋಮ ಕೃತಕ್ರಿಯಃ ।
ಪ್ರಣಿಪತ್ಯ ಜಗನ್ನಾಥಂ ಇತಿ ವಾಣೀಮುದೀರಯೇತ್ ॥ ೪ ॥

ಯಮಾನರ್ಚ ಪುರಾ ದೇವೀ ಸಾವಿತ್ರೀ ಕಾಮನಾಯ ವೈ ।
ಸ ಮೇ ದದಾತು ದೇವೇಶಃ ಸರ್ವಾನ್ ಕಾಮಾನ್ವಿಭಾವಸುಃ ॥ ೫ ॥

ಯಮಭ್ಯರ್ಚ್ಯೇತಿ ಸಂಪ್ರಾಪ್ತಾ ಕೃತ್ಸ್ನಾಃ ಕಾಮಾ ಯಥೇಪ್ಸಿತಾಃ ।
ಸ ದದಾತ್ವಖಿಲಾನ್ಕಾಮಾನ್ ಪ್ರಸನ್ನೋ ಮೇ ದಿವಸ್ಪತಿಃ ॥ ೬ ॥

ಭ್ರಷ್ಟರಾಜ್ಯಶ್ಚ ದೇವೇಂದ್ರೋ ಯಮಭ್ಯರ್ಚ್ಯ ದಿವಸ್ಪತಿಃ ।
ಕಾಮಾನ್‌ಸಂಪ್ರಾಪ್ತವಾನ್ರಾಜ್ಯಂ ಸ ಮೇ ಕಾಮಂ ಪ್ರಯಚ್ಛತು ॥ ೭ ॥

ಏವಂ ಸಂಸ್ತುತ್ಯ ಪೂಜಾಂ ಚ ನಿಷ್ಪಾದ್ಯೇಹ ವಿವಸ್ವತಃ ।
ಭುಂಜೀತ ಪ್ರಯತ ಸ್ಸಮ್ಯಕ್ ಹವಿಷ್ಯಂ ಪತಗಧ್ವಜ ॥ ೮ ॥

---

೪. ಸೂರ್ಯನನ್ನು ಉದ್ದೇಶಿಸಿ ಆಜ್ಯ ಹೋಮ ಕರ್ಮವನ್ನು ಅಗ್ನಿಯಲ್ಲಿ ನೆರವೇರಿಸಿ ಜಗನ್ನಾಥನಾದ ಸೂರ್ಯನನ್ನು ನಮಸ್ಕರಿಸಿ ಮುಂದೆ ಸೂಚಿಸುವ ಮಾತನ್ನು ಹೇಳಬೇಕು.

೫. ಪೂರ್ವದಲ್ಲಿ ಸಾವಿತ್ರಿಯು ಇಷ್ಟಪ್ರಾಪ್ತಿಗಾಗಿ ಯಾವನನ್ನು ಪೂಜಿಸಿದಳೋ, ಅಂಥ ವಿಭಾವಸುವೂ ದೇವೇಶನೂ ಆದ ಸೂರ್ಯನು, ನಮಗೆ ಸರ್ವ ಇಷ್ಟಾರ್ಥಗಳನ್ನೂ ಕರುಣಿಸಲಿ.

೬. ಸಾವಿತ್ರಿಯು ಈ ವಿಧಾನದಿಂದ ಯಾವನನ್ನು ಪೂಜಿಸಿ ಮನಸ್ಸಿನ ಸಕಲ ಇಷ್ಟಾರ್ಥಗಳನ್ನೂ ಹೊಂದಿದಳೋ, ಅಂಥ ದಿವಸ್ಪತಿಯಾದ ಸೂರ್ಯನು ನನಗೆ ಸಮಸ್ತ ಇಷ್ಟಾರ್ಥಗಳನ್ನೂ ದಯಪಾಲಿಸಲಿ.

೭. ದಿವಸ್ಪತಿಯಾದ ದೇವೇಂದ್ರನು ರಾಜ್ಯಪರಿಭ್ರಷ್ಟನಾದಾಗ ಯಾವ ಸೂರ್ಯನನ್ನು ಆರಾಧಿಸಿ ತನ್ನ ಇಷ್ಟಾರ್ಥಗಳನ್ನೂ ರಾಜ್ಯವನ್ನೂ ಹೊಂದಿದನೋ ಅಂತಹ ಸೂರ್ಯನು ನನ್ನ ಇಷ್ಟವನ್ನು ಕರುಣಿಸಲಿ.

೮. ಅಯ್ಯಾ ಗರುಡಧ್ವಜನಾದ ವಿಷ್ಣುವೇ! ಈ ಪ್ರಕಾರ ಸೂರ್ಯನನ್ನು ಸ್ತುತಿಸಿ, ಅವನ ಪೂಜೆಯನ್ನು ನೆರವೇರಿಸಿ, ಪರಿಶುದ್ಧನಾಗಿ ಹವಿಷ್ಯಾನ್ನವನ್ನು ಭೋಜನ ಮಾಡಬೇಕು.

ಫಾಲ್ಗುನೇ ಚೈತ್ರವೈಶಾಖಜ್ಯೇಷ್ಠೇಯಸ್ಯ ಸಮಾಪನಂ ।
ಚತುರ್ಭಿಃ ಪಾರಣಂ ಮಾಸೈಃ ಏಭಿರ್ನಿಷ್ಪಾದಿತಂ ಭವೇತ್ ॥ ೯ ॥

ಕರವೀರೈಶ್ಚತುರ್ಮಾಸಾ ಭಕ್ತ್ಯಾ ಸಂಪೂಜಯೇದ್ರವಿಂ ।
ಕೃಷ್ಣಾಗರುಂ ದಹೇದ್ಧೂಪಂ ಪ್ರಾಶ್ಯಂ ಗೋಶೃಂಗಜಂ ಜಲಂ ॥ ೧೦ ॥

ನೈವೇದ್ಯಂ ಖಂಡವೇಷ್ಟಾಂಸ್ತು ದದ್ಯಾದ್ವಿಪ್ರೇಭ್ಯ ಏವ ಚ ।
ತತಶ್ಚ ಶ್ರೂಯತಾಮನ್ಯಾ ಹ್ಯಾಷಾಢಾದಿಷು ಯಾ ಕ್ರಿಯಾ ॥ ೧೧ ॥

ಜಾತೀ ಪುಷ್ಪಾಣಿ ಶಸ್ತಾನಿ ಧೂಪೋ ಗಗ್ಗುಲ ಉಚ್ಯತೇ ।
ಕೂಪೋದಕಂ ಸಮಶ್ನೀಯಾನ್ನೈವೇದ್ಯಂ ಪಾಯಸಂ ಮತಂ ॥ ೧೨ ॥

ಸ್ವಯಂ ತದೇವ ಚಾಶ್ನೀಯಾತ್ ಶೇಷಂ ಪೂರ್ವವದಾಚರೇತ್ ।
ಕಾರ್ತಿಕಾದಿಷು ಮಾಸೇಷು ಗೋಮೂತ್ರಂ ಕಾಯಶೋಧನಂ ॥ ೧೩ ॥

---

೯. ಫಾಲ್ಗುಣ, ಚೈತ್ರ, ವೈಶಾಖ, ಜ್ಯೇಷ್ಠ ಈ ನಾಲ್ಕು ತಿಂಗಳುಗಳಲ್ಲಿ ಈ ಪ್ರಕಾರ ಆಚರಿಸಿ ವ್ರತವನ್ನು ಮುಗಿಸಬೇಕು. ಈ ನಾಲ್ಕು ಮಾಸದ ವ್ರತಾಚರಣೆಯಿಂದ ಒಂದು ಪಾರಣೆಯು ನಿಷ್ಪನ್ನವಾದಂತಾಗುವುದು.

೧೦-೧೧. ನಾಲ್ಕು ತಿಂಗಳುಗಳಲ್ಲೂ ಭಕ್ತಿಯಿಂದ ಸೂರ್ಯನಿಗೆ ಕಣಿಗಲೆ ಹೂವನ್ನೇ ಪೂಜೆಮಾಡಬೇಕು. ಕರಿ ಅಗಿಲು ಚಕ್ಕೆಯ ಧೂಪವನ್ನು ಸಮರ್ಪಿಸಬೇಕು. ಕಾಯಶುದ್ಧಿಗೆ ಗೋವಿನ ಶೃಂಗ ರಂಧ್ರದಿಂದ ಬೀಳುವ ಜಲವನ್ನೇ ಪ್ರಾಶನ ಮಾಡಬೇಕು. (ಖಂಡವೇಷ್ಟಕ) ಕರಿಗಡುಬುಗಳನ್ನು ನೈವೇದ್ಯ ಮಾಡಿ ಅದನ್ನೇ ಬ್ರಾಹ್ಮಣರಿಗೆ ದಾನಮಾಡಬೇಕು. ಆಷಾಢ ಮೊದಲಾದ ಮಾಸಗಳಲ್ಲಿ ಮಾಡಬೇಕಾದ ಕಾರ್ಯದ ವಿಧಾನವನ್ನು ಕೇಳು.

೧೨. ಈ ಕಲ್ಪದಲ್ಲಿ ಪೂಜೆಗೆ ಜಾಜಿ ಹೂಗಳೂ ಗುಗ್ಗುಳು ಧೂಪವೂ ಶ್ರೇಷ್ಠವೆನಿಸಿಕೊಂಡಿದೆ. ವ್ರತಿಯು ಭಾವಿಯ ನೀರನ್ನು ಕುಡಿಯಬೇಕು. ಪಾಯಸವನ್ನು ನಿವೇದನ ಮಾಡಿ ತಾನೂ ಅದನ್ನೇ ಭಕ್ಷಿಸಬೇಕು. ಮಿಕ್ಕ ಕೆಲಸಗಳನ್ನು ಹಿಂದಿನಂತೆಯೇ ನಡೆಯಿಸಬೇಕು.

೧೩-೧೪. ಕಾರ್ತಿಕ ಮೊದಲಾದ ಮಾಸಗಳಲ್ಲಿ ಶರೀರಶುದ್ಧಿಗಾಗಿ ಗೋಮೂತ್ರ ಪ್ರಾಶನ ಮಾಡಬೇಕು. ಈ ಕಲ್ಪದಲ್ಲಿ ಕೆಂಪು ನೈದಿಲೆ ಹೂಗಳ ಪೂಜೆಯೂ

ಮಹಾಂಗೋ ಧೂಪ ಉದ್ದಿಷ್ಟಃ ಪೂಜಾ ರಕ್ತೋತ್ಪಲೈಸ್ತಥಾ ।
ಕಾಂಸಾರಂ ಚಾತ್ರ ನಿವೇದ್ಯಂ ನೈವೇದ್ಯಂ ಭಾಸ್ಕರಾಯ ವೈ ॥ ೧೪ ॥

ಪ್ರತಿಮಾಸಂ ಚ ವಿಪ್ರಾಯ ದಾತವ್ಯಾ ದಕ್ಷಿಣಾ ತಥಾ ।
ಕರ್ಪೂರಂ ಚಂದನಂ ಮುಸ್ತಾಮಗರುಂ ತಗರಂ ತಥಾ ॥ ೧೫ ॥

ಊಷಣಂ ಶರ್ಕರಾ ಕೃಷ್ಣ ಸುಗಂಧಂ ಸಿಹ್ಲಕಂ ತಥಾ ।
ಮಹಾಂಗೋಽಯಂ ಸ್ಮೃತೋ ಧೂಪಃ ಪ್ರಿಯೋ ದೇವಸ್ಯ ಸರ್ವದಾ ॥ ೧೬ ॥

ಸೂರ್ಯೋಽಸ್ಯ ವಿಧಿನಾ ಪ್ರೀತಿಂ ಪಾರಣೇ ಪಾರಣೇ ಗತೇ ।
ಯಥಾಶಕ್ತಿ ಯಥಾಯೋಗಂ ವಿತ್ತಶಾಠ್ಯಂ ವಿವರ್ಜಯೇತ್ ॥ ೧೭ ॥

ಸದ್ಭಾವೇನೈವ ಸಪ್ತಾಶ್ವಃ ಪೂಜಿತಃ ಪ್ರೀಯತೇ ಯತಃ ।
ಪಾರಣಾಂತೇ ಯಥಾಶಕ್ತಿ ಪೂಜಿತಃ ಸ್ನಾಪಿತೋ ರವಿಃ ॥ ೧೮ ॥

ಪ್ರೀಣಿತಶ್ಚೇಪ್ಸಿತಾನ್ ಕಾಮಾನ್ ದದ್ಯಾದವ್ಯಾಹತಂ ಹರೇ ।
ಏಷಾ ಪುಣ್ಯಾ ಪಾಪಹರಾ ಸಪ್ತಮೀ ಸರ್ವ ಕಾಮದಾ ॥ ೧೯ ॥

---

ಮಹಾಂಗ ಧೂಪವೂ ಶ್ರೇಷ್ಠವೆಂದು ಹೇಳಿದೆ. ಸೂರ್ಯದೇವನ ನಿವೇದನಕ್ಕೆ ಕಾಂಸಾರ ವನ್ನು ಸಮರ್ಪಣೆ ಮಾಡಬೇಕು.

೧೫-೧೬. ಅಯ್ಯಾ ಕೃಷ್ಣ! ಕರ್ಪೂರ ಚಂದನಚಕ್ಕೆ, ಕೊನ್ನಾರಿಗೆಡ್ಡೆ, ಅಗಿಲು ಚಕ್ಕೆ, ತಗರ, ಊಷಣ, ಶರ್ಕರಾ, ಸುವಾಸನೆಯ ಸಿಲ್ಹಕ, (ಸಾಮ್ರಾಣಿ) ಇವು ಗಳ ಮಿಶ್ರಣವು ಶ್ರೇಷ್ಠವಾದ ಮಹಾಂಗ ಧೂಪವೆನ್ನಿಸಿಕೊಂಡು ಸೂರ್ಯನಿಗೆ ಬಹು ಪ್ರಿಯವಾಗಿದೆ

೧೭-೧೮. ಇಷ್ಟವಾದ ವಿಧಿಯಿಂದಲೂ ಶಕ್ತಿಗನುಸಾರವಾದ ಏರ್ಪಾಡಿನಿಂ ದಲೂ, ಆ ಕಾಲದಲ್ಲಿ ದೊರೆಯಬಹುದಾದ ವಸ್ತುಗಳಿಂದ, ಪ್ರತಿ ಪಾರಣೆಯಲ್ಲಿಯೂ ಸೂರ್ಯನಿಗೆ ತೃಪ್ತಿಪಡಿಸಬೇಕು. ಧನದ ಅನುಕೂಲವಿದ್ದರೆ ವೆಚ್ಚಮಾಡದೇ ವಂಚಿಸ ಬಾರದು. ಏಕೆಂದರೆ ಸಪ್ತಾಶ್ವನಾದ ಸೂರ್ಯನು ಸದ್ಭಾವದಿಂದಲೂ ಸುಪ್ರೀತನಾಗುತ್ತಾನೆ.

೧೯. ಅಯ್ಯಾ ಹರಿಯೇ! ತನ್ನ ಶಕ್ತ್ಯನುಸಾರವಾಗಿ ಸೂರ್ಯನಿಗೆ ಅಭಿಷೇಕ ಪೂಜೆ ಇವನ್ನು ಮಾಡಿ ಈ ಪಾರಣೆಯನ್ನು ನಡೆಯಿಸಿದರೆ ಅದರಿಂದ ಪ್ರೀತನಾದ

ಯಥಾಭಿಲಷಿತಾನ್ ಕಾಮಾನ್ ಲಭತೇ ಗರುಡಧ್ವಜ ।
ಉಪೋಷ್ಯೈತಾಂ ತ್ರಿಭುವನಂ ಪ್ರಾಪ್ತಮಿಂದ್ರೇಣ ವೈ ಪುರಾ ॥ ೨೦ ॥

ಪುತ್ರಂ ಪ್ರಾಪಚ್ಚ ಸಾವೀತ್ರೀ ಪುತ್ರಾಂಸ್ತು ಅದಿತಿಸ್ತಥಾ ।
ಯದವಃ ಕಾಮನಾಂ ಪ್ರಾಪ್ತಾಃ ಧೌಮ್ಯೋ ವೇದಮವಾಪ್ತವಾನ್ ॥ ೨೧ ॥

ತ್ವಯಾಪ್ತಾ ಭಾರ್ಗವೀ ಕೃಷ್ಣ, ಶಂಕರಶುದ್ಧಿಮಾಪ್ತವಾನ್ ।
ಪಿತಾಮಹತ್ವಂ ಪ್ರಾಪ್ತೋಽಹಂ ತತ್ಪ್ರಸಾದಾಜ್ಜನಾರ್ದನ ॥ ೨೨ ॥

ಅನ್ಯೈಶ್ಚಾಧಿಗತಾಃ ಕಾಮಾಃ ತಮಾರಾಧ್ಯ ನ ಸಂಶಯಃ ।
ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈ ಶೂದ್ರೈರ್ಯೋಷಿದ್ಭಿರೇವ ಚ ॥ ೨೩ ॥

---

ರವಿಯು ತಡೆಯಿಲ್ಲದೆ, ಮನಸ್ಸಿನ ಇಷ್ಟಾರ್ಥವನ್ನು ಸಲ್ಲಿಸುತ್ತಾನೆ. ಈ ಸಪ್ತಮಿಯು ಪುಣ್ಯಕರವೂ ಪಾಪಹರವೂ ಸಮಸ್ತ ಇಷ್ಟಗಳನ್ನು ಕೊಡತಕ್ಕದ್ದೂ ಆಗಿದೆ.

೨೦. ಅಯ್ಯಾ ಗರುಡಧ್ವಜನೇ! ಈ ರೀತಿ ಪೂಜಿಸಿದವನು ಅಪೇಕ್ಷಿಸಿದ ಇಷ್ಟಾರ್ಥಗಳನ್ನೆಲ್ಲ ಪಡೆಯುತ್ತಾನೆ. ಪೂರ್ವದಲ್ಲಿ ಇಂದ್ರನು ಈ ರೀತಿ ಉಪವಾಸ ಮಾಡಿದುದರಿಂದಲೇ ತ್ರೈಲೋಕ್ಯಾಧಿಪತ್ಯವನ್ನು ಹೊಂದಿದನು.

೨೧. ಸಾವಿತ್ರಿಯು ಇದರಿಂದಲೇ ಪುತ್ರನನ್ನು ಪಡೆದಳು. ಅದಿತಿಯೂ ಸಹ ಇದರಿಂದ ಪುತ್ರರಾದ ದೇವತೆಗಳನ್ನು ಪಡೆದಳು. ಇದರಿಂದಲೇ ಯದುವಂಶೀಯರು ತಮ್ಮ ಇಷ್ಟಾರ್ಥಗಳನ್ನು ಹೊಂದಿದರು. ಧೌಮ್ಯಮಹರ್ಷಿಯು ವೇದವನ್ನು ಹೊಂದಿದನು.

೨೨. ಅಯ್ಯಾ ಜನಾರ್ದನನಾದ ಕೃಷ್ಣನೇ! ಅವನ ಅನುಗ್ರಹದಿಂದಲೇ ನೀನು ಲಕ್ಷ್ಮಿಯನ್ನು ಪಡೆದೆ ಈಶ್ವರನು ಬ್ರಹ್ಮಹತ್ಯಾದಿಗಳಿಂದ ಮುಕ್ತನಾಗಿ ಪರಿಶುದ್ಧಿ ಪಡೆದನು. ನಾನೂ ಸಹ ಅವನ ಕೃಪೆಯಿಂದ ಪಿತಾಮಹ ಪದವಿಯನ್ನು ಪಡೆದೆನು.

೨೩. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಇವರೂ, ಸ್ತ್ರೀಯರೂ ಇವರೆಲ್ಲರೂ ಕೂಡ ಅವನನ್ನು ಸೇವಿಸಿ ತಮ್ಮ ಇಷ್ಟಾರ್ಥಗಳನ್ನು ಪಡೆದರು.

ಯಂ ಯಂ ಕಾಮಮಭಿಧ್ಯಾಯೇತ್ತಂ ತಂ ಪ್ರಾಪ್ನೋತ್ಯುಪೋಷಣಾತ್ ।
ಜನಃ ಪ್ರಾಪ್ನೋತೀಹಿತಾರ್ಥಂ ಭಾನೋರಾರಾಧನೇ ರತಃ ॥ ೨೪ ॥

ಅಪುತ್ರಃ ಪುತ್ರಮಾಪ್ನೋತಿ ಗೋಗತಶ್ಚಾಪಿ ಮೋದತೇ ।
ರೋಗಾಭಿಭೂತ ಆರೋಗ್ಯಂ ಕನ್ಯಾ ವಿಂದತಿ ಸತ್ಪತಿಂ ॥ ೨೫ ॥

ಸಮಾಗಮಂ ಪ್ರೋಷಿತಸ್ತು ಉಪೋಷ್ಯೈವಮವಾಪ್ನುಯಾತ್ ।
ಸರ್ವಾನ್ಕಾಮಾನವಾಪ್ನೋತಿ ಗೋಗತಶ್ಚಾಪಿ ಮೋದತೇ ॥ ೨೬ ॥

ನಾಪುತ್ರೋ ನಾಧನೋ ವಾಪಿ ನ ವಾನಿಷ್ಟೋ ನ ನಿರ್ಘೃಣಃ ।
ಉಪೋಷ್ಯೈತದ್ವ್ರತಂ ಮರ್ತ್ಯಃ ಸ್ತ್ರೀಜನೋ ವಾಪಿ ಜಾಯತೇ ॥ ೨೭ ॥

ಸ ಸೂರ್ಯಲೋಕಮಾಸಾದ್ಯ ಮೋದತೇ ಶಾಶ್ವತೀಸ್ಸಮಾಃ ।
ಗೈರಿಕಂ ಯಾನಮಾರೂಢಸ್ತೇಜಸಾ ರವಿಸನ್ನಿಭಃ ॥ ೨೮ ॥

---

೨೪. ಸೂರ್ಯಪ್ರೀತಿಗಾಗಿ ಉಪೋಷಣ ಮಾಡುವುದರಿಂದ ಆತನು ಯಾವ ಯಾವ ಇಷ್ಟಗಳನ್ನು ಮನಸ್ಸಿನಲ್ಲಿ ಕುರಿತುಕೊಳ್ಳುವನೋ, ಅವುಗಳೆಲ್ಲವನ್ನೂ ಹೊಂದುತ್ತಾನೆ.

೨೫. ಸೂರ್ಯಪ್ರೀತ್ಯರ್ಥವಾಗಿ ಉಪೋಷಣ ಮಾಡುವುದರಿಂದ ಪುತ್ರನಿಲ್ಲದವನು ಬೇಕಾದ ಪುತ್ರನನ್ನು ಹೊಂದುವನಲ್ಲದೆ ಸ್ವರ್ಗಲೋಕವನ್ನು ಸೇರಿ ಸಂತೋಷ ಹೊಂದುತ್ತಾನೆ. ರೋಗಪೀಡಿತನಾದವನು ಆರೋಗ್ಯಹೊಂದುತ್ತಾನೆ. ಕನ್ಯೆಯು ಉತ್ತಮನಾದ ಪತಿಯನ್ನು ಹೊಂದುವಳು.

೨೬. ದೇಶಾಂತರಗತನಾದವನು ಈ ಪ್ರಕಾರ ಉಪವಾಸ ಮಾಡಿದರೆ ಸ್ವಜನರ ಸಮಾಗಮವನ್ನು ಹೊಂದುತ್ತಾನೆಯಲ್ಲದೆ ಎಲ್ಲ ಇಷ್ಟಾರ್ಥಗಳನ್ನೂ ಪಡೆದು ಸ್ವರ್ಗಲೋಕವನ್ನು ಸೇರಿ ಸಂತೋಷಪಡುತ್ತಾನೆ.

೨೭. ಪುರುಷನು ಈ ಪ್ರಕಾರ ಉಪವಾಸ ಮಾಡುವುದರಿಂದ ಅಪುತ್ರನೂ, ನಿರ್ಧನನೂ, ಅಪ್ರಿಯನೂ, ನಿರ್ದಯನೂ ಆಗಲಾರನು. ಈ ಉಪವಾಸ ಮಾಡಿದ ಹೆಂಗಸರಿಗೂ ಮೇಲೆ ಹೇಳಿದ ಅಪುತ್ರತ್ವವೇ ಮೊದಲಾದುವು ಪ್ರಾಪ್ತವಾಗುವುದಿಲ್ಲ.

೨೮-೨೯. ಈ ಪ್ರಕಾರ ಉಪವಾಸ ಮಾಡಿದ ಮನುಷ್ಯನು ಗೈರಿಕವಸ್ತ್ರಗಳಿಂದ ಬಣ್ಣಬಣ್ಣವಾದ ವಿಮಾನವನ್ನೇರಿ ಸೂರ್ಯಲೋಕಕ್ಕೆ ಹೋಗಿ ಸೂರ್ಯಸಮ

**ಪುನರೇತ್ಯ ಮಹೀಂ ಕೃಷ್ಣ ಘನಾಘನಸಮೋ ನೃಪಃ ।**
**ಕ್ಷ್ಮಾತಲೇ ಸ್ಯಾನ್ನ ಸಂದೇಹಃ ಪ್ರಸಾದಾದ್ಗೋಪತೇರ್ನರಃ ॥ ೨೯ ॥**

**ಇತಿ ಶ್ರೀ ಭವಿಷ್ಯಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ ಕಾಮದಾ ಸಪ್ತಮೀ ವ್ರತ ನಿರೂಪಣಂ ನಾಮ ಪಂಚೋತ್ತರಶತತಮೋಧ್ಯಾಯಃ.**



---

ವಾದ ತೇಜಸ್ಸನ್ನು ಪಡೆದು ಬಹುಕಾಲ ಅಲ್ಲಿ ವಾಸಿಸುತ್ತಾನೆ. ಗೋಪತಿಯಾದ ಸೂರ್ಯನ ಪ್ರಸಾದದಿಂದ ಮತ್ತೆ ಭೂಮಿಗೆ ಬಂದು ಬಹುವೃಷ್ಟಿಪ್ರದವಾದ ಮೇಘದಂತೆ ಇಷ್ಟಾರ್ಥ ವರ್ಷುಕನಾದ ರಾಜನಾಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ ಕಾಮದಾ ಸಪ್ತಮೀವ್ರತ ನಿರೂಪಣವೆಂಬ ನೂರಐದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಷಡಧಿಕಶತತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಪುನಶ್ಚೈತನ್ಮಹಾಭಾಗ ಶ್ರೂಯತಾಂ ಗದತೋ ಮಮ ।
ಪ್ರೋಕ್ತಂ ಖಗೇನ ದೇವಾನಾಂ ತಿಥಿಮಾಹಾತ್ಮ್ಯಮುತ್ತಮಂ ॥ ೧ ॥

॥ ವಿಷ್ಣುರುವಾಚ ॥

ವಿಜಯಾತಿಜಯಾ ಚೈವ ಜಯಂತೀ ಚ ಮಹಾತಿಥಿಃ ।
ತ್ವತ್ತಃ ಶ್ರುತಾ ಸುರಶ್ರೇಷ್ಠ ಬ್ರೂಹಿ ಮೇ ಪಾಪನಾಶಿನೀಂ ॥ ೨ ॥

---

## ನೂರಆರನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಎಲೈ ಭಾಗ್ಯಶಾಲಿಯೇ ಪುನಃ ಈಗ ನಾನು ಹೇಳುವುದನ್ನು ಕೇಳು. ಉತ್ತಮವಾದ ಮತ್ತು ಸೂರ್ಯನು ದೇವತೆಗಳಿಗೆ ಹೇಳಿದ ತಿಥಿ ಮಹಾತ್ಮೆಯನ್ನು ಕೇಳು.

೨. ವಿಷ್ಣುವು ಹೇಳುತ್ತಾನೆ—ವಿಜಯಾ, ಅತಿಜಯಾ ಮತ್ತು ಜಯಂತಿ ಎಂಬ ಮಹಾತಿಥಿಗಳ ವಿಷಯವನ್ನು ನಿನ್ನಿಂದ ಕೇಳಿದುದಾಯಿತು. ಎಲೈ ಸುರ ಶ್ರೇಷ್ಠನೇ, ಈಗ ನನಗೆ ಪಾಪನಾಶಿನಿಯನ್ನು ಹೇಳು.

ತಥೋತ್ತರಾಯಣಂ ಬ್ರೂಹಿ ಶಸ್ತಂ ಯದ್ಭಾಸ್ಕರಾರ್ಚನೇ ।
ಯತ್ರಸಂಪೂಜಿತೋ ಭಾನುರ್ಭವೇತ್ಸರ್ವಾಘನಾಶನಃ ॥
ತನ್ಮೇ ಕಥಯ ಯತ್ನೇನ ಭಕ್ತ್ಯಾ ಪೃಷ್ಟೋಽಕ್ಷಯಂ ಫಲಂ ॥ ೩ ॥

॥ ಬ್ರಹ್ಮೋವಾಚ ॥

ಶುಕ್ಲಪಕ್ಷೇತು ಸಪ್ತಮ್ಯಾಂ ಯದರ್ಕ್ಷಂ ತು ರವೇರ್ಭವೇತ್ ।
ತದಾ ಸ್ಯಾತ್ಸಾ ಮಹಾಪುಣ್ಯಾ ಸಪ್ತಮೀ ಪಾಪನಾಶಿನೀ ॥ ೪ ॥

ತಸ್ಯಾಂ ಸಂಪೂಜ್ಯ ದೇವೇಶಂ ಚಿತ್ರಭಾನುಂ ಜಗದ್ಗುರುಂ ।
ಸಪ್ತಜನ್ಮಕೃತಾತ್ಪಾಪಾನ್ಮುಚ್ಯತೇ ನಾತ್ರ ಸಂಶಯಃ ॥ ೫ ॥

ಯಶ್ಚೋಪವಾಸಂ ಕುರುತೇ ತಸ್ಯಾಂ ನಿಯತಮಾನಸಃ ।
ಸರ್ವಪಾಪ ವಿಮುಕ್ತಾತ್ಮಾ ಸೂರ್ಯಲೋಕೇ ಮಹೀಯತೇ ॥ ೬ ॥

---

೩. ಹಾಗೂ ಸೂರ್ಯಾರ್ಚನಕ್ಕೆ ಶ್ರೇಷ್ಠವಾದ ಉತ್ತರಾಯಣದ ವಿಷಯವನ್ನೂ ಕೇಳು. ಆ ಉತ್ತರಾಯಣದಲ್ಲಿ ಸೂರ್ಯನನ್ನು ಪೂಜಿಸಿದರೆ ಸರ್ವ ಪಾಪಗಳೂ ನಾಶವಾಗುತ್ತವೆ. ಭಕ್ತಿಯಿಂದ ಪ್ರಶ್ನೆಮಾಡಿದ ನನಗೆ ಅಕ್ಷಯ ಫಲವನ್ನು ಕೊಡುವ ಅದರ ವಿಷಯವನ್ನು ನೀನು ಹೇಳು.

೪. ಬ್ರಹ್ಮನು ಹೇಳುತ್ತಾನೆ—ಶುಕ್ಲಪಕ್ಷದ ಸಪ್ತಮಿಯಲ್ಲಿ ಯಾವಾಗ ಹಸ್ತ ನಕ್ಷತ್ರವು ಸೇರಿಬರುವುದೋ ಆಗ ಆ ಸಪ್ತಮಿಯು ಮಹಾಪುಣ್ಯಕರವೂ ಪಾಪನಾಶಕವೂ ಆಗುವುದು.

೫. ಆ ಸಪ್ತಮಿಯಲ್ಲಿ ಜಗದ್ಗುರುವೂ, ದೇವೇಶನೂ, ಚಿತ್ರಭಾನುವೂ ಆದ ಸೂರ್ಯನನ್ನು ಪೂಜಿಸಿದವನು ಹಿಂದಿನ ಏಳುಜನ್ಮಗಳಲ್ಲಿ ಮಾಡಿದ ಪಾಪಗಳಿಂದ ಮುಕ್ತನಾಗುತ್ತಾನೆ. ಸಂಶಯವಿಲ್ಲ.

೬. ಯಾವನು ಆ ದಿನದಲ್ಲಿ ಮನಸ್ಸನ್ನು ನಿಗ್ರಹಿಸಿ ಉಪವಾಸ ಮಾಡುತ್ತಾನೋ ಅವನು ಸಮಸ್ತ ಪಾಪಗಳನ್ನೂ ಕಳೆದುಕೊಂಡು ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ.

ದಾನಂ ಯದ್ದೀಯತೇ ಕಿಂಚಿತ್ತಮುದ್ದಿಶ್ಯ ದಿವಾಕರಂ ।
ಹೋಮೋ ವಾ ಕ್ರಿಯತೇ ತತ್ರ ತತ್ಸರ್ವಂ ಚಾಕ್ಷಯಂ ಭವೇತ್ ॥ ೭ ॥

ಏಕ ಋಗ್ವೇದಃ ಪುರತೋ ಜಪ್ತಃ ಶ್ರದ್ಧಾಪರೇಣ ತು ।
ಋಗ್ವೇದಸ್ಯ ಸಮಸ್ತಸ್ಯ ಯಚ್ಛತೇ ಸತ್ಫಲಂ ಧ್ರುವಂ ॥ ೮ ॥

ಸಾಮವೇದಫಲಂ ಸಾಮ ಯಜುರ್ವೇದಫಲಂ ಯಜುಃ ।
ಅಥರ್ವಾಥರ್ವಾಂಗಿರಸೋ ನಿಖಿಲಂ ಯಚ್ಛತೇ ರವಿಃ ॥ ೯ ॥

ತಾರಕಾ ಇವ ರಾಜಂತೇ ದ್ಯೋತಮಾನಾ ದಿವಾನಿಶಂ ।
ಸಮಭ್ಯರ್ಚ್ಯ ಸಪ್ತಮ್ಯಾಂ ದೇವದೇವಂ ದಿವಾಕರಂ ॥ ೧೦ ॥

ಯತ್ರ ಪಾಪಮಶೇಷಂ ವೈ ನಾಶಯತ್ಯತ್ರ ಭಾಸ್ಕರಃ ।
ಕರ್ತವ್ಯಾ ಸಪ್ತಮೀ ಕೃಷ್ಣ ತೇ ನೋಕ್ತಾ ಪಾಪ ನಾಶಿನೀ ॥ ೧೧ ॥

---

೭. ಆ ಸೂರ್ಯನನ್ನುದ್ದೇಶಿಸಿ ಏನು ಕೊಂಚ ದಾನಮಾಡಿದರೂ, ಮತ್ತು ಹೋಮಮಾಡಿದರೂ ಅದೆಲ್ಲವೂ ಅಕ್ಷಯವಾಗುತ್ತದೆ.

೮. ಭಕ್ತಿಯುಕ್ತನಾಗಿ ಋಗ್ವೇದದ ಒಂದು ಋಕ್ಕನ್ನು ಮಾತ್ರವೇ ಆದರೂ ದೇವನ ಮುಂದೆ ಜಪಿಸಿದರೆ ಪೂರ್ಣವಾಗಿ ಋಗ್ವೇದ ಪಾರಾಯಣದ ಫಲ ದೊರೆಯುವುದು ನಿಶ್ಚಯವು.

೯. ಹೀಗೆಯೇ ಒಂದು ಸಾಮವನ್ನು ಹೇಳಿದರೆ, ಸಾಮವೇದ ಪಾರಾಯಣದ ಫಲವನ್ನೂ, ಒಂದು ಯಜುರ್ವೇದ ಮಂತ್ರವನ್ನು ಹೇಳಿದರೆ ಯಜುರ್ವೇದ ಪಾರಾಯಣದ ಫಲವನ್ನೂ, ಅಥರ್ವಣದ ಒಂದು ಋಕ್ಕನ್ನು ಹೇಳಿದರೆ ಆ ವೇದ ಪಾರಾಯಣದ ಫಲವನ್ನೂ ಸೂರ್ಯನು ಕೊಡುತ್ತಾನೆ.

೧೦. ದೇವ ದೇವನಾದ ದಿವಾಕರನನ್ನು ಸಪ್ತಮಿಯ ದಿನದಲ್ಲಿ ಪೂಜಿಸಿದವರು ಹಗಲೂ ರಾತ್ರಿಯೂ ನಕ್ಷತ್ರಗಳಂತೆ ಹೊಳೆಯುತ್ತಾರೆ.

೧೧. ಈ ಸಪ್ತಮಿಯಲ್ಲಿ ಪೂಜಿಸಿದರೆ ಸೂರ್ಯನು ಅವರ ಎಲ್ಲಾ ಪಾಪವನ್ನೂ ನಾಶಮಾಡುತ್ತಾನೆ. ಎಲೈ ಕೃಷ್ಣನೇ! ಸೂರ್ಯನು ಹೇಳಿದ ಪ್ರಕಾರ ಈ ಪಾಪನಾಶಕ ಸಪ್ತಮೀ ವ್ರತವನ್ನು ಮಾಡಬೇಕು.

**ಅಸ್ಯಾಂ ಸಮಭ್ಯರ್ಚ್ಯ ರವಿಂ ಯಾತಿ ಸೌರಪುರಂ ನರಃ ।**
**ವಿಮಾನವರಮಾರುಹ್ಯ ಕರ್ಪೂರೋದ್ಭವಮುತ್ತಮಂ ॥ ೧೨ ॥**

**ತೇಜಸಾ ಕವಿಸಂಕಾಶಃ ಪ್ರಭಯಾ ಸೂರ್ಯಸನ್ನಿಭಃ ।**
**ಕಾಂತ್ಯಾತ್ರೇಯಸಮಃ ಕೃಷ್ಣ ಶೌರ್ಯೇ ಹರಿಸಮಃ ಸದಾ ॥ ೧೩ ॥**

**ಮೋದತೇ ತತ್ರ ಸುಚಿರಂ ವೃಂದಾರಕಗಣೈಃ ಸಹ ।**
**ಪುನರೇತ್ಯ ಭುವಂ ಕೃಷ್ಣ ಭವೇ ದ್ವೈಕ್ಸಾ್ಯಧಿಪಾಧಿಪಃ ॥ ೧೪ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇ ಪರ್ವಣಿ ಸಪ್ತಮೀಕಲ್ಪೇ ಪಾಪನಾಶಿನೀ ವ್ರತ ವಿಧಿ ವರ್ಣನಂ ನಾಮ ಷಡಧಿಕ ಶತತಮೋಽಧ್ಯಾಯಃ**



---

೧೨-೧೩. ಮನುಷ್ಯನು ಈ ತಿಥಿಯಲ್ಲಿ ಸೂರ್ಯನನ್ನು ಪೂಜಿಸಿದರೆ ಉತ್ತಮವಾದ ಕರ್ಪೂರ ವಿಮಾನವನ್ನೇರಿ ಸೌರಪುರಕ್ಕೆ ಹೋಗುತ್ತಾನೆ. ಆತನು ತೇಜಸ್ಸಿನಲ್ಲಿ ಶುಕ್ರನಿಗೆ ಸಮಾನನೂ, ಕಾಂತಿಯಲ್ಲಿ ಸೂರ್ಯನಿಗೆ ಸಮನೂ, ಹೊಳಪಿನಲ್ಲಿ ಚಂದ್ರನಿಗೆ ಸಮಾನನೂ, ಶೌರ್ಯದಲ್ಲಿ ಇಂದ್ರನಿಗೆ ಸಮಾನನೂ ಆಗುವನು.

೧೪. ಆತನು ಸೂರ್ಯಲೋಕಕ್ಕೆ ಹೋಗಿ ಅಲ್ಲಿ ದೇವತೆಗಳ ಗುಂಪಿನೊಡನೆ ಬಹುಕಾಲ ಸಂತೋಷಪಡುತ್ತಾನೆ. ಪುನಃ ಭೂಮಿಯಲ್ಲಿ ಜನಿಸಿ ರಾಜಾಧಿರಾಜನಾಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ
ಪಾಪನಾಶಿನೀ ಸಪ್ತಮೀವ್ರತ ವಿಧಾನ ವರ್ಣನೆಯೆಂಬ ನೂರಆರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಸಪ್ತಶತತಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

ತಥಾನ್ಯದಪಿ ಧರ್ಮಜ್ಞ ಶೃಣುಷ್ವ ಗದತೋ ಮಮ ।
ಪದದ್ವಯಂ ಜಗದ್ಧಾತುಃ ದೇವದೇವಸ್ಯ ಗೋಪತೇ ॥ ೧ ॥

ಯದೇಕ ಪಾದಪೀಠಂ ಹಿ ತತ್ರ ನ್ಯಸ್ತಂ ಪದದ್ವಯಂ ।
ಸ್ವಯಮಂಶುಮತಾ ಕೃಷ್ಣ ಲೋಕಾನಾಂ ಹಿತಕಾಮ್ಯಯಾ ॥ ೨ ॥

ವಾಮಮಸ್ಯ ಪದಂ ಕೃಷ್ಣ ಜ್ಞೇಯಂ ವೈ ಉತ್ತರಾಯಣಂ ।
ದೇವಾದ್ಯೈಸ್ಸಕಲೈರ್ವಂದ್ಯಂ ದಕ್ಷಿಣಂ ದಕ್ಷಿಣಾಯನಂ ॥ ೩ ॥

---

## ನೂರಏಳನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ.—ಎಲೈ ಧರ್ಮಜ್ಞನೇ! ನಾನು ಈಗ ಹೇಳುತ್ತಿರುವ ಮತ್ತೊಂದು ವಿಷಯವನ್ನು ಕೇಳು. ಗೋಪತಿಯೂ, ದೇವದೇವನೂ ಆದ ಸೂರ್ಯನ ಪಾದದ್ವಯವೂ ಒಂದು ಕಾಲುಳ್ಳ ಪೀಠದಲ್ಲಿ ಇಡಲ್ಪಟ್ಟಿರುವುದು.

೨-೩. ಲೋಕಗಳಿಗೆ ಹಿತವಾಗಬೇಕೆಂಬ ದೃಷ್ಟಿಯಿಂದ ಆ ಪೀಠದಲ್ಲಿ ಪಾದದ್ವಯವೂ ಇಡಲ್ಪಟ್ಟಿದೆ. ಅಯ್ಯಾ ಕೃಷ್ಣನೇ! ಇವನ ಎಡದಕಾಲು ಉತ್ತರಾಯಣವೆಂದೂ,ಸಕಲ ದೇವತೆಗಳೇ ಮೊದಲಾದವರಿಂದ ನಮಸ್ಕಾರ ಹೊಂದುವ ಬಲಗಾಲು ದಕ್ಷಿಣಾಯವೆಂದೂ ಹೇಳಲ್ಪಟ್ಟಿದೆ.

ಅಹಂ ತ್ವಂ ಚ ಸದಾ ಕೃಷ್ಣ ದಕ್ಷಿಣಂ ಪಾದಮರ್ಚತಃ ।
ಶ್ರದ್ಧಾನ್ವಿತಾ ಭಾಸ್ಕರಸ್ಯ ಹರೀಶೌ ವಾಮಮರ್ಚತಃ ॥ ೪ ॥

ತಸ್ಮಿನ್ಯಃ ಪ್ರತ್ಯಹಂ ಸಮ್ಯಗ್ದೇವದೇವಸ್ಯ ಮಾನವಃ ।
ಕರೋತ್ಯಾರಾಧನಂ ತಸ್ಯ ತುಷ್ಟಃ ಸ್ಯಾದ್ಭಾನುರ್ಮಾ ಸದಾ ॥ ೫ ॥

॥ ವಿಷ್ಣುರುವಾಚ ॥

ಕಥಮಾರಾಧನಂ ತಸ್ಯ ದೇವದೇವಸ್ಯ ಗೋಪತೇಃ ।
ಕ್ರಿಯತೇ ದೇವಶಾರ್ದೂಲ ತತ್ಸಮಾಖ್ಯಾತುಮರ್ಹಸಿ ॥ ೬ ॥

॥ ಬ್ರಹ್ಮೋವಾಚ ॥

ಉತ್ತರೇತ್ವಯನೇ ಕೃಷ್ಣ ಸ್ನಾತೋ ನಿಯತ ಮಾನಸಃ ।
ಘೃತಕ್ಷೀರಾದಿಭಿರ್ದೇವಂ ಸ್ನಾಪಯೇತ್ತಿಮಿರಾಪಹಂ ॥ ೭ ॥

ಚಾರು ವಸ್ತ್ರೋಪಹಾರೈಶ್ಚ ಪುಷ್ಪ ಧೂಪಾನುಲೇಪನೈಃ ।
ಸಮಭ್ಯರ್ಚ್ಯ ತತಃ ಸಮ್ಯಕ್ ಬ್ರಾಹ್ಮಣಾನಾಂ ಚ ತರ್ಪಣೈಃ ॥ ೮ ॥

---

೪. ನಾನೂ ನೀನೂ ಯಾವಾಗಲೂ ಸೂರ್ಯನ ಬಲಗಾಲನ್ನು ಪೂಜಿಸುತ್ತೇವೆ. ಶ್ರದ್ಧಯುಕ್ತರಾದ ವಿಷ್ಣುರುದ್ರರು ಎಡಗಾಲನ್ನು ಪೂಜಿಸುತ್ತಾರೆ.

೫. ಅದರಲ್ಲಿ ಯಾವನು ಪ್ರತಿದಿನವೂ ಚೆನ್ನಾಗಿ ದೇವ ದೇವನಾದ ಸೂರ್ಯನ ಆರಾಧನವನ್ನು ಮಾಡುತ್ತಾನೋ ಅವನಿಗೆ ಸೂರ್ಯನು ಸದಾ ತುಷ್ಟನಾಗುವನು ಎಂದನು

೬. ವಿಷ್ಣುವು ಹೇಳುತ್ತಾನೆ—ದೇವ ದೇವನೂ ಗೋಪತಿಯೂ ಆದ ಆ ಸೂರ್ಯನನ್ನು ಆರಾಧನೆ ಮಾಡುವುದು ಹೇಗೆ? ಎಲೈ ದೇವಶ್ರೇಷ್ಠನೇ ಅದನ್ನು ಹೇಳು ಎಂದನು.

೭. ಬ್ರಹ್ಮನು ಹೇಳುತ್ತಾನೆ—ಎಲೈ ಕೃಷ್ಣನೇ! ಉತ್ತರಾಯಣದಲ್ಲಿ ಸ್ನಾನ ಮಾಡಿ ಮನಸ್ಸನ್ನು ಶಾಂತಮಾಡಿಕೊಂಡು, ತುಪ್ಪ ಹಾಲು ಮೊದಲಾದವುಗಳಿಂದ ತಮೋಹರನಾದ ದೇವನಿಗೆ ಅಭಿಷೇಕ ಮಾಡಿಸಬೇಕು.

೮. ಮನೋಹರವಾದ ವಸ್ತ್ರಗಳಿಂದಲೂ, ಉಪಹಾರಗಳಿಂದಲೂ, ಪುಷ್ಪ ಧೂಪ ಗಂಧಗಳಿಂದಲೂ ಪೂಜಿಸಿ ಚೆನ್ನಾಗಿ ಬ್ರಾಹ್ಮಣ ಸಂತರ್ಪಣೆಗಳಿಂದ ತೃಪ್ತಿಪಡಿಸಬೇಕು.

ಪದದ್ವಯವ್ರತಂ ಯಸ್ಯ ಗೃಹ್ಣೀಯಾದ್ಭಾನುತತ್ಪರಃ ।
ವಂದೇತ್ಸ್ನಾತಶ್ಚಿತ್ರಭಾನುಂ ತತಶ್ಚ ಗರುಡಧ್ವಜ ॥ ೯ ॥

ಭುಕ್ತ್ವಾನ್ನಂ ಚಿತ್ರಭಾನುಂ ತು ಚಿತ್ರಭಾನುಂ ವ್ರಜಂಸ್ತಥಾ ।
ಸ್ವಪನ್ವಿಬುಧ್ಯನ್ ಪ್ರಣಮನ್ ಹೋಮಂ ಕುರ್ವನ್ ತಥಾರ್ಚಯನ್ ॥ ೧೦ ॥

ಚಿತ್ರಭಾನೋರನುದಿನಂ ಕುರ್ಯಾದ್ವೈ ನಾಮಕೀರ್ತನಂ ।
ಯಾವದನ್ಯದಿನಾತ್ಪ್ರಾಪ್ತಂ ಕ್ರಮಶೋ ದಕ್ಷಿಣಾಯನಂ ॥ ೧೧ ॥

ಚಲಿತೇ ಹುಂಕೃತೇ ಚೈವ ವೇದಾರಂಭೇಽಪಿ ವಾ ಸದಾ ।
ತಾವದ್ವಕ್ಷ್ಯೇ ಚಿತ್ರಭಾನುಂ ಯಾವದೇವೋತ್ತರಾಯಣಂ ॥ ೧೨ ॥

ಯಾವಜ್ಜೀವಂ ಚ ಯತ್ಕಿಂಚಿಜ್ಜ್ಞಾನತೋಽಜ್ಞಾನತೋಽಪಿ ವಾ ।
ಕರಿಷ್ಯೇಽಹಂ ತಥಾ ಚೈವ ಕೀರ್ತಯಿಷ್ಯಾಮಿ ತಂ ಪ್ರಭುಂ ॥ ೧೩ ॥

---

೯. ಈ ರೀತಿ ಪದದ್ವಯ ವ್ರತವನ್ನು ಸೂರ್ಯತತ್ಪರರಾಗಿ ಗ್ರಹಣ ಮಾಡಿದವರು ಆಮೇಲೆ ಸ್ನಾನಮಾಡಿ ಚಿತ್ರಭಾನುವಿಗೆ ವಂದನಮಾಡಬೇಕು.

೧೦. ಮಲಗುವಾಗಲೂ, ಎಚ್ಚರವಾಗುವಾಗಲೂ, ನಮಸ್ಕಾರ ಮಾಡುವಾಗಲೂ, ಹೋಮ ಮಾಡುವಾಗಲೂ, ಪೂಜಿಸುವಾಗಲೂ ಚಿತ್ರಭಾನುವಿಗೆ ನಮಸ್ಕರಿಸಬೇಕು.

೧೧. ಬೇರೆದಿನದಿಂದ ಆರಂಭಿಸಿ ಕ್ರಮವಾಗಿ ದಕ್ಷಿಣಾಯನ ಪ್ರಾಪ್ತವಾಗುವುದೆನ್ನುವವರೆಗೂ ಪ್ರತಿದಿನವೂ ಚಿತ್ರಭಾನುವಿನ ನಾಮಕೀರ್ತನವನ್ನು ಮಾಡಬೇಕು.

೧೨. ಹೀಗೆ ಉತ್ತರಾಯಣವಿರುವವರೆಗೆ, ನಡೆವಾಗಲೂ, 'ಹುಂ' ಎನ್ನುವಾಗಲೂ, ವೇದಾರಂಭದಲ್ಲೂ ಈ ರೀತಿ 'ಚಿತ್ರಭಾನು' ವನ್ನು ಸ್ಮರಿಸುತ್ತೇನೆ.

೧೩. ಬದುಕಿರುವವರೆಗೂ ತಿಳಿದೋ ಅಥವಾ ತಿಳಿಯದೆಯೋ ಯಾವುದನ್ನು ಮಾಡಿದರೂ ಆಗ ಆ ಪ್ರಭುವನ್ನು ಕೀರ್ತನ ಮಾಡುವೆನು.

ಯದಾಸ್ಯತಂ ಕಿಂಚಿದ್ವಕ್ಷ್ಯೇ ತದಾ ವಕ್ಷ್ಯಾಮಿ ತದ್ವಚಃ ।
ಅಜ್ಞಾನಾದಥವಾ ಜ್ಞಾನಾತ್ಕೀರ್ತಯಿಷ್ಯಾಮಿ ತಂ ಪ್ರಭುಂ ॥ ೧೪ ॥

ಷಣ್ಮಾಸಮೇಕಮನಸಾ ಚಿತ್ರಭಾನುಮಯಂ ಪರಂ ।
ತಂ ಸ್ಮರನ್ ಮರಣೇ ಯಾತಿ ಯಾಂ ಗತಿಂ ಸಾಸ್ತು ಮೇ ಗತಿಃ ॥ ೧೫ ॥

ಷಣ್ಮಾಸಾಭ್ಯಂತರೇ ಮೃತ್ಯುರ್ಯದಿ ತಸ್ಮಿನ್ ಭವೇನ್ಮಮ ।
ತನ್ಮಯಾ ಭಾಸ್ಕರಸ್ಯೇಹ ಸ್ವಯಮಾತ್ಮಾ ನಿವೇದಿತಃ ॥ ೧೬ ॥

ಪರಮಾತ್ಮಮಯಂ ಬ್ರಹ್ಮ ಚಿತ್ರಭಾನುಮಯಂ ಪರಂ ।
ಯಮಂತೇ ಸಂಸ್ಮರಿಷ್ಯಾಮಿ ಸ ಮೇ ಭಾನುಃ ಪರಾಗತಿಃ ॥ ೧೭ ॥

ಯದಿ ಪ್ರಾತಸ್ತಥಾ ಸಾಯಂ ಮಧ್ಯಾಹ್ನೇ ವಾ ಜಪಾಮ್ಯಹಂ ।
ಷಣ್ಮಾಸಾಭ್ಯಂತರೇ ನ್ಯಾಸಃ ಕೃತೋ ವ್ರತಮಯೋ ಮಯಾ ॥ ೧೮ ॥

---

೧೪. ಸುಳ್ಳುಹೇಳುವ ಸಂದರ್ಭವು ಬಂದರೆ ಆಗ ನಾನು ಅದನ್ನು ಹೇಳು ತ್ತೇನೆ. ಬಳಿಕ ತಿಳಿಯದೆಯೋ ಅಥವಾ ತಿಳಿದೋ ಆ ಪ್ರಭುವನ್ನು ಕೀರ್ತನವಾಡು ತ್ತೇನೆ.

೧೫. ಆರುತಿಂಗಳವರೆಗೆ ಒಂದೇ ಮನಸ್ಸಿನಿಂದ ಚಿತ್ರಭಾನುಮಯವಾದ ಪರ ವಸ್ತುವನ್ನು ಸ್ಮರಿಸಿ, ಈ ಸ್ಮರಣದಿಂದ ಯಾವ ಗತಿ ಬರಬೇಕೋ ಆ ಗತಿ ನನಗೆ ಬರಲಿ ಎನ್ನುತ್ತೇನೆ.

೧೬-೧೭. ಆರುತಿಂಗಳೊಳಗೆ ನನಗೆ ಮರಣ ಸಂಭವಿಸಿದರೆ, ಆ ಕಾಲದಲ್ಲಿ ಸೂರ್ಯನಿಗೆ ನನ್ನ ದೇಹವನ್ನು ನಾನೇ ಒಪ್ಪಿಸಿದ ಹಾಗಾಯಿತು. ಪರಮಾತ್ಮ ಸ್ವರೂ ಪನೂ, ಚಿತ್ರಭಾನು ಸ್ವರೂಪನೂ, ಆದ ಯಾವ ಪರಬ್ರಹ್ಮ ಪದಾರ್ಥವನ್ನು ಸ್ಮರಿಸು ತ್ತೇನೆಯೋ ಅಂಥ ಭಾನುವೇ ನನಗೆ ಶ್ರೇಷ್ಠವಾದ ಪ್ರಾಪ್ಯಸ್ಥಾನವು.

೧೮. ಪ್ರಾತಃಕಾಲದಲ್ಲಿಯಾಗಲೀ, ಮಧ್ಯಾಹ್ನ ಕಾಲದಲ್ಲಿಯಾಗಲೀ, ಸಾಯಂ ಕಾಲದಲ್ಲಿಯಾಗಲಿ ನಾನು ಜಪಮಾಡಿದರೆ ಹೀಗೆ ಆರುತಿಂಗಳು ಕಳೆಯುವುದರಲ್ಲಿ ನಾನು ವ್ರತಮಯವಾದ ನ್ಯಾಸವನ್ನು ಮಾಡಿದ ಹಾಗಾಗುವುದು.

**ತಥಾ ಕುರು ಜಗನ್ನಾಥ ಸರ್ವಲೋಕಪರಾಯಣಃ ।**
**ಚಿತ್ರಭಾನೋ ಯಥೋಕ್ತೋ ಭವಾನ್ಭವತಿ ಮೇ ಗತಿಃ ॥ ೧೯ ॥**

**ಏವಮುಚ್ಚಾರ್ಯ ಷಣ್ಮಾಸಂ ಚಿತ್ರಭಾನುಮಯಂ ವ್ರತಂ ।**
**ತಾವನ್ನಿಷ್ಪಾದಯೇದ್ಯಾವತ್ಸಂಪೂರ್ಣಂ ದಕ್ಷಿಣಾಯನಂ ॥ ೨೦ ॥**

**ತತಶ್ಚ ಪ್ರೀಣನಂ ಕುರ್ಯಾದ್ಯಥಾಶಕ್ತಿ ವಿಭಾವಸೋಃ ।**
**ಭೋಜಯೇದ್ಬ್ರಾಹ್ಮಣಾನ್ ದಿವ್ಯಾನ್ ಭೌಮಾಂಶ್ಚಾಪಿ ಸದಕ್ಷಿಣಂ ॥ ೨೧ ॥**

**ಪುಣ್ಯಾಖ್ಯಾನಾಕಥಾಂ ಕುರ್ಯಾನ್ಮಾರ್ತಂಡಸ್ಯ ತಥಾಗ್ರತಃ ।**
**ಪೂಜಯೇದ್ವಾಚಕಂ ಭಕ್ತ್ಯಾ ಯಥಾಶಕ್ತಿ ಚ ಲೇಖಕಂ ॥ ೨೨ ॥**

**ಏವಂ ವ್ರತಮಿದಂ ಕೃಷ್ಣ ಯೋ ಧಾರಯತಿ ಮಾನವಃ ।**
**ಇಹೈವ ದೇವಶಾರ್ದೂಲ ಮುಚ್ಯತೇ ಸರ್ವಕಿಲ್ಬಿಷೈಃ ॥ ೨೩ ॥**

---

೧೯. ಎಲೈ ಚಿತ್ರಭಾನುವೇ! ಸಮಸ್ತಲೋಕಗಳಿಗೂ ದಿಕ್ಕಾದವನೂ ಸರ್ವ ಶಕ್ತನೂ ಆಗಿರುವ ನೀನೇ ನನಗೆ ಗತಿಯಾಗುವ ಹಾಗೆ ಮಾಡು ಎನ್ನಬೇಕು.

೨೦. ದಕ್ಷಿಣಾಯನವು ಮುಗಿಯುವವರೆಗೆ ಹೀಗೆ ಸರ್ವದಾ ಚಿತ್ರಭಾನು ನಾಮವನ್ನು ಉಚ್ಚಾರಣೆ ಮಾಡಿ ವ್ರತ ಸಮಾಪ್ತಿಯಾಗುವ ಪರ್ಯಂತ ಆರುತಿಂಗಳ ಕಾಲ ಇದನ್ನು ಆಚರಿಸಬೇಕು.

೨೧. ಅನಂತರ ಸೂರ್ಯ ಪ್ರೀತ್ಯರ್ಥವಾಗಿ ಶಕ್ತ್ಯನುಸಾರವಾಗಿ ಶ್ರೇಷ್ಠರಾದ ಬ್ರಾಹ್ಮಣರಿಗೆ ಎಂದರೆ ದಿವ್ಯರೂ, ಭೌಮರೂ ಆದ ದ್ವಿಜರಿಗೆ ಭೋಜನವನ್ನು ಮಾಡಿಸಿ ಅವರಿಗೆ ದಕ್ಷಿಣೆಯನ್ನೂ ಕೊಡಬೇಕು.

೨೨. ಇದಲ್ಲದೆ ವ್ರತಾಂಗವಾಗಿ, ಆವಾಹಿಸಿದ ಮಾರ್ತಂಡನ ಎದುರಿಗೆ ಪುರಾಣ ವಾಚನವನ್ನು ಮಾಡಿಸಬೇಕು. ಅನಂತರ ಪುರಾಣ ವಾಚಕನಿಗೂ ಲೇಖಕನಿಗೂ ತನ್ನ ಶಕ್ತಿಯಿದ್ದಷ್ಟುಮಟ್ಟಿಗೆ ಬಹುಭಕ್ತಿಪೂರ್ವಕವಾಗಿ ಪೂಜೆಮಾಡಬೇಕು.

೨೩. ಅಯ್ಯಾ ದೇವಶ್ರೇಷ್ಠನಾದ ಕೃಷ್ಣನೇ! ಯಾವ ಮನುಷ್ಯನು ಈ ವ್ರತ ವನ್ನು ಆಚರಣೆ ಮಾಡುವನೋ ಅವನು ಈ ಲೋಕದಲ್ಲಿ ಸಮಸ್ತ ಪಾಪಗಳಿಂದ ಬಿಡು ಗಡೆ ಹೊಂದುತ್ತಾನೆ.

ಷಣ್ಮಾಸಾಭ್ಯಂತರೇ ಚಾಸ್ಯ ಮರಣಂ ಯದಿ ಜಾಯತೇ ।
ಪ್ರಾಪ್ನೋತ್ಯನಶನಸ್ಯೋಕ್ತಂ ಯತ್ಫಲಂ ತದಸಂಶಯಂ ॥ ೨೪ ॥

ಪದದ್ವಯಂ ಚ ದೇವಸ್ಯ ಸಮ್ಯಕ್ತ್ವೇನ ಸದಾರ್ಚಿತಂ ।
ಭವತ್ಯೇತಜ್ಜಗೌ ಭಾನುಃ ಪುರಾ ಚಂದ್ರಾಯ ಪೃಚ್ಛತೇ ॥ ೨೫ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇ ಪರ್ವಣಿ ಸಪ್ತಮೀ ಕಲ್ಪೇ ಭಾನುಪಾದದ್ವಯವ್ರತವರ್ಣನಂ ನಾಮ ಸಪ್ತಾಧಿಕಶತತಮೋಽಧ್ಯಾಯಃ



---

೨೪. ಈ ವ್ರತಿಗೆ ಆರು ತಿಂಗಳೊಳಗಾಗಿ ಮರಣವುಂಟಾದರೆ ಅನಶನ ವ್ರತಕ್ಕೆ ಯಾವ ಫಲವಾಗುವುದೆಂದು ಹೇಳಿದೆಯೋ ಆ ಫಲವನ್ನು ನಿಸ್ಸಂದೇಹವಾಗಿ ಪಡೆಯುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣ ಬ್ರಾಹ್ಮಪರ್ವದಲ್ಲಿ ಸಪ್ತಮೀ ಕಲ್ಪದಲ್ಲಿ ಭಾನು ಪಾದದ್ವಯವ್ರತ ವರ್ಣನೆಯೆಂಬ ನೂರೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಅಷ್ಟಾಧಿಕಶತತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಕೃಷ್ಣಪಕ್ಷೇ ತು ಮಾಘಸ್ಯ ಸರ್ವಾಪ್ತಿಂ ಸಪ್ತಮೀಂ ಶೃಣು ।
ಯಾಮುಪೋಷ್ಯ ಸಮಾಪ್ನೋತಿ ಸರ್ವಾನ್ಕಾಮಾಂಸ್ತಥಾ ಪರಾ ॥ ೧ ॥

ಪಾಖಂಡಾದಿಭಿರಾಲಾಪಂ ನ ಕುರ್ಯಾದ್ಭಾನುತತ್ಪರಃ ।
ಪೂಜಯೇತ್ಪ್ರಣತೋ ದೇವಮೇಕಾಗ್ರಮನಸಾ ಶುಭಂ ॥ ೨ ॥

ಮಾಘಾದ್ಯೈಃ ಪಾರಣಂ ಮಾಸೈಃ ಷಡ್ಭಿಃ ಸಂಕ್ರಾಂತಿಕಂ ಸ್ಮೃತಂ ।
ಮಾರ್ತಂಡಃ ಪ್ರಥಮಂ ನಾಮ ದ್ವಿತೀಯಂ ಕಃ ಪ್ರಕೀರ್ತಿತಂ ॥ ೩ ॥

---

## ನೂರೆಂಟನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಮಾಘ ಬಹುಳ ಸಪ್ತಮಿಯಲ್ಲಿ ಮಾಡಬೇಕಾದ ಸರ್ವಾಪ್ತಿಸಪ್ತಮೀ ವ್ರತವನ್ನು ಹೇಳುವೆನು ಕೇಳು. ಅದರಲ್ಲಿ ಉಪವಾಸ ಮಾಡಿದವನು ತನ್ನ ಎಲ್ಲ ಇಷ್ಟಾರ್ಥಗಳನ್ನೂ ಪಡೆಯುತ್ತಾನೆ.

೨. ವ್ರತಿಯು ಆ ದಿನ ಸೂರ್ಯಾರಾಧನೆಯಲ್ಲಿ ಆಸಕ್ತನಾಗಿರುವಾಗ ಪಾಷಂಡನು ಮುಂತಾದವರೊಡನೆ ಸಂಭಾಷಣೆ ಮಾಡಬಾರದು. ಶುಭಕರನಾದ ದೇವನನ್ನು ನಮ್ರನಾಗಿ ಏಕಾಗ್ರಚಿತ್ತದಿಂದ ಪೂಜಿಸಬೇಕು.

೩. ಮಾಘ ಮೊದಲಾದ ಆರುತಿಂಗಳಲ್ಲಿ ಪಾರಣೆ ಮಾಡುವುದು ಸಂಕ್ರಾಂತಿ ಪಾರಣೆಯೆನಿಸುವುದು. ಒಂದನೆಯ ತಿಂಗಳಲ್ಲಿ ಮಾರ್ತಂಡನೆಂದೂ, ಎರಡನೆಯ ತಿಂಗಳಲ್ಲಿ ಕಃ ಎಂದೂ.

ತೃತೀಯಂ ಚಿತ್ರಭಾನುಶ್ಚ ವಿಭಾವಸುರತಃ ಪರಂ ।
ಭಗೇತಿ ಪಂಚಮಂ ಜ್ಞೇಯಂ ಷಷ್ಠಂ ಹಂಸಃ ಸ ಉಚ್ಯತೇ ॥ ೪ ॥

ಪೂರ್ಣೇಷು ಷಟ್ಸು ಮಾಸೇಷು ಪಂಚಗವ್ಯಮುದಾಹೃತಂ ।
ಸ್ನಾನೇ ಚ ಪ್ರಾಶನೇ ಚೈವ ಪ್ರಶಸ್ತಂ ಪಾಪನಾಶನಂ ॥ ೫ ॥

ಪ್ರಣಾಮಂ ದೇವದೇವಸ್ಯ ಕೃತ್ವಾ ಪೂಜಾಂ ಯಥಾವಿಧಿ ।
ವಿಪ್ರಾಯ ದಕ್ಷಿಣಾಂ ದದ್ಯಾಚ್ಛ್ರದ್ಧಧಾನಶ್ಚ ಶಕ್ತಿತಃ ॥ ೬ ॥

ಪಾರಣಾಂತೇ ಚ ದೇವಸ್ಯ ಪ್ರೀಣನಂ ಭಕ್ತಿಪೂರ್ವಕಂ ।
ಕುರ್ವೀತ ಭಕ್ತ್ಯಾ ವಿಧಿವದಿದಂ ತೇನ ತು ಗೃಹ್ಯತೇ ॥ ೭ ॥

ನಕ್ತಭೋಜೀ ತಥಾ ವಿಷ್ಣೋ ತೈಲಕ್ಷಾರವಿವರ್ಜಿತಃ ।
ಕೃಷ್ಣ ಜಾಗರಣಂ ರಾತ್ರೌ ಸಪ್ತಮ್ಯಾಮಥವಾ ದಿನೇ ॥ ೮ ॥

---

೪. ಮೂರನೆಯ ತಿಂಗಳಿನಲ್ಲಿ ಚಿತ್ರಭಾನುವೆಂದೂ, ನಾಲ್ಕನೆಯದರಲ್ಲಿ ವಿಭಾವಸುವೆಂದೂ, ಐದನೆಯದರಲ್ಲಿ ಭಗನೆಂದೂ, ಆರನೇ ತಿಂಗಳಿನಲ್ಲಿ ಹಂಸನೆಂದೂ ಉಚ್ಚರಿಸಬೇಕು.

೫-೬. ಹೀಗೆ ಆರುತಿಂಗಳು ತುಂಬಿದ ಮೇಲೆ ವ್ರತ ಮುಗಿಯುವುದು. ಈ ವ್ರತಾಂಗವಾದ ಸ್ನಾನಕ್ಕೂ, ಪ್ರಾಶನಕ್ಕೂ ಪಾಪನಾಶಕವೂ, ಪ್ರಶಸ್ತವೂ ಆದ ಪಂಚಗವ್ಯವನ್ನು ಉಪಯೋಗಿಸಿಕೊಳ್ಳಬೇಕು. ಯಥಾವಿಧಿಯಾಗಿ ಪೂಜಿಸಿ, ದೇವದೇವನಾದ ಸೂರ್ಯನಿಗೆ ನಮಸ್ಕಾರ ಮಾಡಿ ಭಕ್ತಿಯುತನಾಗಿ ಬ್ರಾಹ್ಮಣನಿಗೆ ಶಕ್ತ್ಯನುಸಾರ ದಕ್ಷಿಣೆ ಕೊಡಬೇಕು.

೭. ಪಾರಣೆಯ ಕೊನೆಯಲ್ಲಿ ಭಕ್ತಿಪೂರ್ವಕವಾಗಿ ವಿಧಿವಿಧಾನದಂತೆ ಸರ್ವ ಸಮರ್ಪಣೆಮಾಡಿ, ದೇವನನ್ನು ಸುಪ್ರೀತನನ್ನಾಗಿ ಮಾಡಬೇಕು. ಭಕ್ತಿಯಿಂದ ಮಾಡಿದ ಈ ಪ್ರೀಣನವನ್ನು (ಅರ್ಪಣವನ್ನು) ಆ ಸೂರ್ಯದೇವನು ಪ್ರತಿಗ್ರಹಿಸುತ್ತಾನೆ.

೮. ಎಲೈ ವಿಷ್ಣುವೇ! ಆ ದಿನ ಹಗಲು ಉಪವಾಸವಿದ್ದು ರಾತ್ರಿ ಭೋಜನ ಮಾಡಬೇಕು. ಅದರಲ್ಲೂ ಕಾರ, ಎಣ್ಣೆ ಇವನ್ನು ವರ್ಜ್ಯಮಾಡಿದ ಆಹಾರವನ್ನೇ ಸೇವಿಸಬೇಕು. ಸಪ್ತಮಿಯ ದಿನ ರಾತ್ರಿ ಹಗಲು ಸಹ ನಿದ್ರಿಸದೆ ಜಾಗರಣೆಮಾಡಬೇಕು.

**ಏತಾಮುಷಿತ್ವಾ ಧರ್ಮಜ್ಞೋ ಹಂಸಪ್ರೀಣನತತ್ಪರಃ ।**
**ಸರ್ವಾನ್ ಕಾಮಾನವಾಪ್ನೋತಿ ಸರ್ವಪಾಪೈಃ ಪ್ರಮುಚ್ಯತೇ ॥ ೯ ॥**

**ಯತಸ್ಸರ್ವಮವಾಪ್ನೋತಿ ಯದ್ಯದಿಚ್ಛತಿ ಚೇತಸಾ ।**
**ಅತೋ ಲೋಕೇಷು ವಿಖ್ಯಾತಾ ಸರ್ವಾರ್ಥಾವಾಪ್ತಿಸಪ್ತಮೀ ॥ ೧೦ ॥**

**ಕೃತಾಭಿಲಕ್ಷಿತಾಹ್ಯೇತಾ ಪ್ರಾರಬ್ಧಾ ಧರ್ಮತತ್ಪರೈಃ ।**
**ಪೂರಯತ್ಯಖಿಲಾನ್ ಕಾಮಾನ್ ಸಂಶ್ರುತಾ ಚ ದಿನೇ ದಿನೇ ॥ ೧೧ ॥**

**ತಮಾರಾಧಯ ಮಾರ್ತಂಡಂ ತಥಾಥ ಗರುಡಧ್ವಜ ।**
**ಯಥಾರಾಧಿತವಾನ್ ಭಾನುಂ ಭಗಣಾಧಿಪತಿಃ ಪುರಾ ॥ ೧೨ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ ಸರ್ವಾರ್ಥಾವಾಪ್ತಿಸಪ್ತಮೀ ವರ್ಣನಂ ನಾಮ ಅಷ್ಟಾಧಿಕ ಶತತಮೋಽಧ್ಯಾಯಃ.**

---

೯. ಧರ್ಮಜ್ಞನಾಗಿಯೂ, ಸೂರ್ಯಪ್ರೀಣನದಲ್ಲಿ ಆಸಕ್ತನಾಗಿಯೂ, ಇದ್ದು ಸಪ್ತಮೀದಿನ ಜಾಗರಣೆ ಮಾಡಿದರೆ ಆತನು ಎಲ್ಲ ಇಷ್ಟಾರ್ಥಗಳನ್ನೂ ಹೊಂದುತ್ತಾನೆ. ಅಲ್ಲದೆ ಎಲ್ಲ ಪಾಪಗಳಿಂದಲೂ ಮುಕ್ತನಾಗುತ್ತಾನೆ.

೧೦. ಈ ವ್ರತಿಯು ಮನಸ್ಸಿನಲ್ಲಿ ಏನೇನನ್ನು ಅಪೇಕ್ಷಿಸುವನೋ ಅವೆಲ್ಲವನ್ನೂ ಹೊಂದುವುದರಿಂದ ಈ ಸಪ್ತಮಿಯು ಸರ್ವಾರ್ಥಾವಾಪ್ತಿ ಸಪ್ತಮೀ ಎಂದು ಲೋಕದಲ್ಲಿ ಪ್ರಸಿದ್ಧವಾಯಿತು.

೧೧. ಈ ಸಪ್ತಮೀವ್ರತವಿಧಿಯನ್ನು ಆಚರಿಸಿದರೂ, ಆಚರಿಸಲು ಇಚ್ಛಿಸಿದರೂ, ಧರ್ಮಾಸಕ್ತರು ಪ್ರಾರಂಭಮಾಡಿ ಅದಷ್ಟು ನಡೆಯಿಸಿದರೂ, ಅಥವಾ ನಿತ್ಯವೂ ಈ ವಿಧಿಯನ್ನು ಶ್ರವಣಮಾಡಿದರೂ, ಅವರ ಸಮಸ್ತ ಕಾಮಗಳನ್ನೂ ಪೂರ್ಣಮಾಡುತ್ತದೆ.

೧೨. ಅಯ್ಯಾ ಗರುಡಧ್ವಜನೇ! ನೀನೂ ಮಾರ್ತಾಂಡನನ್ನು ಆರಾಧಿಸು. ಪೂರ್ವದಲ್ಲಿ ದಿಂಡಿಯು ಭಾನುವನ್ನು ಹೇಗೆ ಆರಾಧಿಸಿದನೋ ಹಾಗೆ ನೀನೂ ಭಾನುವನ್ನು ಆರಾಧಿಸು ಎಂದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಸರ್ವಾರ್ಥಾವಾಪ್ತಿ ಸಪ್ತಮೀವ್ರತ ವರ್ಣನವೆಂಬ ನೂರಎಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ನವಾಧಿಕಶತತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಮಾರ್ತಂಡಸಪ್ತಮೀಂ ಕೃಷ್ಣ ಯಥಾನ್ಯಾಂ ವಚ್ಮಿ ತೇಽನಘ।
ಶೃಣುಷ್ವೈಕಮನಾ ವೀರ ಗದತೋ ಮೇ ಶುಭಪ್ರದಾಂ ॥ ೧ ॥

ಯಸ್ಯಾಃ ಸಮ್ಯಗನುಷ್ಠಾನಾತ್ ಪ್ರಾಪ್ನೋತ್ಯಭಿಮತಂ ಫಲಂ।
ಪೌಷೇ ಮಾಸೇ ಸಿತೇ ಪಕ್ಷೇ ಸಪ್ತಮ್ಯಾಂ ಸಮುಪೋಷಿತಃ ॥ ೨ ॥

ಸಮ್ಯಕ್ಸಂಪೂಜ್ಯ ಮಾರ್ತಂಡಂ ಮಾರ್ತಂಡ ಇತಿ ವೈ ಜಪೇತ್।
ಪೂಜಯೇತ್ಕುತಪೇ ಭಕ್ತ್ಯಾ ಶ್ರದ್ಧಯಾ ಪರಯಾನ್ವಿತಃ ॥ ೩ ॥

---

## ನೂರೊಂಭತ್ತನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಪಾಪರಹಿತನೂ ವೀರನೂ ಆದ ಕೃಷ್ಣನೇ! ಮಾರ್ತಂಡ ಸಪ್ತಮೀಯೆಂಬ ಮತ್ತೊಂದು ಸಪ್ತಮೀ ವಿಚಾರವನ್ನು ಹೇಳುತ್ತೇನೆ. ನಾನು ಹೇಳುತ್ತಿರುವ ಶುಭಪ್ರದವಾದ ಇದನ್ನು ಏಕಾಗ್ರಚಿತ್ತದಿಂದ ಕೇಳು.

೨. ಇದನ್ನು ಚೆನ್ನಾಗಿ ಆಚರಿಸುವುದರಿಂದ ಮಾನವನು ಇಷ್ಟವಾದ ಫಲವನ್ನು ಹೊಂದುತ್ತಾನೆ. ಈ ವ್ರತಿಯು ಪುಷ್ಯ ಶುದ್ಧ ಸಪ್ತಮೀದಿನ ಉಪವಾಸ ಮಾಡತಕ್ಕದ್ದು.

೩. ಮಾರ್ತಂಡನನ್ನು ಚೆನ್ನಾಗಿ ಪೂಜಿಸಿ 'ಮಾರ್ತಂಡ' ಎಂದು ಜಪಮಾಡಬೇಕು. ಮತ್ತು ಕುತುಪ ಕಾಲದಲ್ಲಿ ತುಂಬ ಶ್ರದ್ಧೆಯಿಂದ ಕೂಡಿ ಮಾರ್ತಂಡನನ್ನು ಪೂಜಿಸುವವನಾಗಿ,

ಧೂಪಪುಷ್ಪೋಪಹಾರಾದ್ಯೈರುಪವಾಸೈಃ ಸಮಾಹಿತಃ ।
ಮಾರ್ತಂಡೇತಿ ಜಪನ್ನಾಮ ಪುನಸ್ತದ್ಗತಮಾನಸಃ ॥ ೪ ॥

ವಿಪ್ರಾಯ ದಕ್ಷಿಣಾಂ ದದ್ಯಾದ್ಯಥಾಶಕ್ತಿ ಖಗಧ್ವಜ ।
ಸ್ವಪನ್ ವಿಬುಧ್ಯನ್ ಸ್ಖಲಿತೋ ಮಾರ್ತಂಡೇತಿ ಚ ಕೀರ್ತಯೇತ್ ॥ ೫ ॥

ಪಾಷಂಡಾದಿ ವಿಕರ್ಮಸ್ಥೈರಾಲಾಪಂ ಚ ವಿವರ್ಜಯೇತ್ ।
ಗೋಮೂತ್ರಂ ಗೋಮಯಂ ಚಾಪಿ ದಧಿ ಕ್ಷೀರಂ ಘೃತಂ ತಥಾ ॥ ೬ ॥

ಗೋದೇಹತಃ ಸಮುದ್ಭೂತಂ ಪ್ರಾಶ್ನೀಯಾದಾತ್ಮಶುದ್ಧಯೇ ।
ದ್ವಿತೀಯೇಽಹ್ನಿ ಪುನಃ ಸ್ನಾತಃ ತಥೈವಾಭ್ಯರ್ಚಯೇದ್ರವಿಂ ॥ ೭ ॥

ತೇನೈವ ನಾಮ್ನಾ ಸಂಪೂಜ್ಯ ದತ್ವಾ ವಿಪ್ರಾಯ ದಕ್ಷಿಣಾಂ ।
ತತೋ ಭುಂಜೀತ ಗೋದೋಹಸಂಭೂತೇನ ಸಮನ್ವಿತಂ ॥ ೮ ॥

---

೪. ಹೂವು, ಧೂಪ, ದೀಪ, ನೈವೇದ್ಯ ಮೊದಲಾದುವುಗಳಿಂದ ಪೂಜಿಸಿ, ಏಕಾಗ್ರಚಿತ್ತನಾಗಿ ಮಾರ್ತಾಂಡ ಎಂಬ ನಾಮವನ್ನು ಜಪಿಸುತ್ತಾ, ಅವನಲ್ಲೇ ಮನಸ್ಸಿಟ್ಟು ಉಪವಾಸ ಮಾಡಬೇಕು.

೫. ಅಯ್ಯಾ ಗರುಡಧ್ವಜನೇ ! ಆ ದಿನ ಶಕ್ತ್ಯನುಸಾರ ಬ್ರಾಹ್ಮಣನಿಗೆ ದಕ್ಷಿಣೆಯನ್ನು ಕೊಡಬೇಕು. ಮಲಗಿರುವಾಗಲೂ, ಎಚ್ಚರವಾದಾಗಲೂ, ಎಡವಿದಾಗಲೂ ಮಾರ್ತಂಡ ಎಂದು ಕೀರ್ತನಮಾಡಬೇಕು.

೬. ಆ ದಿನ ಪಾಷಂಡರು ಮೊದಲಾದವರುಗಳೊಡನೆ ಸಂಭಾಷಣೆಯನ್ನು ತ್ಯಜಿಸಬೇಕು. ಶರೀರ ಶುದ್ಧಿಗಾಗಿ ಗೋವಿನ ದೇಹದಿಂದ ಉತ್ಪನ್ನವಾದ.

೭. ಗೋಮೂತ್ರ, ಗೋಮಯ, ಹಾಲು, ಮೊಸರು, ತುಪ್ಪ ಇವುಗಳನ್ನು ಪ್ರಾಶನಮಾಡಬೇಕು. ಎರಡನೆಯ ದಿನ ಪುನಃ ಸ್ನಾನಮಾಡಿ ಹಾಗೆಯೇ ಸೂರ್ಯನನ್ನು ಪೂಜಿಸಬೇಕು.

೮. ಬಳಿಕ ಮಾರ್ತಂಡ ಎಂಬ ಹೆಸರಿನಿಂದ ಚೆನ್ನಾಗಿ ಪೂಜಿಸಿ ಬ್ರಾಹ್ಮಣನಿಗೆ ದಕ್ಷಿಣೆಯನ್ನು ಕೊಟ್ಟು ಅನಂತರ ಹಸುವನ್ನು ಕರೆದ ಹಾಲಿನಿಂದ ಉತ್ಪನ್ನವಾದ ಮೊಸರು ತುಪ್ಪ ಮೊದಲಾದುವನ್ನು ಹಾಕಿಕೊಂಡು ಭೋಜನ ಮಾಡಬೇಕು.

ಏವಮೇವಾಖಿಲಾನ್ಮಾಸಾನುಪೋಷ್ಯ ಪ್ರಯತಃ ಶುಚಿಃ ।
ದದ್ಯಾದ್ಗವಾದಿಕಂ ವಿದ್ವಾನ್ಪ್ರತಿಮಾಸಂ ಸ್ವಶಕ್ತಿತಃ ॥ ೯ ॥

ಧಾರಿತಾ ಚೇತ್ಪುನರ್ವರ್ಷೇ ಯಥಾ ಶಕ್ತ್ಯಾ ಗವಾದಿಕಂ ।
ದತ್ವಾ ಪರಂ ರವೇರ್ಭೂಯಃ ಶೃಣು ಯತ್ಫಲಮಶ್ನುತೇ ॥ ೧೦ ॥

ಸ್ವರ್ಣಶೃಂಗೀಂ ಚ ಪಂಚಮ್ಯಾಂ ಷಷ್ಠ್ಯಾಂ ಚ ವೃಷಭಂ ನರಃ ।
ಪ್ರತಿಮಾಸಂ ದ್ವಿಜಾತಿಭ್ಯೋ ಯದ್ದತ್ವಾ ಫಲಮಶ್ನುತೇ ॥ ೧೧ ॥

ತತ್ಪ್ರಾಪ್ನೋತ್ಯಖಿಲಂ ಸಮ್ಯಗ್ದಿನೇಽಸ್ಮಿನ್ಸಮುಪೋಷಿತಃ ।
ತಂ ಚ ಲೋಕಮವಾಪ್ನೋತಿ ಮಾರ್ತಂಡೋ ಯತ್ರ ತಿಷ್ಠತಿ ॥ ೧೨ ॥

ಶಾಂಡೇಲೇಯಸಮಃ ಕೃಷ್ಣ ತೇಜಸಾನಾತ್ರ ಸಂಶಯಃ ।
ಮಾರ್ತಂಡಸಪ್ತಮೀಮೇತಾಮುಪೋಷ್ಯೈತೇ ಗಣಾ ದಿವಿಃ ॥ ೧೩ ॥

---

೯. ವಿದ್ವಾಂಸನಾದವನು ಹೀಗೆ ಎಲ್ಲ ತಿಂಗಳುಗಳಲ್ಲಿಯೂ ನಿಯಮದಿಂದ ಶುಚಿರ್ಭೂತನಾಗಿ ಉಪವಾಸ ಮಾಡಿ ತನ್ನ ಶಕ್ತಿಯಿದ್ದಷ್ಟುಮಟ್ಟಿನಲ್ಲಿ ಗೋದಾನ ಮುಂತಾದುವನ್ನೂ ಮಾಡಬೇಕು.

೧೦. ಹೀಗೆ ಒಂದುವರ್ಷ ಕಳೆದಮೇಲೆ ಮುಂದಣ ವರ್ಷವೂ ಈ ಉಪವಾಸ ಮಾಡಿ ಸೂರ್ಯಪ್ರೀತಿಗಾಗಿ ತನ್ನ ಶಕ್ತ್ಯನುಸಾರ ಗೋವು ಮೊದಲಾದುವನ್ನು ದಾನಮಾಡಿದರೆ ಯಾವ ಫಲವನ್ನು ಹೊಂದುವನೆಂಬುದನ್ನು ಕೇಳು.

೧೧. ಪ್ರತಿಮಾಸದಲ್ಲೂ ಪಂಚಮಿಯ ದಿನ ಕೊಂಬಿಗೆ ಚಿನ್ನದ ಅಣಸನ್ನು ಹಾಕಿದ ಹಸುವನ್ನೂ, ಷಷ್ಠಿಯಲ್ಲಿ ವೃಷಭವನ್ನೂ ಬ್ರಾಹ್ಮಣರಿಗೆ ಕೊಟ್ಟರೆ ಯಾವ ಫಲ ಹೊಂದುವನೋ, ಅವೆಲ್ಲ ಫಲವನ್ನೂ ಈ ವ್ರತದಲ್ಲಿ ಚೆನ್ನಾಗಿ ಉಪವಾಸ ಮಾಡಿದವನು ಹೊಂದುತ್ತಾನೆ.

೧೨. ಈ ಪುಷ್ಯ ಶುದ್ಧ ಸಪ್ತಮಿಯಲ್ಲಿ ಹೀಗೆ ಉಪವಾಸ ಮಾಡಿದವನು ಸೂರ್ಯನು ಯಾವ ಲೋಕದಲ್ಲಿರುವನೋ ಆ ಲೋಕವನ್ನು ಸೇರುತ್ತಾನೆ.

೧೩. ಎಲೈ ಭೂಧರನಾದ ಕೃಷ್ಣನೇ! ಈ ವ್ರತಿಯು ತೇಜಸ್ಸಿನಲ್ಲಿ ಯಜ್ಞೇಶ್ವರನಿಗೆ (ಶಾಂಡಿಲೇಯನಿಗೆ) ಸಮನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ. ಈ

**ವಿದ್ಯೋತಮಾನಾ ದೃಶ್ಯಂತೇ ಲೋಕೈರದ್ಯಾಪಿ ಭೂಧರ ।**
**ತಸ್ಮಾತ್ತ್ವಮಾದಿದೇವೇಶಂ ಗ್ರಹೇಶಂ ಭಾಸ್ಕರಂ ರವಿಂ ।**
**ಅನಯಾರ್ಚಯ ಗೋವಿಂದ ಗೋಪತಿಂ ಗೋಲರೂಪಿಣಂ ॥ ೧೪ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ ಮಾರ್ತಂಡಸಪ್ತಮೀ ವರ್ಣನಂ ನಾಮ ನವಾಧಿಕ ಶತತಮೋಽಧ್ಯಾಯಃ**



---

ಮಾರ್ತಂಡ ಸಪ್ತಮಿಯಲ್ಲಿ ಉಪವಾಸ ಮಾಡಿದ್ದರಿಂದ ಈ ಗಣಗಳು ಅಂತರಿಕ್ಷದಲ್ಲಿ ಈಗಲೂ ಪ್ರಕಾಶಮಾನವಾಗಿ ಕಾಣುತ್ತಲಿವೆ.

೧೪. ಆದುದರಿಂದ ಅಯ್ಯಾ ಗೋವಿಂದನೇ ! ಆದಿದೇವೇಶನೂ, ಗ್ರಹಗಳಿಗೆ ಅಧಿಪನೂ, ಭಾಸ್ಕರನೂ, ಗೋಲಸ್ವರೂಪನೂ, ಕಿರಣಾಧಿಪತಿಯೂ, ಆದ ರವಿಯನ್ನು ಈ ಸಪ್ತಮೀ ವ್ರತವಿಧಾನದಿಂದ ಪೂಜೆಮಾಡು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ ಮಾರ್ತಂಡಸಪ್ತಮೀ ವರ್ಣನವೆಂಬ ನೂರಒಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ದಶಾಧಿಕಶತತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಶುಕ್ಲಪಕ್ಷೇ ತು ಸಪ್ತಮ್ಯಾಂ ಮಾಸಿ ಭಾದ್ರಪದೇಽಚ್ಯುತ ।
ಪ್ರಣಮ್ಯ ಶಿರಸಾದಿತ್ಯಂ ಪೂಜಯೇತ್ಸಪ್ತವಾಹನಂ ॥ ೧ ॥

ಪುಷ್ಪ ಧೂಪಾದಿಭಿರ್ವೀರ ಭೂದೇವಾನಾಂ ಚ ತರ್ಪಣೈಃ ।
ಪಾಷಂಡಾದಿಭಿರಾಲಾಪಮಕುರ್ವನ್ ನಿಯತಾತ್ಮವಾನ್ ॥ ೨ ॥

ವಿಪ್ರಾಯ ದಕ್ಷಿಣಾಂ ದತ್ವಾ ನಕ್ತಂ ಭುಂಜೀತ ವಾಗ್ಯತಃ ।
ತಿಷ್ಠನ್ ವ್ರಜನ್ ಪ್ರಸ್ಥಿತಶ್ಚ ಕ್ಷುತ ಪ್ರಸ್ಖಲಿತಾದಿಷು ॥ ೩ ॥

---

## ನೂರಹತ್ತನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಎಲೈ ಅಚ್ಯುತನೇ! ಭಾದ್ರಪದ ಮಾಸದ ಶುದ್ಧ ಸಪ್ತಮಿಯಲ್ಲಿ ಸಪ್ತಾಶ್ವನಾದ ಆದಿತ್ಯನಿಗೆ ತಲೆಬಾಗಿ ನಮಸ್ಕರಿಸಿ, ಹೂವು, ಗಂಧ, ಧೂಪ ಮೊದಲಾದುವುಗಳನ್ನು ಸಮರ್ಪಿಸಿ ಪೂಜಿಸಬೇಕು.

೨. ಅಯ್ಯಾ ವೀರನೇ! ಅನಂತರ ಬ್ರಾಹ್ಮಣರನ್ನು ಭೋಜನದಿಂದ ತೃಪ್ತಿ ಪಡಿಸಬೇಕು. ಆ ದಿವಸ ತನ್ನ ಮನಸ್ಸನ್ನು ನಿಗ್ರಹಮಾಡಿಕೊಂಡು ಪಾಷಂಡರು, ಪತಿತರು ಮೊದಲಾದವರೊಡನೆ ಸಂಭಾಷಣೆ ಮಾಡಬಾರದು.

೩. ಮತ್ತು ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟು ರಾತ್ರಿಯಾದ ಮೇಲೆ ಮೌನದಿಂದ ಭೋಜನ ಮಾಡಬೇಕು. ಕುಳಿತಿದ್ದಾಗಲೂ, ನಿಂತಿದ್ದಾಗಲೂ, ನಡೆದಾಡುವಾಗಲೂ, ಪ್ರಯಾಣ ಹೊರಟಾಗಲೂ, ಶೀನು ಬಂದಾಗಲೂ, ಎಡವಿದಾಗಲೂ,

**ಆದಿತ್ಯನಾಮಸ್ಮರಣಂ ಕುರ್ವನ್ನುಚ್ಚಾರಣಂ ತಥಾ ।**
**ಅನೇನೈವ ವಿಧಾನೇನ ಮಾಸಾನ್ ದ್ವಾದಶ ವೈ ಕ್ರಮಾತ್ ॥ ೪ ॥**

**ಉಪೋಷ್ಯ ಪಾರಣೇ ಪೂರ್ಣೇ ಸಮಭ್ಯರ್ಚ್ಯ ಜಗದ್ಗುರುಂ ।**
**ಪುಣ್ಯೇನ ಶ್ರಾವಣೇನೇಹ ಪ್ರೀಣಯನ್ಪುಷ್ಟಿಮಶ್ನುತೇ ॥ ೫ ॥**

**ಅನಂತಂ ಶ್ರಾವಣೇನೇಹ ಯತ್ಫಲಂ ಸಮುದಾಹೃತಂ ।**
**ತೇನಾದಿತ್ಯಂ ಸಮಭ್ಯರ್ಚ್ಯ ತದೇವ ಲಭತೇ ಫಲಂ ॥ ೬ ॥**

**ಏವಂ ಯಃ ಪುರುಷಃ ಕುರ್ಯಾದಾದಿತ್ಯಾರಾಧನಂ ಶುಚಿಃ ।**
**ಪ್ರಾಪ್ನೋತೀಹ ವಿಪುಲಂ ಭೋಗಂ ಧರ್ಮಮರ್ಥಂ ತಥಾವ್ಯಯಂ ॥ ೭ ॥**

---

೪. ಆದಿತ್ಯ ದೇವನ ನಾಮವನ್ನು ಮನದಲ್ಲಿ ಸ್ಮರಿಸುತ್ತಲೂ, ಬಾಯಿಯಿಂದ ಉಚ್ಚರಿಸುತ್ತಲೂ ಇರಬೇಕು. ಈ ವಿಧಾನದಿಂದ ಹನ್ನೆರಡು ತಿಂಗಳು ಆಚರಿಸಬೇಕು.

೫. ಹೀಗೆ ಹನ್ನೆರಡು ತಿಂಗಳು ಉಪೋಷಣ ಮಾಡಿ ಪಾರಣೆಯು ಪೂರ್ಣವಾಗಲು, ಜಗತ್ತಿಗೆ ಗುರುವಾದ ಸೂರ್ಯನನ್ನು ಪೂಜಿಸಿ ಪುಣ್ಯಕರವಾದ ಪುರಾಣ ಶ್ರವಣದಿಂದ ಅವನನ್ನು ಸಂತೋಷಪಡಿಸುವವನಾಗಿ ಆ ಮೂಲಕ ತಾನು ಪುಷ್ಟಿ ಹೊಂದುತ್ತಾನೆ.

೬. ಸೂರ್ಯನನ್ನು ಆರಾಧಿಸುವುದರಿಂದ ಯಾವ ಅನಂತ ಫಲವುಂಟೆಂದು ಹೇಳಲ್ಪಟ್ಟಿದೆಯೋ ಪುರಾಣ ಶ್ರವಣದಿಂದಲೂ ಅದೇ ಫಲವನ್ನು ಹೊಂದುತ್ತಾನೆ.,

೭. ಯಾವನು ಪರಿಶುದ್ಧನಾಗಿ ಹೀಗೆ ಆದಿತ್ಯಾರಾಧನೆ ಮಾಡುವನೋ ಅವನು ಈ ಲೋಕದಲ್ಲಿ ಸಮೃದ್ಧಿಯಾಗಿ ಭೋಗವನ್ನು ಪಡೆಯುವವನಲ್ಲದೆ ಧರ್ಮವನ್ನೂ, ಎಂದೂ ಮುಗಿಯದಷ್ಟು ಅರ್ಥವನ್ನೂ ಪಡೆಯುತ್ತಾನೆ.

ಅಮುತ್ರ ಲೋಕಮಾಯಾತಿ ದಿವ್ಯೇ ಖೇ ಗೀತಸಂಯುತೇ ।
ನಾರೀ ವಾ ಸ್ವರ್ಗಮಭ್ಯೇತ್ಯ ಹ್ಯನಂತಂ ಫಲಮಶ್ನುತೇ ॥ ೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ
ಅನಂತಸಪ್ತಮೀ ವ್ರತ ವರ್ಣನಂ ನಾಮ ದಶಾಧಿಕ
ಶತತಮೋಽಧ್ಯಾಯಃ

---

೮. ಪರಲೋಕ ಪ್ರಾಪ್ತಿಯಾದಾಗ ಸ್ವರ್ಗದಲ್ಲಿ ಸಂಗೀತ ಶ್ರವಣಾದಿ ಸುಖಾನುಭವ ಮಾಡುತ್ತಾ ಫಲವನ್ನು ಹೊಂದುತ್ತಾನೆ. ಈ ವ್ರತ ಮಾಡಿದ ನಾರಿಯೂ ಕೂಡ ಸ್ವರ್ಗವನ್ನು ಪಡೆದು ಅನಂತ ಫಲವನ್ನು ಹೊಂದುತ್ತಾಳೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ
ಅನಂತ ಸಪ್ತಮೀ ವರ್ಣನವೆಂಬ ನೂರಹತ್ತನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಏಕಾದಶೋತ್ತರಶತತಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಶ್ರಾವಣೇ ಮಾಸಿ ದೇವಾಗ್ರ್ಯಂ ಸಪ್ತಮ್ಯಾಂ ಸಪ್ತವಾಹನಂ ।
ಶುಕ್ಲಪಕ್ಷೇ ಸಮಭ್ಯರ್ಚ್ಯ ಪುಷ್ಪಧೂಪಾದಿಭಿಃ ಶುಚಿಃ ॥ ೧ ॥

ಪಾಖಂಡಾದಿಭಿರಾಲಾಪಮಕುರ್ವನ್ನಿಯತಾತ್ಮವಾನ್ ।
ವಿಪ್ರಾಯ ದಕ್ಷಿಣಾಂ ದತ್ವಾ ನಕ್ತಂ ಭುಂಜೀತ ವಾಗ್ಯತಃ ॥ ೨ ॥

ಅಭ್ಯಂಗಂ ದೇವದೇವಸ್ಯ ವರ್ಷೇ ವರ್ಷೇ ನಿಯೋಜಯೇತ್ ।
ಸಪ್ತಮ್ಯಾಮನ್ನಮೇವಾಗ್ರ್ಯಂ ಶುಭಂ ಶುಕ್ಲಂ ನವಂ ಯಥಾ ॥ ೩ ॥

---

## ನೂರಹನ್ನೊಂದನೆಯ ಅಧ್ಯಾಯ

೧-೨. ಬ್ರಹ್ಮನು ಹೇಳುತ್ತಾನೆ—ಶ್ರಾವಣ ಮಾಸದ ಶುಕ್ಲಪಕ್ಷದ ಸಪ್ತಮಿಯಲ್ಲಿ ಪರಿಶುದ್ಧನಾಗಿ, ದೇವತೆಗಳಲ್ಲಿ ಅಗ್ರಗಣ್ಯನೂ, ಸಪ್ತಾಶ್ವನೂ ಆದ ಸೂರ್ಯನನ್ನು ಪುಷ್ಪ, ಧೂಪ ಮುಂತಾದುವುಗಳ ಸಮರ್ಪಣದಿಂದ ಪೂಜಿಸಿ, ಮನಸ್ಸನ್ನು ನಿಗ್ರಹಿಸಿದವನಾಗಿ ಪಾಷಂಡರು, ಪತಿತರು ಮುಂತಾದವರೊಡನೆ ಮಾತಾಡದೆ, ನಿಯಮದಿಂದದ್ದು, ಬ್ರಾಹ್ಮಣನಿಗೆ ದಕ್ಷಿಣೆಯನ್ನು ಕೊಟ್ಟು ರಾತ್ರಿಯಾದಮೇಲೆ ನಿಯಮವಿಶಿಷ್ಟನಾಗಿ ಮೌನದಿಂದ ಭೋಜನ ಮಾಡಬೇಕು.

೩. ಪ್ರತಿವರ್ಷದಲ್ಲಿಯೂ ಈ ಸಪ್ತಮಿಯಲ್ಲಿ ದೇವದೇವನಿಗೆ ಅಭ್ಯಂಗಸ್ನಾನವನ್ನು ಏರ್ಪಡಿಸಬೇಕು. ಶ್ರೇಷ್ಠವಾದುದೂ-ಶುಭ್ರವಾದುದೂ ಆದ ಹೊಸ ಅಕ್ಕಿಯ

ವಿಭವೇಷು ತಥಾನ್ಯೇಷು ವಾದಿತ್ರಾಣ್ಯೇವ ವೈ ವಿದುಃ ।
ತಥಾ ದೇವಸ್ಯ ಮಾಸೇಽಸ್ಮಿನ್ನಭ್ಯಂಗಃ ಪರಿಗೀಯತೇ ॥ ४ ॥

ಯಸ್ತು ಚಾರಾಧಯೇದ್ಭಕ್ತ್ಯಾ ಭಾಸ್ಕರಸ್ಯ ನರೋಽಚ್ಯುತ ।
ಅಭ್ಯಂಗಂ ವಿಧಿವದ್ಭಕ್ತ್ಯಾ ಕೃತ್ವಾ ಬ್ರಾಹ್ಮಣಭೋಜನಂ ॥ ೫ ॥

ಶಂಖತೂರ್ಯನಿನಾದೈಶ್ಚ ಬ್ರಹ್ಮಘೋಷೈಶ್ಚ ಪುಷ್ಕಲೈಃ ।
ಸ ದಿವ್ಯಂ ಯಾನಮಾರೂಢೋ ಲೋಕಮಾಯಾತಿ ಹೇಲಿನಃ ॥ ೬ ॥

ಅನೇನೈವ ವಿಧಾನೇನ ಮಾಸಾನ್ ದ್ವಾದಶ ವೈ ಕ್ರಮಾತ್ ।
ಉಪೋಷ್ಯ ಪಾರಣೇ ಪೂರ್ಣೇ ದದ್ಯಾದ್ವಿಪ್ರಾಯ ದಕ್ಷಿಣಾಂ ॥ ೭ ॥

---

ಅನ್ನವನ್ನೇ ನೈವೇದ್ಯಮಾಡಬೇಕು. ಇತರ ವಿಭವಕಾಲಗಳಲ್ಲಿ ವಾದ್ಯಗಳನ್ನು ಬಾರಿಸುವುದನ್ನು ಮುಖ್ಯವೆಂದು ಹೇಳುತ್ತಾರೆ. ಈ ಶ್ರಾವಣ ಮಾಸದಲ್ಲಿ ಸೂರ್ಯ ದೇವನಿಗೆ ಅಭ್ಯಂಗವು ಪ್ರಶಸ್ತವೆಂದು ಹೇಳಲಾಗಿದೆ.

೫. ಅಯ್ಯಾ ಅಚ್ಯುತನೇ ! ಯಾವ ಮನುಷ್ಯನು ಭಕ್ತಿಯಿಂದ ಸೂರ್ಯಾರಾಧನೆ ಮಾಡುವನೋ, ತತ್ರಾಪಿ ಭಕ್ತಿಯಿಂದ ಭಾಸ್ಕರನಿಗೆ ವಿಧಿವತ್ತಾಗಿ ಅಭ್ಯಂಗಸ್ನಾನ ಮಾಡಿಸಿ ಭಾಸ್ಕರ ಪ್ರೀತ್ಯರ್ಥವಾಗಿ ತನ್ನ ಶಕ್ತಿಯಿದ್ದಷ್ಟು ಮಂದಿ ಬ್ರಾಹ್ಮಣರಿಗೆ ಭೋಜನ ಮಾಡಿಸುವನೋ, ಅವನು ಸೂರ್ಯಲೋಕಕ್ಕೆ ಹೋಗುತ್ತಾನೆ.

೬. ಹಾಗೆಯೇ ಶಂಖಧ್ವನಿ, ಓಲಗಧ್ವನಿ, ವೇದಘೋಷ ಇವುಗಳಿಂದಲೂ ಸೇವೆಮಾಡಿ ಯಾವನು ಸೂರ್ಯನನ್ನು ಆರಾಧಿಸುತ್ತಾನೆಯೋ, ಅವನು ಶ್ರೇಷ್ಠವಾದ ಯಾನವನ್ನು ಏರಿ ಸೂರ್ಯಲೋಕಕ್ಕೆ ಹೋಗುತ್ತಾನೆ.

೭. ಈ ವಿಧಿಯಿಂದ ಹನ್ನೆರಡು ತಿಂಗಳುಗಳವರೆಗೆ ಕ್ರಮವಾಗಿ ಉಪವಾಸ ಮಾಡಿ, ಪಾರಣೆ ಮುಗಿದಮೇಲೆ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡಬೇಕು.

ವ್ರತಂ ಯಃ ಪುರುಷಃ ಕುರ್ಯಾದಾದಿತ್ಯಾರಾಧನಂ ಶುಚಿಃ ।
ಸ ಗಚ್ಛೇತ್ಪರಮಂ ಲೋಕಂ ದಿವ್ಯಂ ವೈ ವನಮಾಲಿನಃ ॥ ೮ ॥

ಇತಿ ಶ್ರೀಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಅಭ್ಯಂಗಸಪ್ತಮೀವರ್ಣನಂ ನಾಮ ಏಕಾದಶೋತ್ತರ ಶತತಮೋಽಧ್ಯಾಯಃ



---

೮. ಯಾವ ಮನುಷ್ಯನು ಪರಿಶುದ್ಧನಾಗಿ ಸೂರ್ಯದೇವನ ಆರಾಧನಾರೂಪವಾದ ಈ ವ್ರತವನ್ನು ಮಾಡುತ್ತಾನೆಯೋ ಅವನು ಶ್ರೇಷ್ಠವಾದ ವಿಷ್ಣುಲೋಕವನ್ನು ಸೇರುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಅಭ್ಯಂಗ ಸಪ್ತಮೀ ವರ್ಣನವೆಂಬ ನೂರಹನ್ನೊಂದನೇ ಅಧ್ಯಾಯವು ಮುಗಿದುದು.





॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ದ್ವಾದಶೋತ್ತರಶತತಮೋऽಧ್ಯಾಯಃ

---

॥ ಬ್ರಹ್ಮೋವಾಚಃ ॥

ಏಕೇಂ ಕೃಷ್ಣ ಸದಾ ಭಾನುರ್ನರೈರ್ಭಕ್ತ್ಯಾ ಯಥಾವಿಧಿ ।
ಫಲಂ ದದಾತ್ಯಸುಲಭಂ ಸಲಿಲೇನಾಪಿ ಪೂಜಿತಃ ॥ ೧ ॥

ನ ಭಾನುರ್ಜೀವದಾನೇನ ನ ಪುಷ್ಪೈರ್ನ ಫಲೈಸ್ತಥಾ ।
ಆರಾಧ್ಯತೇ ನ ಶುದ್ಧೇನ ಹೃದಯೇನೈವ ಕೇವಲಂ ॥ ೨ ॥

ರಾಗಾದಪೇತಂ ಹೃದಯಂ ವಾಗ್ದುಷ್ಟಾ ನಾನೃತಾದಿಭಿಃ ।
ಹಿಂಸಾವಿರಹಿತಂ ಕರ್ಮ ಭಾಸ್ಕರಾರಾಧನತ್ರಯಂ ॥ ೩ ॥

---

### ನೂರಹನ್ನೆರಡನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಅಯ್ಯಾ ಕೃಷ್ಣನೇ! ಹೀಗೆ ಮನುಷ್ಯರು ಯಾವಾಗಲೂ ಸೂರ್ಯನನ್ನು ಭಕ್ತಿಪೂರ್ವಕವಾಗಿ ವಿಧಿಪ್ರಕಾರ ಕೇವಲ ಜಲದಿಂದ ಆರಾಧಿಸಿದರೂ ಆ ಸೂರ್ಯನು ದುರ್ಲಭವಾದ ಫಲಗಳನ್ನೂ ಸಹ ಕೊಡುತ್ತಾನೆ.

೨. ಸೂರ್ಯನು ಪ್ರಾಣಿ ಬಲಿ, ಪುಷ್ಪಪೂಜೆ, ಫಲಸಮರ್ಪಣೆ, ಇತ್ಯಾದಿಗಳಿಂದ ಪೂಜಿಸಿದರೆ ಸಂತುಷ್ಟನಾಗುವ ಭರವಸೆಯಿಲ್ಲ. ಕೇವಲ ಪರಿಶುದ್ಧವಾದ ಮನಸ್ಸಿನಿಂದ ಆರಾಧಿಸಿದರೆ ಸಂತುಷ್ಟನಾದಾನೇ ವಿನಾ ಬೇರೆ ಯಾವುದರಿಂದಲೂ ಇಲ್ಲ.

೩. ಸೂರ್ಯಾರಾಧನೆ ವಿಚಾರದಲ್ಲಿ (೧) ಮನಸ್ಸಿನಲ್ಲಿ ರಾಗವೆಂಬ ದೋಷವಿಲ್ಲದಿರುವಿಕೆ. (೨) ಸುಳ್ಳು ಮೊದಲಾದುವುಗಳಿಂದ ವಾಕ್ಕುಗಳು ದುಷ್ಟವಾಗದೇ ಇರುವುದು. (೩) ಆಚರಿಸುವ ಕರ್ಮವು ಪ್ರಾಣಿ ಹಿಂಸಾರಹಿತವಾಗಿರುವುದು. ಎಂಬದಾಗಿ ಮೂರು ನಿಯಮಗಳಿವೆ.

**ರಾಗಾದಿ ದೂಷಿತೇ ಚಿತ್ತೇ ನ ಸ್ಪಂದೀ ತಿಮಿರಾಪಹಃ ।**
**ಬಧ್ನಾತಿ ತಂ ನರಂ ಹಂಸಃ ಕದಾಚಿತ್ಕರ್ದಮಾಂಭಸಿ ॥ ೪ ॥**

**ತಮಸೋ ನಾಶನಾಯಾಲಂ ಚೇಂದೋರ್ಲೇಖಾ ಹ್ಯನಾರತಂ ।**
**ಹಿಂಸಾದಿ ದೂಷಕಂ ಕರ್ಮ ಕೇಶವಾರಾಧನೇ ಕುತಃ ॥ ೫ ॥**

**ಜನಶ್ಚಿತ್ತಾಪ್ರಸಾದಾದ್ವೈ ನ ಚಾಪ ತಿಮಿರಾಪಹಂ ।**
**ತಸ್ಮಾತ್ಸತ್ಯ ಸ್ವಭಾವೇನ ಸತ್ಯವಾಕ್ಯೇನ ಚಾಚ್ಯುತ ॥ ೬ ॥**

**ಅಹಿಂಸಕೇನ ಚಾದಿತ್ಯೋ ನಿಸರ್ಗಾದೇವ ತೋಷಿತಃ ।**
**ಸರ್ವಸ್ವಮಪಿ ದೇವಾಯ ಯೋ ದದ್ಯಾತ್ಕುಟಿಲಾಶಯಂ ॥ ೭ ॥**

---

೪. ಮಾನವನ ಚಿತ್ತವು ರಾಗಾದಿಗಳಿಂದ ದೂಷಿತವಾಗಿದ್ದರೆ ತಮೋನಾಶಕನಾದ ಸೂರ್ಯನು ಅವನನ್ನು ಅನುಗ್ರಹಿಸುವುದಕ್ಕೆ ಬರುವುದೇ ಇಲ್ಲ. ಅಷ್ಟುಮಾತ್ರವಲ್ಲ. ಕೆಸರು ಸಮೃದ್ಧಿಯಾಗಿರುವ ನೀರಿನಲ್ಲಿ ಮುಳುಗಿಸುವಂತೆ ಸೂರ್ಯನು ಅವನನ್ನು ಪಾಪಕೂಪದಲ್ಲಿ ತಳ್ಳಿಬಿಡುತ್ತಾನೆ.

೫. ಚಂದ್ರಲೇಖೆಯು ಕತ್ತಲೆಯನ್ನು ಹೋಗಲಾಡಿಸಲು ಸಂತತವಾಗಿ ಸಮರ್ಥವಾಗಿರುವುದಲ್ಲವೇ ? ಹಾಗೆಯೇ ಕೇಶವಸ್ವರೂಪನಾದ ಸೂರ್ಯಾರಾಧನೆಯ ಸಂದರ್ಭದಲ್ಲಿ ದೂಷಣಾರ್ಹವಾದ ಪ್ರಾಣಿಹಿಂಸೆಗೆ ಅವಕಾಶ ಎಲ್ಲಿ ಬರಬೇಕು ? ಬರುವುದೇ ಇಲ್ಲ.

೬. ಜನರ ಮನಸ್ಸನ್ನು ನೋಯಿಸುವಂಥ ನಡವಳಿಕೆಯುಳ್ಳವನಿಗೆ ಸೂರ್ಯಾನುಗ್ರಹ ಲಭಿಸುವುದಿಲ್ಲ. ಆದುದರಿಂದ ಜನರ ಸತ್ಯಸ್ವಭಾವದಿಂದಲೂ, ಸತ್ಯವಾಕ್ಯದಿಂದಲೂ, ಅಹಿಂಸಕ ವಾಕ್ಯಗಳಿಂದಲೂ ಸೂರ್ಯನು ಸ್ವಭಾವವಾಗಿಯೇ ಅವರಲ್ಲಿ ಸುಪ್ರೀತನಾಗುತ್ತಾನೆ.

೭. ಒಬ್ಬನು ಕುಟಿಲ ಮನಸ್ಸುಳ್ಳವನಾಗಿ ತನ್ನ ಸರ್ವಸ್ವವನ್ನೂ ದೇವರಿಗೆ ಕೊಟ್ಟರೂ, ಅವನು ದೇವದೇವನಾದ ದಿವಾಕರನನ್ನು ಆರಾಧನೆ ಮಾಡಿದ ಫಲ ಲಭಿಸುವುದಿಲ್ಲ.

ಸ ನೈವಾರಾಧಯೇದೇವಂ ದೇವದೇವಂ ದಿವಾಕರಂ ।
ರಾಗಾದಪೇತಂ ಹೃದಯಂ ಯಃ ಕುರ್ಯಾದ್ಭಾಸ್ಕರಾರ್ಪಿತಂ ।
ಸ ವೈ ನಯತಿ ದುಷ್ಪ್ರಾಪಮಯತ್ನೇನೈವ ಭಾಸ್ಕರಂ ॥ ೮ ॥

॥ ವಿಷ್ಣುರುವಾಚ ॥
ದೇವೇಶಃ ಕಥಿತಸ್ಸಮ್ಯಕ್ಕಾಮ್ಯೋಽಯಂ ಭಾಸ್ಕರೋ ಹಿ ಮೇ ।
ಆರಾಧನವಿಧಿಂ ಸರ್ವಂ ಭೂಯಃ ಪೃಚ್ಛಾಮಿ ತಂ ವದ ॥ ೯ ॥

ಕುಲೇ ಜನ್ಮ ತಥಾರೋಗ್ಯಂ ಧನವೃದ್ಧಿಶ್ಚ ದುರ್ಲಭಾ ।
ತ್ರಿತಯಂ ಪ್ರಾಪ್ಯತೇ ಯೇನ ತನ್ಮೇ ವದ ಜಗತ್ಪತೇ ॥ ೧೦ ॥

॥ ಬ್ರಹ್ಮೋವಾಚ ॥
ಮಾಸೇ ತು ಮಾಘೇ ಸಿತಸಪ್ತಮೇಽಹ್ನಿ ।
ಹಸ್ತರ್ಕ್ಷಯೋಗೇ ಜಗತಃ ಪ್ರಸೂತಿಂ ॥
ಸಂಪೂಜ್ಯ ಭಾನುಂ ವಿಧಿನೋಪವಾಸೀ ।
ಸುಗಂಧಧೂಪಾನ್ನ ವರೋಪಹಾರೈಃ ॥ ೧೧ ॥

---

೮ ರಾಗ ದ್ವೇಷಾದಿಗಳಿಲ್ಲದ ಶುದ್ಧ ಹೃದಯವನ್ನು ಯಾವನು ಭಾಸ್ಕರನಿಗೆ, ಅರ್ಪಣಮಾಡುವನೋ, ಅವನು ಹೊಂದುವುದಕ್ಕೆ ಅಸಾಧ್ಯನಾದ ಭಾಸ್ಕರನನ್ನು ವಿಶೇಷ ಯತ್ನವಿಲ್ಲದೆ ಹೊಂದಿಸಿಕೊಂಡವನಾಗುತ್ತಾನೆ ಎಂದನು.

೯. ವಿಷ್ಣುವು ಹೇಳುತ್ತಾನೆ—ದೇವೇಶನಾದ ಭಾಸ್ಕರನ ಅನುಗ್ರಹವನ್ನು ಎಲ್ಲರೂ ಆಶಿಸುತ್ತಾರೆಂದು ಹೇಳಿದೆಯಷ್ಟೆ. ಆದ್ದರಿಂದ ಅವನ ಆರಾಧನದ ಎಲ್ಲ ವಿಧಾನವನ್ನೂ ಪುನಃ ಕೇಳಿ ತಿಳಿದುಕೊಳ್ಳುತ್ತೇನೆ ಹೇಳು.

೧೦. ಅಯ್ಯಾ ಜಗತ್ಪತಿಯಾದ ಬ್ರಹ್ಮನೇ! ಸತ್ಕುಲದಲ್ಲಿ ಜನ್ಮ; ಹೀಗೆ ಹುಟ್ಟಿದವನಿಗೆ ಆರೋಗ್ಯಲಾಭ, ದುರ್ಲಭವಾದ ಧನವೃದ್ಧಿ, ಈ ಮೂರೂ ಯಾವ ಕರ್ಮದಿಂದ ಪ್ರಾಪ್ತವಾಗುವುದೋ ಅದನ್ನು ನನಗೆ ಹೇಳು.

೧೧. ಬ್ರಹ್ಮನು ಹೇಳುತ್ತಾನೆ—ಮಾಘ ಶುದ್ಧ ಸಪ್ತಮಿಯ ದಿನ ಹಸ್ತನಕ್ಷತ್ರ ಸೇರಿರುವಾಗ ಜಗತ್ಕಾರಣನಾದ ಸೂರ್ಯನ ಪ್ರೀತ್ಯರ್ಥವಾಗಿ ಉಪವಾಸಮಾಡಿ ಗಂಧ, ಧೂಪ, ಶ್ರೇಷ್ಠವಾದ ಅನ್ನ ಮೊದಲಾದ ಉಪಹಾರ ನೈವೇದ್ಯಗಳಿಂದ ಭಾನುವನ್ನು ಚೆನ್ನಾಗಿ ಪೂಜೆಮಾಡಿ ತೃಪ್ತಿಪಡಿಸಬೇಕು.

ಗೃಹೀ ತು ಪುಷ್ಪೈಃ ಪ್ರತಿಪಾದ್ಯ ಪೂಜಾಂ ।
ದಾನಾದಿಯುಕ್ತಂ ವ್ರತಮಬ್ದಮೇಕಂ ॥
ದದ್ಯಾಚ್ಚ ದಾನಂ ಮುನಿಪುಂಗವೇಭ್ಯಃ ।
ತತ್ಕಥ್ಯಮಾನಂ ವಿನಿಬೋಧ ಧೀರ ॥ ೧೨ ॥

ವಜ್ರಂ ತಿಲಾನ್ವ್ರೀಹಿಯವಾನ್ ಹಿರಣ್ಯಂ ।
ಯವಾನ್ನಮಂಭಃ ಕರಕಾಮುಪಾನಹಂ ।
ಛತ್ರೋಪಪನ್ನಂ ಗುಡಫೇಣಿಕಾಢ್ಯಂ ।
ದದ್ಯಾತ್ಕ್ರಮಾದ್ವಸ್ತು ಅನುಕ್ರಮೇಣ ॥ ೧೩ ॥

ಯದ್ಯೇಷ ವರ್ಷೇ ವಿಧಿನೋದಿತೇನ ।
ಯಸ್ಯಾಂ ತಿಥೌ ಲೋಕಗುರುಂ ಪ್ರಪೂಜ್ಯ ॥
ಅಶ್ನಂತನಾನ್ಯಾತ್ಮವಿಶುದ್ಧಿಹೇತೋಃ ।
ಸಂಪ್ರಾಶನಾನೀಹ ನಿಬೋಧ ತಾನಿ ॥ ೧೪ ॥

ಗೋಮೂತ್ರಮಂಭಶ್ಚ ರಸೇ ನು ಶಾಕಂ ।
ದೂರ್ವಾ ದಧಿ ವ್ರೀಹಿ ತಿಲಾ ಯವಾಂಶ್ಚ

---

೧೨. ಗೃಹಸ್ಥನಾದವನು ಗಂಧ ಪುಷ್ಪಾದಿಗಳಿಂದ ಪೂಜೆಮಾಡಿ ಅಲ್ಲಿಂದ ಒಂದು ವರ್ಷದವರೆಗೆ ಉಕ್ತವಿಧಾನದಂತೆ ವ್ರತವನ್ನು ನಡೆಯಿಸುವವನಾಗಿ, ಅದರ ಅಂಗವಾಗಿ ಮುನಿಶ್ರೇಷ್ಠರಿಗೆ ದಾನಗಳನ್ನು ಕೊಡಬೇಕು. ಅಯ್ಯಾ ಧೀರನೇ! ನಾನು ಹೇಳಿದ ಇದನ್ನು ಚೆನ್ನಾಗಿ ತಿಳಿದುಕೊ.

೧೩. ತುಪ್ಪ, ಎಳ್ಳು, ಭತ್ತ, ಜವೆಗೋಧಿ, ಸುವರ್ಣ, ಯವಾನ್ನ, ಶುದ್ಧೋದಕ, ಕುಂಭ, ಪಾದರಕ್ಷೆ, ಛತ್ರಿ, ಬೆಲ್ಲ, ಫೇಣಿ ಇವುಗಳನ್ನು ಕ್ರಮವಾಗಿ ಪ್ರತಿ ತಿಂಗಳಿನಲ್ಲಿಯೂ ಒಂದೊಂದನ್ನು ದಾನಮಾಡಬೇಕು.

೧೪. ವ್ರತಮಾಡತಕ್ಕವರು ಉಕ್ತ ವಿಧಿಪ್ರಕಾರ ಆ ವರ್ಷದಲ್ಲಿ ಪ್ರತಿತಿಂಗಳ ಉಕ್ತ ತಿಥಿಯಲ್ಲಿ ಲೋಕಗುರುವಾದ ಸೂರ್ಯನನ್ನು ಪೂಜಿಸಿದಮೇಲೆ, ದೇಹಶುದ್ಧಿಗಾಗಿ ಸೇವಿಸಬೇಕಾದ ವಸ್ತುಗಳಾವುವು ಎಂಬುದನ್ನು ಹೇಳುತ್ತೇನೆ ಕೇಳು.

೧೫. ಅಯ್ಯಾ ಅಂಬುಜಾಕ್ಷನೇ! ಕೇಳು, ಗೋಮೂತ್ರ, ಜಲ, ರಸದ್ರವ್ಯ, ಶಾಕ, ದೂರ್ವೆ, (ಗರಿಕೆ) ದಧಿ, ವ್ರೀಹಿ, (ಭತ್ತ) ತಿಲ, (ಎಳ್ಳು) ಯವ, ಸೂರ್ಯಕಿರಣ

ಸೂರ್ಯಾಂಶುತಪ್ತಂ ಜಲಮಂಬುಜಾಕ್ಷ ।
ಕ್ಷೀರಂ ಚ ಮಾಸ್ಯೈಃ ಕ್ರಮಶಃ ಪ್ರಯುಜ್ಯಂ ॥ ೧೫ ॥

ಕುಲೇ ಪ್ರಧಾನೇ ಧನಧಾನ್ಯಪೂರ್ಣೇ
ಪದ್ಮಾವೃತೇ ಹ್ಯಸ್ತಸಮಸ್ತ ದುಃಖೇ ।
ಪ್ರಾಪ್ನೋತಿ ಜನ್ಮಾವಿಕಲೇಂದ್ರಿಯಶ್ಚ ।
ಭವತ್ಯರೋಗೋ ಮತಿಮಾನ್ ಸುಖೀ ಚ ॥ ೧೬ ॥

ತಸ್ಮಾತ್ತ್ವಮಪ್ಯೇತದಮೋಘವೀರ್ಯ ।
ದಿವಾಕರಾರಾಧನಮಪ್ರಮತ್ತಃ ।
ಕುರು ಪ್ರಭಾವಂ ಭಗವಂತಮೀಶ ।
ಮಾರಾಧ್ಯ ಕಾಮಾನಖಿಲಾನುಪೇಹಿ ॥ ೧೭ ॥

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇ ಪರ್ವಣಿ ಸಪ್ತಮೀ ಕಲ್ಪೇ ತೃತೀಯ ಪದ ವ್ರತ ವರ್ಣನಂ ನಾಮ ದ್ವಾದಶೋತ್ತರ ಶತತಮೋಽಧ್ಯಾಯಃ**

---

ಯಿಂದ ಕಾಯ್ದ ನೀರು, ಕ್ಷೀರ ಇವನ್ನು ತಿಂಗಳಿಗೆ ಒಂದೊಂದರಂತೆ ಪ್ರತಿಮಾಸದಲ್ಲೂ ಕ್ರಮವಾಗಿ ಪ್ರಾಶನಮಾಡಬೇಕು.

೧೬. ಈರೀತಿ ಸಾಂಗ ವ್ರತಾಚರಣ ಮಾಡಿದವರು ಹೆಸರುವಾಸಿಯಾದುದೂ, ಧನಧಾನ್ಯ ಪೂರ್ಣವಾದುದೂ, ಸಂಪದ್ಯುಕ್ತವಾದುದೂ, ಸಮಸ್ತ ದುಃಖವರ್ಜಿತವಾದುದೂ, ಎನಿಸಿದ ಕುಲದಲ್ಲಿ ಜನ್ಮವೆತ್ತಿ, ಇಂದ್ರಿಯ ನ್ಯೂನತೆಯೇನೂ ಇಲ್ಲದವನೂ ರೋಗರಹಿತನೂ, ಬುದ್ಧಿವಂತನೂ, ಸುಖಿಯೂ ಆಗುತ್ತಾನೆ.

೧೭. " ಅಯ್ಯಾ ಅಮೋಘ ಬಲಶಾಲಿಯೇ ! ಆದ್ದರಿಂದ ನೀನೂ (ಪ್ರಮಾದವಿಲ್ಲದೆ) ಮರೆಯದೆ ಸೂರ್ಯಾರಾಧನೆಯನ್ನು ಮಾಡಿ, ನಿನ್ನಲ್ಲಿಯೂ ಪ್ರಭಾವವುಂಟಾಗುವಂತೆ ಮಾಡಿಕೋ. ಮತ್ತು ಭಗವಂತನಾದ ದಿನೇಶನನ್ನು ಆರಾಧಿಸಿ ಸಕಲ ಇಷ್ಟಾರ್ಥಗಳನ್ನೂ ಹೊಂದು " ಎಂದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ ತೃತೀಯ ಪದವ್ರತ ವರ್ಣನೆಯೆಂಬ ನೂರಹನ್ನೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ತ್ರಯೋದಶೋತ್ತರಶತತಮೋಽಧ್ಯಾಯಃ

---

॥ ವಿಷ್ಣುರುವಾಚ ॥

ಸುರಜ್ಯೇಷ್ಠ ಪುನರ್ಬ್ರೂಹಿ ಯತ್ಪೃಚ್ಛಾಮ್ಯಹಮಾದಿತಃ ।
ಯತ್ಫಲಂ ಸಮವಾಪ್ನೋತಿ ಕಾರಯಿತ್ವಾ ರವೇರ್ಗೃಹಂ ॥ ೧ ॥

ದೇವಾರ್ಚಾಂ ಕಾರಯಿತ್ವಾ ತು ಯತ್ಪುಣ್ಯಂ ಪುರುಷೋಽಶ್ನುತೇ ।
ಪೂಜಯಿತ್ವಾ ಚ ವಿಧಿವದನುಲಿಪ್ಯ ಚ ಯತ್ಫಲಂ ॥ ೨ ॥

ಕಾನಿ ಮಾಲ್ಯಾನಿ ಶಸ್ತಾನಿ ಕಾನಿ ನಾರ್ಹತಿ ಭಾಸ್ಕರಃ ।
ಕೇ ಧೂಪಾ ಭಾನುದಯಿತಾಃ ಕೇ ವರ್ಜ್ಯಾಶ್ಚ ಜಗತ್ಪತೇ ॥ ೩ ॥

---

### ನೂರಹದಿಮೂರನೆಯ ಅಧ್ಯಾಯ

೧. ವಿಷ್ಣುವು ಹೇಳುತ್ತಾನೆ—ಅಯ್ಯಾ ಸುರಜ್ಯೇಷ್ಠನೇ! ನಾನು ಕೇಳುವುದಕ್ಕೆ ಉತ್ತರವನ್ನು ಮೊದಲಿನಿಂದ ಪುನಃ ಹೇಳು. ಸೂರ್ಯ ದೇವಾಲಯವನ್ನು ನಿರ್ಮಿಸಿದವನು ಯಾವ ಫಲ ಹೊಂದುವನು ?

೨. ದೇವರ ಪೂಜೆಯು ಸಂತತವಾಗಿ ನಡೆಯುವಂತೆ ಏರ್ಪಡಿಸಿದವನಿಗೆ ಬರುವ ಫಲವೇನು ? ತಾನೇ ವಿಧಿಪ್ರಕಾರ ಪೂಜಿಸಿ ಗಂಧವನ್ನು ಅನುಲೇಪನ ಮಾಡಿದರೆ ಯಾವ ಫಲವುಂಟಾಗುವುದು ?

೩. ಯಾವ ಪುಷ್ಪಮಾಲೆಗಳು ಸೂರ್ಯಪೂಜೆಗೆ ಪ್ರಶಸ್ತಗಳು? ಯಾವ ಮಾಲ್ಯಗಳು ಸೂರ್ಯನಿಗೆ ಇಷ್ಟವಿಲ್ಲ? ಜಗತ್ಪತಿಯಾದ ಅವನಿಗೆ ಯಾವ ಧೂಪವು ಪ್ರಿಯವಾದುದು? ಯಾವ ಧೂಪವು ವರ್ಜ್ಯ? ಇವನ್ನೆಲ್ಲಾ ಹೇಳು.

ಉಪಚಾರಫಲಂ ಕಿಂಸ್ಯಾತ್ಕಿಂ ಫಲಂ ಗೀತವಾದಿತೇ ।
ಘೃತಕ್ಷೀರಾದಿನಾ ಯತ್ತು ಸ್ನಾಪಿತೇ ಭಾಸ್ಕರೇ ಫಲಂ ॥ ೪ ॥

ಯಥೋ ಪಲೇಪನಾದೌ ಚ ಫಲಮುಭ್ಯಕ್ಷಿತೇನ ತು ।
ದಿವಾಕರಗೃಹೇ ತಾತ ತದಶೇಷಂ ವದಸ್ವ ಮೇ ॥ ೫ ॥

॥ ಬ್ರಹ್ಮೋವಾಚ ॥

ಸಾಧು ವತ್ಸ ಯದೇತತ್ತ್ವಂ ಮಾರ್ತಾಂಡಸ್ಯೇಹ ಪೃಚ್ಛಸಿ ।
ಶುಶ್ರೂಷಣೇ ವಿಧಿಂ ಪುಣ್ಯಂ ತದಿಹೈಕಮನಾಃ ಶೃಣು ॥ ೬ ॥

ಯಸ್ತು ದೇವಾಲಯಂ ಭಾನೋಃ ಶೈಲಂ ದಾರುಮಯಂ ತಥಾ ।
ಕಾರಯೇನ್ಮೃನ್ಮಯಂ ಚಾಪಿ ತಸ್ಯ ಪುಣ್ಯಫಲಂ ಶೃಣು ॥ ೭ ॥

ಅಹನ್ಯಹನಿ ಯಜ್ಞೇನ ಯಜತೋ ಯನ್ಮಹತ್ಫಲಂ ।
ಪ್ರಾಪ್ನೋತಿ ತತ್ಫಲಂ ಭಾನೋಃ ಯಃ ಕಾರಯತಿ ಮಂದಿರಂ ॥ ೮ ॥

---

೪-೫. ಸೂರ್ಯನಿಗೆ ಉಪಚಾರ ಪೂಜೆಮಾಡಿದರೆ ಬರುವಫಲಗಳು ಯಾವುವು? ಸೂರ್ಯನ ಮುಂದೆ ಗಾನಮಾಡಿದರೂ, ವಾದ್ಯ ನುಡಿಸಿದರೂ ಬರುವ ಫಲಗಳು ಯಾವುವು ? ಸೂರ್ಯನಿಗೆ ತುಪ್ಪ, ಹಾಲು ಇವನ್ನು ಅಭಿಷೇಕಮಾಡಿದರೆ ಬರುವ ಫಲ ವೇನು ?

೬. ದೇವಾಲಯದ ನೆಲವನ್ನು ಗುಡಿಸಿ ಸಾರಿಸುವುದರಿಂದಲೂ ದೇವಾಲಯ ದಲ್ಲಿ ನೀರನ್ನು ಚುಮುಕಿಸುವುದರಿಂದಲೂ ಯಾವ ಫಲವುಂಟಾಗುವುದು ? ಇವೆಲ್ಲ ವನ್ನೂ ಹೇಳು ಎಂದನು

೭. ಬ್ರಹ್ಮನು ಹೇಳುತ್ತಾನೆ—ವತ್ಸ ಕೃಷ್ಣ ! ಮಾರ್ತಂಡನ ಶುಶ್ರೂಷೆಯ ವಿಧಾನವನ್ನು ಕೇಳಲು ನೀನು ಅಪೇಕ್ಷೆಪಟ್ಟದ್ದು ಸಾಧುವಾಗಿದೆ. ನೀನು ಅಪೇಕ್ಷಿಸಿದಂತೆ ಪುಣ್ಯಕರವಾದ ಆ ವಿಧಿಯನ್ನು ಹೇಳುವೆನು. ಒಂದೇ ಮನಸ್ಸಿನಿಂದ ಕೇಳು.

೮. ಯಾವನು ಮರದಿಂದಲೋ, ಮಣ್ಣಿನಿಂದಲೋ ಕಲ್ಲಿನಿಂದಲೋ ಸೂರ್ಯ ದೇವಾಲಯುವನ್ನು ಕಟ್ಟಿಸುವನೋ ಅದರ ಪುಣ್ಯ ಫಲವನ್ನು ಕೇಳು. ಪ್ರತಿದಿನವೂ ಯಜ್ಞ ಮಾಡುತ್ತಿದ್ದರೆ ಯಾವ ಮಹತ್ಫಲವು ಬರುವುದೋ ಆ ಫಲವು ಸೂರ್ಯದೇವಾ ಲಯುವನ್ನು ಕಟ್ಟಿಸಿದವನಿಗೆ ಲಭಿಸುವುದು.

**ಕುಲಾನಾಂ ಶತಮಾಗಾಮಿ ಸಮತೀತಂ ಕುಲಂ ಶತಂ ।**
**ಕಾರಯರ್ಕ ಭಗವದ್ಧಾಮ ಸ ನಯೇದರ್ಕಸನ್ನಿಧಿಂ　　॥ ೯ ॥**

**ಸಪ್ತಜನ್ಮಕೃತಂ ಪಾಪಂ ಸ್ವಲ್ಪಂ ವಾ ಯದಿ ವಾ ಬಹು ।**
**ಭಾನೋರಾಲಯವಿನ್ಯಾಸಪ್ರಾರಂಭಾದೇವ ನಶ್ಯತಿ　　॥ ೧೦ ॥**

**ಸಪ್ತಲೋಕಮಯೋ ಭಾನುಃ ತಸ್ಯ ಯಃ ಕುರುತೇ ಗೃಹಂ ।**
**ಪ್ರತಿಷ್ಠಾಂ ಸಮವಾಪ್ನೋತಿ ಸ ನರಃ ಪ್ರಾಪ್ತಲೌಕಿಕೀಂ　　॥ ೧೧ ॥**

**ಪ್ರಶಸ್ತದೇಶಭೂಭಾಗೇ ಪ್ರಶಸ್ತಂ ಭವನಂ ರವೇಃ ।**
**ಕಾರಯನ್ನಕ್ಷಯಾರ್ಲ್ಲೋಕಾರ್ನ ಸ ನರಃ ಪ್ರತಿಪದ್ಯತೇ　　॥ ೧೨ ॥**

**ಇಷ್ಟಕಾಚಯವಿನ್ಯಾಸೋ ಯಾವದ್ವರ್ಷಾಣಿ ತಿಷ್ಠತಿ ।**
**ತಾವದ್ವರ್ಷಸಹಸ್ರಾಣಿ ತತ್ಕರ್ತುರ್ದಿವಿ ಸಂಸ್ಥಿತಿಃ　　॥ ೧೩ ॥**

---

೯. ಸೂರ್ಯ ಭಗವಂತನ ದೇವಾಲಯವನ್ನು ಮಾಡಿಸಿ (ಕಟ್ಟಿಸಿ) ದವನು ತನ್ನ ಕುಲದಲ್ಲಿ ಹಿಂದಿನ ನೂರು ತಲೆಯವರನ್ನೂ, ಮುಂದೆ ಜನಿಸುವ ನೂರಾರು ತಲೆಯವರನ್ನೂ, ಸೂರ್ಯದೇವನ ಸಾನ್ನಿಧ್ಯವನ್ನು ಹೊಂದಿಸುತ್ತಾನೆ.

೧೦. ಸೂರ್ಯದೇವಾಲಯವನ್ನು ಕಟ್ಟುವುದಕ್ಕೆ ಪ್ರಾರಂಭಮಾಡಿದಾಗಿನಿಂದಲೇ ಇವನು ಹಿಂದಿನ ಏಳು ಜನ್ಮಗಳಲ್ಲಿ ಮಾಡಿದ ಪಾಪವು ಅಲ್ಪವಾಗಿರಲಿ, ಹೆಚ್ಚಾಗಿರಲಿ, ಎಲ್ಲವೂ ನಾಶವಾಗುತ್ತದೆ.

೧೧. ಸೂರ್ಯನು ಸಪ್ತಲೋಕಮಯನು. ಅವನಿಗಾಗಿ ಯಾವನು ಆಲಯವನ್ನು ನಿರ್ಮಾಣಮಾಡುವನೋ, ಅವನು ಸಪ್ತಲೋಕಗಳಲ್ಲಿ ವಾಸಮಾಡುವ ಮಹಿಮೆಯನ್ನು ಪಡೆಯುತ್ತಾನೆ.

೧೨. ಪ್ರಶಸ್ತವಾದ ಸ್ಥಲದಲ್ಲಿ ಸೂರ್ಯನಿಗೆ ಪ್ರಶಸ್ತವಾದ ಆಲಯವನ್ನು ಮಾಡಿಸುತ್ತಿರುವ ನರನು, ಅಕ್ಷಯಗಳಾದ ಲೋಕಗಳನ್ನು ಹೊಂದುತ್ತಾನೆ.

೧೩. ಆಲಯಕ್ಕೆ ಹಾಕಿದ ಇಟ್ಟಿಗೆಗಳ ಗುಂಪು ಎಷ್ಟು ವರ್ಷಗಳಿರುವುದೋ, ಅಷ್ಟು ಸಹಸ್ರ ವರ್ಷಗಳವರೆಗೆ ಆಲಯವನ್ನು ಮಾಡಿಸಿದವನು, ಸ್ವರ್ಗದಲ್ಲಿ ವಾಸಮಾಡುತ್ತಾನೆ.

**ಪ್ರತಿಮಾಂ ಲಕ್ಷಣವತೀಂ ಯಃ ಕಾರಯತಿ ಮಾನವಃ ।**
**ದಿವಾಕರಸ್ಯ ಭವನಂ ಸೋಽಕ್ಷಯಂ ಪ್ರತಿಪದ್ಯತೇ ॥ ೧೪ ॥**

**ಷಷ್ಟಿವರ್ಷಸಹಸ್ರಾಣಾಂ ಸಹಸ್ರಾಣಿ ಸ ಮೋದತೇ ।**
**ಲೋಕೇ ಸುಮನಸಾಂ ವೀರ ಪ್ರತ್ಯೇಕಂ ಮಧುಸೂದನ ॥ ೧೫ ॥**

**ಪ್ರತಿಷ್ಠಾಪ್ಯ ರವೇರರ್ಚಾಂ ಸುಪ್ರಶಸ್ತೇ ನಿವೇಶನೇ ।**
**ಪುರುಷಃ ಕೃತಕೃತ್ಯೋಽಸ್ತಿ ನ ದೋಷಫಲಮಶ್ನುತೇ ॥ ೧೬ ॥**

**ಯೇ ಭವಿಷ್ಯಂತಿ ಯೇಽತೀತಾಃ ಆಕಲ್ಪಂ ಪುರುಷಾಃ ಕುಲೇ ।**
**ತಾಂ ಸ್ಥಾಪಯತಿ ಸಂಸ್ಥಾಪ್ಯ ದೇವಸ್ಯ ಪ್ರತಿಮಾಂ ರವೇಃ ॥ ೧೭ ॥**

**ಅನುಶಿಷ್ಟಾಃ ಕಿಲ ಪುರಾ ಶಮೇನ ಯಮಕಿಂಕರಾಃ ।**
**ಪಾಶದಂಡಕರಾಃ ಕೃಷ್ಣ ಪ್ರಜಾಸಂಯಮನೋದ್ಯತಾಃ ॥ ೧೮ ॥**

---

೧೪. ಯಾವ ಮನುಷ್ಯನು ಲಕ್ಷಣಯುಕ್ತವಾದ ಸೂರ್ಯಪ್ರತಿಮೆಯನ್ನು ಮಾಡಿಸುತ್ತಾನೋ, ಅವನು ಅಕ್ಷಯಕರವಾದ ದಿವಾಕರ ದೇವನ ಭವನವನ್ನು ಹೊಂದುತ್ತಾನೆ.

೧೫. ಅವನು ಅರವತ್ತು ಸಹಸ್ರ ವರ್ಷಗಳವರೆಗೆ ಪ್ರತ್ಯೇಕ ಪ್ರತ್ಯೇಕವಾಗಿ ದೇವಯೋನಿಗಳ ಲೋಕದಲ್ಲಿ ಸಂತೋಷಪಡುತ್ತಾನೆ. ಎಲೈ ವೀರನಾದ ಮಧುಸೂದನನೇ! ಇವನ್ನು ತಿಳಿ.

೧೬. ಬಹುಪ್ರಶಸ್ತವಾದ ಮಂದಿರದಲ್ಲಿ ಸೂರ್ಯಾರ್ಚನೆಯು ಸಂತತವಾಗಿ ನಡೆಯುವಂತೆ ಏರ್ಪಡಿಸಿದ ಪುರುಷನು, ಕೃತಾರ್ಥನಾಗುತ್ತಾನೆ. ಅವನಿಗೆ ದೋಷಗಳ ಫಲಗಳು ಪ್ರಾಪ್ತವಾಗುವುದಿಲ್ಲ,

೧೭. ಸೂರ್ಯದೇವನ ಪ್ರತಿಮೆಯನ್ನು ಪ್ರತಿಷ್ಠೆಮಾಡಿದವನು, ಕಲ್ಪಕಾಲ ಪರ್ಯಂತ, ತನ್ನ ಕುಲದಲ್ಲಿ ಹಿಂದೆ ಹುಟ್ಟಿದವರನ್ನೂ, ಮುಂದೆ ಹುಟ್ಟುವವರನ್ನೂ, ಉದ್ಧರಿಸುತ್ತಾನೆ.

೧೮. ಪೂರ್ವದಲ್ಲಿ ಪಾಶದಂಡಗಳನ್ನು ಕೈಯ್ಯಲ್ಲಿ ಹಿಡಿದು ಪ್ರಜಾನಿಗ್ರಹೋದ್ಯುಕ್ತರಾದ ಯಮದೂತರಿಗೆ ಯಮನು ಹೀಗೆ ಆಜ್ಞಾಪಿಸಿದನು.

॥ ಯಮ ಉವಾಚ ॥

ವಿಹರಂತು ಯಥಾನ್ಯಾಯಂ ನಿಯೋಗೋ ಮೇಽನುಪಾಲ್ಯತಾಂ ।
ನಾಜ್ಞಾಂ ಭಂಗಂ ಕರಿಷ್ಯಂತಿ ಭವತಾಂ ಜಂತವಃ ಕ್ವಚಿತ್ ॥ ೧೯ ॥

ಕೇವಲಂ ಮೇ ಜಗನ್ಮೂಲಂ ವಿವಸ್ವಂತಮುಪಾಶ್ರಿತಾಃ ।
ಭವದ್ಭಿಃ ಪರಿಹರ್ತವ್ಯಾಃ ತೇಷಾಂ ನೈವೇಹ ಸಂಸ್ಥಿತಿಃ ॥ ೨೦ ॥

ಯೇ ತು ವೈವಸ್ವತಾ ಲೋಕೇ ತಚ್ಚಿತ್ತಾಸ್ತತ್ಪರಾಯಣಾಃ ।
ಪೂಜಯಂತಿ ಸದಾ ಭಾನುಂ ತೇ ಚ ತ್ಯಾಜ್ಯಾಸ್ಸುದೂರತಃ ॥ ೨೧ ॥

ತಿಷ್ಠಂಶ್ಚ ಪ್ರಸ್ವಪನ್ ಗಚ್ಛನ್ ಉತ್ತಿಷ್ಠನ್ ಸ್ಖಲಿತೇ ಕ್ಷುತೇ ।
ಸಂಕೀರ್ತಯತಿ ದೇವಂ ಯಃ ಸ ನಸ್ತ್ಯಾಜ್ಯಸ್ಸುದೂರತಃ ॥ ೨೨ ॥

ನಿತ್ಯನೈಮಿತ್ತಿಕೈರ್ದೇವಂ ಯೇ ಯಜಂತಿ ತು ಭಾಸ್ಕರಂ ।
ನ ಚಾಲೋಕ್ಯಾ ಭವದ್ಭಿಸ್ತೇ ತದ್ಧ್ಯಾನಂ ಹಂತಿ ಗೋಗತಿಂ ॥ ೨೩ ॥

---

೧೯. ಯಮನು ಹೇಳುತ್ತಾನೆ—ನ್ಯಾಯಾನುಸಾರವಾಗಿ ವಿಹರಿಸಿಕೊಂಡು ನನ್ನ ಆಜ್ಞೆಯನ್ನು ಪಾಲಿಸಿರಿ. ಪ್ರಾಣಿಗಳು ಎಲ್ಲಿಯೂ ನಿಮ್ಮ ಆಜ್ಞೆಯನ್ನು ಮೀರುವುದಿಲ್ಲ.

೨೦. ನನ್ನ ಅಭಿಪ್ರಾಯವೇನೆಂದರೆ—ಜಗತ್ಕಾರಣನಾದ ಸೂರ್ಯನನ್ನು ಆರಾಧಿಸಿದವರನ್ನು, ನೀವು ಹಿಂಸಿಸದೆ ಬಿಟ್ಟುಬಿಡತಕ್ಕದ್ದು. ಅವರಿಗೆ ಇಲ್ಲಿ ಸ್ಥಾನವಿಲ್ಲ.

೨೧. ಯಾರು ಸೂರ್ಯಭಕ್ತರಾಗಿ ಸೂರ್ಯನಲ್ಲಿ ಮನಸ್ಸಿಟ್ಟು ಅವನನ್ನೇ ನಂಬಿರುವರೋ, ಮತ್ತು ಯಾವಾಗಲೂ ಸೂರ್ಯನನ್ನು ಪೂಜಿಸುವರೋ, ಅವರನ್ನು ಕಂಡರೆ ದೂರದಲ್ಲಿರಿ.

೨೨. ನಿಂತಾಗ, ನಿದ್ರಿಸುವಾಗ, ನಡೆಯುವಾಗ, ಏಳುವಾಗ, ಎಡವಿದಾಗ, ಸೀತಾಗ ಯಾವನು ಸ್ವಾಮಿಯಾದ ಸೂರ್ಯದೇವನನ್ನು ಕೀರ್ತಿಸುವನೋ, ಅವನ ಹತ್ತಿರಕ್ಕೇ ಸುಳಿಯದೆ ದೂರದಲ್ಲಿರಿ.

೨೩. ಯಾರು ನಿತ್ಯ ನೈಮಿತ್ತಿಕ ಕರ್ಮಗಳಿಂದ ಸೂರ್ಯನನ್ನು ಸೇವಿಸುವರೋ ಅವರಿಗೆ ನೀವು ಮುಖ ತೋರಿಸಲೇಬಾರದು. ಯಮದೂತರೇ ! ಅವರ ಹತ್ತಿರಕ್ಕೆ ಹೋದರೆ ನಿಮ್ಮ ಕಣ್ಣಿಗೇ ಬಾಧಕವಾದೀತು.

ಯೇ ಪುಷ್ಪಧೂಪವಾಸೋಭಿರ್ಭೂಷಣೈಶ್ಚಾಪಿ ವಲ್ಲಭೈಃ ।
ಅರ್ಚಯಂತಿ ನ ತೇ ಗ್ರಾಹ್ಯಾಃ ಮತ್ಪಿತುಸ್ತೇ ಪರಿಗ್ರಹಾಃ ॥ ೨೪ ॥

ಉಪಲೇಪನಕರ್ತಾರಃ ಕರ್ತಾರೋ ಮಾರ್ಜನಸ್ಯ ವೈ ।
ಅರ್ಕಾಲಯೇ ಪರಿತ್ಯಾಜ್ಯಂ ತೇಷಾಂ ತ್ರಿಪುರುಷಂ ಕುಲಂ ॥ ೨೫ ॥

ಯೇನ ವಾಯತನಂ ಭಾನೋಃ ಕಾರಿತಂ ತತ್ಕುಲೋದ್ಭವಃ ।
ಪುಮಾನ್ಸ ನಾವಲೋಕ್ಯೋ ವೈ ಭವದ್ಭಿರ್ದುಷ್ಟಚಕ್ಷುಷಾ ॥ ೨೬ ॥

ಯೇನಾರ್ಚಾ ಭಗವದ್ಭಕ್ತ್ಯಾ ಮತ್ಪಿತುಃ ಕಾರಿತಾ ಶುಭಾ ।
ನರಾಣಾಂ ತತ್ಕುಲಂ ವೀರಾಃ ಸದಾ ತ್ಯಾಜ್ಯಂ ಸುದೂರತಃ ॥ ೨೭ ॥

ಭವತಾಂ ಭ್ರಮತಾಂ ಯತ್ರ ಭಾನುಸಂಶ್ರಯ ಮುದ್ರಯಾ ।
ನ ಚಾಜ್ಞಾಭಂಗಕೃತ್ಕಶ್ಚಿದ್ಭವಿಷ್ಯತಿ ನರಃ ಕ್ವಚಿತ್ ॥ ೨೮ ॥

---

೨೪. ಯಾರು ಪುಷ್ಪ, ಧೂಪ, ವಸ್ತ್ರ ಇವುಗಳಿಂದಲೂ; ಪ್ರಿಯಗಳಾದ ಭೂಷಣಗಳಿಂದಲೂ ಸೂರ್ಯನನ್ನು ಪೂಜಿಸುತ್ತಾರೋ, ಅವರನ್ನು ನೀವು ಆಕ್ರಮಿಸಕೂಡದು. ಅವರನ್ನು ನಮ್ಮ ತಂದೆಯಾದ ಸೂರ್ಯನು ಕೈಹಿಡಿದಿರುವನು.

೨೫. ಯಾರು ಸೂರ್ಯದೇವಾಲಯದಲ್ಲಿ ಗುಡಿಸುವುದು, ಸಾರಿಸುವುದು ಮೊದಲಾದ ಕೆಲಸಗಳನ್ನು ಮಾಡುವರೋ, ಅಂಥವರ ತ್ರಿಪುರುಷ ಕುಲದವರ ಎಂದರೆ ಅವರ ಹಿಂದಿನವರು—ಅವರು—ಅವರ ಮುಂದಿನವರು ಈ ಮೂವರ ತಂಟೆಗೆ ನೀವು ಹೋಗಕೂಡದು.

೨೬. ಯಾವನಿಂದ ಸೂರ್ಯದೇವಾಲಯವು ಕಟ್ಟಿಸಲಾಯಿತೋ ಅವನ ವಂಶದಲ್ಲಿ ಹುಟ್ಟಿದ ಮನುಷ್ಯನನ್ನು ನೀವು ಕ್ರೂರವಾದ ದೃಷ್ಟಿಯಿಂದ ಸಹ ನೋಡಕೂಡದು.

೨೭. ಹೇ ವೀರರೇ! ಯಾವ ಮನುಷ್ಯನ ಕುಲದವರು ಭಗವಂತನಲ್ಲಿ ಭಕ್ತಿಯಿಂದ ಮಂಗಳಕರನಾದ, ನನ್ನ ತಂದೆಯ ಪೂಜೆಯನ್ನು ಮಾಡಿಸಿರುವರೋ ಆ ಕುಲದವರನ್ನು ನೀವು ಯಾವಾಗಲೂ ದೂರದಲ್ಲಿ ಬಿಡತಕ್ಕದ್ದು.

೨೮. ನೀವು ಸೂರ್ಯಪುತ್ರನಾದ ನನ್ನ ಕಡೆಯವರಾದುದರಿಂದ, ಸೂರ್ಯಾಶ್ರಿತನೆಂಬ ಮುದ್ರೆಯಿಂದ ಅಂಕಿತನಾದ ಯಾವನೂ ಕೂಡ, ನಿಮ್ಮ ಆಜ್ಞೆಯನ್ನು ಭಂಗ ಮಾಡುವುದಿಲ್ಲ.

ಇತ್ಯುಕ್ತಾಃ ಕಿಂಕರಾಸ್ತಸ್ಯ ಯಮಸ್ಯ ಸುಮಹಾತ್ಮನಃ ।
ಉಪಾಶ್ರಿತ್ಯ ವಚಃ ಕೃಷ್ಣ ಸತ್ರಾಜಿತಮಥೋ ಗತಾಃ ॥ ೨೯ ॥

ತಸ್ಯ ತೇ ತೇಜಸಾ ಸರ್ವೇ ಭಾನೋರ್ಭಕ್ತಸ್ಯ ಸುವ್ರತ ।
ಮೋಹಿತಾಃ ಪತಿತಾ ಭೂಮೌ ಯಥಾ ಚ ವಿಹಗಾ ನಗಾತ್ ॥ ೩೦ ॥

ಏತಾಂ ಮಹಾಫಲಾಂ ಯೋಽರ್ಚಾಂ ಭಾನೋಃ ಕಾರಯತೇ ನರಃ ।
ತದಾಖ್ಯಾನಮುಪಾಖ್ಯಾನಂ ಗೃಹಂ ಕಾರಯಿತುಶ್ಚ ಯತ್ ॥ ೩೧ ॥

ಯಜ್ಞಾ ನರಾಣಾಂ ಪಾಪೌಘನಾಶಕಾಃ ಸರ್ವಕಾಮದಾಃ ।
ತಥೈವೇಷ್ಟೋ ಜಗಚ್ಚಕ್ಷುಃ ಸರ್ವಯಜ್ಞಮಯೋ ರವಿಃ ॥ ೩೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇ ಪರ್ವಣಿ ಸಪ್ತಮೀಕಲ್ಪೇ
ಆದಿತ್ಯಾಲಯ ವಂದನ ಮಾರ್ಜನಾದಿ ವರ್ಣನಂ ನಾಮ
ತ್ರಯೋದಶೋತ್ತರ ಶತತಮೋಽಧ್ಯಾಯಃ

---

೨೯. ಅಯ್ಯಾ ಕೃಷ್ಣ! ಹೀಗೆ ಮಹಾತ್ಮನಾದ ಯಮನ ಆಜ್ಞಾ ವಾಕ್ಯವನ್ನು ಅವನ ಕಿಂಕರರು ಗ್ರಹಿಸಿ, ಹೊರಟು ಸತ್ರಾಜಿತನ ಬಳಿಗೆ ಹೋದರು.

೩೦ ಅಯ್ಯಾ ಸುವ್ರತನೇ! ಅವರೆಲ್ಲರೂ ಸೂರ್ಯಭಕ್ತನಾದ ಅವನ ತೇಜಸ್ಸಿನಿಂದ ಭ್ರಾಂತ (ಎಚ್ಚರ ತಪ್ಪಿದವ) ರಾಗಿ ಮರದ ಮೇಲಿನಿಂದ ಹಕ್ಕಿಗಳು ಉದುರುವಂತೆ ಭೂಮಿಯಲ್ಲಿ ಬಿದ್ದು ಹೋದರು.

೩೧. ಇಂಥಾ ಮಹಾಫಲಪ್ರದವಾದ ಸೂರ್ಯಪೂಜೆಯು ಶಾಶ್ವತವಾಗಿ ನಡೆಯುವುದಕ್ಕೆ ಏರ್ಪಾಡು ಮಾಡುವವನ ಕಥೆಯನ್ನೂ, ಸೂರ್ಯದೇವಾಲಯ ನಿರ್ಮಾಣ ಕರ್ತನ ಉಪಾಖ್ಯಾನವನ್ನೂ ತಿಳಿದವನೇ ಧನ್ಯನೆನಿಸುವನು.

೩೨. ಯಜ್ಞಗಳೆಂಬುವು ಮನುಷ್ಯರ ಪಾಪರಾಶಿಗಳನ್ನು ನಾಶಮಾಡತಕ್ಕವು. ಮತ್ತು ಸರ್ವ ಕಾಮುಗಳನ್ನೂ ಕೊಡತಕ್ಕದ್ದು. ಆದುದರಿಂದ ಅವು ಎಲ್ಲರಿಗೂ ಪ್ರಿಯಗಳಾಗಿರುತ್ತವೆ. ಲೋಕಕ್ಕೆ ಕಣ್ಣಾಗಿ ಇರುವವನೂ, ಸರ್ವಯಜ್ಞಸ್ವರೂಪನೂ, ಆದ ರವಿಯೂ ಹಾಗೆಯೇ ಇಷ್ಟನಾಗಿದ್ದಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಸೂರ್ಯ
ದೇವಾಲಯದಲ್ಲಿನ ನಮಸ್ಕಾರ, ಸಮ್ಮಾರ್ಜನ ಮುಂತಾದುವುಗಳ ಫಲಗಳನ್ನು
ತಿಳಿಸುವ ನೂರಹದಿಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಚತುರ್ದಶೋತ್ತರಶತತಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಸ್ಥಾಪಿತಾಂ ಪ್ರತಿಮಾಂ ಭಾನೋಃ ಸಮ್ಯಕ್ಸಂಪೂಜ್ಯ ಮಾನವಃ ।
ಯಂ ಯಂ ಪ್ರಾರ್ಥಯತೇ ಕಾಮಂ ತಂತಂ ಪ್ರಾಪ್ನೋತ್ಯಸಂಶಯಂ ॥ ೧ ॥

ಯಃ ಸ್ನಾಪಯತಿ ದೇವಸ್ಯ ಘೃತೇನ ಪ್ರತಿಮಾಂ ರವೇಃ ।
ಪ್ರಸ್ಥೇ ಪ್ರಸ್ಥೇ ದ್ವಿಜಾಗ್ರೇಭ್ಯೋ ಸ ದದಾತಿ ಗವಾಂ ಶತಂ ॥ ೨ ॥

ಗವಾಂ ಶತಸ್ಯ ವಿಪ್ರೇಭ್ಯೋ ಯದ್ದತ್ತಸ್ಯ ಭವೇತ್ ಫಲಂ ।
ಘೃತಪ್ರಸ್ಥೇನ ತದ್ಭಾನೋಃ ಭವೇತ್ಸ್ನಾತಕಯೋಗಿನಾಂ ॥ ೩ ॥

---

### ನೂರಹದಿನಾಲ್ಕನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ದೇವಾಲಯವನ್ನು ಕಟ್ಟಿಸಿದ ಮನುಷ್ಯನೂ, ಸೂರ್ಯಪ್ರತಿಮೆಯನ್ನು ಚೆನ್ನಾಗಿ ಪ್ರತಿಷ್ಠಿಸಿ ಪೂಜಿಸಿದ ಮನುಷ್ಯನೂ, ತಾನು ಯಾವ ಯಾವ ಇಷ್ಟವನ್ನು ಬಯಸುವನೋ ಅವೆಲ್ಲವನ್ನೂ ನಿಸ್ಸಂದೇಹವಾಗಿ ಹೊಂದುತ್ತಾನೆ.

೨. ಯಾವನು ಸೂರ್ಯದೇವನ ಪ್ರತಿಮೆಗೆ ಸೇರು ಸೇರುಗಟ್ಟಲೆಯಲ್ಲಿ ತುಪ್ಪದಿಂದ ಅಭಿಷೇಕ ಮಾಡುವನೋ, ಅವನು ಬ್ರಾಹ್ಮಣ ಶ್ರೇಷ್ಠರಿಗೆ ನೂರು ನೂರು ಗೋದಾನಗಳನ್ನು ಮಾಡಿದಷ್ಟು ಪುಣ್ಯವನ್ನು ಹೊಂದುತ್ತಾನೆ.

೩. ಬ್ರಾಹ್ಮಣರಿಗೆ ನೂರು ನೂರು ಗೋವುಗಳನ್ನು ದಾನಮಾಡಿದರೆ ಏನು ಫಲ ಬರುವುದೋ, ಆ ಫಲವು ಸೇರುಗಟ್ಟೆ ತುಪ್ಪದಿಂದ ಸೂರ್ಯನಿಗೆ ಅಭಿಷೇಕ ಮಾಡಿಸುವ ಯೋಗಿಗಳಿಗೂ ಬರುವುದು.

ಭೂರಿದ್ಯುಮ್ನೇನ ಸಂಪ್ರಾಪ್ತಾ ಸಪ್ತದ್ವೀಪಾ ವಸುಂಧರಾ ।
ಘಟೋದಕೇನ ಮಾರ್ತಂಡ ಪ್ರತಿಮಾ ಸ್ಥಾಪಿತಾ ಕಿಲ ॥ ೪ ॥

ಪ್ರತಿಮಾಮುಸಿತಾಷ್ಟಮ್ಯಾಂ ಘೃತೇನ ಜಗತೀಪತೇ ।
ಸ್ನಾಪಯಿತ್ವಾ ಸಮಸ್ತೇಭ್ಯಃ ಪಾಪೇಭ್ಯಃ ಕೃಷ್ಣ ಮುಚ್ಯತೇ ॥ ೫ ॥

ಸಪ್ತಮ್ಯಾಮಥ ಷಷ್ಠ್ಯಾಂ ವಾ ಗವ್ಯೇನ ಹವಿಷಾ ರವೇಃ ।
ಸ್ನಪನಂ ತು ಭವೇಚ್ಛ್ರೇಷ್ಠಂ ಮಹಾಪಾತಕನಾಶನಂ ॥ ೬ ॥

ಜ್ಞಾನತೋಽಜ್ಞಾನತೋ ವಾಪಿ ಯತ್ಪಾಪಂ ಕುರುತೇ ನರಃ ।
ತತ್ಕ್ಷಾಲಯತಿ ಸಂಧ್ಯಾಯಾಂ ಘೃತೇನ ಸ್ನಪನಂ ರವೇಃ ॥ ೭ ॥

ಸರ್ವಯಜ್ಞಮಯೋ ಭಾನುರ್ಹವ್ಯಾನಾಂ ಪರಮಂ ಘೃತಂ ।
ತಯೋರಶೇಷಪಾಪಾನಾಂ ಕ್ಷಾಲಕಃ ಸಂಗಮೋ ಭವೇತ್ ॥ ೮ ॥

---

೪. ಭೂರಿದ್ಯುಮ್ನನೆಂಬುವನು ಒಂದುಕೊಡ ನೀರಿನಿಂದ ಸೂರ್ಯವಿಗ್ರಹಕ್ಕೆ ಅಭಿಷೇಕ ಮಾಡಿಸಲಾಗಿ, ಏಳುದ್ವೀಪಗಳಿಂದ ಕೂಡಿದ ಈ ಭೂಮಿಯೇ ಅವನಿಗೆ ಪ್ರಾಪ್ತಿಯಾಯಿತಂತೆ.

೫. ಅಯ್ಯಾ ಜಗತ್ಪತಿಯಾದ ಕೃಷ್ಣನೇ! ಪ್ರತಿತಿಂಗಳ ಶುಕ್ಲಪಕ್ಷದ ಅಷ್ಟಮಿಯ ದಿನ, ಸೂರ್ಯನಿಗೆ ತುಪ್ಪದಿಂದ ಅಭಿಷೇಕ ಮಾಡಿದವನು, ಸಮಸ್ತ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ.

೬. ಸಪ್ತಮಿಯಲ್ಲಾಗಲೀ, ಷಷ್ಠಿಯಲ್ಲಾಗಲೀ, ಹಸುವಿನ ತುಪ್ಪದಿಂದ ಸೂರ್ಯನಿಗೆ ಅಭಿಷೇಕ ಮಾಡಿಸುವುದು, ಶ್ರೇಷ್ಠವೂ ಮಹಾಪಾಪನಾಶನವೂ ಆಗಿದೆ.

೭. ಸಂಧ್ಯಾಕಾಲದಲ್ಲಿ ಸೂರ್ಯವಿಗ್ರಹಕ್ಕೆ ತುಪ್ಪದ ಅಭಿಷೇಕ ಮಾಡಿಸುವುದರಿಂದ ಮನುಷ್ಯನು ಜ್ಞಾನದಿಂದಾಗಲಿ, ಅಜ್ಞಾನದಿಂದಾಗಲಿ ಮಾಡಿದ ಸಮಸ್ತ ಪಾಪಗಳನ್ನೂ ಹೋಗಲಾಡಿಸಿಕೊಳ್ಳುತ್ತಾನೆ.

೮. ಸೂರ್ಯನು ಸಮಸ್ತಯಜ್ಞಸ್ವರೂಪನಾಗಿದಾನೆ. ತುಪ್ಪವು ಹವಿರ್ದ್ರವ್ಯಗಳಲ್ಲಿ ಶ್ರೇಷ್ಠವಾಗಿದೆ. ಸೂರ್ಯನಿಗೆ ತುಪ್ಪದಿಂದ ಅಭಿಷೇಕ ಮಾಡುವಾಗ ಉಂಟಾಗುವ ಸೂರ್ಯಪ್ರತಿಮಾ ಮತ್ತು ತುಪ್ಪ, ಇವುಗಳ ಸಂಗಮವು, ಅಭಿಷೇಕ ಮಾಡಿಸಿದವನಿಗೆ ಸರ್ವಪಾಪಗಳನ್ನೂ ತೊಳೆದುಬಿಡುತ್ತದೆ.

ಯೇಷು ಕ್ಷೀರವಹಾ ನದ್ಯೋ ಹ್ರದಾಃ ಪಾಯಸಕರ್ದಮಾಃ ।
ನೋದತೇ ತೇಷು ಲೋಕೇಷು ಕ್ಷೀರಸ್ನಾನಕರೋ ರವೇಃ ॥ ೯ ॥

ಆಹ್ಲಾದಂ ನಿರ್ವೃತಿಸ್ಥಾನಮಾರೋಗ್ಯಂ ಚಾರುರೂಪತಾಂ ।
ಸಪ್ತಜನ್ಮಸ್ವವಾಪ್ನೋತಿ ಕ್ಷೀರಸ್ನಾನಪರೋ ರವೇಃ ॥ ೧೦ ॥

ದಧ್ಯಾದೀನಾಂ ವಿಕಾರಾಣಾಂ ಕ್ಷೀರತಸ್ಸಂಭವೋ ಯಥಾ ।
ಯಥಾ ಚ ವಿಮಲಂ ಕ್ಷೀರಂ ಭವೇನ್ನಿರ್ವೃತಿಕಾರಕಂ ॥
ತಥಾ ಚ ನಿರ್ಮಲಂ ಜ್ಞಾನಂ ಭವತ್ಯಪಿ ನ ಸಂಶಯಃ ॥ ೧೧ ॥

ಗ್ರಹಾನುಕೂಲತಾಂ ಪುಷ್ಟಿಂ ಪ್ರಿಯತ್ವಮಖಿಲೇ ಜನೇ ।
ಕರೋತಿ ಭಗವಾನ್ ಭಾನುಃ ಕ್ಷೀರಸ್ನಪನತೋಷಿತಃ ॥ ೧೨ ॥

---

ಸೂರ್ಯನಿಗೆ ಹಾಲಿನಿಂದ ಅಭಿಷೇಕ ಮಾಡಿಸಿದವನು ಪಾಯಸದ ಮಡುಗಳೂ ಹಾಲಿನ ಹೊಳೆಗಳೂ ಉಳ್ಳ ಲೋಕವನ್ನು ಸೇರಿ, ಆ ಲೋಕಗಳಲ್ಲಿ ಸಂತೋಷಪಡುತ್ತಾನೆ.

೧೦. ಸೂರ್ಯಪ್ರತಿಮೆಗೆ ಕ್ಷೀರಾಭಿಷೇಕ ಮಾಡಿಸಿದವನು, ಮುಂದಿನ ಏಳುಜನ್ಮಗಳಲ್ಲಿ ಆಹ್ಲಾದವನ್ನೂ, ಸುಖಕರವಾದ ಸ್ಥಾನವನ್ನೂ, ಆರೋಗ್ಯವನ್ನೂ, ಮನೋಹರವಾದ ಸೌಂದರ್ಯವನ್ನೂ ಹೊಂದುತ್ತಾನೆ.

೧೧. ಕ್ಷೀರವು ಹೆಪ್ಪಿನ ಬಲದಿಂದ ದಧಿ ಮೊದಲಾದುವುಗಳ ಸ್ವರೂಪವುಳ್ಳದ್ದಾಗಿ ಹೇಗೆ ಪರಿಣಮಿಸುವುದೋ ಹಾಗೆ ಸೂರ್ಯನಿಗೆ ಮಾಡಿದ ಕ್ಷೀರಾಭಿಷೇಕವು ಮಾನವನಿಗೆ ಮುಕ್ತಿಸ್ವರೂಪವಾಗಿ ಪರಿಣಮಿಸುತ್ತದೆ. ಮತ್ತು ನಿರ್ಮಲವಾದ ಜ್ಞಾನವೂ ಉಂಟಾಗುತ್ತದೆ. ಈ ವಿಚಾರದಲ್ಲಿಸಂಶಯವಿಲ್ಲ.

೧೨. ಕ್ಷೀರಾಭಿಷೇಕದಿಂದ ಗ್ರಹಾಧಿಪನಾದ ಸೂರ್ಯಭಗವಂತನು ತೃಪ್ತನಾಗಿ ಗ್ರಹಗಳ ಅನುಕೂಲ್ಯ ಫಲವನ್ನೂ, ಪುಷ್ಟಿಯನ್ನೂ, ಸರ್ವಜನ ಪ್ರಿಯತ್ವವನ್ನೂ ಉಂಟುಮಾಡುತ್ತಾನೆ.

**ಸರ್ವಸ್ಯ ಸ್ನಿಗ್ಧತಾಮೇತಿ ದೃಷ್ಟಸ್ಸರ್ವಃ ಪ್ರಸೀದತಿ ।**
**ಘೃತಕ್ಷೀರೇಣ ದೇವೇಶೇ ಸ್ನಾಪಿತೇ ತಿಮಿರಾಪಹೇ** ॥ ೧೩ ॥

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಆದಿತ್ಯಸ್ನಪನ ಯೋಗ ವರ್ಣನಂ ನಾಮ ಚತುರ್ದಶೋತ್ತರ ಶತತಮೋಽಧ್ಯಾಯಃ.**



---

೧೩. ದೇವೇಶನೂ, ಅಂಧಕಾರವಿನಾಶಕನೂ ಆದ ಸೂರ್ಯನಿಗೆ ಹಾಲು ತುಪ್ಪ ಇವುಗಳಿಂದ ಅಭಿಷೇಕ ಮಾಡಿದವನು, ಎಲ್ಲರ ಪ್ರೀತಿಗೂ ಪಾತ್ರನಾಗುತ್ತಾನೆ. ಇವನು ಯಾರನ್ನು ಹೋಗಿ ನೋಡುವನೋ ಅವರೆಲ್ಲರೂ ಪ್ರಸನ್ನರಾಗುವರು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಆದಿತ್ಯನ ಅಭಿಷೇಕಯೋಗ ವರ್ಣನವೆಂಬ ನೂರಹದಿನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಪಂಚದಶೋತ್ತರಶತತಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

ಪ್ರಶಂಸಂತಿ ಮಹಾತ್ಮಾನಃ ಸಂವಾದಂ ಭಾಸ್ಕರಾಶ್ರಯಂ ।
ಗೌತಮ್ಯಾ ಸಹ ಕೌಶಲ್ಯಾ ಸುಮನಾಯಾಂ ಸುರಾಲಯೇ ॥ ೧ ॥

ಸ್ವರ್ಗೇಽತಿಶೋಭನಾಂ ದೃಷ್ಟ್ವಾ ಕೌಶಲ್ಯಾಂ ಪತಿನಾ ಸಹ ।
ಬ್ರಾಹ್ಮಣೀ ಗೌತಮೀ ನಾಮ ಪರ್ಯಪೃಚ್ಛತ ವಿಸ್ಮಿತಾ ॥ ೨ ॥

॥ ಗೌತಮ್ಯುವಾಚ ॥

ಶತಶಃ ಸಂತಿ ಕೌಶಲ್ಯೇ ದೇವಾಃ ಸ್ವರ್ಗನಿವಾಸಿನಃ ।
ದೇವಪತ್ನ್ಯಸ್ತಥೈವೈತಾಃ ಸಿದ್ಧಾ ಸ್ಸಿದ್ಧಾಂಗನಾಸ್ತಥಾ ॥ ೩ ॥

---

## ನೂರಹದಿನೈದನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಸುಮನಾ ಪಟ್ಟಣದಲ್ಲಿರುವ ದೇವಾಲಯದಲ್ಲಿ ಗೌತಮಿಗೂ ಕೌಶಲ್ಯೆಗೂ ಸೂರ್ಯನ ವಿಚಾರವಾಗಿ ನಡೆದ ಸಂವಾದವನ್ನು ಮಹಾತ್ಮರು ವಿಶೇಷವಾಗಿ ಪ್ರಶಂಸಿಸುತ್ತಾರೆ.

೨. ಅತಿ ಶೋಭನ ಸ್ವರೂಪಳಾದ ಕೌಸಲ್ಯೆಯು, ಸ್ವರ್ಗಲೋಕದಲ್ಲಿ ಗಂಡನೊಡಗೂಡಿರುವುದನ್ನು ನೋಡಿ, ಗೌತಮಿಯೆಂಬ ಪ್ರಸಿದ್ಧಳಾದ ಬ್ರಾಹ್ಮಣ ಸ್ತ್ರೀಯು ಆಶ್ಚರ್ಯಗೊಂಡವಳಾಗಿ ಕೇಳಿದಳು.

೩. ಗೌತಮಿಯು ಕೇಳುತ್ತಾಳೆ—ಎಲೈ ಕೌಶಲ್ಯೆಯೆ! ಸ್ವರ್ಗವಾಸಿಗಳಾದ ದೇವತೆಗಳು ಮತ್ತು ದೇವ ಪತ್ನಿಯರು, ಅದೇ ಪ್ರಕಾರ ಸಿದ್ಧರು, ಮತ್ತು ಸಿದ್ಧರ ಸ್ತ್ರೀಯರೂ, ನೂರಾರು ಮಂದಿ ಇದ್ದಾರೆ.

ನ ತೇಷಾಮೀದೃಶೋ ಗಂಧೋ ನ ಕಾಂತಿರ್ನ ಸುರೂಪತಾ ।
ನ ವಾಸಸೀ ಶೋಭನೇ ಯೇ ಯಥಾ ತೇ ಪತಿನಾ ಸಹ ॥ ೪ ॥

ನೈವಾಭರಣಜಾತಾನಿ ತೇಷಾಂ ಭ್ರಾಜಂತಿ ವೈ ತಥಾ ।
ಯಥಾ ತವ ಯಥಾ ಪತ್ಯುರ್ನ ಚ ಸ್ವರ್ಗನಿವಾಸಿನಾಂ ॥ ೫ ॥

ಸುಸ್ನಾತಂ ತೈಲತಶ್ಚೈವ ಯುವಯೋರತಿರಿಚ್ಯತೇ ।
ಲೇಖಾದ್ಯಾನಾಮಪೀಶಾನಾಂ ಕ್ಷಯಾತಿಶಯವರ್ಜಿತಃ ॥ ೬ ॥

ತಪಃ ಪ್ರಭಾವೋ ದಾನಂ ವಾ ಹೋಮೋ ವಾ ಕರ್ಮ ಸಂಜ್ಞಿತಃ ।
ಯುವಯೋರ್ಯತ್ಸಮಾಚಕ್ಷ್ವ ತತ್ಸರ್ವಂ ವರವರ್ಣಿನಿ ॥
ಯೇನ ಮೇ ವಿಕ್ರಮೇ ಬುದ್ಧಿರ್ಮನುಜಾ ಯೇನ ಸಂಗತಾಃ ॥ ೭ ॥

॥ ಕೌಶಲ್ಯೋವಾಚ ॥

ಯಜ್ಞೋ ಯಜ್ಞೇಶ್ವರೋ ಭಾನುರಾವಾಭ್ಯಾಂ ಜಾತು ತೋಷಿತಃ ।
ಸ್ವರ್ಗಪ್ರಾಪ್ತಿರಿಯಂ ತಸ್ಯ ಕರ್ಮಣಃ ಫಲಮುತ್ತಮಂ ॥ ೮ ॥

---

೪. ನಿನ್ನ ಗಂಡನಲ್ಲಿಯೂ ನಿನ್ನಲ್ಲಿಯೂ ಇರುವ ಇಂಥ ಸುವಾಸನೆ, ಇಂಥ ಕಾಂತಿ, ಇಂಥ ಮನೋಜ್ಞವಾದ ರೂಪ, ಇಂಥ ಸುಂದರವಾದ ವಸ್ತ್ರಗಳು, ಆ ದೇವತಾದಿಗಳಿಗೆ ಕೂಡ ಇಲ್ಲ. ಅವರ ಒಡವೆಗಳ ಸಮೂಹವೂ ಅಷ್ಟು ಪ್ರಕಾಶಿಸುವುದಿಲ್ಲ.

೫. ಒಟ್ಟಿನಲ್ಲಿ ನಿನಗೂ ನಿನ್ನ ಗಂಡನಿಗೂ ಇರುವಂಥ ಅನುಕೂಲ್ಯಾದಿಗಳು ಸ್ವರ್ಗವಾಸಿಗಳಿಗೆ ಸಹ ಇಲ್ಲ. ನೀವಿಬ್ಬರೂ ತೈಲದಿಂದ ಮಾಡುವ ಅಭ್ಯಂಗ ಸ್ನಾನವು ಇತರರು ಮಾಡುವ ಅಭ್ಯಂಗಕ್ಕಿಂತ ಅತಿ ಶ್ರೇಷ್ಠವಾದುದು.

೬. "ಎಲೌ ವರವರ್ಣಿನಿಯಾದ ಕೌಶಲ್ಯೆಯೇ ! ಕರ್ಮ ಎಂಬ ಸಂಜ್ಞೆಯುಳ್ಳವುಗಳಾಗಿ ನಿಮ್ಮಿಬ್ಬರಲ್ಲಿ ಆಚರಣೆಯಲ್ಲಿರುವ ತಪಃಪ್ರಭಾವ, ಹೋಮ ಇವುಗಳೂ.

೭. ಮತ್ತು ಮನುಷ್ಯರಿಗೆ ಸಂಭವಿಸುವಂತಹ ವಿಕ್ರಮ ವಿಷಯವಾದ ಬುದ್ಧಿಯೂ, ಏನುಮಾಡಿದರೆ ನನಗೂ ಉಂಟಾಗುತ್ತದೆಯೋ ಅವೆಲ್ಲವನ್ನೂ ನನಗೆ ಹೇಳು" ಎಂದಳು.

೮. ಕೌಶಲ್ಯೆ ಹೇಳುತ್ತಾಳೆ—ಯಜ್ಞಸ್ವರೂಪನೂ ಯಜ್ಞಾಧಿಪತಿಯೂ ಆದ ಸೂರ್ಯನನ್ನು ನಾವಿಬ್ಬರೂ ಒಂದಾನೊಂದು ಕಾಲದಲ್ಲಿ ಸಂತೋಷಪಡಿಸಿದೆವು. ಹಾಗೆ

ಸುರೂಪತಾ ತತಃ ಪ್ರೀತಿಃ ಪಶ್ಯತಾಂ ಚಾರುವೇಷಿತಾ ।
ಯತ್ಪೃಚ್ಛಸಿ ಮಹಾಭಾಗೇ ತದಪ್ಯೇಷಾಂ ವದಾಮಿ ತೇ ॥ ೯ ॥

ತೀರ್ಥೋದಕೈಸ್ತಥಾ ಗಂಧೈಃ ಸ್ನಾಪಿತೋ ಯದ್ದಿವಾಕರಃ ।
ತೇನ ಕಾಂತಿರಿಯಂ ನಿತ್ಯಂ ದೇವಾನಾಂ ಲೋಕೆ ವಾಸಿನಾಂ ॥ ೧೦ ॥

ಮನಃ ಪ್ರಸಾದಸ್ಸೌಮ್ಯತ್ವಂ ಶರೀರೇ ಯಾ ಚ ನಿರ್ವೃತಿಃ ।
ಯತ್ಪ್ರಿಯತ್ವಂ ಚ ತತ್ಸರ್ವಂ ಘೃತಸ್ನಾಪನಜಂ ಫಲಂ ॥ ೧೧ ॥

ಯಾನ್ಯಭೀಷ್ಟಾನಿ ವಾಸಾಂಸಿ ಯಚ್ಚಾಭೀಷ್ಟಂ ವಿಭೂಷಣಂ ।
ರತ್ನಾನಿ ಯಾನ್ಯಭೀಷ್ಟಾನಿ ಯತ್ಪ್ರಿಯಂ ಚಾನುಲೇಪನಂ ॥ ೧೨ ॥

---

ಸಂತೋಷಪಡಿಸಿದ ನಮ್ಮ ಕಾರ್ಯಕ್ಕೆ, ಸ್ವರ್ಗ ಪ್ರಾಪ್ತಿರೂಪವಾದ ಉತ್ತಮವಾದ ಈ ಫಲವು ದೊರೆತಿದೆ.

೯. ಎಲೌ ಅದೃಷ್ಟಶಾಲಿನಿಯೇ! ಒಳ್ಳೆಯ ಸೌಂದರ್ಯ, ಅದರಿಂದ ನೋಡುವವರಿಗೆ ಪ್ರೀತಿ, ಮನೋಹರವಾದ ಅಲಂಕಾರ, ಇವುಗಳ ಪ್ರಾಪ್ತಿವಿಚಾರದಲ್ಲಿ ನೀನು ಯಾವುದನ್ನು ಕೇಳುತ್ತೀಯೋ ಅದನ್ನು ನಿನಗೆ ಹೇಳುವೆನು.

೧೦. ಹಿಂದೆ ನಾನು ಪುಣ್ಯ ತೀರ್ಥೋದಕಗಳಿಂದಲೂ, ಗಂಧಗಳಿಂದಲೂ, ಸೂರ್ಯನಿಗೆ ಅಭಿಷೇಕ ಮಾಡಿದೆನು. ಅದರಿಂದ ದೇವಲೋಕವಾಸಿಗಳಾದವರಿಗಿರುವ ಈ ಕಾಂತಿಯು ಶಾಶ್ವತವಾಗಿ ನನಗೆ ಲಭಿಸಿದೆ.

೧೧. ಮನೋನೈರ್ಮಲ್ಯ, ಅಕ್ರೂರತೆ, ಶರೀರದಲ್ಲಿ ಕಾಣುತ್ತಿರುವ ಕೋಮಲತೆ, ಸೌಖ್ಯ, ಮತ್ತು ಜನಪ್ರಿಯತ್ವ ಇವೆಲ್ಲವೂ ಸೂರ್ಯದೇವನಿಗೆ ನಾನು ಘೃತಾಭಿಷೇಕ ಮಾಡಿಸಿದ್ದರ ಫಲ.

೧೨. ನನ್ನ ಗಂಡನು ರಾಜ್ಯವನ್ನಾಳುತ್ತಿದ್ದಾಗ ತನಗೆ ಯಾವ ಯಾವ ವಸ್ತ್ರಗಳು ಇಷ್ಟವಾಗಿದ್ದುವೋ, ಯಾವ ಆಭರಣಗಳು ಇಷ್ಟವೋ, ಯಾವ ರತ್ನಗಳು ಇಷ್ಟವೋ, ಯಾವ ಅನುಲೇಪನಗಳು ಪ್ರಿಯವೋ.

ಯೇ ಧೂಪಾ ಯಾನಿ ಮಾಲ್ಯಾನಿ ದಯಿತಾನ್ಯಭವಂಸ್ತದಾ ।
ಮಮ ಭರ್ತುಸ್ತಥೈವಾಸ್ಯ ತದಾ ರಾಜ್ಯಂ ಪ್ರಶಾಸತಃ ॥ ೧೩ ॥

ತಾನಿ ಸರ್ವಾಣಿ ಸರ್ವಜ್ಞ ಸರ್ವಪಾತರಿ ಭಾಸ್ಕರೇ ।
ದತ್ತಾನಿ ತತ್ಸಮುತ್ಥೋಽಯಂ ಧೂಪಗಂಧಾತ್ಮಕೋ ಗುಣಃ ॥ ೧೪ ॥

ಆಹಾರಾ ದಯಿತಾ ಯೇ ಚ ಪವಿತ್ರಾಶ್ಚ ನಿವೇದಿತಾಃ ।
ತ್ರಿಲೋಕಕರ್ತುಃ ಸವಿತುಸ್ತೃಪ್ತಿಸ್ತದ್ಗುಣ ಸಂಭವಾ ॥ ೧೫ ॥

ಸ್ವರ್ಗಕಾಮೇನ ಮೇ ಭರ್ತ್ರಾ ಮಯಾ ಚ ಶುಭದರ್ಶನೇ ।
ಕೃತಮೇತತ್ಕೃತೇನಾಭೂದಾವಯೋರ್ಭವಸಂಕ್ಷಯಃ ॥ ೧೬ ॥

ಯೇ ತ್ವಕಾಮಾ ನರಾಃ ಸಮ್ಯಕ್ ತತ್ಕುರ್ವಂತಿ ಚ ಶೋಭನೇ ।
ತೇಭ್ಯೋ ದದಾತಿ ವಿಶ್ವೇಶೋ ಭಗವಾನ್ ಮುಕ್ತಿಮೀಶ್ವರಃ ॥ ೧೭ ॥

---

೧೩. ಯಾವ ಧೂಪಗಳು ಪ್ರಿಯಗಳೋ, ಯಾವ ಪುಷ್ಪಮಾಲೆಗಳು ಪ್ರಿಯಗಳೋ, ಅವುಗಳನ್ನು ಸರ್ವರಕ್ಷಕನಾದ ಭಾಸ್ಕರನಿಗೆ ಸಮರ್ಪಣೆ ಮಾಡಿದುದರಿಂದ ಈ ಸುಗಂಧಧೂಪವಾಸನಾಯುಕ್ತವಾದ ಗುಣವು ನಮಗೆ ಉಂಟಾಯಿತು.

೧೪–೧೫. ತ್ರಿಲೋಕ ಕರ್ತೃವಾದ ಸೂರ್ಯನಿಗೆ ಯಾವ ವಸ್ತುಗಳ ನೈವೇದ್ಯವು ಪ್ರಿಯಗಳೂ, ಪರಿಶುದ್ಧಗಳೂ ಎಂದು ಹೇಳಿದೆಯೋ, ಆ ಉತ್ತಮ ಆಹಾರ ವಸ್ತುಗಳನ್ನು ಸೂರ್ಯನಿಗೆ ಅರ್ಪಿಸಿದ ಗುಣದಿಂದ ನಮಗೆ ಈ ತೃಪ್ತಿಯುಂಟಾಗಿದೆ.

೧೬. ನನ್ನ ಪತಿಯೂ ನಾನೂ ಸ್ವರ್ಗವನ್ನು ಅಪೇಕ್ಷಿಸಿ ಇದನ್ನು ಮಾಡಿದೆವು. ಹಾಗೆ ಮಾಡಿದ್ದರಿಂದ ನಮ್ಮಿಬ್ಬರಿಗೂ ಪುನರ್ಜನ್ಮವಿಲ್ಲದಂತಾಯಿತು.

೧೭. ಎಲೈ ಮಂಗಳಕರಳೇ! ನಿಷ್ಕಾಮಬುದ್ಧಿಯಿಂದ ಯಾವ ಮನುಷ್ಯರು ಇದನ್ನು ಚೆನ್ನಾಗಿ ಮಾಡುತ್ತಾರೋ ಅವರಿಗೆ ವಿಶ್ವೇಶ್ವರನು ಮುಕ್ತಿಯನ್ನೇ ಕೊಡುತ್ತಾನೆ.

॥ ಬ್ರಹ್ಮೋವಾಚ ॥

ಏವಮಭ್ಯರ್ಚ್ಯ ಮಾರ್ತಂಡಮರ್ಕಂ ದೇವೇಶ್ವರಂ ಗುರುಂ ।
ಪ್ರಾಪ್ತೋಽಸ್ಮ್ಯಭಿಮತಾನ್ಕಾಮಾನ್ ಕೃಷ್ಣಾಹಂ ಶಾಶ್ವತೀಃ ಸಮಾಃ ॥ ೧೮ ॥

ಚಂದನಾಗುರು ಕರ್ಪೂರ ಕುಂಕುಮೋಶೀರ ಪದ್ಮಕೈಃ ।
ಅನುಲಿಪ್ತೇ ನರೈರ್ಭಕ್ತ್ಯಾ ದದಾತಿ ಮನಸೇಪ್ಸಿತಾನ್ ॥ ೧೯ ॥

ಕಾಲೇಯಕಂ ತುರುಷ್ಕಂ ಚ ರಕ್ತಚಂದನಮೇವ ಚ ।
ಯಾನ್ಯಾತ್ಮನಸ್ಸದೇಷ್ಟಾನಿ ತಾನಿ ಶಸ್ಯಾನ್ಯಪಾಕುರು ॥ ೨೦ ॥

ಗಂಧಶ್ಚಾಪಿ ಶುಭಾ ಯೇ ಚ ಧೂಪಾ ಯೇ ವಿಜಯೋದಯಾಃ ।
ದಿವಾಕರಸ್ಯ ಧರ್ಮಜ್ಞ ನಿವೇದ್ಯಾಸ್ಸರ್ವದಾಽಚ್ಯುತ ॥ ೨೧ ॥

ನ ದದ್ಯಾತ್ಸಲ್ಲಕೀಕ್ಷಾರಂ ಗೋಮುಖೇನ ಚ ಸಂಹೃತಂ ।
ದದ್ಯಾದರ್ಕಾಯ ಧರ್ಮಜ್ಞ ಧೂಪಮಾರಾಧನೋದ್ಯತಃ ॥ ೨೨ ॥

---

೧೮. ಬ್ರಹ್ಮನು ಹೇಳುತ್ತಾನೆ—ದೇವೇಶ್ವರನೂ, ಗುರುವೂ, ಮಾರ್ತಂಡ ಸಂಜ್ಞಕನೂ, ಆದ ಸೂರ್ಯನನ್ನು ಹೀಗೆ ಪೂಜಿಸಿ, ಬಹು ದೀರ್ಘಕಾಲ ನನ್ನ ಅಭೀಷ್ಟಗಳನ್ನು ಹೊಂದಿದ್ದೇನೆ.

೧೯. ಗಂಧ, ಅಗಿಲು, ಕರ್ಪೂರ, ಕುಂಕುಮಕೇಸರಿ, ಲಾಮಂಚದ ಬೇರು, ಪದ್ಮ ಇವುಗಳನ್ನು ತೇಯ್ದು ಭಕ್ತಿಪೂರ್ವಕವಾಗಿ ಅವನ ಶರೀರಕ್ಕೆ ಲೇಪಿಸಿದರೆ ಸಂಪತ್ತಿಯನ್ನು (ಲಕ್ಷ್ಮಿಯನ್ನು) ಕೊಡುತ್ತಾನೆ.

೨೦. ಕರಿ ಅಗಿಲು (ಕಾಲೇಯಕ), ಹಾಲುಮಡ್ಡಿ, (ತುರುಷ್ಕ) ರಕ್ತಚಂದನ ಇವುಗಳಲ್ಲಿ ಯಾವುವು ತನಗೆ ಸದಾ ಇಷ್ಟವಾದವುಗಳೋ ಅವುಗಳು ಶ್ಲಾಘ್ಯವಾಗಿದ್ದರೆ ನೀನು ಆಶೆಪಟ್ಟು ಇಟ್ಟುಕೊಳ್ಳಬೇಡ. ಸೂರ್ಯನಿಗೆ ಸಮರ್ಪಿಸು.

೨೧. ಎಲೈ ಕೃಷ್ಣನೇ! ಯಾವ ಶುಭಗಂಧಗಳೂ, ವಿಜಯೋದಯ ಸಂಜ್ಞಕಗಳಾದ ಯಾವ ಧೂಪಗಳೂ ನಿನಗೆ ಇಷ್ಟಗಳೋ, ಅವುಗಳನ್ನು ಸೂರ್ಯನಿಗೆ ಯಾವಾಗಲೂ ಸಮರ್ಪಿಸಬೇಕು.

೨೨. ಸಲ್ಲಕೀ ಕ್ಷಾರವನ್ನೂ ಗೋಮುಖದಿಂದ ಸಂಹೃತವಾದುದನ್ನೂ, ಕೊಡಬಾರದು. ಎಲೈ ಧರ್ಮಜ್ಞನೇ! ಆರಾಧನೆಯಲ್ಲಿ ಉದ್ಯುಕ್ತನಾದವನು ಸೂರ್ಯನಿಗೆ

ಮಾಲತೀ ಮಲ್ಲಿಕಾ ಚೈವ ಯೂಥಿಕಾ ಜಾತಿಮುಕ್ತಕಃ ।
ಪಾಟಲಾಃ ಕರವೀರಶ್ಚ ಜಪಾ ಸೇವಂತಿರೇವ ಚ ॥ ೨೩ ॥

ಕುಂಕುಮಸ್ತಗರ ಶ್ಚೈವ ಕರ್ಣಿಕಾರಃ ಸಕೇಶರಃ ।
ಚಂಪಕಃ ಕೇತಕಃ ಕುಂದಃ ಬಾಣ ಬರ್ಬರ ಮಾಲಿಕಾಃ ॥ ೨೪ ॥

ಅಶೋಕಸ್ತಿಲಕೋ ಲೋಧ್ರಃ ತಥಾ ಚೈವಾಟರೂಷಕಃ ।
ಶತಪತ್ರಾಣಿ ಧನ್ವಾನಿ ಬಕಾಹ್ವಾನಿ ವಿಶೇಷತಃ ॥ ೨೫ ॥

ಅಗಸ್ತಿಂ ಕಿಂಶುಕಂ ತದ್ವತ್ಪೂಜಾರ್ಥಂ ಭಾಸ್ಕರಸ್ಯ ತು ।
ಅಮೀ ಪುಷ್ಪಪ್ರಕಾರಾಸ್ತು ಶಸ್ತಾ ಭಾಸ್ಕರಪೂಜನೇ ॥ ೨೬ ॥

ಬಿಲ್ವಪತ್ರಂ ಶಮೀಪತ್ರಂ ಪತ್ರಂ ವಾ ಭೃಂಗರಸ್ಯ ಚ ।
ತಮಾಲಪತ್ರಂ ಚ ಹರೇ ಸದೈವ ಭಗವತ್ಪ್ರಿಯಂ ॥ ೨೭ ॥

---

ಧೂಪವನ್ನು ಅಗತ್ಯವಾಗಿ ಸಮರ್ಪಿಸಬೇಕು. "ಧೂಪಂವಿನಾ (ಪೂಜನಮಪ್ರಶಸ್ತಃ" ಎಂಬುದಾಗಿ ಹೇಳಿದೆ!

೨೩. ಜಾಜಿ, ಮಲ್ಲಿಗೆ, ಹಳದಿ ಸೇವಂತಿಗೆ, ಅತಿಮುಕ್ತಕಪುಷ್ಪ ಪಾದರಿ, ಕಣಿಗಲೆ, ದಾಸವಾಳ, ಬಿಳಿಯ ಸೇವಂತಿಗೆ.

೨೪. ಕುಂಕುಮ ವರ್ಣಯುಕ್ತವಾದ ತಗರ, ಕೇಸರಯುಕ್ತವಾದ ಬೆಟ್ಟ ದಾವರೆ, ಸಂಪಿಗೆ, ತಾಳೆ, (ಕೇದಗೆ) ಮಲ್ಲಿಗೆ, ಬಾಣ, ಬರ್ಬರ ಇವುಗಳ ಮಾಲೆಗಳೂ ಸೂರ್ಯಪೂಜೆಗೆ ಶ್ರೇಷ್ಠ.

೨೫. ಅಶೋಕ, ತಿಲಕ, ಲೋಧ್ರ, (ಕಕ್ಕೆ) ಮತ್ತು ಆಡಸೋಗೆ, ನೂರು ದಳ ಗಳುಳ್ಳ ಕಮಲ, ಧನ್ವ, ಬಕವೆಂಬ ಹೆಸರುಳ್ಳ ಹೂವುಗಳೂ.

೨೬. ಮತ್ತು ಆಗಸೆಯ ಹೂವುಗಳು, ಮುತ್ತುಗದ ಹೂವುಗಳು ಇವು ಸೂರ್ಯ ಪೂಜೆಗೆ ಶ್ರೇಷ್ಠಗಳು.

೨೭. ಬಿಲ್ವಪತ್ರೆ, ಬನ್ನಿಯಪತ್ರೆ, ಭೃಂಗರಾಜ ಪತ್ರ, ಹೊಂಗೆ ಎಲೆ (ತಮಾಲ ಪತ್ರ) ಇವು ಯಾವಾಗಲೂ ಭಗವಂತನಿಗೆ ಪ್ರಿಯಗಳು.

ತುಲಸೀ ಕಾಲತುಲಸೀ ತಥಾ ರಕ್ತಂ ಚ ಚಂದನಂ ।
ಕೇತಕೀಪತ್ರ ಪುಷ್ಪಂತು ಸದ್ಯಸ್ತುಷ್ಟಿಕರಂ ರವೇಃ ॥ ೨೮ ॥

ಪದ್ಮೋತ್ಪಲಸಮುತ್ಥಾನಿ ರಕ್ತಂ ನೀಲೋತ್ಪಲಂ ತಥಾ ।
ಸಿತೋತ್ಪಲಂ ತು ಭಾನೋಸ್ತು ದಯಿತಾನಿ ಸದಾ ಚ್ಯುತ ॥ ೨೯ ॥

ಕೃಷ್ಣಲೋನ್ಮತ್ತಕಂ ಕಾಂತಂ ತಥೈವ ಗಿರಿಮಲ್ಲಿಕಾ ।
ನ ಕರ್ಣಿಕಾರಿಕಾ ಪುಷ್ಪಂ ಭಾಸ್ಕರಾಯ ನಿವೇದಯೇತ್ ॥ ೩೦ ॥

ಕುಟಜಂ ಶಾಲ್ಮಲೀಪುಷ್ಪಂ ತಥಾನ್ಯದ್ಗಂಧವರ್ಜಿತಂ ।
ನಿವೇದಿತಂ ಭಯಂ ರೋಗಂ ನಿಃಸ್ವತಾಂ ಚ ಪ್ರಯಚ್ಛತಿ ॥ ೩೧ ॥

ಯೇಷಾಂ ನ ಪ್ರತಿಷೇಧೋಽಸ್ತಿ ಗಂಧವರ್ಣಾನ್ವಿತಾನಿ ಚ ।
ತಾನಿ ಪುಷ್ಪಾಣಿ ದೇಯಾನಿ ಭಾನವೇ ಲೋಕಭಾನವೇ ॥ ೩೨ ॥

ಸುಗಂಧೈಶ್ಚ ಮುರಾ ಮಾಂಸೀ ಕರ್ಪೂರಾಗರುಚಂದನೈಃ ।
ತಥಾನ್ಯೈಶ್ಚ ಶುಭೈದ್ರ್ರವ್ಯೈರರ್ಚಯೇದ್ವನಮಾಲಿನಂ ॥ ೩೩ ॥

---

೨೮. ತುಲಸೀ, ಕೃಷ್ಣತುಲಸೀ, ರಕ್ತಚಂದನ, ತಾಳೆಯಹೂವು, ಮತ್ತು ಪತ್ರಗಳು, ಇವು ಸೂರ್ಯನಿಗೆ ಸದ್ಯಃಸಂತೋಷಕರಗಳು.

೨೯. ತಾವರೆ, ನೈದಿಲೆ, ಕೆಂದಾವರೆ, ಕನ್ನೈದಿಲೆ, ಬಿಳಿದಾವರೆ ಇವು ಸೂರ್ಯನಿಗೆ ಸದಾ ಪ್ರಿಯಗಳು.

೩೦. ಗುಲಗಂಜಿ, ಉಮ್ಮತ್ತ, ಕಾಂತ, ಕಾಡುಮಲ್ಲಿಗೆ, ಕೊಡಸಿಗೆ, (ಕುಟಜ) ಬೂರುಗ, ಮುಂತಾದ ಇನ್ನೂ ಬೇರೆ ಬೇರೆ ಬಗೆಯ ನಿರ್ಗಂಧಕುಸುಮಗಳು ಇವುಗಳನ್ನು ಸೂರ್ಯನಿಗೆ ಪೂಜೆಮಾಡಬಾರದು.

೩೧. ಹಾಗೆ ಪೂಜೆಮಾಡಿದರೆ ಭಯ, ರೋಗ, ದಾರಿದ್ರ್ಯ ಇವು ಉಂಟಾಗುತ್ತವೆ.

೩೨. ಯಾವುವನ್ನು ನಿಷೇಧಿಸಿಲ್ಲವೋ, ಯಾವುಗಳಲ್ಲಿ ವಾಸನೆಯೂ ಬಣ್ಣವೂ ಉಂಟೋ, ಅಂಥ ಹೂಗಳನ್ನು ಲೋಕಪ್ರಕಾಶಕನಾದ ಸೂರ್ಯನಿಗೆ ಸಮರ್ಪಿಸಬೇಕು.

೩೩. ಸುಗಂಧವುಳ್ಳ ಮುರಾ, ಜಟಾಮಾಂಸೀ, ಕರ್ಪೂರ, ಅಗಿಲು, ಚಂದನ ಇವುಗಳಿಂದಲೂ ಇನ್ನೂ ಇತರ ಒಳ್ಳೆಯ ವಸ್ತುಗಳಿಂದಲೂ ವನಮಾಲಿಯನ್ನು ಪೂಜಿಸಬೇಕು.

ದುಕೂಲಪಟ್ಟಕೌಶೇಯ ವಾರ್ಕ್ಷಕಾರ್ಪಾಸಕಾದಿಭಿಃ ।
ವಾಸೋಭಿಃ ಪೂಜಯೇದ್ಭಾನುಂ ಯಾನಿ ಚಾತ್ಮಪ್ರಿಯಾಣಿ ತು ॥ ೩೪ ॥

ಭಕ್ಷ್ಯಾಣಿ ಯಾನ್ಯಭೀಷ್ಟಾನಿ ಭೋಜ್ಯಾನ್ಯಭಿ ಮತಾನಿ ಚ ।
ಫಲಂ ಚ ವಲ್ಲಭಂ ಯತ್ಸ್ಯಾತ್ತತ್ವಂ ದದ್ಯಾದ್ದಿವಾಕರೇ ॥ ೩೫ ॥

ಸುವರ್ಣಮಣಿಮುಕ್ತಾನಿ ರಜತಂ ಚ ತಥಾಚ್ಯುತ ।
ದಕ್ಷಿಣಾ ವಿವಿಧಾ ಚೇಹ ಯಚ್ಚಾನ್ಯದಪಿ ವಲ್ಲಭಂ ॥
ತತ್ತು ದೇವಾಧಿದೇವಾಯ ಭಾಸ್ಕರಾಯ ನಿವೇದಯೇತ್ ॥ ೩೬ ॥

ಆತ್ಮಾನಂ ಭಾಸ್ಕರಂ ಮತ್ವಾ ಯಜ್ಞಂ ತಸ್ಮೈ ನಿವೇದಯೇತ್ ।
ತತ್ತದವ್ಯಕ್ತರೂಪಾಯ ಭಾಸ್ಕರಾಯ ನಿವೇದಯೇತ್ ॥ ೩೭ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಆದಿತ್ಯ ಮಾಹಾತ್ಮ್ಯೇ ಸೂರ್ಯಪೂಜಾವಿಧಿ ವರ್ಣನಂ ನಾಮ ಪಂಚದಶೋತ್ತರ ಶತತಮೋಽಧ್ಯಾಯಃ

---

೩೪. ತನಗೆ ಪ್ರಿಯಗಳಾದ ಬಟ್ಟೆಗಳೆನಿಸಿದ ರೇಷ್ಮೆಬಟ್ಟೆ, ಕಿತ್ತಾನಾರು ಬಟ್ಟೆ, ಮರದ ತೊಗಟೆಗಳಿಂದಾದ ಬಟ್ಟೆ, ಹತ್ತಿಯಬಟ್ಟೆ, ಇವುಗಳನ್ನು ಸಮರ್ಪಿಸಬೇಕು.

೩೫. ಯಾವ ಭಕ್ಷ್ಯಗಳು ತನಗಿಷ್ಟಗಳೋ, ಯಾವ ಭೋಜ್ಯಗಳು ಬೇಕಾದುವೋ, ಯಾವ ಹಣ್ಣು ಪ್ರಿಯವಾದುದೋ ಅದನ್ನು ಸೂರ್ಯನಿಗೆ ಅರ್ಪಿಸಬೇಕು.

೩೬. ಎಲೈ ಕೃಷ್ಣನೇ! ಚಿನ್ನ, ರತ್ನಗಳು, ಮುತ್ತುಗಳು, ಬೆಳ್ಳಿ, ಬಗೆ ಬಗೆಯಾದ ದಕ್ಷಿಣೆಗಳು, ಇನ್ನೂ ಪ್ರಿಯವಾದ ವಸ್ತು ಯಾವುವುಂಟೋ ಅವೆಲ್ಲವನ್ನೂ ದೇವಾಧಿದೇವನಾದ ಸೂರ್ಯನಿಗೆ ಅರ್ಪಿಸಬೇಕು.

೩೭. ತನ್ನ ಆತ್ಮವನ್ನು ಸೂರ್ಯನೆಂದು ತಿಳಿದು ಅವನಿಗೆ ಪೂಜೆಯನ್ನು ಒಪ್ಪಿಸಬೇಕು. ಮತ್ತು ಆಯಾ ವಸ್ತುವನ್ನು ಅವ್ಯಕ್ತರೂಪನಾದ ಭಾಸ್ಕರನಿಗೆ ಸಮರ್ಪಿಸಬೇಕು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಆದಿತ್ಯ ಮಹಾತ್ಮೆಯಲ್ಲಿ ಸೂರ್ಯಪೂಜಾ ವಿಧಿ ವರ್ಣನವೆಂಬ ನೂರಹದಿನೈದನೇ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಷೋಡಶೋತ್ತರಶತತಮೋಽಧ್ಯಾಯಃ

ಬ್ರಹ್ಮೋವಾಚ

ಕೃಷ್ಣ ರಾಜಾ ಮಹಾನಾಸೀತ್ ಯಯಾತಿಕುಲಸಂಭವಃ ।
ಸತ್ರಾಜಿದಿತಿ ವಿಖ್ಯಾತಶ್ಚಕ್ರವರ್ತೀ ಮಹಾಬಲಃ ॥ ೧ ॥

ಪ್ರಭಾವೈಸ್ತೇಜಸಾ ಕಾಂತ್ಯಾ ಕ್ಷಾಂತ್ಯಾ ಬಲಸಮನ್ವಿತಃ ।
ಧೈರ್ಯಗಾಂಭೀರ್ಯಸಂಪನ್ನೋ ವದಾನ್ಯೋ ಯಶಸಾನ್ವಿತಃ ॥ ೨ ॥

ಬುದ್ಧ್ಯಾ ವಿಕ್ರಮದಕ್ಷೈಶ್ಚ ಸಂಪನ್ನೋ ಬ್ರಾಹ್ಮಣಾಯತಃ ।
ಕೃತೀ ಕವಿಸ್ತಥಾ ಶೂರಃ ಷಟ್ಪದಾಖ್ಯೈರ್ನ ನಿರ್ಜಿತಃ ॥ ೩ ॥

---

## ನೂರಹದಿನಾರನೆಯ ಅಧ್ಯಾಯ

೧. ಎಲೈ ಕೃಷ್ಣನೇ! ಯಯಾತಿಯ ಕುಲದಲ್ಲಿ ಹುಟ್ಟಿದ ಸತ್ರಾಜಿತನೆಂಬ ಕ್ಷತ್ರಿಯೋತ್ತಮನು ಮಹಾಬಲವುಳ್ಳ ಪ್ರಖ್ಯಾತ ಚಕ್ರವರ್ತಿಯಾಗಿ ಇದ್ದನು.

೨. ಅವನು ಪ್ರಭಾವಗಳಿಂದಲೂ, ತೇಜಸ್ಸಿನಿಂದಲೂ, ಕಾಂತಿಯಿಂದಲೂ, ಕ್ಷಮೆಯಿಂದಲೂ, ಬಲದಿಂದಲೂ ಕೂಡಿದ್ದನು. ಮತ್ತು ಧೈರ್ಯಗಾಂಭೀರ್ಯ ಯುಕ್ತನೂ, ದಾನಶೀಲನೂ, ಕೀರ್ತಿವಂತನೂ ಆಗಿದ್ದನು.

೩. ಅಲ್ಲದೆ ಬಹು ಬುದ್ಧಿಶಕ್ತಿಯಿಂದ ಕೂಡಿದವನಾಗಿ ಪರಾಕ್ರಮದಲ್ಲಿ ಸಮರ್ಥರೆನ್ನಿಸಿಕೊಂಡ ಪರಿಜನ ಯುಕ್ತನೂ, ಬ್ರಾಹ್ಮಣ ಪಕ್ಷಪಾತಿಯೂ, ಕುಶಲನೂ, ವಿದ್ವಾಂಸನೂ, ಶೂರನೂ, ಅರಿಷಡ್ವರ್ಗಗಳಿಂದ ಜಿತನಲ್ಲದವನೂ,

ಸದಾ ಪಂಚಸು ರಕ್ತಶ್ಚ ವಸುಮದ್ಭಿರ್ನ ನಿರ್ಜಿತಃ ।
ರುದ್ರತಾ ವಸುಭಿರ್ಜಾತೈಃ ಸತ್ವಶ್ರದ್ಧಾ ಸಮನ್ವಿತೈಃ ॥ ೪ ॥

ಅಂಬುಜಸ್ಯಾಂಡಜಸ್ಯೇವ ಆತ್ರೇಯಸ್ಯ ಸಿತಂ ಯಶಃ ।
ಅಂಬುಜಾಯಾಸ್ತಥಾ ಕೃಷ್ಣ ಪಾರ್ಶ್ವ ಪಾತ್ರಂ ಸ ವೈ ವಿಭೋ ॥ ೫ ॥

ಗಾಂಗೇಯೇನ ಬಲೇ ತುಲ್ಯಃ ಪೌಲಸ್ತ್ಯಶ್ಚಾರ್ಥಶ್ರಮೋ ಯಥಾ ।
ಗಾಂಗೇಯಸ್ಯ ತಥಾ ಕೃಷ್ಣ ಧಿಷಣಸ್ಯ ಹರೇರ್ಯಥಾ ॥ ೬ ॥

ಕಾಮ್ಯಶ್ಚ ದ್ವಿಜಭಕ್ತಸ್ತು ತಥಾ ವಾಲ್ಮೀಕಿವತ್ಸದಾ ।
ವ್ಯಾಸಸ್ಯ ದೇವಶಾರ್ದೂಲ ಜಾಮದಗ್ನ್ಯಸ್ಯ ವಾ ವಿಭೋ ॥ ೭ ॥

ಏಷಾಂ ಸ್ವೈಸ್ವೈರ್ಗುಣೈರ್ಯುಕ್ತಃ ಸ ರಾಜಾ ಕ್ಷ್ಮಾತಲೇ ವಿಭೋ ।
ಶಶಾಸ ಸ ಮಹಾಬಾಹುಸ್ಸಪ್ತದ್ವೀಪಾಂ ವಸುಂಧರಾಂ ॥ ೮ ॥

---

೪. ಇಂದ್ರಿಯ ಸಂಬಂಧವಾದ ಸ್ಪರ್ಶ ಶಬ್ದಾದಿ ಐದು ವಿಷಯಗಳಲ್ಲಿ ಸದಾ ಆಸಕ್ತನೂ, ದ್ರವ್ಯವಂತರಿಂದ ಜಯಿಸಲ್ಪಡದವನೂ, (ಎಂದರೆ ಎಲ್ಲರನ್ನೂ ಮೀರಿಸು ವಷ್ಟು ಧನವುಳ್ಳವನೂ) ತನಗೆ ಉಂಟಾಗಿರುವ ದ್ರವ್ಯಸಮೃದ್ಧಿಯಿಂದ ರುದ್ರಸಮಾ ನನೂ, ಸತ್ವ ಗುಣದಲ್ಲಿ ಶ್ರದ್ಧೆಯಿಂದ ಕೂಡಿದವನೂ ಆಗಿದ್ದನು.

೫-೬. ಎಲೈ ಕೃಷ್ಣನೇ! ಸತ್ಯಭಾಮಾ ರೂಪಳಾದ ಲಕ್ಷ್ಮಿಗೆ ಯಾನಪಾತ್ರ ಪ್ರಾಯನಾದ ಸತ್ರಾಜಿತನು; ಶಂಖ, ಸೂರ್ಯ, ಚಂದ್ರ ಇವರುಗಳಂತೆ ಶುಭ್ರವಾದ ಯಶಸ್ಸುಳ್ಳವನೂ, ಶಕ್ತಿಯಲ್ಲಿ ಭೀಷ್ಮರಿಗೆ ಸಮಾನನೂ, ಪೂಜಾರ್ಥವಾಗಿ ಶ್ರಮಿಸುವುದರಲ್ಲಿ ರಾವಣಸದೃಶನೂ, ಆಗಿ ಷಣ್ಮುಖ, ಬೃಹಸ್ಪತಿ, ಹರಿ ಇವರಿಗೆ ಸಮ ನೆನಿಸಿದ್ದನು.

೭. ಅಯ್ಯಾ ದೇವಶಾರ್ದೂಲನೇ! ವಾಲ್ಮೀಕಿಯಂತೆ ಎಲ್ಲರಿಗೂ ಬೇಕಾದವ ನಾಗಿಯೂ, ಬ್ರಾಹ್ಮಣರಲ್ಲಿ ಭಕ್ತಿಯುಳ್ಳವನಾಗಿಯೂ, ವ್ಯಾಸನಲ್ಲಿದ್ದಂತಹ ಅನೇಕ ಗುಣಗಳಿಂದಲೂ, ಪರಶುರಾಮನಲ್ಲಿದ್ದಂತಹ ಅನೇಕ ಗುಣಗಳಿಂದಲೂ ಕೂಡಿದವ ನಾಗಿಯೂ ಇದ್ದನು.

೮. ಮಹಾಬಾಹುವಾದ ಅವನು ಸಪ್ತದ್ವೀಪ ಸಹಿತವಾದ ಭೂಮಿಯನ್ನೆಲ್ಲಾ ಆಳುತ್ತಿದ್ದನು.

ಯಸ್ಮಿನ್ ಗಾಥಾಂ ಪ್ರಗಾಯಂತಿ ಯೇ ಪುರಾಣವಿದೋ ಜನಾಃ ।
ಸತ್ರಾಜಿತೇ ಮಹಾಬಾಹೌ ಕೃಷ್ಣ ಧಾತ್ರೀಂ ಸಮಾಶ್ರಿತೇ ॥ ೯ ॥

ಉದಿತೋ ಭಾನುರ್ಮಾ ಯಾವದ್ಯಾವಚ್ಚ ಪ್ರತಿತಿಷ್ಠತಿ ।
ಸತ್ರಾಜಿತಂ ತು ತತ್ಸರ್ವಂ ಕ್ಷೇತ್ರಮಿತ್ಯಭಿ ಧೀಯತೇ ॥ ೧೦ ॥

ಸ ಸರ್ವರತ್ನಸಂಯುಕ್ತಾಂ ಸಪ್ತದ್ವೀಪವತೀಂ ಮಹೀಂ ।
ಶಶಾಸ ಧರ್ಮೇಣ ಪುರಾ ಚಕ್ರವರ್ತೀ ಮಹಾಬಲಃ ॥ ೧೧ ॥

ನಾನ್ಯಾಯಕೃನ್ನ ಚಾಶಕ್ತೋ ವದಾನ್ಯೋ ಬಲವತ್ತರಃ ।
ತಸ್ಯಾಸನ್ ಕುಶಲಾ ರಾಜ್ಞಃ ಸಮ್ಯಗ್ಧರ್ಮಾನುಶಾಸಿನಃ ॥ ೧೨ ॥

ಚತ್ವಾರಸ್ಸಚಿವಾಸ್ತಸ್ಯ ರಾಜ್ಞಸ್ಸತ್ರಾಜಿತಸ್ಯ ತು ।
ಬಭೂವುರಪ್ರತಿಹತಾಃ ಸದಾ ವಾತಿಬಲಸ್ಯ ತೇ ॥ ೧೩ ॥

---

೯. ಪುರಾಣ ಕಥೆಗಳನ್ನು ತಿಳಿದ ಜನರು ಅವನ ವಿಷಯದ ಗಾಥೆಯನ್ನು ಗಾನಮಾಡುತ್ತಾರೆ. ಎಲೈ ಕೃಷ್ಣನೇ! ಮಹಾಬಾಹುವಾದ ಆ ಸತ್ರಾಜಿತನು ಭೂಮಿಯಲ್ಲಿ ಜನಿಸಿರಲು

೧೦. ಸೂರ್ಯನು ಉದಯಿಸಿ ಎಷ್ಟುಕಾಲ ಆಕಾಶದಲ್ಲಿ ಪ್ರತಿಷ್ಠಿತನಾಗಿರುವನೋ, ಅಷ್ಟುಕಾಲ ಈ ನೆಲವು ಸತ್ರಾಜಿತಕ್ಷೇತ್ರವೆನಿಸಿಕೊಳ್ಳುವುದು.

೧೧. ಮಹಾಬಲವುಳ್ಳ ಈ ಚಕ್ರವರ್ತಿಯು ಸರ್ವರತ್ನಸಮೃದ್ಧವೂ, ಸಪ್ತದ್ವೀಪಗಳಿಂದ ಕೂಡಿದುದೂ ಆದ ಭೂಮಿಯನ್ನು, ಪೂರ್ವಕಾಲದಲ್ಲಿ ಧರ್ಮದಿಂದ ಆಳುತ್ತಿದ್ದನು.

೧೨. ಅವನು ಅನ್ಯಾಯವನ್ನು ಆಚರಿಸುವವನೂ ಅಲ್ಲ. ಅಶಕ್ತನೂ ಅಲ್ಲ. ದೃಢಕಾಯನೂ, ಅತ್ಯಂತ ಬಲಶಾಲಿಯೂ ಆಗಿದ್ದನು. ಆ ಸತ್ರಾಜಿತ ಮಹಾರಾಜನಿಗೆ ಧರ್ಮವನ್ನು ಅನುಶಾಸನ ಮಾಡತಕ್ಕವರೂ, ಕುಶಲರೂ ಆದ ನಾಲ್ಕುಜನ ಮಂತ್ರಿಗಳಿದ್ದರು.

೧೩–೧೪. ಅತಿಬಲನಾದ ಇವನಿಗೆ ಸಂಬಂಧಪಟ್ಟ ಆ ಮಂತ್ರಿಗಳು ಯಾವಾಗಲೂ ಅಪ್ರತಿಹತರಾಗಿ ಇದ್ದರು. ಜಗದ್ಭಾನುವೂ, ರಕ್ತಚಂದನಧಾರಿಯೂ, ರಕ್ತ

ತಸ್ಯ ಭಕ್ತಿರತೀವಾಸೀತ್ ನಿಸರ್ಗಾದೇವ ಭೂಪತೇಃ ।
ದಿವಾಕರೇ ಜಗದ್ಭಾನೌ ರಕ್ತಚಂದನಮಾಲಿನಿ ॥ ೧೪ ॥

ತಸ್ಯೋರ್ಧ್ವಮಹಿಮಾನಾಂ ಚ ವಿಲೋಕ್ಯ ಪೃಥಿವೀಪತೇಃ ।
ನ ಕೇವಲಂ ಜನಸ್ಯಾಪಿ ಹ್ಯಭವತ್ತಸ್ಯ ವಿಸ್ಮಯಃ ॥ ೧೫ ॥

ಸಂಚಿಂತಯಾಮಾಸ ನೃಪಃ ಸಮೃದ್ಧ್ಯಾ ವಿಸ್ಮಿತಸ್ತಯಾ ।
ಕಥಂ ಸ್ಯಾತ್ಸಂಪದೇಷಾ ಮೇ ಪುನರಪ್ಯನ್ಯಜನ್ಮನಿ ॥ ೧೬ ॥

ಏವಂ ಸ ಬಹುಶೋ ರಾಜಾ ತದಾ ಕೃಷ್ಣ ಮಹಾಯಶಾಃ ।
ಚಿಂತಯನ್ನಪಿ ತನ್ಮೂಲಂ ನಾಭವನ್ನಿಶ್ಚಯಾನ್ವಿತಃ ॥ ೧೭ ॥

ಯದಾ ಸ ನಿಶ್ಚಯಂ ರಾಜಾ ನ ಯಯೌ ಭಾರ್ಗವೀಪ್ರಿಯಃ ।
ತದಾ ಪಪ್ರಚ್ಛ ಧರ್ಮಜ್ಞಾನ್ ಸ ವಿಪ್ರಾನ್ ಸಮುಪಾಗತಾನ್ ॥ ೧೮ ॥

---

ಪುಷ್ಪಮಾಲೆಯನ್ನು ಧರಿಸಿದವನೂ ಆದ ಸೂರ್ಯನಲ್ಲಿ ಆ ರಾಜನಿಗೆ ಸ್ವಾಭಾವಿಕವಾಗಿಯೇ ಭಕ್ತಿ ಇದ್ದಿತು.

೧೫. ಆ ಸೂರ್ಯನ ಕೃಪೆಯಿಂದ ಉನ್ನತಸ್ಥಿತಿಗೆ ಬರುತ್ತಿರುವ ತನ್ನ ಸಂಪತ್ತನ್ನು ನೋಡಿ, ಆ ರಾಜನಿಗೆ ಮಾತ್ರವೇ ಆಶ್ಚರ್ಯವಾಯಿತೆಂದಲ್ಲ. ಆ ಪಟ್ಟಣದ ಜನಗಳಿಗೂ ಆಶ್ಚರ್ಯವಾಯಿತು.

೧೬. ಆ ರಾಜನು ತನಗೆ ಪ್ರಾಪ್ತವಾಗಿರುವ ಸಂಪತ್ತಿಗೆ ಅಚ್ಚರಿಗೊಂಡವನಾಗಿ ನನಗೆ ಇನ್ನೊಂದು ಜನ್ಮದಲ್ಲಿಯೂ ಈ ಸಂಪತ್ತೇ ಬರುವಂತೆ ಮಾಡಿಕೊಳ್ಳುವುದು ಹೇಗೆ ? ಎಂದು ಆಲೋಚಿಸಿದನು.

೧೭. ಅಯ್ಯಾ ಕೃಷ್ಣನೇ ! ಮಹಾಯಶಸ್ವಿಯಾದ ಆ ರಾಜನು ಹೀಗೆ ಬಹುವಾಗಿ ಆಲೋಚಿಸಿದರೂ ಅದರ ಮೂಲವಾವುದೆಂಬುದರಲ್ಲಿ ಏನೊಂದು ನಿಶ್ಚಯವೂ ಉಂಟಾಗಲಿಲ್ಲ.

೧೮. ಅಯ್ಯಾ ವೀರನೇ ! ಸಂಪತ್ಪ್ರಿಯನಾದ ಆ ರಾಜನು ಈ ವಿಷಯದಲ್ಲಿ ಒಂದು ನಿರ್ಣಯಕ್ಕೆ ಬರಲಿಲ್ಲ. ಆಗ ಹೆಚ್ಚು ಜನಗಳಿಲ್ಲದ ಅಂತಃಪುರದಲ್ಲಿ ಸುಖವಾಗಿದ್ದ ಮಹಾಬಾಹುವಾದ ಆ ರಾಜನು ಧರ್ಮಜ್ಞರಾದ ಬ್ರಾಹ್ಮಣರನ್ನು ತನ್ನ ಸಮೀಪಕ್ಕೆ ಕರೆಸಿದನು.

ಸರ್ವಾಂಶ್ಚ ಸುಸುಖಾಸ್ತೀರ ವಿವಿಕ್ತೇsನ್ತಃಪುರೇ ಸ್ಥಿತಃ ।
ಪ್ರಣಿಪತ್ಯ ಮಹಾಬಾಹುಃ ಗ್ರಹೀತುಂ ಶಾಸನಕ್ರಿಯಾಃ ॥ ೧೯ ॥

ವಿಶ್ವಾಸಾನುಗ್ರಹಾ ಬುದ್ಧಿಃ ಭವತಾಂ ಯದಿ ಸತ್ತಮಾಃ ।
ಯದಹಂ ಪ್ರಷ್ಟುಮಿಚ್ಛಾಮಿ ಕಿಂಚಿತ್ತದ್ವಕ್ತುಮರ್ಹಥ ॥ ೨೦ ॥

ಸದ್ವಿದ್ಯಾಖಿಲವಿಜ್ಞಾನ ಸಮ್ಯಗ್ಧೌತಾಂತರಾತ್ಮಭಿಃ ।
ಭವದ್ಭಿರ್ಯದ್ಯನುಗ್ರಾಹ್ಯಸ್ಸ್ಯಾಮಹಂ ವೇದವಿತ್ತಮಾಃ ॥ ೨೧ ॥

ತದ್ಯಥಾವನ್ಮಯಾ ಪೃಷ್ಟಾ ಭವಂತೋ ಮತ್ಪ್ರಸಾದಿನಃ ।
ವಕ್ತುಮರ್ಹಥ ವಿದ್ವಾಂಸಃ ಸರ್ವಸ್ಯೈವೋಪಕಾರಿಣಃ ॥ ೨೨ ॥

॥ ಬ್ರಹ್ಮೋವಾಚ ॥

ಯಸ್ತೇ ಮನಸಿ ಸಂದೇಹಂ ತಂ ಪೃಚ್ಛಾದ್ಯ ಮಹೀಪತೇ ।
ವದಿಷ್ಯಾಮೋ ಯಥಾ ನ್ಯಾಯಂ ಯತ್ತೇ ಮನಸಿ ವರ್ತತೇ ॥ ೨೩ ॥

---

೧೯. ಅವರಿಗೆ ನಮಸ್ಕರಿಸಿ ಈ ವಿಚಾರದಲ್ಲಿ ಅವರನ್ನು ಕೇಳಿ ಅವರು ಅಪ್ಪಣೆ ಕೊಡಿಸಿದ ಹಾಗೆ ಮಾಡುವುದಕ್ಕೋಸ್ಕರ ಅವರನ್ನು ಪ್ರಶ್ನೆ ಮಾಡಿದನು.

೨೦. ಎಲೈ ಅತ್ಯಂತ ಸತ್ಪುರುಷರೇ ! ನಾನು ಹೇಳುವ ವಿಷಯದಲ್ಲಿ ನಂಬಿಕೆಯಿಂದ ಅನುಗ್ರಹಿಸುವ ಬುದ್ಧಿಯು ಇದ್ದರೆ, ನಾನು ಯಾವುದನ್ನು ಕೇಳಲು ಅಪೇಕ್ಷಿಸುವೆನೋ ಅದನ್ನು ಸ್ವಲ್ಪಮಟ್ಟಿಗಾದರೂ ಹೇಳಲು ನೀವು ತಕ್ಕವರಾಗಿದ್ದೀರಿ.

೨೧. ಒಳ್ಳೆಯಜ್ಞಾನ, ಮತ್ತು ಎಲ್ಲಾ ಶಾಸ್ತ್ರಜ್ಞಾನ, ಇವುಗಳಿಂದ ಚೆನ್ನಾಗಿ ಮನಸ್ಸನ್ನು ಶುದ್ಧಿಮಾಡಿಕೊಂಡಿರುವ ತಮ್ಮಿಂದ ನಾನು ಅನುಗ್ರಹಿಸಲ್ಪಡತಕ್ಕವನಾಗಿದ್ದರೆ.

೨೨. ನಾನು ಕ್ರಮವಾಗಿ ಕೇಳುವ ವಿಚಾರಕ್ಕೆ ನೀವು ದಯವಿಟ್ಟು ಅನುಗ್ರಹ ಮಾಡಿ ಉತ್ತರಕೊಡಿ. ಎಲೈ ವಿದ್ವಾಂಸರೇ ! ತಾವು ಎಲ್ಲರಿಗೂ ಉಪಕಾರ ಮಾಡತಕ್ಕವರೂ ಈ ವಿಚಾರವನ್ನು ನಿರ್ಣಯಿಸಿ ಹೇಳಲು ಯೋಗ್ಯರೂ ಆಗಿದ್ದೀರಿ ಎಂದನು.

೨೩. ಬ್ರಹ್ಮನು ಹೇಳುತ್ತಾನೆ---ಎಲೈ ರಾಜನೇ ! ನಿನ್ನ ಮನಸ್ಸಿನಲ್ಲಿ ಯಾವ ಸಂದೇಹವಿದೆಯೋ ಅದನ್ನು ಕೇಳು ನಿನ್ನ ಮನಸ್ಸಿನಲ್ಲಿರುವ ಸಂಶಯವನ್ನು ಕುರಿತು ನ್ಯಾಯಾನುಸಾರವಾಗಿ ಉತ್ತರ ಹೇಳುವೆವು.

ವಯಂ ಹಿ ನೃಪಶಾರ್ದೂಲ ಭವತಾ ಪರಿತೋಷಿತಾಃ ।
ಸಮ್ಯಕ್ಪ್ರಜಾ ಪಾಲಯಿತಾ ದದತಾ ಭೋಜನಂ ಸದಾ ॥ ೨೪ ॥

ವಿಪ್ರಸ್ತುಷ್ಟೋ ಭೋಜನೇನ ಛಿಂದ್ಯಾದ್ವಾ ಧರ್ಮಸಂಶಯಂ ।
ಹಿತಂ ಚೋಪದಿಶೇದ್ವರ್ತ್ಮ ಅಹಿತಾದ್ವಾ ನಿವರ್ತಯೇತ್ ॥ ೨೫ ॥

ವಿವಕ್ಷುಮಥ ಭೂಪಾಲಂ ಭಾರ್ಯಾ ತಸ್ಯೈವ ಧೀಮತಃ ।
ಪ್ರಣಿಪಾತೇನ ಚಾಹೇದಂ ವಿನಯಾತ್ಪ್ರಣಯಾನ್ವಿತಂ ॥ ೨೬ ॥

ನ ಸ್ತ್ರೀಣಾಮವನೀಪಾಲ ವಕ್ತುಮಿಾದೃಗಿಹೇಷ್ಯತೇ ।
ತಥಾಪಿ ಭೂಪತೇ ವಕ್ಷ್ಯೇ ಸಂಪದೀದೃಕ್ಸುದುರ್ಲಭಾ ॥ ೨೭ ॥

ಭೂಯೋಽಪಿ ಸಂಶಯಾನ್ ಪ್ರಷ್ಟುಮಲಮಿಾಶೋ ಭವಾನೃಷೀನ್ ।
ನತ್ವಹಂ ಪುರುಷವ್ಯಾಘ್ರ ಸದಾಂತಃಪುರಚಾರಿಣೀ ॥ ೨೮ ॥

---

೨೪. ಅಯ್ಯಾ ರಾಜನೇ! ಪ್ರಜೆಗಳನ್ನೂ ಚೆನ್ನಾಗಿ ಪಾಲಿಸಿ ಅವರಿಗೆ ಸದಾ ಸಮೃದ್ಧಿಯಾಗಿ ಭೋಜನವನ್ನು ಕೊಡುತ್ತಿರುವ ನಿನ್ನಿಂದ ನಾವು ಚೆನ್ನಾಗಿ ಸಂತುಷ್ಟರಾಗಿದ್ದೇವೆ.

೨೫. ಬ್ರಾಹ್ಮಣನು ಭೋಜನದಿಂದ ಸಂತುಷ್ಟನಾಗಿ ಕುಳಿತರೆ ಗಾಢವಾಗಿ ಆಲೋಚಿಸಿ ಸಂದೇಹಗಳನ್ನು ಹೋಗಲಾಡಿಸಬಹುದು. ಮತ್ತು ಹಿತವಾದ ಮಾರ್ಗವನ್ನು ಉಪದೇಶಿಸಬಹುದು. ಅಹಿತವಾದ ಮಾರ್ಗದಲ್ಲಿ ಪ್ರವರ್ತಿಸುತ್ತಿದ್ದವರನ್ನು ಪ್ರತಿಬಂಧಿಸಬಹುದು ಎಂದರು.

೨೬. ಆಗ ಏನನ್ನೋ ಮಾತನಾಡಬೇಕೆಂದು ಇಚ್ಛೆಯುಳ್ಳ ರಾಜನನ್ನು ಕುರಿತು ಬುದ್ಧಿಶಾಲಿನಿಯಾದ ಅವನ ಹೆಂಡತಿಯು ನಮಸ್ಕಾರಪೂರ್ವಕವಾಗಿ ವಿನಯದಿಂದಲೂ, ಪ್ರಣಯದಿಂದಲೂ ಹೀಗೆಂದಳು.

೨೭. ಅಯ್ಯಾ ರಾಜನೇ! ಸ್ತ್ರೀಯರು ಇಂತಹ ಮಾತನ್ನು ಹೇಳುತ್ತಾರೆಂದರೆ ಯಾರೂ ನಂಬುವುದಿಲ್ಲ. ಆದರೂ ಭೂಪತಿಯೇ! ನಾನು ಹೇಳುವೆನು. ನಮಗೆ ದುರ್ಲಭವಾದ ಇಂತಹ ಸಂಪತ್ತು ಇದೆ.

೨೮–೨೯. ಇಷ್ಟು ಸಂಪತ್ತಿದ್ದರೂ ನೀನು ಋಷಿಗಳನ್ನು ಕುರಿತು ಧರ್ಮ ಸಂದೇಹಗಳನ್ನು ಕೇಳಲು ಸಿದ್ಧನಾಗಿದ್ದೀಯೆ ಎಲೈ ಪುರುಷ ಶ್ರೇಷ್ಠನೇ! ನಾನು

ತತ್ಪ್ರಸಾದಂ ಯದಿ ಭವಾನ್ಕರೋತಿ ಮಮ ಪಾರ್ಥಿವ ।
ತನ್ಮದೀಯಮೃಷೀನ್ಪೃಷ್ಟ್ವಂ ಸಂದೇಹಂ ಪಾರ್ಥಿವಾರ್ಹಸಿ ॥ ೨೯ ॥

॥ ಸತ್ರಾಜಿತ ಉವಾಚ ॥

ಬ್ರೂಹಿ ಸುಭ್ರೂರ್ಮತಂ ಯತ್ತೇ ಪೃಷ್ಟವ್ಯಾ ಯನ್ಮಯಾ ದ್ವಿಜಾಃ ।
ಭೂಯೋಽಹಮಾತ್ಮಸಂದೇಹಂ ಪ್ರಕ್ಷ್ಯಾಮ್ಯೇತ ದ್ವಿಜೋತ್ತಮಾ
॥ ೩೦ ॥

॥ ವಿಮಲವತ್ಯುವಾಚ ॥

ಶ್ರೂಯಂತೇ ಪೃಥಿವೀಪಾಲ ನೃಪಾಯೇ ತು ಚಿರಂತನಾಃ ।
ಯೇಷಾಂ ಚ ಸಂಪದ್ಭೂಪಾಲ ಯಥಾ ತೇಽದ್ಯ ಕಿಲಾಭವತ್ ॥ ೩೧ ॥

ತದೀದೃಕ್ಸಂಪದೋ ಧಾಮ ತವಾಶೇಷಂ ಕ್ಷಿತೀಶ್ವರ ।
ಯೇನ ಕರ್ಮವಿಪಾಕೇನ ತದ್ವದಂತು ಮಹರ್ಷಯಃ ॥ ೩೨ ॥

---

ನಿನ್ನ ಅಂತಃಪುರವಾಸಿನಿಯಾದ ನಿನ್ನ ಧರ್ಮಪತ್ನಿಯಲ್ಲವೇ? ಆದ್ದರಿಂದ ನೀನು ನನಗೆ ಅನುಗ್ರಹ ಮಾಡುವುದಾದರೆ, ನನ್ನ ಸಂದೇಹಗಳ ವಿಚಾರಗಳನ್ನೂ ಕುರಿತು ನೀನು ಋಷಿಗಳನ್ನು ಕೇಳಬೇಕು ಎಂದಳು.

೩೦. ಸತ್ರಾಜಿತನು ಹೇಳುತ್ತಾನೆ—ಎಲೌ ನಾರೀಮಣಿಯೆ! ಏನನ್ನು ಕುರಿತು ನಾನು ಬ್ರಾಹ್ಮಣರನ್ನು ಪ್ರಶ್ನೆ ಮಾಡಬೇಕು ಎಂದನು. ನಿನ್ನ ಅಭಿಪ್ರಾಯ ನನ್ನ ಸಂದೇಹಗಳನ್ನು ಕುರಿತು ಮತ್ತೊಂದು ಸಲ ದ್ವಿಜಶ್ರೇಷ್ಠರನ್ನು ಕೇಳುತ್ತೇನೆ ಈಗ ನೀನು ಪ್ರಶ್ನಿಸಬೇಕಾದ್ದನ್ನು ಹೇಳು ಎಂದನು.

೩೧. (ರಾಣಿಯಾದ) ವಿಮಲವತಿಯು ಹೇಳುತ್ತಾಳೆ—ಎಲೈ ರಾಜನೇ! ಪೂರ್ವದಲ್ಲಿ ಪ್ರಸಿದ್ಧರಾದ ಯಾವ ಯಾವ ರಾಜರು ಇದ್ದರೆಂದು ಕೇಳಿದ್ದೇವೋ ಅವರುಗಳಲ್ಲಿದ್ದ ಸಂಪತ್ತೆಲ್ಲವೂ ನಿನಗೆ ಉಂಟಾಗಿಯೇ ಇದೆ.

೩೨. ಅಯ್ಯಾ ಭೂಪತಿಯೇ! ಸಮಸ್ತವಾದ ಇಷ್ಟೊಂದು ಸಂಪತ್ತಿನ ಪ್ರಾಪ್ತಿಯು ನಿನ್ನ ಯಾವ ಕರ್ಮದ ಪರಿಪಾಕದಿಂದ ಉಂಟಾಯಿತು? ಅದನ್ನು ಮಹರ್ಷಿಗಳು ಹೇಳಲಿ.

**ಅಹಂ ಚ ಭವತೋ ಭಾರ್ಯಾ ಧರ್ಮಸೀಮಂತಿನೀ ವರಾ ।**
**ಅತೀವ ಕರ್ಮಣಾ ಯೇನ ತಜ್ಜ್ಞಾತುಂ ಮೇ ಕುತೂಹಲಂ　　॥ ೩೩ ॥**

**ತಥಾ ಸಂಪತ್ಸಮೃದ್ಧತ್ವಂ ಅನ್ಯೇಷ್ವಪಿ ಹಿ ವಿದ್ಯತೇ ।**
**ನಿರಸ್ತಾತಿಶಯಂ ತ್ವೇತನ್ನೂನಂ ನಾಲ್ಪೇನ ಕರ್ಮಣಾ　　॥ ೩೪ ॥**

**ತದನ್ಯಜನ್ಮಚರಿತಂ ನರನಾಥ ನಿಜಂ ಭವಾನ್ ।**
**ಮುನೀನ್ ಪೃಚ್ಛ ತ್ವಯಾ ಚಾದ್ಯ ಯನ್ಮಯಾ ಚ ಪುರಾ ಕೃತಂ　　॥ ೩೫ ॥**

**॥ ಬ್ರಹ್ಮೋವಾಚ ॥**

**ಸ ತಥೋಕ್ತಸ್ತಯಾ ರಾಜಾ ಪತ್ನ್ಯಾ ವಿಸ್ಮಿತಮಾನಸಃ ।**
**ಮುನೀನಾಂ ಪುರತೋ ಭಾರ್ಯಾಂ ಪ್ರಶಂಸನ್ವಾಕ್ಯಮಬ್ರವೀತ್　　॥ ೩೬ ॥**

**ಸಾಧು ದೇವಿ ಮತಂ ಯನ್ಮೇ ತ್ವಯಾ ಯದಿದಮೀರಿತಂ ।**
**ಸತ್ಯಂ ಮುನಿವಚಃ ಪುಂಸಾಂ ಸಾರ್ಧಂ ವೈ ಗೃಹಿಣೀ ಯಥಾ　　॥ ೩೭ ॥**

---

೩೩. ನಾನು ಮಾಡಿದ ಯಾವ ಪ್ರಬಲವಾದ ಕರ್ಮದ ಸಹಾಯದಿಂದ ನಿನ್ನ ಸಹಧರ್ಮಿಣಿಯಾದ ಹೆಂಡತಿಯಾದೆನು? ಅದನ್ನೂ ತಿಳಿಯಬೇಕೆಂದು ನನಗೆ ಕುತೂಹಲವಿದೆ.

೩೪. ಸಂಪತ್ಸಮೃದ್ಧಿಯು ಇತರರಲ್ಲಿಯೂ ಇದೆ. ಆದರೆ ಅವೆಲ್ಲವನ್ನೂ ಮೀರಿಸಿದ ನಿನ್ನ ಸಂಪತ್ತು ಈ ಒಂದು ಜನ್ಮದಲ್ಲಿ ಆಚರಿಸಿದ ಅಲ್ಪ ಸ್ವಲ್ಪ ಕರ್ಮ ಫಲದಿಂದ ಆಗಿರಲಾರದು.

೩೫. ಎಲೈ ರಾಜನೇ! ಆದ್ದರಿಂದ ನಿನ್ನ ಸ್ವಂತವಾದ ಜನ್ಮಾಂತರದ ಚರಿತ್ರೆಯನ್ನು ಕುರಿತೂ ಋಷಿಗಳನ್ನು ಪ್ರಶ್ನೆಮಾಡು, ಅಷ್ಟೇ ಅಲ್ಲದೆ ನಾನೂ ನೀನೂ ಸಹ ಪೂರ್ವದಲ್ಲಿ ಏನನ್ನು ಆಚರಿಸಿದ್ದೆವೆಂಬುದನ್ನೂ ಈಗ ಕೇಳು ಎಂದಳು.

೩೬. ಬ್ರಹ್ಮನು ಹೇಳುತ್ತಾನೆ—ಹೆಂಡತಿಯು ಹೀಗೆ ಹೇಳಿದುದನ್ನು ಕೇಳಿ ರಾಜನಾದ ಸತ್ರಾಜಿತನು ಆಶ್ಚರ್ಯಗೊಂಡವನಾಗಿ ಋಷಿಗಳ ಸಮ್ಮುಖದಲ್ಲಿ ಪತ್ನಿಯನ್ನು ಶ್ಲಾಘಿಸುತ್ತಾ ಹೀಗೆಂದನು.

೩೭. ಎಲೌ ರಾಣಿಯೇ! ನೀನು ಹೇಳಿದುದು ಸಾಧುವಾಗಿದೆ. ನನಗೂ ಒಪ್ಪಿತು. ಹೆಂಡತಿಯು ಗಂಡನ ಅರ್ಧಾಂಗಿಯೆಂದು ಋಷಿಗಳು ಹೇಳುವ ಮಾತು ಯಥಾರ್ಥವು.

ಸೋಽಹಮೇತನ್ಮಹಾಭಾಗೇ ಪೃಚ್ಛಾಮ್ಯೇತಾನ್ಮಹಾಮುನೀನ್ ।
ತೇಷಾಮವಿದಿತಂ ಕಿಂಚಿತ್ತ್ರಿಷು ಲೋಕೇಷು ನಾಸ್ತಿ ಹಿ ॥ ೩೮ ॥

ಏವಮುಕ್ತ್ವಾ ಪ್ರಿಯಾಂ ರಾಜಾ ಪ್ರಣಿಪತ್ಯ ಚ ತಾನೃಷೀನ್ ।
ಯಥಾವದೇತದಖಿಲಂ ಪಪ್ರಚ್ಛ ಧರಣೀಶ್ವರಃ ॥ ೩೯ ॥

॥ ರಾಜೋವಾಚ ॥

ಭಗವಂತೋ ಮಮಾಶೇಷಂ ಪ್ರಸಾದಾದ್ಧೃತಮಾನಸಾಃ ।
ಕಥಯಂತು ಯಥಾವೃತ್ತಂ ಯನ್ಮಯಾ ಸುಕೃತಂ ಕೃತಂ ॥ ೪೦ ॥

ಕೋಽಹಮಾಸಂ ಪುರಾ ವಿಪ್ರಾಃ ಕಿಂಸ್ವಿತ್ಕರ್ಮ ಮಯಾ ಕೃತಂ ।
ಕಿಂ ವಾನಯಾ ತು ಚಾರ್ವಂಗ್ಯಾ ಮಮ ಪತ್ನ್ಯಾ ಕೃತಂ ದ್ವಿಜಾಃ ॥ ೪೧ ॥

ಯೇನಾವಯೋರಿಯಂ ಲಕ್ಷ್ಮೀಃ ಮರ್ತ್ಯಲೋಕೇ ಸುದುರ್ಲಭಾ ।
ಚತ್ವಾರಶ್ಚಾಪ್ರತಿಹತಾ ಅಮಾತ್ಯಾ ಮಮ ಗಚ್ಛತಃ ॥ ೪೨ ॥

---

೩೮. ಆದುದರಿಂದ ಮಹಾಭಾಗ್ಯಶಾಲಿನಿಯೇ! ನೀನು ಹೇಳಿದ ಈ ವಿಷಯವನ್ನು ಕುರಿತು ಈ ಮಹಾಮುನಿಗಳನ್ನು ಪ್ರಶ್ನೆಮಾಡುತ್ತೇನೆ. ಅವರಿಗೆ ತಿಳಿಯದುದು ಮೂರುಲೋಕಗಳಲ್ಲಿಯೂ ಯಾವುದೂ ಇಲ್ಲ.

೩೯. ಹೀಗೆಂಬದಾಗಿ ರಾಜನು ಹೆಂಡತಿಗೆ ಹೇಳಿ ಆಮೇಲೆ ಆ ಋಷಿಗಳಿಗೆ ನಮಸ್ಕರಿಸಿ ಕ್ರಮವಾಗಿ ಇದೆಲ್ಲವನ್ನೂ ಪ್ರಶ್ನಿಸಿದನು.

೪೦. ರಾಜನು ಹೇಳುತ್ತಾನೆ— ಪೂಜ್ಯರೇ! ನೀವು ನನ್ನನ್ನು ಅನುಗ್ರಹಿಸುವುದರಲ್ಲಿ ಆದರಯುಕ್ತವಾದ ಮನಸ್ಸುಮಾಡಿ. ನಾನು ಹಿಂದೆ ಯಾವ ಕರ್ಮವನ್ನಾಚರಿಸಿದ್ದೆನು?

೪೧. ಆ ವಿಚಾರವನ್ನು ಇದ್ದುದ್ದು ಇದ್ದಹಾಗೆ ಹೇಳಿ. 'ಓ' ದ್ವಿಜಶ್ರೇಷ್ಠರೇ! ಪೂರ್ವಜನ್ಮದಲ್ಲಿ ನಾನು ಯಾವ ಜನ್ಮ ಹೊಂದಿದ್ದೆನು? ಮತ್ತು ಆಗ ನಾನು ಯಾವ ಕರ್ಮ ಮಾಡಿದ್ದೆನು?

೪೨. ಸುಂದರಿಯಾದ ಈ ನನ್ನ ಹೆಂಡತಿಯು ಯಾವ ಕರ್ಮವನ್ನಾಚರಿಸಿದ್ದಳು? ನಮ್ಮಿಬ್ಬರಿಗೂ ಮನುಷ್ಯ ಲೋಕದಲ್ಲಿ ದುರ್ಲಭವಾದ ಈ ಸಂಪತ್ತು ಯಾವ ಕರ್ಮ ಮಾಡಿದ್ದರಿಂದ ದೊರೆತಿದೆ?

ಅಶೇಷಾ ಭೂಭೃತೋ ವಶ್ಯಾಃ ಧನಸ್ಯಾಂತೋ ನ ವಿದ್ಯತೇ ।
ಬಲಂ ಚೈವಾಪ್ರತಿಹತಂ ಶರೀರಾರೋಗ್ಯಮೇವ ಚ ॥ ೪೩ ॥

ಪ್ರತಿಭಾತಿ ಚ ಮೇ ಕಾಂತ್ಯಾ ಭಾರ್ಯಾಯಾಮಖಿಲಂ ಜಗತ್ ।
ಮಮಾಪಿ ವಪುಷಸ್ತೇಜೋ ನ ಕಶ್ಚಿತ್ಸಹತೇ ದ್ವಿಜಾಃ ॥ ೪೪ ॥

ಸೋಽಹಾಮಿಚ್ಛಾಮಿ ತಜ್‌ಜ್ಞಾತುಂ ತಥೈವೇಯಮನಿಂದಿತಾ ।
ನಿಜಾನುಷ್ಠಾನಮಖಿಲಂ ಯಸ್ಯಾಶೇಷಮಿದಂ ಫಲಂ ॥ ೪೫ ॥

॥ ಬ್ರಹ್ಮೋವಾಚ ॥

ಇತಿ ಪೃಷ್ಟಾ ನರೇಂದ್ರೇಣ ಸಮಸ್ತಾಸ್ತೇ ತಪೋಧನಾಃ ।
ಪರಾವಸುಮಥೋಚುಸ್ತೇ ಕಥ್ಯತಾಮಸ್ಯ ಭೂಭೃತಃ ॥ ೪೬ ॥

---

೪೩. ನಾನು ಎಲ್ಲಿಗಾದರೂ ಹೊರಟರೆ ನನ್ನ ಹಿಂದೆ ಅಪ್ರತಿಹತರಾದ ನಾಲ್ವರು ಮಂತ್ರಿಗಳು ಹಿಂಬಾಲಿಸಿ ಬರುತ್ತಾರೆ. ಎಲ್ಲ ರಾಜರುಗಳೂ ನನ್ನ ಅಧೀನರಾಗಿದಾರೆ. ನನ್ನ ಸಂಪತ್ತಿಗೆ ಮಿತಿಯಿಲ್ಲ. ನನ್ನ ಶರೀರದಲ್ಲಿ ಅಪ್ರತಿಹತವಾದ ಬಲವೂ ಸಂಪೂರ್ಣ ಆರೋಗ್ಯವೂ ಇದೆ.

೪೪. ಭಾರ್ಯೆಯಲ್ಲಿರುವ ಪುರುಷವಿಷಯಕವಾದ ಕಾಮಾಪೇಕ್ಷೆಯಿಂದ ಸಮಸ್ತ ಜಗತ್ತು ಉತ್ಪತ್ತಿಯಾಗುತ್ತದೆ ಎಂದು ನನಗೆ ತೋರುತ್ತದೆ. ಸ್ವಾಮಿ ದ್ವಿಜಶ್ರೇಷ್ಠರೇ! ದುಸ್ಸಹವಾದ ಶರೀರ ತೇಜಸ್ಸು (ಪರಾಕ್ರಮವು) ನನಗೂ ಇದೆ.

೪೫. ನನಗೆ ಲಭ್ಯವಾಗಿರುವ ಈ ಸಮಸ್ತ ವಿಷಯಗಳೂ ನಮ್ಮ ಯಾವ ಕರ್ಮದ ಅನುಷ್ಠಾನದ ಫಲವಾಗಿಯೋ ಆ ವಿಷಯವನ್ನು ತಿಳಿಯಲು ನಾನೂ,ಅನಿಂದಿತೆಯಾದ ಈ ನನ್ನ ಪತ್ನಿಯೂ ಸಹ ಕುತೂಹಲಿಗಳಾಗಿದ್ದೇವೆ ಎಂದನು.

೪೬. ಬ್ರಹ್ಮನು ಹೇಳುತ್ತಾನೆ—ರಾಜನು ಹೀಗೆ ಪ್ರಶ್ನಿಸುತ್ತಲೇ ಸಮಸ್ತರಾದ ಆ ಋಷಿಗಳು ಪರಾವಸು ಎಂಬ ಮಹನೀಯರನ್ನು ಕುರಿತು ಈ ಮಹಾರಾಜನ ಪ್ರಶ್ನೆಗೆ ಮಹನೀಯರಾದ ತಾವು ಉತ್ತರವನ್ನು ಅಪ್ಪಣೆಕೊಡಿಸಬೇಕೆಂದು ಪ್ರಾರ್ಥಿಸಿದರು.

ಚೋದಿತಸ್ತೋಽಪಿ ಧರ್ಮಜ್ಞೋ ಮಹಾನ್ ಶೂರೋ ಮಹಾಮತಿಃ ।
ಯೋಗಮಾಸ್ಥಾಯ ಸುಚಿರಂ ಯಥಾವದ್ಧ್ಯತಮಾನಸಃ ॥ ೪೭ ॥

ಜ್ಞಾತವಾನ್ ನೃಪತೇಸ್ತಸ್ಯ ಪೂರ್ವದೇಹವಿಚೇಷ್ಟಿತಂ ।
ಸ ತಮಾಹ ಮುನಿಭಿರ್ಭೂಪಂ ವಿಜ್ಞಾನೇಚ್ಛುಂ ಮಹಾಮತಿಂ ॥ ೪೮ ॥

ಸತ್ರಾಜಿತಂ ಮಹಾತ್ಮಾನಂ ಜಿತಶತ್ರುಂ ಮನಸ್ವಿನಂ ।
ಸಪತ್ನೀಕಂ ಮಹಾಬುದ್ಧಿಂ ವಿಶುದ್ಧಂ ಸತ್ಯವಾದಿನಂ ॥ ೪೯ ॥

॥ ಪರಾವಸುರುವಾಚ ॥

ಶೃಣು ಭೂಪಾಲ ಸಕಲಂ ಯಸ್ಯೇದಂ ಕರ್ಮಣಃ ಫಲಂ ।
ತವ ರಾಜ್ಯಾದಿಕಂ ಸುಭ್ರೂರ್ಯೇಯಂ ಚಾಸೀನ್ಮಹೀಪತೇ ॥ ೫೦ ॥

ತ್ವಮಾಸೀಃ ಶೂದ್ರಜಾತೀಯಃ ಪರಹಿಂಸಾಪರಾಯಣಃ ।
ಕುಷ್ಠಾರ್ತೋ ದಂಡಪಾರುಷ್ಯೇ ನಿರ್ದಯಸ್ಸರ್ವಜಂತುಷು ॥ ೫೧ ॥

---

೪೭. ಧರ್ಮಜ್ಞನೂ, ಮಹಾಶೂರನೂ, ಮಹಾಬುದ್ಧಿಶಾಲಿಯೂ ಆದ ಪರಾವಸುವು, ಋಷಿಗಳಿಂದ ಪ್ರೇರಿತನಾಗಿ ಕ್ರಮವಾಗಿ ಮನಸ್ಸನ್ನು ತಕ್ಕಮಟ್ಟಿಗೆ ನಿಗ್ರಹಿಸಿ ಯೋಗಬಲದ ದಿವ್ಯದೃಷ್ಟಿಯಿಂದ ವೀಕ್ಷಿಸಿದನು.

೪೮-೪೯. ಹಾಗೆ ನೋಡಿ ಅವನ ಪೂರ್ವಜನ್ಮ ದೇಹದಿಂದ ಮಾಡಿದ ಕರ್ಮ ವ್ಯಾಪಾರವನ್ನು ತಿಳಿದುಕೊಂಡನು. ವಿಜ್ಞಾನೇಚ್ಛುವಾಗಿ ತನ್ನನ್ನು ಪ್ರಶ್ನಿಸಿದ ಮಹಾಮತಿಯೂ, ಮಹಾತ್ಮನೂ, ಶತ್ರುಗಳನ್ನು ಗೆದ್ದವನೂ, ಸ್ಥಿರಚಿತ್ತನೂ, ಪತ್ನೀಸಹಿತನೂ, ಬುದ್ಧಿಶಾಲಿಯೂ, ವಿಶುದ್ಧನೂ, ಸತ್ಯವಾದಿಯೂ ಆದ ಸತ್ರಾಜಿತನನ್ನು ಕುರಿತು ಪರಾವಸುವು ಇಂತೆಂದನು.

೫೦. ಪರಾವಸುವು ಹೇಳುತ್ತಾನೆ—ಎಲೈ ರಾಜನೇ! ಇದೆಲ್ಲವೂ ಯಾವ ಕರ್ಮದ ಫಲವೆಂಬುದನ್ನು ಹೇಳುವೆನು. ಮತ್ತು ನಿನಗೆ ಈ ರಾಜ್ಯ ಮುಂತಾದುವು ಎಲ್ಲಿಂದ ಬಂದವು; ಈ ಸ್ತ್ರೀಯು ಹೇಗೆ ನಿನ್ನ ಕೈಸೇರಿದಳು; ಎಂಬುದನ್ನೂ ಹೇಳುವೆನು ಕೇಳು.

೫೧. ನೀನು ಹಿಂದಿನ ಜನ್ಮದಲ್ಲಿ ಇತರರನ್ನು ಹಿಂಸೆಪಡಿಸುವುದರಲ್ಲಿ ಆಸಕ್ತನೂ, ಕುಷ್ಠರೋಗಪೀಡಿತನೂ, ಸರ್ವಪ್ರಾಣಿಗಳನ್ನೂ ಕ್ರೂರವಾಗಿ ಶಿಕ್ಷಿಸುವಂತಹ ನಿರ್ದಯನೂ, ಆದ ಶೂದ್ರ ಜಾತಿಯವನಾಗಿದ್ದೆ.

**ಇಯಂ ಚ ಭವತೋ ಭಾರ್ಯಾ ಪೂರ್ವಮುಸ್ಯಾಯತೇಕ್ಷಣಾ ।**
**ನಿತ್ಯಂ ಬಭೂವ ತ್ವಚ್ಚಿತ್ತಾ ಭವಚ್ಛುಶ್ರೂಷಣೇ ರತಾ ॥ ೫೨ ॥**

**ಪತಿವ್ರತಾ ಮಹಾಭಾಗಾ ಭರ್ತ್ಸ್ಯಮಾನಾಪಿ ನಿಷ್ಠುರಂ ।**
**ತ್ವದ್ವಾಕ್ಯೇಷು ಚ ಸರ್ವೇಷು ವೀರ ಕರ್ಮಸು ಚೋದ್ಯತಾ ॥ ೫೩ ॥**

**ನೈಶ್ವರ್ಯಾದಸಹಾಯಸ್ಯ ತ್ಯಜ್ಯಮಾನಸ್ಯ ಬಂಧುಭಿಃ ।**
**ಕ್ಷಯಂ ಜಗಾಮ ಯೋಽರ್ಥೋಽಭೂತ್ಸಂಚಿತಃ ಪ್ರಪಿತಾಮಹೈಃ ॥ ೫೪ ॥**

**ತಸ್ಮಿನ್ ಕ್ಷೀಣೇ ಕೃಷಿಪರಸ್ತ್ವಮಾಸೀಃ ಪೃಥಿವೀಪತೇ ।**
**ಸಾಪಿ ಕರ್ಮವಿಪಾಕೇನ ಕೃಷಿರ್ವಿಫಲತಾಂ ಗತಾ ॥ ೫೫ ॥**

**ತತೋ ನಿಃಸ್ವಂ ಪರಿಕ್ಷೀಣಂ ಪರೇಷಾಂ ಭೃತ್ಯತಾಂ ಗತಂ ।**
**ತತ್ಯಾಜ ಸಾಧ್ವೀ ನೇಯಂ ತ್ವಾಂ ತ್ಯಜ್ಯಮಾನಾಪಿ ಪಾರ್ಥಿವ ॥ ೫೬ ॥**

---

೫೨. ವಿಶಾಲಾಕ್ಷಿಯಾದ ಈ ನಿನ್ನ ಹೆಂಡತಿಯೂ ನಿನ್ನಲ್ಲೇ ಮನಸ್ಸಿಟ್ಟು ಪೂರ್ವದಿಂದಲೂ ನಿನ್ನ ಸೇವೆಯನ್ನು ಮಾಡುತ್ತಿದ್ದಳು.

೫೩. ಪತಿವ್ರತೆಯೂ, ಮಹಾಭಾಗ್ಯಶಾಲಿನಿಯೂ ಆದ ಇವಳು, ನಿನ್ನಿಂದ ಕ್ರೂರವಾಗಿ ತಿರಸ್ಕರಿಸಲ್ಪಟ್ಟರೂ ನಿನ್ನ ಎಲ್ಲ ವಾಕ್ಯಗಳನ್ನೂ ಸಹಿಸಿ ಕಾರ್ಯಗಳಲ್ಲಿ ಉದ್ಯುಕ್ತಳಾಗಿರುತ್ತಿದ್ದಳು.

೫೪. ಐಶ್ವರ್ಯವಿಲ್ಲದುದರಿಂದ ನೀನು ಅಸಹಾಯನಾಗಿ ಬಂಧುಗಳಿಂದ ತ್ಯಜಿಸಲ್ಪಡುತ್ತಿದ್ದೆ. ನಿನ್ನ ಮುತ್ತಾತಂದಿರಿಂದ ಪೂರ್ವಸಂಚಿತವಾದ ಯಾವ ಅರ್ಥವಿದ್ದು ಕ್ಷಯ ಹೊಂದಿತೋ, ಅದು ಹೋದಮೇಲೆ ನೀನು ಕೃಷಿಪರನಾದೆ. ನಿನ್ನ ಪೂರ್ವ ಕರ್ಮ ವಿಪಾಕದಿಂದ ಆ ಕೃಷಿಯೂ ವಿಫಲವಾಯಿತು.

೫೫-೫೬. ಅಯ್ಯಾ ರಾಜನೇ! ಸ್ವತ್ತನ್ನು ಕಳೆದುಕೊಂಡು ಕ್ಷೀಣಗತಿಗೆ ಬಂದ ನೀನು ಇತರರ ಭೃತ್ಯತ್ವವನ್ನು ಹೊಂದಿದೆ. ಅದರಿಂದ ತಾನು ಭೃತ್ಯತ್ವಕ್ಕೆ ಒಳಪಡದೆ ಬಿಡುಗಡೆಹೊಂದಿದ್ದರೂ ಪತಿವ್ರತೆಯಾದ ಆಕೆಯು ನಿನ್ನನ್ನು ಬಿಡಲಿಲ್ಲ.

ಅನಯಾ ತು ಸಮಂ ಸಾಧ್ವ್ಯಾ ಭಾನೋರಾ ಸಥೇ ತ್ವಯಾ ।
ಕೃತಂ ಶುಶ್ರೂಷಣಂ ಸಾಧು ಭಕ್ತ್ಯಾ ಸಮ್ಮಾರ್ಜನಾದಿಕಂ ॥ ೫೭ ॥

ನಿಸ್ನೇಹಃ ಸರ್ವಕಾಮೇಭ್ಯಸ್ತನ್ಮಯಸ್ತ್ವಂ ತದರ್ಪಣಃ ।
ಅಹನ್ಯಹನಿ ವಿಸ್ರಂಭಾತ್ತಸ್ಮಿನ್ನಾವಸಥೇ ರವೇಃ ॥ ೫೮ ॥

ಕಾನ್ಯಕುಜ್ಜಪುರೇ ವೀರ ಸಮ್ಯಕ್ ಶುಶ್ರೂಷಿತಂ ತ್ವಯಾ ।
ದಿವಾಕರಾಲಯೇ ನಿತ್ಯಂ ಕೃತಂ ತನ್ಮಾರ್ಜನಂ ತ್ವಯಾ ॥ ೫೯ ॥

ತಥೈವಾಭ್ಯುಕ್ಷಣಂ ಭೂಪ ಕೃತಂ ಜ್ಯೈವಾನುಲೇಪನಂ ।
ಪತ್ನ್ಯಾನಯಾ ನೃಪ ತಥಾ ಯುಷ್ಮಚ್ಚಿತ್ತಾನುವೃತ್ತಯಾ ॥ ೬೦ ॥

ಕಾರಿತಂ ಶ್ರವಣಂ ಪುಣ್ಯಮಿತಿಹಾಸಪುರಾಣಯೋಃ ।
ದತ್ತ್ವಾಂಗುಲೀಯಕಂ ರಾಜನ್ಪಿತೃದತ್ತಂ ತು ವಾಚಕೇ ॥ ೬೧ ॥

---

೫೭. ನೀನು ಈ ಪತಿವ್ರತೆಯ ಸಮೇತ ಸೂರ್ಯದೇವಾಲಯದಲ್ಲಿ ಗುಡಿಸುವುದೇ ಮುಂತಾದ ಶುಶ್ರೂಷಣ ಕಾರ್ಯವನ್ನು ಚೆನ್ನಾಗಿ ಮಾಡಿದೆ.

೫೮. ಅಯ್ಯಾ ವೀರನೇ! ನೀನು ಸೂರ್ಯಮಯನಾಗಿ ನಿತ್ಯವೂ ಸೂರ್ಯನಲ್ಲಿ ಸರ್ವವನ್ನೂ ಅರ್ಪಣಮಾಡಿದವನಾಗಿ ಸರ್ವಕಾಮುಗಳಲ್ಲಿಯೂ ಅನಾಸಕ್ತನಾಗಿದ್ದೆ.

೫೯. ಮತ್ತು ಮುಂದೆ ಒಳ್ಳೆಯದಾಗುವುದೆಂಬ ನಂಬಿಕೆಯಿಂದ ಕನ್ಯಾಕುಬ್ಜವೆಂಬ ಪಟ್ಟಣದ ಆ ಸೂರ್ಯದೇವಾಲಯದಲ್ಲಿ ಪ್ರತಿನಿತ್ಯವೂ ಚೆನ್ನಾಗಿ ಶುಶ್ರೂಷೆ ಮಾಡಿದೆ. ಸೂರ್ಯದೇವಾಲಯದಲ್ಲಿ ನೀನು ನಿತ್ಯವೂ ಸಮ್ಮಾರ್ಜನೆ ಮಾಡಿದೆ.

೬೦. ಅಯ್ಯಾ ರಾಜನೇ! ನಿನ್ನ ಚಿತ್ತವನ್ನು ಅನುಸರಿಸಿ ನಡೆಯುವ ಸ್ವಭಾವವುಳ್ಳ ಈ ನಿನ್ನ ಪತ್ನಿಯು, ಆ ದೇವಾಲಯದಲ್ಲಿ ನೀರು ಚಮುಕಿಸುವುದು, ಸಾರಿಸುವುದು, ಇವೇ ಮುಂತಾದ ಕೆಲಸಗಳನ್ನು ಮಾಡಿದಳು.

೬೧. ನಿಮ್ಮ ತಂದೆಯು ನಿನಗೆ ಕೊಟ್ಟಿದ್ದ ಉಂಗುರವನ್ನು ಪುರಾಣ ವಾಚಕನಿಗೆ ಸಮರ್ಪಿಸಿ ನಿನ್ನ ಹೆಂಡತಿಗೆ ಇತಿಹಾಸ, ಪುರಾಣಗಳನ್ನು ಶ್ರವಣ ಮಾಡಿಸಿದೆ,

**ಅಹನ್ಯಹನಿ ಯತ್ಕರ್ಮ ಯುವಯೋರ್ಯತ್ರ ಕುರ್ವತೋಃ ।**
**ತತ್ರೈವ ತನ್ಮಯತ್ವೇನ ಪಾಪಹಾನಿರಜಾಯತ ॥ ೬೨ ॥**

**ಭಾನೋಃ ಕಾರ್ಯಂ ಮಯಾ ಕಾರ್ಯಂ ಪರಂ ಶುಶ್ರೂಷಣಂ ತಥಾ ।**
**ನಾಪ್ರಭಾತಂ ಪ್ರಭಾತಂ ವಾ ಚಿಂತೇಯಮಭವನ್ನಿಶಿ ॥ ೬೩ ॥**

**ಏವಮಾಯತನಂ ರಮ್ಯಮಿತ್ಯೇವಂ ಚ ಸುಖಾವಹಂ ।**
**ಸೂರ್ಯವಚ್ಚೈವಮೇತತ್ಸ್ಯಾದಿತ್ಯಾಸೀತ್ತೇ ಮನಸ್ಯಹೋ ॥ ೬೪ ॥**

**ಯೋಗಿನಾಂ ಸುಖದಂ ಕರ್ಮ ತಥೈವ ಸುಖಮಿತ್ಯಪಿ ।**
**ಭವಚ್ಚಿತ್ತಮಭೂತ್ತತ್ರ ಯೋಗಕರ್ಮಣ್ಯಹರ್ನಿಶಂ ॥ ೬೫ ॥**

**ಏವಂ ತನ್ಮನಸಸ್ತತ್ರ ಕೃತೋದ್ಯೋಗಸ್ಯ ಪಾರ್ಥಿವ ।**
**ಭೂತಾನುಮಾನಿನಃ ಸಮ್ಯಗ್ಯಥೋಕ್ತಾಧಿಕಕಾರಿಣಃ ॥ ೬೬ ॥**

---

೬೨　ಎಲೈ ರಾಜನೇ! ಪ್ರತಿದಿನವೂ ನೀವಿಬ್ಬರೂ ಯಾವ ದೇವಾಲಯದಲ್ಲಿ ಸೂರ್ಯ ಸೇವಾಕಾರ್ಯ ಮಾಡುತ್ತಿದ್ದಿರೋ, ಅಲ್ಲಿಯೇ ನೀವು ಆ ಸೂರ್ಯಮಯರಾದುದರಿಂದ ನಿಮ್ಮ ಸಮಸ್ತ ಪಾಪಗಳೂ ನಾಶವಾದುವು.

೬೩. "ನಾನು ಸೂರ್ಯ ಸೇವಾಕಾರ್ಯ ಮಾಡಬೇಕು. ಉತ್ಕೃಷ್ಟವಾದ ಶುಶ್ರೂಷಣ ಮಾಡಬೇಕು" ಎಂಬ ತವಕದಲ್ಲಿ ರಾತ್ರಿ ಮಲಗಿದ್ದಾಗ ಬೆಳಗಾಯಿತೇ, ಬೆಳಗಾಗಲಿಲ್ಲವೇ ಎಂಬ ಆಲೋಚನೆಯೂ ಸಹ ನಿನ್ನ ಮನಸ್ಸಿಗೆ ಉಂಟಾಗುತ್ತಿರಲಿಲ್ಲ.

೬೪. ಆಹಾ ಈ ದೇವಾಲಯವು ಎಷ್ಟು ರಮ್ಯವಾಗಿದೆ. ಹೀಗೆ ಈ ದೇವಾಲಯವು ಇದ್ದರೆ ಎಷ್ಟು ಸುಖಕರವಾಗಿದೆ. ಆಹಾ! ಇದು ಸೂರ್ಯಸ್ವರೂಪವಾಗಿಯೇ ಇದೆ. ಎಂಬ ಭಾವನೆಯು ನಿಮ್ಮ ಮನಸ್ಸಿನಲ್ಲಿ ಉಂಟಾಗುತ್ತಿತ್ತು.

೬೫. ಈ ಸೂರ್ಯಾರಾಧನ ಕರ್ಮವೇ ಸುಖಪ್ರದವೂ, ಸುಖಸ್ವರೂಪವೂ ಆಗಿದೆ, ಎಂದು ಯೋಗಿಗಳಿಗೂ ಕೂಡ ಭಾವಹುಟ್ಟುವಂತೆ ಸೇವಾ ಕರ್ಮದಲ್ಲಿ ಹಗಲೂ ರಾತ್ರಿಯೂ ನಿನ್ನ ಮನಸ್ಸಿರುತ್ತಿತ್ತು.

೬೬–೬೭. ಅಯ್ಯಾ ಪಾರ್ಥಿವನೇ! ಹೀಗೆ ಅವನಲ್ಲೇ ಮನಸ್ಸುಳ್ಳವನೂ, ಅವನ ಸಂಬಂಧವಾದ ಉದ್ಯೋಗವನ್ನೇ ಮಾಡುತ್ತಿರುವನೂ, ಹಿಂದೆ ನಡೆದುದನ್ನು

ಸ್ಮರತೋ ಗೋಪತಿಂ ನಿತ್ಯಂ ಚಿತ್ತೇನೈವ ದೃಢಾತ್ಮನಃ ।
ನಿಃ ಶೇಷಮುಪಶಾಂತಂ ತೇ ಪಾಪಂ ಸೂರ್ಯನಿಷೇವಣಾತ್ ॥ ೬೭ ॥

ತತೋಽಧಿಕಂ ಪುರಸ್ತಸ್ಯ ಅಗಾರಸ್ಯಾನುಲೇಪನಂ ।
ಸಮ್ಮಾರ್ಜನಂ ಚ ಬಹುಶಃ ಸ ಪತ್ನೀಕೇನ ವೈ ಕೃತಂ ॥ ೬೮ ॥

ಕೇವಲಂ ಧರ್ಮಮಾಶ್ರಿತ್ಯ ತ್ಯಕ್ತ್ವಾ ವೃತ್ತಿಮಶೇಷತಃ ।
ಅನಯಾ ಶ್ರವಣಂ ಪುಣ್ಯಂ ಕಾರಿತಂ ವಾಚಕಾತ್ಸದಾ ॥ ೬೯ ॥

ನಾನಾಧಾತುವಿಕಾರೈಸ್ತು ಗೋಮಯೇನ ಮೃದಾ ತಥಾ ।
ಉಪಲೇಪನಂ ಕೃತಂ ಭಕ್ತ್ಯಾ ತ್ವಯಾ ಪೂರ್ವಂ ಸುರಾಲಯೇ ॥ ೭೦ ॥

ಅಥಾಜಗಾಮ ವೈ ತತ್ರ ಕುವಲಾಶ್ವೋ ಮಹೀಪತಿಃ ।
ಮಹಾಸೈನ್ಯಪರೀವಾರಃ ಪ್ರಭೂತಗಜವಾಹನಃ ॥ ೭೧ ॥

---

ಊಹಿಸುವವನೂ, ಹೇಳಿದುದಕ್ಕಿಂತ ಅತಿಶಯವಾಗಿ ಕೆಲಸಮಾಡುವವನೂ, ನಿತ್ಯವೂ ಸರ್ವದಾ ಗೋಪತಿಯಾದ ಸೂರ್ಯನನ್ನು ಮನಸ್ಸಿನಲ್ಲಿ ಸ್ಮರಿಸುತ್ತಿರುವವನೂ, ದೃಢ ಮನಸ್ಸುಳ್ಳವನೂ, ಆಗಿದ್ದ ನಿನಗೆ ಸೂರ್ಯನ ಸೇವೆ (ಶುಶ್ರೂಷೆ) ಯಿಂದ ನಿನ್ನಲ್ಲಿ ಸಂಚಿತವಾಗಿದ್ದ ಪಾಪವೆಲ್ಲ ನಿಶ್ಶೇಷವಾಗಿ ಅಡಗಿಹೋಯಿತು.

೬೮. ಇದಲ್ಲದೆ ಅದೇ ದೇವಾಲಯದ ಮುಂದೆ ಗುಡಿಸುವುದು ಸಾರಿಸುವುದು ಮುಂತಾದ ಕೆಲಸಗಳನ್ನು ನೀನು ಪತ್ನೀಸಮೇತನಾಗಿ ಮಾಡುತ್ತಿದ್ದೆ.

೬೯. ನೀನು ಆ ಸ್ಥಿತಿಯಲ್ಲಿದ್ದೂ, ಬಿಡುವಾದ ಕಾಲವನ್ನು ವ್ಯರ್ಥವಾಗಿ ಕಳೆಯಲಿಲ್ಲ. ಕೇವಲ ಧರ್ಮವನ್ನು ಆಶ್ರಯಿಸಿದವನಾಗಿ ಜೀವನ ವೃತ್ತಿಯನ್ನು ಸಂಪೂರ್ಣವಾಗಿ ಬಿಟ್ಟಿರುವವನಾದ ವಾಚಕನ ಮೂಲಕ ಈ ನಿನ್ನ ಪತ್ನಿಗೆ ಪುರಾಣ ಶ್ರವಣ ಮಾಡಿಸಿದೆ.

೭೦. ಮಣಿಶಿಲೆ ಮೊದಲಾದ ಬಗೆ ಬಗೆಯ ಧಾತುವಸ್ತುಗಳು, ಗೋಮಯ, ಮೃತ್ತಿಕೆ ಇವುಗಳಿಂದ ಭಕ್ತಿಪೂರ್ವಕವಾಗಿ ನೀನು ಈ ಮೊದಲಿಂದಲೂ ದೇವಾಲಯವನ್ನು ಸಾರಿಸುತ್ತಲೇ ಇದ್ದೆ.

೭೧. ಹೀಗಿರುವಲ್ಲಿ ಕುವಲಾಶ್ವನೆಂಬ ರಾಜನು ದೊಡ್ಡ ಸೇನೆಯಿಂದಲೂ ತುಂಬಾ ಆನೆಗಳಿಂದಲೂ, ಕುದುರೆಗಳಿಂದಲೂ ಕೂಡಿದವನಾಗಿ ಅಲ್ಲಿಗೆ ಬಂದನು.

ಸರ್ವಸಂಪದುಪೇತಂ ತಂ ಸರ್ವಾಭರಣಭೂಷಿತಂ ।
ವೃತಂ ಭಾರ್ಯಾಸಹಸ್ರೇಣ ದೃಷ್ಟ್ವಾ ಸಂಕ್ರಂದನೋದ್ಬಲಂ ॥
ಸ್ಪೃಹಾ ಕೃತಾ ತ್ವಯಾ ತತ್ರ ಚಾರುಮಾಲಿನಿ ಪಾರ್ಥಿವೇ ॥ ೭೨ ॥

ಸರ್ವಕಾಮಪ್ರದಂ ಕರ್ಮ ಕೃತಂ ವೈ ಭಾಸ್ಕರಾಶ್ರಿತಂ ।
ತೇನೈತದಖಿಲಂ ರಮ್ಯಾಮಶೇಷಾಂ ಚಾಪ್ತವಾ ಮಹೀಂ ॥ ೭೩ ॥

ತೇಜಶ್ಚೈವಾಧಿಕಂ ಯತ್ತೇ ತಥೈವ ಶೃಣು ಪಾರ್ಥಿವ ।
ಯೋಗಪ್ರಭಾವತೋ ಲಬ್ಧಂ ಕಥಯಾಮ್ಯಖಿಲಂ ತವ ॥ ೭೪ ॥

ತತ್ರೈವಾವಸಥೇ ದೀಪಃ ಪ್ರಶಾಂತಃ ಸ್ನೇಹಸಂಕ್ಷಯಾತ್ ।
ನಿಜಭೋಜನತೈಲೇನ ಪುನಃ ಪ್ರಜ್ವಾಲಿತಸ್ತ್ವಯಾ ॥ ೭೫ ॥

---

೭೨. ಸಮಸ್ತ ಸಂಪತ್ತನ್ನುಳ್ಳವನೂ, ಸಮಸ್ತ ಆಭರಣಗಳಿಂದ ಭೂಷಿತನೂ ಆಗಿ, ಸಾವಿರಾರು ಮಂದಿ ಹೆಂಡತಿಯರಿಂದ ಕೂಡಿ ಇಂದ್ರನಂತೆ ಹೆಚ್ಚಾದ ಬಲವುಳ್ಳವನೂ, ಮಾಲೆಗಳಿಂದ ಅಲಂಕೃತನೂ, ಆದ ಕುವಲಾಶ್ವ ರಾಜನನ್ನು ನೋಡಿ ನೀನು ಅವನ ಸ್ಥಿತಿಗೆ ಆಶಿಸಿದೆ.

೭೩. ಸೂರ್ಯೋದ್ದೇಶದಿಂದ ಸರ್ವಕಾಮಪ್ರದವಾದ ಕರ್ಮವನ್ನು ಆಗ ಮಾಡಿದ್ದುದರಿಂದ ಈಗ ರಮ್ಯವಾದ ಈ ಭೂಮಿಯೆಲ್ಲವನ್ನೂ ಹೊಂದಿದೆ.

೭೪. ಅಯ್ಯಾ ರಾಜನೇ! ನಿನ್ನ ತೇಜಸ್ಸು ಅಧಿಕವಾಗುವುದಕ್ಕೆ ಕಾರಣವೇನೆಂಬುದನ್ನು ನಾನು ಯೋಗ ಮಹಿಮೆಯಿಂದ ತಿಳಿದು ಎಲ್ಲವನ್ನೂ ನಿನಗೆ ಹೇಳುತ್ತೇನೆ ಕೇಳು.

೭೫. ಆ ದೇವಾಲಯದಲ್ಲಿ ಇಟ್ಟಿದ್ದ ದೀಪವು ಎಣ್ಣೆಮುಗಿದು ಆರಿಹೋಯಿತು. ಆಗ ನೀನು ಊಟಕ್ಕೆ ಉಪಯೋಗಿಸಲು ಇಟ್ಟುಕೊಂಡಿದ್ದ ಎಣ್ಣೆಯನ್ನು ಹಾಕಿ ಪುನಃ ದೀಪ ಉರಿಯುವಂತೆ ಮಾಡಿದೆ. ನಿನ್ನ ಹೆಂಡತಿಯು ತಾನು ಹೊದೆದಿದ್ದ ಸೀರೆಯ ಸೆರಗನ್ನು ಹರಿದು ದೀಪದ ಬತ್ತಿ ಮಾಡಿದಳು.

**ಅನಯಾ ಚೋತ್ತರೀಯೇಣ ವೀರ ವರ್ತ್ಯೋಪಬೃಂಹಿತಃ ।**
**ತವ ಪತ್ನ್ಯಾ ಕೃತೋ ದೀಪಃ ಕಾಂತಿರಸ್ಯಾಸ್ತತೋಽಧಿಕಾ ॥ ೭೬ ॥**

**ತವಾಪ್ಯಖಿಲಭೂಪಾಲಮನಃಕ್ಷೋಭಕರೀ ದ್ಯುತಿಃ ।**
**ತೇಜೋ ನರೇಂದ್ರ ಏತಸ್ಮಾತ್ ಕಿಮುತಾರಾಧ್ಯ ಭಾಸ್ಕರಂ ॥ ೭೭ ॥**

**ಏವಂ ನರೇಂದ್ರಃ ಶೂದ್ರತ್ವಾದ್ಭಾನುಕರ್ಮ ಪರಾಯಣಃ ।**
**ತನ್ಮಯತ್ವೇನ ಸಂಪ್ರಾಪ್ತೋ ಮಹಿಮಾನಮನುತ್ತಮಂ ॥ ೭೮ ॥**

**ಕಿಂಪುನರ್ಯೋ ನರೋ ಭಕ್ತ್ಯಾ ನಿತ್ಯಂ ಶುಶ್ರೂಷಣಾದೃತಃ ।**
**ಕರೋತಿ ಸತತಂ ಪೂಜಾಂ ನಿಷ್ಕಾಮೋ ನಾನ್ಯಮಾನಸಃ ॥ ೭೯ ॥**

**ಸರ್ವಾಮೃದ್ಧಿಮಿಮಾಂ ಲಬ್ಧ್ವಾ ಸರ್ವಲೋಕಮಹೇಶ್ವರಃ ।**
**ಪೂಜಯಿತ್ವಾರ್ಕಮೀಶೇಶಂ ತಮಾರಾಧ್ಯ ನ ಸೀದತಿ ॥ ೮೦ ॥**

---

೭೬. ಅದನ್ನು ಹಣತೆಗೆ ಹಾಕಿ ಪುನಃ ದೀಪವು ಚೆನ್ನಾಗಿ ಉರಿಯುವಂತೆ ಬತ್ತಿಯನ್ನು ಮೀಟಿದಳು.ಆದುದರಿಂದ ಈಕೆಯ ದೇಹ ಕಾಂತಿಯು ಇಷ್ಟು ಹೆಚ್ಚಿತು.

೭೭ ನಿನ್ನ ದೇಹವು ಸಹ ಈ ಸಮಸ್ತ ರಾಜರ ಮನಸ್ಸನ್ನು ಕ್ಷೋಭೆಪಡಿಸು ವಷ್ಟು ಕಾಂತಿಯುಳ್ಳದ್ದಾಯಿತು. ಈ ದೀಪ ವರ್ಧನದಿಂದಲೇ ನಿನಗೆ ಇಷ್ಟುಫಲ ಉಂಟಾದ ಮೇಲೆಪ್ರತ್ಯಕ್ಷವಾಗಿ ಸೂರ್ಯನನ್ನು ಪೂಜಿಸಿದರೆ ಹೇಳುವುದೇನು ?

೭೮. ಪೂರ್ವಜನ್ಮದಲ್ಲಿ ಶೂದ್ರನಾಗಿದ್ದವನು, ಭಾನುಸೇವಾಕರ್ಮದಲ್ಲಿ ಆಸಕ್ತ ನಾದುದರಿಂದ ಈ ಜನ್ಮದಲ್ಲಿ ರಾಜನಾಗಿ, ಆ ಸೂರ್ಯಮಯನೇ ಎನಿಸಿ ಸರ್ವೋತ್ತಮ ವಾದ ಮಹಿಮೆಯನ್ನು ಹೊಂದಿದನು.

೭೯. ಹೀಗಿರುವಲ್ಲಿ ಯಾವನು ಭಕ್ತಿಯಿಂದ ಸರ್ವೋತ್ತಮನಾದ ಆ ದೇವ ನನ್ನು ನಿತ್ಯವೂ ಸೇವಿಸುತ್ತಾ ಯಾವಾಗಲೂ ನಿಷ್ಕಾಮನಾಗಿದ್ದು, ಅನ್ಯಮನ ಸ್ಕನಾಗದೆ ಸರ್ವದಾ ಪೂಜಿಸುವನೋ, ಅಂಥವನಿಗೆ ಫಲವೆಷ್ಟೆಂಬುದನ್ನು ಹೇಳುವುದೇ ನಿದೆ ?

೮೦. ದೇವ ದೇವನಾದ ಸೂರ್ಯನನ್ನು ಪೂಜಿಸಿ ಅವನನ್ನು ಸೇವಿಸಿದವನು ಸರ್ವಲೋಕಾಧಿಪತ್ಯವನ್ನು ಹೊಂದಿ, ಈ ಸಂಪತ್ತೆಲ್ಲವನ್ನೂ ಪಡೆಯುತ್ತಾನೆ. ಕಷ್ಟ ವನ್ನು ಎಂದಿಗೂ ಹೊಂದುವುದಿಲ್ಲ.

ಪುಷ್ಪೈರ್ಧೂಪೈಶ್ಚ ನೈವೇದ್ಯೈರ್ದೀಪೈರ್ವಸ್ತ್ರಾನುಲೇಪನೈಃ ।
ಆರಾಧಯಾರ್ಕಮನಿಶಂ ವೇಶ್ಮಸಮ್ಮಾರ್ಜನಾದಿನಾ ॥ ೮೧ ॥

ಯದ್ಯದಿಷ್ಟತಮಂ ಕಿಂಚಿದ್ಯದ್ಯದನ್ಯತ್ತು ದುರ್ಲಭಂ ।
ತದ್ದತ್ವಾ ಚ ಜಗದ್ಧಾತ್ರೇ ಭಾಸ್ಕರಾಯ ನ ಸೀದತಿ ॥ ೮೨ ॥

ಸುಗಂಧೋಶಿರಕರ್ಪೂರ ಚಂದನಾಗುರುಕುಂಕುಮೈಃ ।
ವಾಸೋಭಿರ್ವಿವಿಧೈರ್ಧೂಪೈಃ ಛತ್ರೈಃ ಸ್ರಕ್ಚಾಮರಧ್ವಜೈಃ ॥ ೮೩ ॥

ಅನ್ಯೋಪಚಾರೈರ್ವಿವಿಧೈಃ ಕೃತಕ್ಷೀರಾಭಿಷೇಚನೈಃ ।
ಗೀತವಾದಿತ್ರನೃತ್ಯಾದ್ಯೈಸ್ತೋಷಯಸ್ವಾರ್ಕಮಾದರಾತ್ ॥ ೮೪ ॥

ಪುಣ್ಯರಾತ್ರಿಷು ಮಾರ್ತಂಡಂ ನೃತ್ಯಗೀತೈಶ್ಚ ತೋಷಯನ್ ।
ಭೂಪ ಜಾಗರಣೈರ್ಭಕ್ತ್ಯಾ ಹೋಮಂ ಕುರ್ಯಾತ್ಸದಾ ಶುಚಿಃ ॥ ೮೫ ॥

---

೮೧. ವಸ್ತ್ರಗಳು, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ ಇವುಗಳ ಸಮರ್ಪಣದಿಂದಲೂ, ದೇವಾಲಯವನ್ನು ಗುಡಿಸುವುದು ಮೊದಲಾದುವುದರಿಂದಲೂ ಸೂರ್ಯನನ್ನು ಯಾವಾಗಲೂ ಆರಾಧಿಸು.

೮೨. ಸ್ವಾಮಿಗೆ ಅತಿ ಇಷ್ಟವೆಂದು ಯಾವುದನ್ನು ಹೇಳುತ್ತಾರೋ, ಅದನ್ನೂ ಯಾವುದು ಸಾಮಾನ್ಯವಾಗಿ ಸಿಕ್ಕುವುದು ಕಷ್ಟವೋ ಅದನ್ನೂ ಜಗತ್ಪೋಷಕನಾದ ಭಾಸ್ಕರನಿಗೆ ಸಮರ್ಪಿಸಿದವನು ಕ್ಲೇಶದಿಂದ ವಿಮುಕ್ತನಾಗುತ್ತಾನೆ.

೮೩. ಸುವಾಸನೆಯುಳ್ಳ ಲಾಮಂಚ, ಕರ್ಪೂರ, ಶ್ರೀಗಂಧ, ಅಗಿಲು, ಕೇಸರಿ ಇವುಗಳ ಗಂಧ; ವಸ್ತ್ರಗಳು, ಬಗೆ ಬಗೆಯಾದ ಧೂಪಗಳು, ಹೂವಿನ ಹಾರಗಳು, ಛತ್ರಿ, ಚಾಮರ, ಧ್ವಜ ಮುಂತಾದ ಸಾಮಗ್ರಿಗಳು.

೮೪. ಹಾಲನ್ನು ಬೆರಸಿದ ಬಗೆ ಬಗೆಯಾದ ನೈವೇದ್ಯ, ಇವುಗಳನ್ನು ಸಮರ್ಪಿಸಿ ಗಾನ, ವಾದ್ಯ, ನೃತ್ಯ ಮೊದಲಾದ ಉಪಚಾರಗಳಿಂದ ಸೂರ್ಯನನ್ನು ಆದರದಿಂದ ಸಂತೋಷಪಡಿಸಬೇಕು.

೮೫. ಶುಭಕರವಾದ ರಾತ್ರಿಗಳಲ್ಲಿ ನೃತ್ಯ ಗೀತಗಳಿಂದಲೂ, ಧೂಪ ಜಾಗರಣೆಗಳಿಂದಲೂ ಸೂರ್ಯನನ್ನು ಸಂತೋಷಪಡಿಸುತ್ತಾ ಭಕ್ತಿಯಿಂದ ಸದಾ ಶುಚಿಯಾಗಿ ಹೋಮವನ್ನು ಮಾಡಬೇಕು.

ಇತಿಹಾಸಪುರಾಣಾನಾಂ ಶ್ರವಣೇನ ವಿಶೇಷತಃ ।
ತಥಾ ವೇದಸ್ವನೈಃ ಪುಣ್ಯೈಃ ಋಗ್ಯಜುಸ್ಸಾಮಭಿರ್ಯಜೇತ್ ॥ ೮೬ ॥

ಏವಂ ಸಂತೋಷಯೇದ್ಭಕ್ತ್ಯಾ ಭಗವಂತಂ ಭವಾರ್ದನಂ ।
ಭೂಯೋ ವೈವಸ್ವತೋ ಸ್ಯಾಚ್ಚೇತ್ ಭವಹೃದ್ಭಾಸ್ಕರೋ ಭವೇತ್ ॥ ೮೭ ॥

ತೋಷಿತೋ ಭಗವಾನ್ಭಾನುರ್ದದಾತ್ಯಭಿಮತಂ ಫಲಂ ।
ದೈವಕರ್ಮಸಮರ್ಥಾನಾಂ ಕರ್ಮಭಿಃ ಸ್ಮೃತಿಸಂಭವೈಃ ॥ ೮೮ ॥

ತೋಷಿತೋ ಭಗವಾನ್ಕಾಮಾ ಸ್ಪ್ರಯಚ್ಛತಿ ದಿವಾಕರಃ ।
ನೈಷ ವೃತ್ತೈರ್ನ ರತ್ನೌಘೈಃ ಪುಷ್ಪೈರ್ಧೂಪಾನುಲೇಪನೈಃ ।
ಸದ್ಭಾವೇನೈವ ಮಾರ್ತಂಡಸ್ತೋಷ ಮಾಯಾತಿಸಂಸ್ಮೃತಃ ॥ ೮೯ ॥

---

೮೬. ವಿಶೇಷವಾಗಿ ಇತಿಹಾಸ ಪುರಾಣಗಳನ್ನು ಶ್ರವಣ ಮಾಡೋಣದರಿಂದಲೂ, ಮತ್ತು ಪುಣ್ಯಕರಗಳಾದ ಋಗ್ಯಜುಸ್ಸಾಮರೂಪಗಳಾದ ವೇದ ಪಾರಾಯಣಗಳಿಂದಲೂ, ಸೇವಿಸಬೇಕು.

೮೭. ಭವನಾಶಕನಾದ ಭಗವಂತನನ್ನು ಹೀಗೆ ಭಕ್ತಿಯಿಂದ ಸಂತೋಷಪಡಿಸಬೇಕು. ಅನನ್ಯ ಶರಣತೆಯಿಂದ ಸೂರ್ಯಭಕ್ತನಾದರೆ ಸೂರ್ಯನು ಭವಬಂಧನವನ್ನು ಹೋಗಲಾಡಿಸುವನು.

೮೮. ಭಗವಂತನಾದ ಸೂರ್ಯನು ಸಂತುಷ್ಟನಾದರೆ ಇಷ್ಟವಾದ ಸಕಲ ಫಲವನ್ನೂ ಕೊಡುತ್ತಾನೆ. ದೇವನ ಆರಾಧನ ಕರ್ಮದಲ್ಲಿ ಸಮರ್ಥರಾದವರ ಸ್ಮೃತಿಪೂರ್ವಕವಾದ ಕರ್ಮಗಳಿಂದ ಸಂತೋಷ ಹೊಂದಿದ ಸೂರ್ಯಭಗವಂತನು ಆರಾಧಕರ ಇಷ್ಟಗಳನ್ನೆಲ್ಲಾ ಕೊಡುತ್ತಾನೆ.

೮೯. ಈ ಸೂರ್ಯನು ಕೇವಲ ಸಚ್ಚರಿತ್ರೆಗಳಿಂದಾಗಲಿ, ರತ್ನ ಸಮೂಹವನ್ನು ಸಮರ್ಪಿಸುವುದರಿಂದಾಗಲಿ, ಪುಷ್ಪ, ಧೂಪ, ಅನುಲೇಪನ ಇವುಗಳ ಸಮರ್ಪಣದಿಂದಾಗಲಿ ತೃಪ್ತನಾಗುವುದಿಲ್ಲ. ಸದ್ಭಾವದಿಂದ ಸ್ಮರಣೆಮಾಡುವುದರಿಂದಲೇ ತೃಪ್ತನಾಗುವನು.

**ತ್ವಯೈಕಾಗ್ರಮನಸ್ಕೇನ ಗೃಹಸಮ್ಮಾರ್ಜನಾದಿಕಂ ।**
**ಕೃತ್ವಾನಲ್ಪಂ ಫಲಂ ಪ್ರಾಪ್ತಂ ರಾಜ್ಯಮನ್ಯೇನ ದುರ್ಲಭಂ ॥ ೯೦ ॥**

**ಅನಯಾ ಶ್ರವಣಂ ಪುಣ್ಯಂ ಕಾರಯಿತ್ವಾ ಗೃಹೇ ರವೇಃ ।**
**ಈ ದೃಕ್ಪ್ರಾಪ್ತಾ ಸಂಪದಿಯಂ ಪೂಜಾಂ ಕೃತ್ವಾ ತು ವಾಚಕೇ ॥ ೯೧ ॥**

**ಪ್ರಾಪ್ತೋಪಕರಣೈರ್ಯಸ್ತ್ವಮೇಕಾಗ್ರಮತಿರಂಡಜಂ ।**
**ಸಂತೋಷಯಸಿ ನೇಂದ್ರೋಽಪಿ ಭವತಾ ವೈ ಸಮಃ ಕ್ವಚಿತ್ ॥ ೯೨ ॥**

**ತಸ್ಮಾತ್ತ್ವಮನಯಾ ದೇವ್ಯಾ ಸಹಾತ್ಯಂತವಿನೀತಯಾ ।**
**ಭಾಸ್ಕರಾರಾಧನೇ ಯತ್ನಂ ಕುರು ಧರ್ಮಭೃತಾಂ ವರ ॥ ೯೩ ॥**

**॥ ಬ್ರಹ್ಮೋವಾಚ ॥**

**ಏತನ್ಮುನೇರ್ವಚೋ ವೀರ ನಿಶಮ್ಯ ಸ ನರಾಧಿಪಃ ।**
**ಭಾರ್ಯಾ ಸಹಾಯಃ ಸ ತದಾ ಸಂಪ್ರಹೃಷ್ಟ ತನೂರುಹಃ ॥ ೯೪ ॥**

---

೯೦. ನೀನು ಏಕಾಗ್ರಚಿತ್ತವುಳ್ಳವನಾಗಿ ದೇವಾಲಯವನ್ನು ಗುಡಿಸುವುದು, ಮೊದಲಾದುವನ್ನು ಮಾಡಿ, ಇತರರಿಗೆ ದುರ್ಲಭವಾದ ಈ ರಾಜ್ಯರೂಪವಾದ ಅಧಿಕ ಫಲವನ್ನು ಹೊಂದಿದ್ದೀಯೆ.

೯೧. ನಿನ್ನ ಹೆಂಡತಿಯು ಸೂರ್ಯದೇವಾಲಯದಲ್ಲಿ ಪುಣ್ಯಕರವಾದ ಕಥಾಶ್ರವಣ ಮಾಡಿ ಪುರಾಣ ವಾಚಕನ ಪೂಜೆಯನ್ನು ಮಾಡಿದುದರಿಂದ ಇಂಥ ಅಮೋಘವಾದ ಸಂಪತ್ತನ್ನು ಹೊಂದಿದಾಳೆ.

೯೨. ನೀನು ಏಕಾಗ್ರಚಿತ್ತನಾಗಿ ನಿನಗೆ ದೊರಕಿದ ಪೂಜೋಪಕರಣಗಳಿಂದ ಅಂಡಜನಾದ ಸೂರ್ಯನನ್ನು ಸಂತೋಷಪಡಿಸುವೆಯಾದರೆ, ಆಗ ದೇವೇಂದ್ರನೂ ಕೂಡ ಎಂದಿಗೂ ನಿನ್ನ ಸಮನಾಗಲಾರನು.

೯೩. ಅಯ್ಯಾ ಧಾರ್ಮಿಕಶ್ರೇಷ್ಠನೇ! ಈ ಕಾರಣದಿಂದ ನೀನು ಅತ್ಯಂತ ವಿನೀತೆಯಾದ ಈ ನಿನ್ನ ರಾಣಿಯೊಡನೆ ಸೂರ್ಯಾರಾಧನೆಗೆ ಯತ್ನಮಾಡು ಎಂದನು.

೯೪-೯೫. ಎಲೈ ವೀರನಾದ ಅಚ್ಯುತನೇ! ಭಾರ್ಯಾ ಸಮೇತನಾದ ಆ ರಾಜನು, ಋಷಿ ಹೇಳಿದ ಈ ಮಾತನ್ನು ಕೇಳಿ ಸಂತೋಷದಿಂದ ರೋಮಾಂಚ ಹೊಂದಿ

ಕೃತಕಾರ್ಯಮಿವಾತ್ಮಾನಂ ಮಾನ್ಯಮಾನಸ್ತದಾಭವತ್ ।
ಉವಾಚ ಪ್ರಣತೋ ಭೂತ್ವಾ ರಾಜಾ ಸತ್ರಾಜಿತೋಽಚ್ಯುತ ॥ ೯೫ ॥

॥ ಸತ್ರಾಜಿತ ಉವಾಚ ॥

ಯಥಾಮರತ್ವಂ ಸಂಪ್ರಾಪ್ಯ ಯಥಾ ಚಾಯುರ್ಬಲಂ ಪರಂ ।
ಪರಂ ನಿರ್ವಾಣಮಾಪ್ನೋತಿ ತಥಾಹಂ ವಚಸಾ ತವ ॥ ೯೬ ॥

ಕೃತಕೃತ್ಯಸ್ಸುಖಾಸೀನೋ ನಿರ್ವೃತಿಂ ಪರಮಾಂ ಗತಃ ।
ಅಜ್ಞಾನತಮಸಾಚ್ಛನ್ನೇ ಯತ್ಪ್ರದೀಪಸ್ತ್ವಯಾ ಧೃತಃ ॥ ೯೭ ॥

ಅಹಮೇಷಾ ಚ ತನ್ವಂಗೀ ವಿಭೂತಿಭ್ರಂಶಭೀತಿತಃ ।
ಸ್ಥಿರಮಾಸಾದಿತಂ ದ್ರವ್ಯಮಿಹಾದ್ಯ ವಚನಾ ತವ ॥ ೯೮ ॥

ಸಂಪದಃ ಕಥಿತಂ ಬೀಜಮಾವಯೋರ್ಭಗವತಾ ಮುನೇ ।
ತ್ವದ್ವಕ್ತ್ರಾದುದ್ಗತಾ ವಾಚೋ ವಿಜ್ಞಾತಾ ಹಿ ದ್ವಿಜೋತ್ತಮ ॥ ೯೯ ॥

---

ತಾನೇ ಕೃತಾರ್ಥನೆಂದು ಭಾವಿಸಿದನು. ರಾಜನಾದ ಆ ಸತ್ರಾಜಿತನು ನಮ್ರನಾಗಿ ಹೇಳತೊಡಗಿದನು.

೯೬-೯೭. ಸತ್ರಾಜಿತನು ಹೇಳುತ್ತಾನೆ—ಸುಕೃತಿಯು ಅಮರತ್ವವನ್ನು ಹೊಂದಿದ್ದರ ಜೊತೆಗೆ ಆಯಸ್ಸನ್ನೂ ಉತ್ಕೃಷ್ಟವಾದ ಬಲವನ್ನೂ ಪಡೆದು ಶ್ರೇಷ್ಠವಾದ ಮುಕ್ತಿಯನ್ನೂ ಹೇಗೆ ಹೊಂದುವನೋ, ಹಾಗೆ ನಾನು ನಿನ್ನ ದಿವ್ಯವಾಣಿಯಿಂದ ಕೃತಾರ್ಥನಾಗಿ ಶ್ರೇಷ್ಠವಾದ ನಿರ್ವೃತಿಯನ್ನು ಹೊಂದಿ ಸುಖವಾಗಿ ಇರುವೆನು.

೯೮. ನಾನೂ ನನ್ನ ಹೆಂಡತಿಯಾದ ಈ ಕೃಶಾಂಗಿಯೂ ಧನ ಮೊದಲಾದ ಐಶ್ವರ್ಯವು ಎಂದಾದರೂ ನಾಶವಾಗುವುದೆಂಬ ಭಯವುಳ್ಳವರಾಗಿ, ನಿನ್ನ ಉಪದೇಶ ವಾಕ್ಯರೀತಿ ಶಾಶ್ವತದ್ರವ್ಯವಾದ ಬ್ರಹ್ಮವನ್ನು ಪಡೆದೆವು.

೯೯. ಎಲೈ ಮುನಿಯೇ! ನಮಗೆ ಸಂಪತ್ಪ್ರಾಪ್ತಿಗೆ ಕಾರಣವನ್ನು ನೀನು ಹೇಳಿದೆ. ಅಯ್ಯಾ ದ್ವಿಜಶ್ರೇಷ್ಠನೇ! ನಿನ್ನ ವದನೋದ್ಗತವಾದ ದಿವ್ಯವಾಣಿಗಳೆಲ್ಲವನ್ನೂ ತಿಳಿದುಕೊಂಡೆವು.

ನ ರತ್ನೈರ್ನ ಚ ವಿತ್ತೌಘೈಃ ನ ಚ ಪುಷ್ಪಾನುಲೇಪನೈಃ ।
ಆರಾಧ್ಯಶ್ಚ ಜಗನ್ನಾಥೋ ಭಾವಶೂನ್ಯೈರ್ದಿವಾಕರಃ ॥ ೧೧೦ ॥

ಬಾಹ್ಯಾರ್ಥನಿರಪೇಕ್ಷೈಶ್ಚ ಮನಸೈವ ಮನೋಗತಿಃ ।
ನಿಃ ಸ್ವೈರಾರಾಧ್ಯತೇ ದೇವೋ ಭಾನುಸ್ಸರ್ವೇಶ್ವರೇಶ್ವರಃ ॥ ೧೧೧ ॥

ಸರ್ವಮೇತನ್ಮಯಾ ಜ್ಞಾತಂ ಯತ್ತ್ವಮಾತ್ಥ ಮಹಾಮುನೇ ।
ಯಚ್ಚ ಪೃಚ್ಛಾಮಿ ತನ್ಮೇ ತ್ವಂ ಪ್ರಸಾದಸುಮುಖೋ ವದ ॥ ೧೧೨ ॥

ಕಥಮಾರಾಧಿತೋ ದೇವೋ ನರೈಃ ಸ್ತ್ರೀಭಿಶ್ಚ ಭಾಸ್ಕರಃ ।
ತೋಷಮಾಯಾತಿ ವಿಪೇಂದ್ರ ತದ್ವದಸ್ವ ಮಹಾಮುನೇ ॥ ೧೧೩ ॥

ರಹಸ್ಯಾನಿ ಚ ದೇವಸ್ಯ ಪ್ರೀತಯೇ ಯಾ ತಿಥಿಃ ಸದಾ ।
ತಾನ್ಯಶೇಷಾಣಿ ಮೇ ಬ್ರೂಹಿ ಅರ್ಕಾರಾಧನಕಾಂಕ್ಷಿಣಃ ॥ ೧೧೪ ॥

---

೧೧೦. ಭಕ್ತಿ ಭಾವಶೂನ್ಯರಾದವರು ಕೇವಲ ರತ್ನಗಳಿಂದಲೂ, ದ್ರವ್ಯಸಮೂಹಗಳಿಂದಲೂ, ಗಂಧ ಪುಷ್ಪ ಮೊದಲಾದವುಗಳಿಂದಲೂ; ಜಗನ್ನಾಥನಾದ ದಿವಾಕರನನ್ನು ಆರಾಧಿಸಿ ಮೆಚ್ಚಿಸುವುದಕ್ಕಾಗುವುದಿಲ್ಲ.

೧೧೧. ಸರ್ವೇಶ್ವರನೂ ಮನೋಗತಿಯೂ ಆದ ಆ ಸೂರ್ಯದೇವನು ಹೊರಗಿನ ಪದಾರ್ಥಗಳಲ್ಲಿ ಅಪೇಕ್ಷೆಯಿಲ್ಲದವರೂ, ಮಮತಾಶೂನ್ಯರೂ, ಆದ ಮಹಾಮತಿಗಳಿಂದ ಧ್ಯಾನ ವಿಷಯನಾಗಿ ಆರಾಧಿಸಲ್ಪಡುತ್ತಾನೆ.

೧೧೨. ಎಲೈ ಮಹಾಮುನಿಯೇ! ನೀನು ಹೇಳಿದ ಈ ಎಲ್ಲವನ್ನೂ ನಾನು ತಿಳಿದುಕೊಂಡೆನು. ಇನ್ನೂ ನಾನು ಕೇಳುವ ಕೆಲವು ವಿಚಾರವನ್ನು ಪ್ರಸನ್ನನಾಗಿ ಹೇಳು.

೧೧೩. ಅಯ್ಯಾ ವಿಪ್ರಶ್ರೇಷ್ಠ ಮಹರ್ಷಿಯೇ! ಗಂಡಸರಾಗಲಿ, ಹೆಂಗಸರಾಗಲಿ, ಸೂರ್ಯನನ್ನು ಹೇಗೆ ಆರಾಧಿಸಿದರೆ ಅವರು ಸಂತೋಷಪಡುತ್ತಾನೆಂಬುದನ್ನು ನನಗೆ ತಿಳಿಸು.

೧೧೪. ಸೂರ್ಯಾರಾಧನೆ ಮಾಡಲು ಅಪೇಕ್ಷಿಸುವ ನನಗೆ ಸೂರ್ಯದೇವನ ರಹಸ್ಯಗಳನ್ನೂ ಅವನಿಗೆ ಯಾವ ತಿಥಿಯು ಸರ್ವದಾ ಪ್ರಿಯಕರವೆಂಬುದನ್ನೂ ಸಮಗ್ರವಾಗಿ ಹೇಳು ಎಂದನು.

॥ ಪರಾವಸುರುವಾಚ ॥

ಶೃಣು ಭೂಪಾಲ ಯೈರ್ಭಾನುರ್ಗೃಹೇಷ್ವಾರಾಧ್ಯತೇ ನರೈಃ ।
ನಾರೀಭಿಶ್ಚಾತಿಘೋರೇಽಸ್ಮಿನ್ಪತಿತೈರ್ಭವಸಾಗರೇ ॥ ೧೦೫ ॥

ಸಮಭ್ಯರ್ಚ್ಯ ಜಗನ್ನಾಥಂ ದೇವಮರ್ಕಂ ಸಮಾಧಿನಾ ।
ಏಕಮಶ್ನಾತಿ ಯೋ ಭಕ್ತಂ ದ್ವಿತೀಯಂ ಬ್ರಾಹ್ಮಣಾರ್ಪಣಂ ॥ ೧೦೬ ॥

ಕರೋತಿ ಭಾಸ್ಕರಪ್ರೀತ್ಯೈ ಕಾರ್ತಿಕೇ ಮಾಸಿ ಚಾತ್ಮನಾ ।
ಪೂರ್ವೇ ವಯಸಿ ಯತ್ನೇನ ಜ್ಞಾನತೋಽಜ್ಞಾನತೋಪಿ ವಾ ॥ ೧೦೭ ॥

ಪಾಪಮಾಚರಿತಂ ತಸ್ಮಾದ್ಭಿದ್ಯತೇ ನಾತ್ರ ಸಂಶಯಃ ।
ಅನೇನೈವ ವಿಧಾನೇನ ಮಾಸಿ ಮಾರ್ಗಶಿರೇ ಪುನಃ ॥ ೧೦೮ ॥

ಸಂಪೂಜಯೇ ಮರಕತಂ ವಿಪ್ರೇಭ್ಯೋ ಯಃ ಪ್ರಯಚ್ಛತಿ ।
ಭಗವತ್ಪ್ರೀಣನಾರ್ಥಾಯ ಫಲಂ ತಸ್ಯ ಶೃಣುಷ್ವ ಮೇ ॥ ೧೦೯ ॥

---

೧೦೫. ಪರಾವಸು ಮುನಿವರ್ಯರು ಹೇಳುತ್ತಾರೆ—ಅತಿಭಯಂಕರವಾದ ಈ ಸಂಸಾರಸಮುದ್ರದಲ್ಲಿ ಬಿದ್ದಿರುವ ನರರೂ, ನಾರಿಯರೂ, ಸ್ವಗೃಹದಲ್ಲಿ ಸೂರ್ಯನನ್ನು ಹೇಗೆ ಆರಾಧಿಸಬೇಕು ? ಎಂಬುದನ್ನು ಹೇಳುವೆನು ಕೇಳು.

೧೦೬. ಭಗವಂತನಾದ ಸೂರ್ಯದೇವನನ್ನು ಧ್ಯಾನಯೋಗದಿಂದ ಪೂಜಿಸಿ, ಒಂದು ಹೊತ್ತಿನ ಅನ್ನವನ್ನು ತಾನು ಭುಂಜಿಸಿ, ಇನ್ನೊಂದು ಹೊತ್ತಿನ ಭೋಜನದ ಅನ್ನವನ್ನು ಬ್ರಾಹ್ಮಣನಿಗೆ ಅರ್ಪಿಸಬೇಕು.

೧೦೭. ತಿಳಿದಾಗಲಿ ತಿಳಿಯದೇ ಆಗಲಿ ಸೂರ್ಯದೇವನ ಪ್ರೀತಿಗೋಸ್ಕರವಾಗಿ ಯತ್ನದಿಂದ ಕಾರ್ತಿಕ ಮಾಸದಲ್ಲಿ ಸೂರ್ಯನ ಆರಾಧನೆಯನ್ನು ಮಾಡಿ ವಿಪ್ರನಿಗೆ ಅನ್ನ ದಾನಮಾಡಬೇಕು.

೧೦೮ ಹೀಗೆ ಮಾಡುವುದರಿಂದ ತಾನು ಪೂರ್ವವಯಸ್ಸಿನಲ್ಲಿ ಆಚರಿಸಿದ ಪಾಪವೆಲ್ಲ ನಾಶವಾಗುವುದು. ಇದರಲ್ಲಿ ಸಂಶಯವಿಲ್ಲ. ಈ ಕ್ರಮದಿಂದಲೇ ಪುನಃ ಮಾರ್ಗಶಿರ ಮಾಸದಲ್ಲಿಯೂ ಆಚರಿಸಬೇಕು.

೧೦೯. ಆ ಮಾಸದಲ್ಲಿ ಸೂರ್ಯಾರಾಧನೆ ಮಾಡಿ ಭಗವಂತನ ಪ್ರೀತಿಗಾಗಿ ಪಚ್ಚೆ ರತ್ನವನ್ನು ಬ್ರಾಹ್ಮಣನಿಗೆ ದಾನಮಾಡಿದರೆ ಉಂಟಾಗುವ ಫಲವನ್ನು ಹೇಳುವೆನು ಕೇಳು.

ಮಧ್ಯೇ ವಯಸಿ ಯತ್ಪಾಪಂ ಯೋಷಿತಾ ಪುರುಷೇಣ ವಾ ।
ಕೃತಮಸ್ಮಾಚ್ಚ ತೇನೋಕ್ತಂ ವಿಮೋಕ್ಷಃ ಪರಮಾತ್ಮನಾ ॥ ೧೧೦ ॥

ತಥಾ ಚೈವೈಕಭಕ್ತಂತು ಯಸ್ತು ವಿಪ್ರಾಯ ಯಚ್ಛತಿ ।
ದಿವಾಕರಂ ಸಮಭ್ಯರ್ಚ್ಯ ಪೌಷೇ ಮಾಸಿ ಮಹೀಪತೇ ॥ ೧೧೧ ॥

ತತ್ಸರ್ವಂ ಪ್ರೀಣಯತ್ಯರ್ಕಂ ವಾರ್ಧಿಕೇನ ಚ ಯತ್ಕೃತಂ ।
ಸ ತಸ್ಮಾನ್ಮುಚ್ಯತೇ ರಾಜನ್ ಪುಮಾನ್ ಯೋಷಿದಥಾಪಿ ವಾ ॥ ೧೧೨ ॥

ತ್ರೈಮಾಸಿಕಂ ವ್ರತಮಿದಂ ಯಃ ಕರೋತಿ ನರೇಶ್ವರ ।
ಸ ಭಾನುಪ್ರೀಣನಾತ್ಪಾಪೈರ್ಲಘು ಸಂಪರಿಮುಚ್ಯತೇ ॥ ೧೧೩ ॥

ದ್ವಿತೀಯೇ ವತ್ಸರೇ ರಾಜನ್ ಮುಚ್ಯತೇ ಚೋಪಪಾತಕೈಃ ।
ತದ್ವತ್ತೃತೀಯೇಽಪಿ ಕೃತಂ ಮಹಾಪಾತಕನಾಶನಂ ॥ ೧೧೪ ॥

---

೧೧೦. ಹೀಗೆ ಮಾಡಿದರೆ ಹೆಂಗಸಿಗಾಗಲಿ, ಗಂಡಸಿಗಾಗಲಿ ಮಧ್ಯ ವಯಸ್ಸಿನಲ್ಲಿ ಸಂಘಟಿಸಿದ ಸಮಸ್ತ ಪಾಪಗಳೂ ಪರಿಹಾರವಾಗುವುದೆಂದು ಪರಮಾತ್ಮನು ಹೇಳಿರುತ್ತಾನೆ.

೧೧೧. ಎಲೈ ರಾಜನೇ ! ಹೀಗೆಯೇ ಪುಷ್ಯ ಮಾಸದಲ್ಲಿಯೂ ಸೂರ್ಯನನ್ನು ಪೂಜಿಸಿ, ಒಪ್ಪೊತ್ತಿನ ಗ್ರಾಸವನ್ನು ಬ್ರಾಹ್ಮಣನಿಗೆ ದಾನಕೊಡಬೇಕು.

೧೧೨. ಹಾಗೆ ದಾನಮಾಡಿದವನು ಮಾಡಿದ ಪೂಜೆ, ದಾನ ಇವೆಲ್ಲವೂ ಸೂರ್ಯನನ್ನು ಸಂತೋಷಪಡಿಸುತ್ತವೆ. ಎಲೈ ರಾಜನೇ ! ಇದರಿಂದ ಹೆಂಗಸಿಗಾಗಲಿ, ಗಂಡಸಿಗಾಗಲಿ ಮುಪ್ಪಿನಲ್ಲಿ ಸಂಘಟಿಸಿದ ಪಾಪಗಳು ಪರಿಹಾರವಾಗುತ್ತವೆ.

೧೧೩. ಅಯ್ಯಾ ನರಪತಿಯೇ! ಮೂರು ತಿಂಗಳು ಆಚರಿಸಬೇಕಾದ ಈ ವ್ರತವನ್ನು ಯಾವನು ಕ್ರಮವಾಗಿ ಮಾಡುವನೋ, ಅವನು ಸೂರ್ಯನನ್ನು ತೃಪ್ತಿಪಡಿಸೋಣದರಿಂದ ಪಾಪಗಳಿಂದ ಶೀಘ್ರವಾಗಿ ಮುಕ್ತನಾಗುತ್ತಾನೆ.

೧೧೪. ಅಯ್ಯಾ ರಾಜನೇ ! ಎರಡನೆಯ ವರ್ಷವೂ ಈ ರೀತಿ ವ್ರತಾಚರಣೆ ಮಾಡಿ ಸೂರ್ಯನನ್ನು ಸಂತೋಷಪಡಿಸುವುದರಿಂದ ಉಪಪಾಪಗಳಿಂದಲೂ ಮುಕ್ತನಾಗುತ್ತಾನೆ. ಹಾಗೆಯೇ ಮೂರನೆಯ ವರ್ಷ ವ್ರತಮಾಡಿದರೆ ಆ ಮನುಷ್ಯರಿಗೆ ಸಂಭವಿಸಿದ ಮಹಾಪಾಪಗಳೂ ನಾಶಹೊಂದುವುವು.

ವ್ರತಮೇತನ್ನರೈಃ ಸ್ತ್ರೀಭಿಸ್ತ್ರಿಭಿರ್ಮಾಸೈರನುಷ್ಠಿತಂ ।
ತ್ರಿಭಿಸ್ಸಂವತ್ಸರೈಶ್ಚೈವ ಪ್ರದದಾತಿ ಫಲಂ ನೃಣಾಂ ॥ ೧೧೫ ॥

ತ್ರಿಭಿರ್ಮಾಸೈರನುಷ್ಠಾನಾತ್ತ್ರಿವಿಧಾತ್ಪಾತಕಾನ್ನೃಪ ।
ತ್ರೀಣಿ ಮಾಸಾನಿ ದೇವಸ್ಯ ಮೋಚಯಂತಿ ಚ ವಾರ್ಷಿಕೈಃ ॥ ೧೧೬ ॥

ಯತಸ್ತತೋ ವ್ರತಮಿದಂ ತ್ರಿವಿಧಂ ಸಮುದಾಹೃತಂ ।
ಸರ್ವಪಾಪಪ್ರಶಮನಂ ಭಾಸ್ಕರಾರಾಧನೇ ಪರಂ ॥ ೧೧೭ ॥

॥ ಸತ್ರಾಜಿತ ಉವಾಚ ॥

ಕತಮಾಯ ತು ವಿಪ್ರಾಯ ದಾತವ್ಯಂ ಭಕ್ತಿತೋ ಮುನೇ ।
ದ್ವಿತೀಯೇ ದ್ವಿಜಶಾರ್ದೂಲ ಕಥಯಸ್ವಾಖಿಲಂ ಮಮ ॥ ೧೧೮ ॥

---

೧೧೫. ಹೆಂಗಸಾಗಲಿ, ಗಂಡಸಾಗಲಿ ಈ ವ್ರತವನ್ನು ಮೂರು ತಿಂಗಳೋ ಅಥವಾ ಮೂರು ವರ್ಷವೋ ಆಚರಿಸಿದರೆ ಆ ಮನುಷ್ಯರಿಗೆ ಏನು ಫಲವು ಪ್ರಾಪ್ತವಾಗುತ್ತದೆಯೋ ಅದನ್ನೂ ಹೇಳುವೆನು ಕೇಳು.

೧೧೬. ಎಲೈ ರಾಜನೇ! ಮೂರು ತಿಂಗಳವರೆಗೆ ಬಿಡದೆ ಈ ವ್ರತಾಚರಣೆ ಮಾಡಿದವನು ಆ ವರ್ಷದಲ್ಲಿ ಸಂಭವಿಸಿದ ತ್ರಿವಿಧ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ (ಅಚ್ಯುತ, ಅನಂತ, ಗೋವಿಂದ ಎಂಬ ನಾಮತ್ರಯ ಸ್ಮರಣೆಯು ವಾರ್ಷಿಕ ಪಾಪಗಳಿಂದ ಬಿಡುಗಡೆ ಮಾಡುತ್ತದೆ.)

೧೧೭. ಆದುದರಿಂದ ಈ ವ್ರತವನ್ನು ಮೂರು ವಿಧವಾಗಿ ಹೇಳಿದೆ. ಈ ವ್ರತದಿಂದ ಸಮಸ್ತ ಪಾಪಗಳೂ ಪ್ರಶಾಂತವಾಗುತ್ತವೆ. ಸೂರ್ಯದೇವನ ಆರಾಧನೆಗೆ ಇದು ಶ್ರೇಷ್ಠವಾದುದು ಎಂದನು.

೧೧೮. ಸತ್ರಾಜಿತನು ಹೇಳುತ್ತಾನೆ—ಎಲೈ ಮುನಿಯೇ! ಎರಡನೆಯ ತಿಂಗಳಿನಲ್ಲಿ ಎಂತಹ ಬ್ರಾಹ್ಮಣನಿಗೆ ಭಕ್ತಿಯಿಂದ ಏನನ್ನು ದಾನಕೊಡಬೇಕು ? ಅವೆಲ್ಲವನ್ನೂ ನನಗೆ ಹೇಳು ಎಂದನು.

॥ ಪರಾವಸುರುವಾಚ ॥

ದೇಯೋ ಪುರಾಣವಿದುಷೇ ವಸ್ತ್ರೋ ವಿಪ್ರೋತ್ತಮಾಯ ಚ ।
ಶ್ರೂಯತಾಂ ಚಾಪಿ ವಚನಂ ಯದುಕ್ತಂ ಭಾಸ್ಕರೇಣ ಚ ॥
ಅರುಣಾಯ ಮಹಾಬಾಹೋ ಪೃಚ್ಛತೇ ಯತ್ಪುರಾ ನೃಪ ॥ ೧೧೯ ॥

ಉದಯಾಚಲಮಾರೂಢಂ ಭಾಸ್ಕರಂ ತಿಮಿರಾಪಹಂ ।
ಪ್ರಣಮ್ಯ ಶಿರಸಾ ನೂನಮಿದಂ ವಚನಮಬ್ರವೀತ್ ॥೧೨೦ ॥

ಕಾನಿ ಪ್ರಿಯಾಣಿ ತೇ ದೇವ ಪೂಜನೇ ಸಂತಿ ಸರ್ವದಾ ।
ಪುಷ್ಪಾದೀನಾಂ ಸಮುಸ್ತಾನಾಮಾರಾಧನವಿಧೌ ಸದಾ ॥
ಉಪರಾಗಾದಿ ಕಾಲೇಷು ಬ್ರಾಹ್ಮಣಾನಾಂ ತಥಾ ರವೇ ॥ ೧೨೧ ॥

॥ ಭಾಸ್ಕರ ಉವಾಚ ॥

ಪುಷ್ಪಾಣಿ ಕರವೀರಾಣಿ ತಥಾ ರಕ್ತಂ ಚ ಚಂದನಂ ।
ಗುಗ್ಗುಲಂ ಚಾಪಿ ಧೂಪಾನಾಂ ನೈವೇದ್ಯೇ ಮೋದಕಾಃ ಪ್ರಿಯಾಃ ॥ ೧೨೨ ॥

---

೧೧೯. ಪರಾವಸುವು ಹೇಳುತ್ತಾನೆ—ಎಲೈ ಮಹಾಬಾಹುವಾದ ರಾಜನೇ! ಪುರಾಣವನ್ನು ಬಲ್ಲ ಬ್ರಾಹ್ಮಣೋತ್ತಮನಿಗೇ ಒಂದುಜತೆ ವಸ್ತ್ರದಾನ ಕೊಡಬೇಕು. ಅಯ್ಯಾ ರಾಜನೇ! ಪೂರ್ವಕಾಲದಲ್ಲಿ ಈ ವಿಷಯವನ್ನು ಕುರಿತು ತನ್ನನ್ನು ಪ್ರಶ್ನೆಮಾಡಿದ ಅರುಣನಿಗೆ ಸೂರ್ಯದೇವನೇ ಅಪ್ಪಣೆ ಕೊಡಿಸಿದ ಮಾತನ್ನು ಕೇಳು.

೧೨೦. ಒಂದಾನೊಂದು ಕಾಲದಲ್ಲಿ ಅಂಧಕಾರನಾಶಕನಾದ ಸೂರ್ಯನು ಉದಯಪರ್ವತಕ್ಕೇರಿರುವಾಗ (ಉದಯಿಸಿದಾಗ) ಅರುಣನು ತಲೆಬಾಗಿ ನಮಿಸಿ ಸಹಜವಾದ ಈ ಮಾತನ್ನು ಕೇಳಿದನು.

೧೨೧. "ಎಲೈ ಸೂರ್ಯನೇ! ನಿನ್ನ ಪೂಜೆಗೆ ಉಪಯೋಗಿಸುವ ವಸ್ತುಗಳಲ್ಲಿ ಸರ್ವದಾ ನಿನಗೆ ಪ್ರಿಯವಾದುವು ಯಾವುವು? ಗ್ರಹಣ ಮೊದಲಾದ ಕಾಲಗಳಲ್ಲಿ ಬ್ರಾಹ್ಮಣರನ್ನು ಆರಾಧಿಸುವ ವಿಧಿಯಲ್ಲಿ ಎಂಥ ಪುಷ್ಪಗಳು ಮೊದಲಾದ ವಸ್ತುಗಳಿಂದ ಆರಾಧಿಸಿದರೆ ನಿನಗೆ ಪ್ರಿಯವಾಗುತ್ತದೆ" ಎಂದನು.

೧೨೨. ಸೂರ್ಯನು ಹೇಳುತ್ತಾನೆ—ಅಯ್ಯಾ ಖಗನೇ! ಹೂವುಗಳಲ್ಲಿ ಕೆಂಪು ಕಣಗಲೆ ಹೂವು, ಗಂಧಗಳಲ್ಲಿ ರಕ್ತಚಂದನ, ಧೂಪಗಳಲ್ಲಿ ಗುಗ್ಗುಲ ಧೂಪ, ಮೋದಕದ ನೈವೇದ್ಯಗಳು ಇವು ನನಗೆ ಪ್ರಿಯವಾದುವು.

ಪೂಜಾಕರಸ್ತು ಭೋಕ್ತಾ ಚ ಘೃತದೀಪಸ್ತಥಾ ಪ್ರಿಯಃ ।
ದಾನಂ ಪ್ರಿಯಂ ಖಗಶ್ರೇಷ್ಠ ವಾಚಕಾಯ ಪ್ರದೀಯತೇ ॥ ೧೨೩ ॥

ಮಾಮುದ್ದಿಶ್ಯ ಚ ಯದ್ದಾನಂ ದೀಯತೇ ಮಾನವೈರ್ಭುವಿ ।
ವಾಚಕಾಯ ತು ದಾತವ್ಯಂ ತನ್ಮಮಪ್ರೀತಯೇ ಖಗ ॥ ೧೨೪ ॥

ಇತಿಹಾಸ ಪುರಾಣೇಷು ಚಾಭಿಜ್ಞೋ ಯಸ್ತು ವಾಚಕಃ ।
ಬ್ರಾಹ್ಮಣೋ ವೈ ಖಗ ಶ್ರೇಷ್ಠ ಸಂಪೂಜ್ಯಃ ಪ್ರೀತಯೇ ಮಮ ॥ ೧೨೫ ॥

ಪೂಜಿತೇಽಸ್ಮಿನ್ಸದಾ ವಿಪ್ರೇ ಪೂಜಿತೋಽಹಂ ನ ಸಂಶಯಃ ।
ಭವಾಮಿ ಖಗಶಾರ್ದೂಲ ಯತಸ್ತ್ವಿಷ್ಟಃ ಸ ಮೇ ಸದಾ ॥ ೧೨೬ ॥

---

೧೨೩. ಇದಲ್ಲದೆ ಸೂರ್ಯ ಪೂಜಕನಾದ ಬ್ರಾಹ್ಮಣನಿಗೇ ಭೋಜನ ಮಾಡಿಸುವುದು. ತುಪ್ಪದ ದೀಪ ಹತ್ತಿಸುವುದು. ಮತ್ತು ಪುರಾಣ ವಾಚಕನಿಗೆ ದಾನಕೊಡುವುದು. ಇವೆಲ್ಲವೂ ನನಗೆ ಪ್ರೀತಿಕರಗಳಾಗುವುವು.

೧೨೪. ಅಯ್ಯಾ ಅರುಣನೇ! ಮಾನವನು ಭೂಲೋಕದಲ್ಲಿ ನನ್ನನ್ನು ಉದ್ದೇಶಿಸಿ ಏನಾದರೂ ದಾನಮಾಡಬೇಕಾಗಿದ್ದರೆ, ಆ ದಾನವನ್ನು ನನ್ನ ಪ್ರೀತಿಗಾಗಿ ಪುರಾಣ ವಾಚಕನಿಗೇ ಕೊಡಬೇಕು.

೧೨೫. ಅಯ್ಯಾ ಖಗನೇ! ಆತನು ಇತಿಹಾಸ ಪುರಾಣಗಳಲ್ಲಿ ಸಂಪೂರ್ಣ ಅಭಿಜ್ಞನೂ, ಪುರಾಣ ವಾಚನವನ್ನು ಬಿಡದೆ ನಡೆಯಿಸುವವನೂ ಆಗಿರಬೇಕು. ಅಂಥ ಬ್ರಾಹ್ಮಣನನ್ನೇ ನನ್ನ ಪ್ರೀತ್ಯರ್ಥವಾಗಿ ಪೂಜಿಸಬೇಕು.

೧೨೬. ಇಂತಹ ಬ್ರಾಹ್ಮಣನನ್ನು ಪೂಜಿಸಿದರೆ ಯಾವಾಗಲೂ ನನ್ನನ್ನೇ ಪೂಜಿಸಿದಂತಾಗುವುದು ಎಂಬುದರಲ್ಲಿ ಸಂಶಯವಿಲ್ಲ. ಅಯ್ಯಾ ಖಗಶ್ರೇಷ್ಠನೇ! ಆ ಪುರಾಣ ವಾಚಕನು ನನಗೆ ಅಷ್ಟು ಇಷ್ಟನಾಗಿರುತ್ತಾನೆ. ಆದ್ದರಿಂದ ಅವನನ್ನು ಪೂಜಿಸಿದರೆ ನಾನು ಸಂತುಷ್ಟನಾಗುತ್ತೇನೆ.

ವೇದವೀಣಾಮೃದಂಗೈಶ್ಚ ರಕ್ತಗಂಧವಿಲೇಪನೈಃ ।
ನ ತಥಾ ಜಾಯತೇ ಪ್ರೀತಿರ್ಯಥಾ ಶ್ರುತ್ವಾ ಖಗೋತ್ತಮ ॥ ೧೨೭ ॥

ಇತಿಹಾಸಪುರಾಣಾನಿ ವಾಚ್ಯಮಾನಾನಿ ವಾಚಕೈಃ ।
ಅತಃ ಪ್ರಿಯೋ ವಾಚಕೋ ಮೇ ಪೂಜಾಕರ್ತಾ ಚ ಭೋಜಕಃ ॥ ೧೨೮ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ
ಸತ್ರಾಜಿತೋಪಾಖ್ಯಾನೇ ರವಿಪೂಜಾವಿಧಿ ವರ್ಣನಂ ನಾಮ
ಷೋಡಶೋತ್ತರ ಶತತಮೋಽಧ್ಯಾಯಃ



---

೧೨೭. ವೇದಘೋಷ, ವೀಣಾವಾದನ, ಮೃದಂಗವಾದನ, ರಕ್ತಗಂಧಲೇಪನ ಇವುಗಳಿಂದ ಉಂಟಾಗುವ ಪ್ರೀತಿಗಿಂತಲೂ ಪುರಾಣವಾಚಕನು ಪುರಾಣಗಳನ್ನು ಓದುತ್ತಿದ್ದರೆ ನನಗೆ ಹೆಚ್ಚು ಪ್ರೀತಿಯಾಗುವುದು

೧೨೮. ಆದುದರಿಂದ ಪುರಾಣವಾಚಕನೂ, ಸೂರ್ಯಾರಾಧಕನಾದ ಭೋಜಕನೂ ಇಬ್ಬರೂ ನನಗೆ ಪ್ರಿಯರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸಪ್ತಮೀಕಲ್ಪದಲ್ಲಿ
ಸತ್ರಾಜಿತನ ಉಪಾಖ್ಯಾನದಲ್ಲಿ ರವಿಪೂಜಾವಿಧಿ ವರ್ಣನೆಯೆಂಬ
ನೂರಹದಿನಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಸಪ್ತದಶೋತ್ತರಶತತಮೋಽಧ್ಯಾಯಃ

---

॥ ಅರುಣ ಉವಾಚ ॥

ಕಿಮರ್ಥಂ ಭೋಜಕಸ್ತುಭ್ಯಂ ಪ್ರಿಯೋ ದೇವೇಶ ಕಥ್ಯತಾಂ ।
ನಾನ್ಯೋ ವಿಪ್ರಾದಯೋ ವರ್ಣಾ ದೇವತಾಯತನೇಷು ವೈ ॥ ೧ ॥

ಕಶ್ಚಾಯಂ ಭೋಜಕೋ ದೇವ ಕಸ್ಯ ಪುತ್ರಃ ಕಿಮಾತ್ಮಕಃ ।
ವರ್ಣತಶ್ಚಾತ್ರ ಮೇ ಬ್ರೂಹಿ ಕರ್ಮ ಚಾಸ್ಯ ಸಮಂತತಃ ॥ ೨ ॥

॥ ಆದಿತ್ಯ ಉವಾಚ ॥

ಸಾಧು ಪೃಷ್ಟೋಽಸ್ಮಿ ಭದ್ರಂ ತೇ ವೈನತೇಯ ಮಹಾಮತೇ ।
ಶೃಣುಷ್ವೈಕಮನಾಃ ಸರ್ವಂ ಗದತೋ ಮಮ ಖೇಚರ ॥ ೩ ॥

---

### ನೂರಹದಿನೇಳನೆಯ ಅಧ್ಯಾಯ

೧. ಅರುಣನು ಹೇಳುತ್ತಾನೆ—ಎಲೈ ದೇವೇಶನೇ! ಭೋಜಕನು ನಿನಗೇಕೆ ಪ್ರಿಯನಾದನು ? ದೇವಾಲಯಗಳಲ್ಲಿರುವ ವಿಪ್ರರು ಮುಂತಾದ ಇತರ ವರ್ಣದ ಯಾವನೂ ಏಕೆ ಅಷ್ಟು ಪ್ರಿಯವಾಗುವುದಿಲ್ಲ ?

೨. ಈ ಭೋಜಕನೆಂಬುವನು ಯಾರು? ಅವನು ಯಾರ ಮಗನು? ಯಾವ ಸ್ವಭಾವದವನು ? ಅವನ ಜಾತಿಯಾವುದು ? ಅವನ ಕೆಲಸವಾದರೂ ಏನು ? ಎಂದು ಕೇಳಿದನು.

೩. ಸೂರ್ಯನು ಹೇಳುತ್ತಾನೆ—ಅಯ್ಯಾ ವಿನತಾಸುತನೇ! ನನ್ನನ್ನು ನೀನು ಕೇಳಿದ್ದು ಚೆನ್ನಾಗಿದೆ. ನಿನಗೆ ಒಳ್ಳೆಯದಾಗಲಿ. ಎಲೈ ಗಗನಚರನೇ! ನಾನು ಹೇಳುವುದನ್ನು ಒಂದೇ ಮನಸ್ಸಿನಿಂದ ಕೇಳು.

ವಿಪ್ರಾದಯಸ್ತ್ವ ಯೇತ್ವನ್ಯೇ ವರ್ಣಾಃ ಕಶ್ಯಪನಂದನ ।
ತೇ ಪೂಜಯಂತಿ ಮಾಂ ನಿತ್ಯಂ ಭಕ್ತಿಶ್ರದ್ಧಾಸಮನ್ವಿತಾಃ ॥ ೪ ॥
ದೇವಾಲಯೇಷ್ವ ಯೇ ವಿಪ್ರಾಃ ಪ್ರೀತ್ಯಾ ಮಾಂ ಪೂಜಯಂತಿ ಹಿ ।

ಅನ್ಯಾಶ್ಚ ದೇವತಾಃ ವೃತ್ತ್ಯಾ ತೇ ಸ್ಯುರ್ದೇವಲಕಾಃ ಖಗ ।
ಏತಸ್ಮಾತ್ಕಾರಣಾನ್ಮಹ್ಯಂ ಭೋಜಕೋ ದಯಿತಃ ಸದಾ ॥ ೫ ॥

ವರ್ಣತೋ ಬ್ರಾಹ್ಮಣಶ್ಚಾಯಂ ಸ್ವಾನುಷ್ಠಾನಪರೋ ಯದಿ ।
ಅನುಷ್ಠಾನವಿಹೀನೋ ಹಿ ನರಕಂ ಯಾತ್ಯಸಂಶಯಂ ॥ ೬ ॥

ನ ತ್ಯಾಜ್ಯಂ ಭೋಜಕೈಸ್ತಸ್ಮಾತ್ಸ್ವಕಂ ಕರ್ಮ ಕದಾಚನ ।
ಮಯಾಸೌ ನಿರ್ಮಿತಃ ಪೂರ್ವಂ ತೇಜಸಾ ಸ್ವೇನ ವೈ ಖಗ ॥ ೭ ॥

ಪೂಜಾರ್ಥಮಾತ್ಮನೋ ನೂನಂ ಕರ್ಮ ಚಾಸ್ಯ ಪ್ರಕೀರ್ತಿತಂ ।
ಪ್ರಿಯವ್ರತಸುತೋ ರಾಜಾ ಶಾಕದ್ವೀಪೇ ಮಹಾಮತಿಃ ॥ ೮ ॥

---

೪. ಎಲೈ ಕಶ್ಯಪಪುತ್ರನೇ ! ಬ್ರಾಹ್ಮಣರು ಮೊದಲಾದವರೂ ಇತರ ವರ್ಣದವರೂ ಯಾವಾಗಲೂ ಭಕ್ತಿಶ್ರದ್ಧೆಗಳಿಂದ ನನ್ನನ್ನು ಪೂಜಿಸುತ್ತಾರೆ.

೫. ಯಾವ ಬ್ರಾಹ್ಮಣರು ಜೀವನನಿರ್ವಾಹಕ್ಕಾಗಿ ಬೇರೆ ದೇವರುಗಳನ್ನು ಪೂಜಿಸುತ್ತಾರೋ ಅವರಿಗೆ ದೇವಲಕರೆಂದು ಹೆಸರು. ಈ ಕಾರಣದಿಂದ ನನಗೆ ಯಾವಾಗಲೂ ಭೋಜಕನು ಪ್ರಿಯನು.

೬. ಜಾತಿಯಲ್ಲಿ ಬ್ರಾಹ್ಮಣನಾದವನು ತನ್ನ ಅನುಷ್ಠಾನಪರನಾಗಿರಬೇಕು. ಅನುಷ್ಠಾನಹೀನನಾಗಿದ್ದರೆ ಅವನು ನಿಸ್ಸಂದೇಹವಾಗಿ ನರಕಕ್ಕೆ ಹೋಗುವನು.

೭. ಆದುದರಿಂದ ಭೋಜಕರೆನಿಸಿದ ಸೂರ್ಯಾರ್ಚಕರು ಯಾವಾಗಲೂ ತಮ್ಮ ಕರ್ಮವನ್ನು ಬಿಡಬಾರದು. ಈ ಭೋಜಕನನ್ನು ಪೂರ್ವದಲ್ಲಿ ನಾನು ನನ್ನ ತೇಜಸ್ಸಿನಿಂದಲೇ ನಿರ್ಮಿಸಿದೆನು.

೮. ನನ್ನ ಪೂಜಾರ್ಥವಾಗಿಯೇ ಅವರ ನಿರ್ಮಾಣವಾಗಿದೆ. ಆ ಭೋಜಕರು ಮಾಡಬೇಕಾದ ಕೆಲಸವನ್ನು ಹೇಳಿದುದಾಯಿತು. ಹಿಂದೆ ಶಾಕದ್ವೀಪದಲ್ಲಿ ಮಹಾಬುದ್ಧಿಶಾಲಿಯಾದ ಪ್ರಿಯವ್ರತಪುತ್ರನೆನಿಸಿದ ಒಬ್ಬ ರಾಜನಿದ್ದನು.

ತೇನ ಮೇ ಕಾರಿತಂ ದಿವ್ಯಂ ವಿಮಾನಪ್ರತಿಮಂ ಗೃಹಂ ।
ತಸ್ಮಿನ್ ದ್ವೀಪೇ ತದಾತ್ಮೀಯೇ ದಿವ್ಯಂ ಶೈಲಮಯಂ ಮಹತ್ ॥ ೯ ॥

ಸ ಮದರ್ಚಾಂ ಕಾರಯಿತ್ವಾ ಕಾಂಚನೀಂ ಲಕ್ಷಣಾನ್ವಿತಾಂ ।
ಸಂಸ್ಥಾಪನಾಯ ವೈ ತಸ್ಯಾಃ ಚಿಂತಯಾಮಾಸ ಸುವ್ರತಃ ॥ ೧೦ ॥

ಕೃತಮಾಯತನಂ ಶ್ರೇಷ್ಠಂ ತೇನೇಯಂ ಪ್ರತಿಮಾ ಕೃತಾ ।
ಕೋ ವೈ ಪ್ರತಿಷ್ಠಾಪಯಿತಾ ದೇವಮರ್ಕಂ ಶುಭಾಲಯೇ ॥ ೧೧ ॥

ಏವಂ ಸಂಚಿಂತಯಿತ್ವಾ ತು ಜಗಾಮ ಶರಣಂ ಮಮ ।
ಭಕ್ತಿಂ ತಸ್ಯ ಚ ಸಂಚಿಂತ್ಯ ಖಗಾಹಂ ಪಾರ್ಥಿವಸ್ಯ ತು ॥ ೧೨ ॥

ಗತೋಽಹಂ ದರ್ಶನಂ ತಸ್ಯ ಉಕ್ತಶ್ಚಾಯಂ ಮಯಾ ಖಗ ।
ಕಿಂ ಚಿಂತಯಸಿ ರಾಜೇಂದ್ರ ಕುತಶ್ಚಿಂತಾ ಸಮಾಗತಾ ॥ ೧೩ ॥

---

೯. ಅವನು ತನ್ನ ದ್ವೀಪದಲ್ಲಿ ವಿಮಾನದಂತಿರುವ ಶ್ರೇಷ್ಠವಾದ ಕಲ್ಲಿನ ದೇವಾಲಯವನ್ನು ಕಟ್ಟಿಸಿದನು.

೧೦. ಅವನು ಸುವರ್ಣಮಯವಾದ ಲಕ್ಷಣಯುಕ್ತವಾದ ನನ್ನ ಪ್ರತಿಮೆಯನ್ನು ಮಾಡಿಸಿ ಅದನ್ನು ಪ್ರತಿಷ್ಠೆ ಮಾಡಿಸಬೇಕೆಂದಾಲೋಚಿಸಿದನು.

೧೧. ಶ್ರೇಷ್ಠವಾದ ದೇವಾಲಯವನ್ನೇನೋ ಕಟ್ಟಿಸಿದ್ದಾಯಿತು. ಈ ಶುಭಾಲಯದಲ್ಲಿ ಸೂರ್ಯದೇವನನ್ನು ಪ್ರತಿಷ್ಠೆಮಾಡುವವರಾರು ? ಎಂದು ಆಲೋಚಿಸಿದನು.

೧೨. ಹೀಗೆ ಆಲೋಚಿಸಿ ಆ ರಾಜನು ನನ್ನನ್ನು ಶರಣುಹೊಕ್ಕನು. ನನ್ನಲ್ಲಿ ಅವನಿಗಿದ್ದ ಭಕ್ತಿಯನ್ನು ಆಲೋಚಿಸಿ ನೋಡಿ ನಾನು ಆ ರಾಜನಿಗೆ ದರ್ಶನಕೊಟ್ಟು ಅವನನ್ನು ಕುರಿತು ನಾನು ಒಂದು ಮಾತನ್ನು ಹೇಳಿದೆನು.

೧೩. ಎಲೈ ರಾಜೇಂದ್ರನೇ ! ಏನು ಯೋಚಿಸುತ್ತಿದ್ದೀ? ನಿನಗೆ ಈ ಚಿಂತೆ ಏಕೆ ಪ್ರಾಪ್ತವಾಗಿದೆ ? ನಿನ್ನ ಮನಸ್ಸಿನಲ್ಲಿನ ಪ್ರಬಲವಾದ ಚಿಂತೆಗೆ ಕಾರಣವೇನು? ಹೇಳು.

**ಬ್ರೂಹಿ ಯತ್ತೇ ಹೃದಿ ಪ್ರೌಢಂ ಚಿಂತಾಕಾರಣಮಾಗತಂ ।**
**ನಿವಾರಯಿಷ್ಯೇ ತತ್ಸರ್ವಂ ವಿಮನಾ ಭವ ಮಾ ನೃಪ ॥ ೧೪ ॥**

**ಅತ್ಯರ್ಥಂ ದುಷ್ಕರಮಪಿ ಕರಿಷ್ಯೇ ನಾತ್ರ ಸಂಶಯಃ ।**
**ಇತ್ಯುಕ್ತಃ ಸ ಮಯಾ ರಾಜಾ ಇದಂ ವಚನಮಬ್ರವೀತ್ ॥ ೧೫ ॥**

**ದ್ವೀಪೇಽಸ್ಮಿನ್ ದೇವದೇವಸ್ಯ ಕೃತಮಾಯತನಂ ತವ ।**
**ಮಯಾ ಭಕ್ತ್ಯಾ ಜಗನ್ನಾಥ ಕೃತೇಯಂ ಪ್ರತಿಮಾ ತವ ॥ ೧೬ ॥**

**ಪ್ರತಿಷ್ಠಾಂ ಕಾರಯೇದ್ಯಸ್ತು ತಸ್ಯದೇವಾಲಯೇ ಖಗ ।**
**ಯತ್ರ ಸಂತಿ ತ್ರಯೋ ವರ್ಣಾಃ ದ್ವೀಪೇಽಸ್ಮಿನ್ ಕ್ಷತ್ರಿಯಾದಯಃ ॥ ೧೭ ॥**

**ತೇ ಮಯೋಕ್ತಾ ನ ಕುರ್ವಂತಿ ಪ್ರತಿಷ್ಠಾಂ ತವ ಕೃತ್ಸ್ನಶಃ ।**
**ನ ಚಾಸ್ಯಾರ್ಚಾಂ ಜಗನ್ನಾಥ ಬ್ರಾಹ್ಮಣೋ ಯನ್ನವಿದ್ಯತೇ ॥ ೧೮ ॥**

---

೧೪. ನಾನು ಅದೆಲ್ಲವನ್ನೂ ನಿವಾರಣೆ ಮಾಡುವೆನು. ಎಲೈ ರಾಜನೇ ! ದುಃಖಿಸಬೇಡ. ಸಾಧಿಸುವುದಕ್ಕೆ ಬಹಳ ಕಷ್ಟವಾಗಿದ್ದರೂ ನೆರವೇರಿಸುವೆನು. ಸಂದೇಹವಿಲ್ಲ ಎಂದನು.

೧೫. ನಾನು ಹೀಗೆ ಹೇಳಲಾಗಿ ಆ ರಾಜನು ಈ ಮಾತನ್ನು ಹೇಳಿದನು.

೧೬. ಜಗನ್ನಾಥನೇ ! ಈ ದ್ವೀಪದಲ್ಲಿ ದೇವದೇವನಾದ ನಿನ್ನ ಆಲಯವನ್ನು ಕಟ್ಟಿಸಿದೆನು. ಮತ್ತು ಭಕ್ತಿಯಿಂದ ನಿನ್ನ ಪ್ರತಿಮೆಯನ್ನೂ ಮಾಡಿಸಿದೆನು.

೧೭. ಈ ಶಾಕದ್ವೀಪದಲ್ಲಿ ಕ್ಷತ್ರಿಯ ಮೊದಲಾದ ಮೂರು ವರ್ಣದವರು ಮಾತ್ರ ಇದ್ದಾರೆ.

೧೮. ಹೀಗಿರುವಲ್ಲಿ ಪ್ರತಿಷ್ಠೆ ಮಾಡುವವರು ಯಾರು ? ನಾನು ಅವರಿಗೆ ಹೇಳಿದರೆ ಅವರು ಯಾರೂ ದೇವಾಲಯದಲ್ಲಿ ಪ್ರತಿಮಾ ಪ್ರತಿಷ್ಠೆಯನ್ನು ಯಥೋಕ್ತವಾಗಿ ಮಾಡುವುದಿಲ್ಲ. ಇಲ್ಲಿ ಬ್ರಾಹ್ಮಣರಿಲ್ಲದುದರಿಂದ ಪೂಜೆ ನಡೆಸುವುದಕ್ಕೂ ಅವಕಾಶ ವಿಲ್ಲ.

**ತೇನೇಯಮಾಗತಾ ಚಿಂತಾ ಹೃದಿ ಶಲ್ಯಂ ತಥಾರ್ಪಿತಂ ।**
**ತತೋ ಮಯೋಕ್ತೋ ರಾಜಾsಸೌ ವೈನತೇಯ ಸುಭಾಷಿತಂ ॥ ೧೯ ॥**

**ಏವಮೇತನ್ನ ಸಂದೇಹೋ ಯಥಾತ್ಥ ತ್ವಂ ನರಾಧಿಪ ।**
**ಕ್ಷತ್ರಿಯಾದ್ಯಾಃ ತ್ರಯೋ ವರ್ಣಾಃ ದ್ವೀಪೇsಸ್ಮಿನ್ನಾತ್ರ ಸಂಶಯಃ ॥ ೨೦ ॥**

**ತೇ ಚ ನಾರ್ಹಂತಿ ಮೇ ಪೂಜಾಂ ನ ಪ್ರತಿಷ್ಠಾಂ ಕದಾಚನ ।**
**ತಸ್ಮಾತ್ತೇ ಶ್ರೇಯಸೇ ರಾಜನ್ ಪ್ರತಿಷ್ಠಾಮಾತ್ಮನಸ್ತಥಾ ॥ ೨೧ ॥**

**ಸೃಜಾಮಿ ಪ್ರಥಮಂ ವರ್ಣಂ ಭಗಸಂಜ್ಞಮನೌಪಮಂ ।**
**ಇತ್ಯುಕ್ತ್ವಾ ತಮಹಂ ವೀರ ರಾಜಾನಂ ಖಗಸತ್ತಮ ॥ ೨೨ ॥**

**ಜಗಾಮ ಪರಮಾಂ ಚಿಂತಾಂ ತಸ್ಯ ಕಾರ್ಯಸ್ಯ ಸಿದ್ಧಯೇ ।**
**ಅಥ ಮೇ ಸಂಚಿಂತಯತಃ ಸ್ವಶರೀರಾದ್ವಿನಿಸ್ಸೃತಾಃ ॥ ೨೩ ॥**

---

೧೯. ಆದುದರಿಂದ ಚಿಂತೆಯುಂಟಾಗಿದೆ. ಮತ್ತು ಹೃದಯಕ್ಕೆ ಈಟಿಯು ನಾಟಿದಂತೆ ವೇದನೆಯಾಗಿದೆ ಏನುಮಾಡಲಿಎಂದನು. ಆಗ ನಾನು ಅವನಿಗೊಂದು ಒಳ್ಳೆಯ ಮಾತನ್ನು ಹೇಳಿದೆನು.

೨೦. ಎಲೈ ರಾಜನೇ! ನೀನು ಹೇಳಿದ್ದು ಸರಿ. ಕ್ಷತ್ರಿಯರೇ ಮೊದಲಾದ ಮೂರು ವರ್ಣದವರು ಮಾತ್ರ ಆ ದ್ವೀಪದಲ್ಲಿದ್ದಾರೆ ನಿಶ್ಚಯ.

೨೧. "ಎಲೈ ರಾಜನೇ! ಆ ಕ್ಷತ್ರಿಯಾದಿ ಮೂರು ವರ್ಣದವರೂ ಕೂಡ ನನ್ನನ್ನು ಪೂಜಿಸಲು ಅರ್ಹರಾಗಿಲ್ಲ. ನನ್ನ ಪ್ರತಿಮೆಯನ್ನು ಪ್ರತಿಷ್ಠೆ ಮಾಡುವುದಕ್ಕೂ ಅರ್ಹರಲ್ಲ. ಆದ್ದರಿಂದ ಆತ್ಮನು (ಪರಬ್ರಹ್ಮನು) ಪ್ರತಿಷ್ಠಿತನಾಗಿರುವ ಪ್ರಥಮ ವರ್ಣವನ್ನು (ಎಂದರೆಬ್ರಾಹ್ಮಣ ಜಾತಿಯನ್ನು) ನಿನಗೆ ಶ್ರೇಯಸ್ಸುಂಟುಮಾಡುವುದಕ್ಕಾಗಿ ನಿರ್ಮಿಸುವೆನು" ಎಂದನು.

೨೨. ಅಯ್ಯಾ ವೀರನಾದ ಅರುಣನೇ! ಆ ರಾಜನನ್ನು ಕುರಿತು ನಾನು ಹೀಗೆ ಹೇಳಿದಮೇಲೆ ಈ ಕಾರ್ಯಸಿದ್ಧಿಯಾಗುವುದು ಹೇಗೆಂಬದಾಗಿ ನಾನು ಚಿಂತಿಸುತ್ತಿದ್ದೆನು.

೨೩. ನಾನು ಹೀಗೆ ಚಿಂತಿಸುತ್ತಿರುವಾಗ ಚಂದ್ರ, ಶಂಖ, ಮಲ್ಲೆಹೂ, ಇವುಗಳ ವರ್ಣದಂತೆ ಶುಭ್ರವರ್ಣವುಳ್ಳವರೂ, ಮಹಾಬಲಶಾಲಿಗಳೂ ಆದ.

**ಶಶಿಕುಂದೇಂದುಸಂಕಾಶಾಃ ಸಂಖ್ಯಯಾಷ್ಟೌ ಮಹಾಬಲಾಃ ।**
**ಪಠಂತಶ್ಚತುರೋ ವೇದಾನ್ ಸಾಂಗೋಪನಿಷದಃ ಖಗ ॥ ೨೪ ॥**

**ಕಾಷಾಯ ವಾಸಸಃ ಸರ್ವೇ ಕರಂಡಾಂಬುಜಧಾರಿಣಃ ।**
**ಲಲಾಟಫಲಕಾ ದ್ವೌ ತು ದ್ವೌ ಚಾನ್ಯೌ ವಕ್ಷಸಸ್ತಥಾ ॥ ೨೫ ॥**

**ಚರಣಾಭ್ಯಾಂ ತಥಾ ದ್ವೌತು ಕರಾಭ್ಯಾಂ ದ್ವೌ ತಥಾ ಖಗ ।**
**ಅಥ ತೇ ಚ ಮಹಾತ್ಮಾನಃ ಸರ್ವೇ ಪ್ರಣತಕಂಧರಾಃ ॥ ೨೬ ॥**

**ಪಿತರಂ ಮನ್ಯಮಾನಾ ಮಾಮಿದಂ ವಚನಮಬ್ರುವನ್ ।**
**ತಾತ ತಾತ ಮಹಾದೇವ ಲೋಕನಾಥ ಜಗತ್ಪತೇ ॥ ೨೭ ॥**

**ಕಿಮರ್ಥಂ ಭವತಾ ಸೃಷ್ಟಾಃ ವಯಂ ದೇವಸ್ಯ ದೇಹತಃ ।**
**ಬ್ರೂಹಿ ಸರ್ವಂ ಕರಿಷ್ಯಾಮ ಆದೇಶಂ ಭವತೋಽಖಿಲಂ ॥ ೨೮ ॥**

---

೨೪. ಎಂಟುಮಂದಿ ಬ್ರಾಹ್ಮಣರು, ಚತುರ್ವೇದಗಳು, ವೇದಾಂಗಗಳು ಉಪನಿಷತ್ತುಗಳು ಇವುಗಳನ್ನು ಸಾಂಗವಾಗಿ ಪಠಿಸುತ್ತಾ, ನನ್ನ ಶರೀರದಿಂದ ಉತ್ಪನ್ನರಾದರು.

೨೫. ಹೀಗೆ ಜನಿಸಿದ ಅವರೆಲ್ಲರೂ ಕಾವಿಯ ಬಟ್ಟೆಯನ್ನು ಧರಿಸಿದವರೂ, ಕೈಯಲ್ಲಿ ಕರಂಡ ಸದೃಶವಾದ ಶಂಖವನ್ನು ಹಿಡಿದವರೂ ಆಗಿ, ಹಣೆಯಿಂದ ಇಬ್ಬರು ಎದೆಯಿಂದ ಇಬ್ಬರು.

೨೬. ಎರಡು ಕಾಲುಗಳಿಂದ ಇಬ್ಬರು, ಎರಡು ಕೈಗಳಿಂದ ಇಬ್ಬರು. ಈ ರೀತಿಯಾಗಿ ಆವಿರ್ಭವಿಸಿದರು. ಅಯ್ಯಾ ಖಗನೇ ! ಹೀಗೆ ಜನಿಸಿದ ಮಹಾತ್ಮರಾದ ಅವರೆಲ್ಲರೂ ಕತ್ತನ್ನು ತಗ್ಗಿಸಿ.

೨೭. ವಿನಯದಿಂದ ನನ್ನನ್ನು ತಂದೆಯೆಂದು ಭಾವಿಸಿ ನನ್ನನ್ನು ಕುರಿತು ಈ ಮಾತನ್ನು ಹೇಳಿದರು. " ತಂದೇ ! ಲೋಕನಾಥಾ! ಜಗತ್ಪತಿಯೇ ! ಮಹಾಸ್ವಾಮಿಯೇ !

೨೮. "ದೇವನಾದ ನಿನ್ನ ದೇಹದಿಂದ ನಮ್ಮನ್ನು ಏತಕ್ಕೆ ಸೃಷ್ಟಿಸಿದೆ? ನಿನ್ನ ಅಪ್ಪಣೆಯಾದಂತೆ ಎಲ್ಲವನ್ನೂ ಸ್ವಲ್ಪವೂ ನ್ಯೂನತೆ ಇಲ್ಲದೆ ನೆರವೇರಿಸುತ್ತೇವೆ, ಹೇಳು.

ಪಿತಾಸ್ಮಾಕಂ ಭವಾನ್ ದೇವೋ ವಯಂ ಪುತ್ರಾ ನ ಸಂಶಯಃ ।
ಇತ್ಯುಕ್ತವಂತಸ್ತೇ ಸರ್ವೇ ಮಯೋಕ್ತಾ ದೇವಸಂಭವಾಃ ॥ ೨೯ ॥

ಪ್ರಿಯವ್ರತಸುತೋ ಯೋಽಯಮಸ್ಯವಾಕ್ಯಂ ಕರಿಷ್ಯಥ ।
ಸ ಚಾಪ್ಯುಕ್ತೋ ಮಯಾ ರಾಜಾ ಶಾಕದ್ವೀಪಾಧಿಪಃ ಖಗ ॥ ೩೦ ॥

ಯ ಏತೇ ಮತ್ಸುತಾ ರಾಜನ್ನರ್ಘ್ಯಾ ಬ್ರಾಹ್ಮಣಸತ್ತಮಾಃ ।
ಕಾರಯ ತ್ವಂ ಪ್ರತಿಷ್ಠಾಂ ಮೇ ಸರ್ವೈರೇಭಿರ್ಮಹೀಪತೇ ॥ ೩೧ ॥

ಕಾರಯಿತ್ವಾ ಪ್ರತಿಷ್ಠಾಂ ತು ಮಮಾರ್ಚಾಯಾಂ ನರಾಧಿಪ ।
ಪಶ್ಚಾದಾಯತನಂ ಸರ್ವಮೇಷಾಮರ್ಪಯ ಪೂಜನೇ ॥ ೩೨ ॥

ಏತೇ ಮತ್ಪೂಜನೇ ಯೋಗ್ಯಾಃ ಪ್ರತಿಷ್ಠಾಸು ಚ ಸರ್ವಶಃ ।
ಸಮರ್ಪ್ಯ ನಾಪಹರ್ತವ್ಯಂ ಭೋಜಕೇಭ್ಯಃ ಕದಾಚನ ॥ ೩೩ ॥

---

೨೯. "ಸ್ವಾಮೀ! ನೀನು ನಮಗೆ ತಂದೆ. ನಾವು ನಿನ್ನ ಮಕ್ಕಳು; ಇದರಲ್ಲಿ ಸಂದೇಹವಿಲ್ಲ" ಎಂದರು. ಓ ಖಗನೇ! ನನ್ನ ದೇಹದಿಂದ ಜನಿಸಿದ ಅವರೆಲ್ಲರೂ ಹೀಗೆ ಹೇಳುತ್ತಲೇ ನಾನು ಅವರನ್ನು ಕುರಿತು ಈ ರೀತಿ ಹೇಳಿದೆನು.

೩೦. "ಇಲ್ಲಿ ನೋಡಿ! ಈತನು ಪ್ರಿಯವ್ರತನಮಗನು. ಶಾಕದ್ವೀಪದ ಅಧಿಪನು. ಇವನ ಮಾತನ್ನು ನಡೆಯಿಸಿಕೊಡಿ" ಎಂದು ಹೇಳಿ; ಆಮೇಲೆ ಆ ದ್ವೀಪಾಧಿಪತಿಯಾದ ಅವನನ್ನು ಕುರಿತು ಹೇಳಿದನು.

೩೧. "ಅಯ್ಯಾ ರಾಜನೇ, ಪೂಜಾಯೋಗ್ಯರೂ ಬ್ರಾಹ್ಮಣಶ್ರೇಷ್ಠರೂ ಆದ ಈ ನನ್ನ ಪುತ್ರರು ಇದಾರೆ–ಇವರನ್ನು ಕರೆದುಕೊಂಡುಹೋಗಿ ಇವರೆಲ್ಲರ ಸಹಾಯದಿಂದ ನೀನು ನನ್ನ ಪ್ರತಿಮಾಪತಿಷ್ಠೆಯನ್ನು ಮಾಡಿಸು.

೩೨. "ಅಯ್ಯಾ ನರಾಧಿಪನೇ! ಇವರಿಂದ ಪ್ರತಿಮಾಸ್ಥಾಪನೆಯನ್ನು ಮಾಡಿಸಿ ಅಲ್ಲಿ ಪೂಜೆಯು ಅವಿಚ್ಛಿನ್ನವಾಗಿ ನಡೆಯುವುದಕ್ಕೋಸ್ಕರ ಆ ದೇವಾಲಯದ ಹಿಂಭಾಗದಲ್ಲಿ ಈ ಬ್ರಾಹ್ಮಣರಿಗೆ ಮನೆಯನ್ನು ಕಟ್ಟಿಸಿ ಉಪಕರಣಸಹಿತವಾದ ಆ ಮನೆಯನ್ನು ಇವರಿಗೆ ಒಪ್ಪಿಸು.

೩೩. "ಇವರು ನನ್ನನ್ನು ಪೂಜಿಸುವುದಕ್ಕೂ ಪ್ರತಿಮಾಪ್ರತಿಷ್ಠೆ ಮಾಡುವುದಕ್ಕೂ ಎಲ್ಲಕ್ಕೂ ಯೋಗ್ಯರಾದವರು. ಹೀಗೆ ಭೋಜಕರಿಗೆ ಕೊಟ್ಟಮನೆಯನ್ನು ಯಾವಾಗಲೂ ಹಿಂದಕ್ಕೆ ಕಿತ್ತು ಕೊಳ್ಳಬಾರದು.

**ಸರ್ವಮಾಯತನಾರ್ಥಂ ತು ಗೃಹಕ್ಷೇತ್ರಾದಿಕಂ ಚ ಯತ್ ।**
**ಯನ್ಮದೀಯಂ ಭವೇತ್ಕಿಂಚಿದ್ಗ್ರಾಮೇ ವಾ ನಗರೇ ಕ್ವಚಿತ್ ॥ ೩೫ ॥**

**ತಸ್ಯ ಸರ್ವಸ್ಯ ರಾಜೇಂದ್ರ ಮದೀಯಸ್ಯ ಸಮಂತತಃ ।**
**ಅಧಿಪಾಃ ಭೋಜಕಾಃ ಸರ್ವೇ ನಾನ್ಯೇ ವಿಪ್ರಾದಯೋ ನೃಪ ॥ ೩೬ ॥**

**ಯಥಾಧಿಕಾರೀ ಪುತ್ರಸ್ತು ಪಿತುರ್ದ್ರವ್ಯಸ್ಯ ವೈ ಭವೇತ್ ।**
**ತಥಾ ಮದೀಯವಿತ್ತಸ್ಯ ಭೋಜಕಾಸ್ಯುರ್ನ ಸಂಶಯಃ ॥ ೩೭ ॥**

**ಇತ್ಯುಕ್ತೇನ ಮಯಾ ರಾಜ್ಞಾ ತಥಾ ಸರ್ವಂ ಪ್ರವರ್ತಿತಂ ।**
**ಕಾರಯಿತ್ವಾ ಪ್ರತಿಷ್ಠಾಂ ತು ದತ್ವಾ ಸರ್ವಸ್ವಮೇವ ಹಿ**
**ಭೋಜಕೇಭ್ಯಃ ಖಗಶ್ರೇಷ್ಠ ತತೋ ಹರ್ಷಮವಾಪ್ತವಾನ್ । ॥ ೩೮ ॥**

---

೩೪. ಅಯ್ಯಾ, ರಾಜನೇ,! ದೇವಾಲಯಕ್ಕಾಗಿ ಏರ್ಪಡಿಸಿದ ಗೃಹ ಕ್ಷೇತ್ರ ಮೊದಲಾದುವನ್ನೂ, ಇನ್ನೂ ನನ್ನ ದೇವಾಲಯದಲ್ಲಿ ಏನೇನಿವೆಯೋ ಅವೆಲ್ಲವನ್ನೂ ಭೋಜಕನಿಗೆ ಕೊಡಬೇಕು. ಇದರಲ್ಲಿ ಸಂಸಯವಿಲ್ಲ.

೩೫. ಹಳ್ಳಿಯಲ್ಲಿಯಾಗಲೀ, ಪಟ್ಟಣದಲ್ಲಿಯಾಗಲೀ, ನನ್ನ ಸಂಬಂಧವಾದ (ದೇವಾಲಯಕ್ಕೆ ಸೇರಿದ) ಧನ, ಧಾನ್ಯ, ಚಿನ್ನ, (ಒಡವೆ) ಮೊದಲಾದ್ದು ಮನೆ, ಹೊಲ, ಗದ್ದೆ, ಮುಂತಾದುವು ಏನು ಕೊಂಚವಿದೆಯೋ ?

೩೬. ಅಯ್ಯಾ ರಾಜೇಂದ್ರನೇ ! ಆ ನನ್ನ ಸಂಬಂಧವಾದ ವಸ್ತುಸಮೂಹ ವೆಲ್ಲಕ್ಕೂ ಭೋಜಕರೇ ಅಧಿಕಾರಿಗಳೇ ವಿನಾ ಇತರಾದಿಗಳು ನನ್ನ ವಸ್ತುಗಳಿಗೆ ಬಾಧ್ಯರಲ್ಲ.

೩೭. ತಂದೆಯ ಸ್ವತ್ತಿಗೆಲ್ಲಾ ಮಗನು ಹೇಗೆ ಅಧಿಕಾರಿಯೋ ಹಾಗೆ ನನ್ನ ದ್ರವ್ಯಕ್ಕೆ ಭೋಜಕರು ಅಧಿಕಾರಿಗಳು ಎಂಬುದರಲ್ಲಿ ಸಂಶಯವಿಲ್ಲ" ಎಂದನು.

೩೮. ಎಲೈ, ಅರುಣನೇ ! ನಾನು ಆ ರಾಜನಿಗೆ ಹೀಗೆ ಹೇಳಲಾಗಿ ಆತನು, ನಾನು ಹೇಳಿದಂತೆ ಎಲ್ಲವನ್ನೂ ಏರ್ಪಡಿಸಿ ವಿಗ್ರಹಪ್ರತಿಷ್ಠೆಯನ್ನು ಮಾಡಿಸಿ ಭೋಜಕರಿಗೆ ಸಮಸ್ತವನ್ನೂ ಕೊಡಲಾಗಿ ಅದರಿಂದ ನಾನು ಸಂತೋಷಹೊಂದಿದೆನು.

ಏವಮೇತೇ ಮಯಾ ಸೃಷ್ಟಾ ಭೋಜಕಾ ಗರುಡಾಗ್ರಜ ।
ಅಹಮಾತ್ಮಾ ತತೋ ಹ್ಯೇಷಾಂ ಸರ್ವೇ ಸುಮನಸಸ್ತಥಾ ॥ ೩೯ ॥

ಮತ್ಪುತ್ರೇಣ ಸಮಾ ಜ್ಞೇಯಾಸ್ತಥಾ ಮಮ ಹಿತಾಃ ಸದಾ ।
ತಸ್ಮಾತ್ತೇಭ್ಯ ಪ್ರದಾತವ್ಯಂ ನ ಹರ್ತವ್ಯಂ ಕದಾಚನ ॥ ೪೦ ॥

ಭೋಜಕಸ್ಯ ಹರೇದ್ಯಸ್ತು ಲೋಭಾದ್ವೇಷಾತ್ತಥಾಪಿ ವಾ ।
ಸ ಯಾತಿ ನರಕಂ ಘೋರಂ ತಾಮಿಸ್ರಂ ಶಾಶ್ವತೀಃ ಸಮಾಃ ॥ ೪೧ ॥

ತಸ್ಮಾದ್ಗ್ರಾಮಾದಿಕಂ ದ್ರವ್ಯಂ ಯತ್ಕಿಂಚಿನ್ಮಮ ವಿದ್ಯತೇ ।
ತತ್ಸರ್ವಂ ಭೋಜಕಸ್ವಂ ಹಿ ಪಿತೃಪರ್ಯಾಗತಂ ಮಮ ॥ ೪೨ ॥

---

೩೯. ಗರುಡನ ಅಣ್ಣನಾದ ಅಸುರನೇ! ಹೀಗೆ ಭೋಜಕರನ್ನು ನಾನು ಸೃಷ್ಟಿಮಾಡಿದೆನು. ಆದ್ದರಿಂದ ಅವರಿಗೆ ನಾನೇ ಆತ್ಮಸ್ವರೂಪನು. ಅವರೆಲ್ಲಾ ದೇವತಾಸ್ವರೂಪರು.

೪೦. ಆ ಭೋಜಕರು ನನ್ನ ಪುತ್ರಸಮಾನರೆಂದು ತಿಳಿಯಬೇಕು. ಮತ್ತು ಅವರು ಸರ್ವದಾ ನನ್ನ ಹಿತಕಾರಿಗಳಾಗಿದ್ದಾರೆ. ಆದ್ದರಿಂದ ಯಾವಾಗಲೂ ಅವರಿಗೆ ದಾನ ಮಾಡಬೇಕು. ಅವರಿಗೆ ಕೊಟ್ಟದ್ದನ್ನು ಯಾವಾಗಲೂ ಹಿಂದಕ್ಕೆ ಕಸಿದುಕೊಳ್ಳಬಾರದು.

೪೧. ಭೋಜಕರಿಗೆ ಕೊಟ್ಟದ್ದನ್ನು ಲೋಭದಿಂದಾಗಲಿ, ದ್ವೇಷದಿಂದಾಗಲಿ ಯಾರು ಕಿತ್ತುಕೊಳ್ಳುವರೋ, ಅವರು ಬಹುಕಾಲದವರೆಗೆ ಭಯಂಕರವಾದ ತಾಮಿಸ್ರ ನರಕವನ್ನು ಅನುಭವಿಸುತ್ತಾರೆ.

೪೨. ಆದುದರಿಂದ ಗ್ರಾಮ ಮೊದಲಾದ ದೇವಾಲಯಕ್ಕೆ ಸಂಬಂಧಿಸಿದ್ದು ಏನೊಂದು ಕೊಂಚವಿದ್ದರೂ ಅದೆಲ್ಲವೂ ಭೋಜಕನ ಸ್ವತ್ತು. ನನ್ನ ಸಂಬಂಧಿಯಾದ ಅದು ಪಿತೃ ಪರಂಪರೆಯಿಂದ ಬಂದುದು.

ಭೋಜಕಶ್ಚ ಭವೇದ್ಯಾದೃಕ್ತತ್ತೇ ವಚ್ಮಿ ಖಗೇಶ್ವರ ।
ಮಮಾಜ್ಞಾಂ ಪಾಲಯೇದ್ಯಸ್ತು ಸ್ವಾನುಷ್ಠಾನಪರಃ ಸದಾ ॥ ೪೩ ॥

ವೇದಾಧಿಗಮನಂ ಪೂರ್ವಂ ದಾರಸಂಗ್ರಹಣಂ ತತಃ ।
ಅಭ್ಯಂಗಕರಣಂ ನಿತ್ಯಂ ತಥಾ ತ್ರಿಷವಣಂ ಸ್ಮೃತಂ ॥ ೪೪ ॥

ಪಂಚಕೃತ್ವಃ ಸದಾಪೂಜ್ಯೋ ಹ್ಯಹಂ ರಾತ್ರೌ ದಿನೇ ತಥಾ ।
ದೇವಬ್ರಾಹ್ಮಣವೇದಾನಾಂ ನಿಂದಾ ಕಾರ್ಯಾ ನ ವೈ ಕ್ವಚಿತ್ ॥ ೪೫ ॥

ನಾನ್ಯದೇವಪ್ರತಿಷ್ಠಾ ತು ಕಾರ್ಯಾ ವೈ ಭೋಜಕೇನ ತು ।
ಮಮಾಪಿ ಚ ನ ಕರ್ತವ್ಯಾ ತೇನ ಏಕಾಕಿನಾ ಕ್ವಚಿತ್ ॥ ೪೬ ॥

ಸರ್ವಮೇವ ನಿವೇದ್ಯಾನ್ನಂ ನಾಶ್ನೀಯಾದ್ಭೋಜಕಃ ಸ್ವದಾ ।
ನ ಭುಂಜೀತ ಗೃಹಂ ಗತ್ವಾ ಶೂದ್ರಸ್ಯ ಗರುಡಾಗ್ರಜ ॥ ೪೭ ॥

---

೪೩. ಅಯ್ಯಾ ಖಗೇಶ್ವರನಾದ ಅರುಣನೇ! ಇನ್ನು ಭೋಜಕನು ಯಾವ ಪ್ರಕಾರ ಇರಬೇಕು ಎಂಬುದನ್ನು ನಿನಗೆ ಹೇಳುತ್ತೇನೆ. ತನ್ನ ನಿತ್ಯಕರ್ಮವನ್ನು ಅನುಷ್ಠಾನ ಮಾಡುವುದರಲ್ಲಿ ಸದಾ ಆಸಕ್ತನಾಗಿ ನನ್ನ ಆಜ್ಞೆಯನ್ನು ಪಾಲಿಸುತ್ತಿರಬೇಕು.

೪೪. ಮೊದಲು ವೇದಾಧ್ಯಯನವನ್ನು ಪೂರಯಿಸಿ ಅನಂತರ ಗೃಹಸ್ಥಾಶ್ರಮಿಯಾಗಬೇಕು, ಆತನು ನಿತ್ಯವೂ ಅಭ್ಯಂಗ; ಪ್ರಾತಸ್ಸವನ ಮಧ್ಯಾಹ್ನ ಸವನ, ಸಾಯಂ ಸವನ ಎಂಬ ತ್ರಿಸವನ ಕರ್ಮ ಮಾಡಬೇಕು.

೪೫. ಸದಾ ಪೂಜ್ಯನಾದ ನನಗೆ ಪ್ರತಿದಿನವೂ ಹಗಲು ರಾತ್ರಿಗಳಿಂದ ಒಟ್ಟು ಐದುಸಲ ಪೂಜೆಮಾಡಬೇಕು. ಎಲ್ಲಿಯೂ, ಯಾವ ಸಂದರ್ಭದಲ್ಲಿಯೂ ದೇವರು, ಬ್ರಾಹ್ಮಣರು, ವೇದ ಇವನ್ನು ನಿಂದೆಮಾಡಬಾರದು.

೪೬. ಭೋಜಕನು ಇತರ ದೇವರ ಪ್ರತಿಷ್ಠೆಯನ್ನು ಮಾಡಬಾರದು. ಅವನು ಒಬ್ಬಂಟಿಗನಾಗಿ ಎಲ್ಲಿಯೂ ನನ್ನ ಪೂಜೆಯನ್ನು ಮಾಡಬಾರದು.

೪೭. ಎಲೈ ಗರುಡಾಗ್ರಜನೇ! ನನಗೆ ನಿವೇದನಮಾಡಿದ ಅನ್ನವೆಲ್ಲವನ್ನೂ ಮನೆಗೆ ತೆಗೆದುಕೊಂಡುಹೋಗಿ ತಾನೊಬ್ಬನೇ ತಿನ್ನಬಾರದು. ಅವನು ಯಾವಾಗಲೂ ಶೂದ್ರಾನ್ನವನ್ನು ತಿನ್ನಬಾರದು.

ಶೂದ್ರೋಚ್ಛಿಷ್ಟಂ ಪ್ರಯತ್ನೇನ ಸದಾ ತ್ಯಾಜ್ಯಂ ಹಿ ಭೋಜಕೈಃ ।
ಯೇಽಶ್ನಂತಿ ಭೋಜಕಾ ನಿತ್ಯಂ ಶೂದ್ರಾನ್ನಂ ಶೂದ್ರವೇಶ್ಮನಿ ॥ ೪೮ ॥

ತೇ ವೈ ಪೂಜಾಫಲಂ ಚಾತ್ರ ಕಥಂ ಪ್ರಾಪ್ಸ್ಯಂತಿ ಖೇಚರ ।
ಗತ್ವಾ ಗೃಹಂ ತು ಶೂದ್ರಸ್ಯ ನ ಭೋಕ್ತವ್ಯಂ ಕದಾಚನ ॥ ೪೯ ॥

ಗೃಹಾಗತಂ ಚ ಶೂದ್ರಾನ್ನಂ ತಚ್ಚ ತ್ಯಾಜ್ಯಂ ತಥೈವ ಚ ।
ಆಧ್ಮಾತವ್ಯೋಽಬುಂಜೋ ನಿತ್ಯಂ ಭೋಜಕೇನಾಗ್ರತೋ ಮಮ ॥ ೫೦ ॥

ಸಕೃತ್ಪ್ರವಾದಿತೇ ಶಂಖೇ ಮಮ ಪ್ರೀತಿರ್ಹಿ ಜಾಯತೇ ।
ಷಣ್ಮಾಸಾನ್ನಾತ್ರ ಸಂದೇಹಃ ಪುರಾಣಶ್ರವಣಂ ತಥಾ ॥ ೫೧ ॥

ತಸ್ಮಾಚ್ಛಂಖಃ ಸದಾ ವಾದ್ಯೋ ಭೋಜಕೇನ ಪ್ರಯತ್ನತಃ ।
ತಸ್ಯೇಯಂ ಪರಮಾ ವೃತ್ತಿಃ ನೈವೇದ್ಯಂ ಯನ್ಮದೀಯಕಂ ॥ ೫೨ ॥

---

೪೮. ಭೋಜಕನು ಶೂದ್ರರಿಗೆ ಊಟಕ್ಕೆ ಬಡಿಸಿ ಮಿಕ್ಕ ಅನ್ನವನ್ನು ಯಾವಾಗಲೂ ತಿನ್ನಬಾರದು. ಯಾವಾಗಲೂ ಶೂದ್ರನ ಮನೆಯಲ್ಲಿ ಅಟ್ಟು ಭೋಜನ ಮಾಡುವ ಭೋಜಕರು ಪೂಜಾಫಲವನ್ನು ಹೊಂದುವುದಿಲ್ಲ.

೪೯-೫೦. ಅಯ್ಯಾ ಖೇಚರನೇ! ಶೂದ್ರರ ಮನೆಯಲ್ಲಿ ತಳುಗಿ ಯಾವಾಗಲೂ ಭೋಜನಮಾಡಬಾರದು. ಒಂದು ವೇಳೆ ಶೂದ್ರಾನ್ನವು ಹೇಗೋ ತನ್ನ ಮನೆಗೇ ಬಂದು ಸೇರಿದರೂ ಅದನ್ನೂ ತ್ಯಾಜ್ಯಮಾಡಬೇಕು. ಭೋಜಕನು ಯಾವಾಗಲೂ ನನ್ನ ಮುಂದೆ ಶಂಖಧ್ವನಿ ಮಾಡಬೇಕು.

೫೧. ಭೋಜಕನು ಒಂದುಸಾರಿ ನನ್ನ ಮುಂದೆ ಶಂಖವನ್ನು ಊದಿದರೂ ನನಗೆ ಅವನಲ್ಲಿ ಪ್ರೀತಿಯುಂಟಾಗುವುದು. ಆರುತಿಂಗಳು ಪುರಾಣ ಶ್ರವಣ ಮಾಡಿದವನಲ್ಲಿ ಆಗುವಷ್ಟು ಪ್ರೀತಿ ಆ ಶಂಖವನ್ನೂದುವುದರಿಂದ ಉಂಟಾಗುವುದು. ಇದರಲ್ಲಿ ಸಂದೇಹವಿಲ್ಲ.

೫೨. ಆದುದರಿಂದ ಭೋಜಕನು ಪ್ರಯತ್ನದಿಂದ ನಿತ್ಯವೂ ಶಂಖವನ್ನು ಊದಬೇಕು. ನನ್ನ ನೈವೇದ್ಯವಾದುದನ್ನು ಸೇವಿಸುವುದೇ ಅವನಿಗೆ ಶ್ರೇಷ್ಠವಾದ ಜೀವನವು.

ನಾಭೋಜ್ಯಂ ಭುಂಜತೇ ಯಸ್ಮಾತ್ತೇನ ತೇ ಭೋಜಕಾ ಮತಾಃ ।
ಮಗಂ ಧ್ಯಾಯಂತಿ ಯೇ ಯಸ್ಮಾತ್ತೇನ ತೇ ಮಗಧಾಃ ಸ್ಮೃತಾಃ ॥ ೫೩ ॥

ಭೋಜಯಂತಿ ಚ ಮಾಂ ನಿತ್ಯಂ ತೇನ ತೇ ಭೋಜಕಾಃ ಸ್ಮೃತಾಃ ।
ಅಭ್ಯಂಗಂ ಚ ಪ್ರಯತ್ನೇನ ಕಾರ್ಯಂ ಶುದ್ಧಿಕರಂ ಪರಂ ॥ ೫೪ ॥

ಅಭ್ಯಂಗಹೀನೋಽಪ್ಯಶುಚಿರ್ಭೋಜಕಸ್ಸ್ಯಾನ್ನ ಸಂಶಯಃ ।
ಯಸ್ತು ಮಾಂ ಪೂಜಯೇದ್ವೀರ ಅಭ್ಯಂಗೇನ ವಿನಾ ಖಗ ॥ ೫೫ ॥

ನ ತಸ್ಯ ಸಂತತಿಃ ಸ್ಯಾದ್ವೈ ನ ಚಾಹಂ ಪ್ರೀತಿಮಾನ್ ಭವೇ ।
ಮುಂಡನಂ ಶಿರಸಾ ಕಾರ್ಯಂ ಶಿಖಾ ಧಾರ್ಯಾ ಪ್ರಯತ್ನತಃ ॥ ೫೬ ॥

ನಕ್ತಂ ಚಾದಿತ್ಯದಿವಸೇ ತಥಾ ಷಷ್ಠ್ಯಾಂ ಪ್ರವರ್ತಯೇತ್ ।
ಸಪ್ತಮ್ಯಾಮುಪವಾಸಸ್ತು ಮಮ ಸಂಕ್ರಮಣೇ ತಥಾ ॥ ೫೭ ॥

---

೫೩. ಭೋಜಕರು ತಿನ್ನಬಾರದುದನ್ನು ಎಂದಿಗೂ ತಿನ್ನುವುದಿಲ್ಲವಾದುದರಿಂದ ಅವರಿಗೆ ಭೋಜಕರೆಂದು ಹೆಸರಾಯಿತು. ಮತ್ತು ಮಗದೇಶವನ್ನು ಧ್ಯಾನಮಾಡುವುದರಿಂದ ಇವರನ್ನು ಮಗಧವೆನ್ನುವರು.

೫೪ ನಿತ್ಯವೂ ನನಗೆ ಭೋಜನ ಮಾಡಿಸುವುದರಿಂದಲೂ, ಇವರು ಭೋಜಕರೆನಿಸಿದರು. ಭೋಜಕರು ಅತ್ಯಂತ ಶುದ್ಧಿಕರವಾದ ಅಭ್ಯಂಗವನ್ನು ಪ್ರಯತ್ನದಿಂದ ಮಾಡಿಕೊಳ್ಳಬೇಕು.

೫೫. ಅಭ್ಯಂಗವಿಲ್ಲದ ಭೋಜಕನು ಅಶುಚಿಯಾಗುವನು. ಎಲೈ ಖಗನೇ! ಯಾವನು ಅಭ್ಯಂಗವಿಲ್ಲದೆ ನನ್ನನ್ನು ಪೂಜಿಸುತ್ತಾನೋ ಅವರಿಗೆ ನನ್ನ ಅನುಗ್ರಹವೂ ಲಭಿಸುವುದಿಲ್ಲ. ಅವನ ಸಂತಾನವೂ ವೃದ್ಧಿಯಾಗುವುದಿಲ್ಲ.

೫೬. ಭೋಜಕನು ತಲೆ ಕ್ಷೌರ ಮಾಡಿಸಿಕೊಳ್ಳಬೇಕು. ಆದರೆ ಸ್ವಲ್ಪ ಜುಟ್ಟು ಬಿಟ್ಟಿರಬೇಕು.

೫೭. ಭೋಜಕನು ಭಾನುವಾರದ ದಿನ ನಕ್ತಭೋಜನ ಮಾಡಬೇಕು. ಅಲ್ಲದೆ ಸಪ್ತಮಿಯಲ್ಲೂ ಸಂಕ್ರಮಣದ ದಿನವೂ ಉಪವಾಸವನ್ನು ಮಾಡುವುದು ನನಗೆ ಪ್ರಿಯವಾದುದು.

ಕರ್ತವ್ಯೋ ಭೋಜಕೇನೈವ ಮತ್ಪ್ರೀತ್ಯೈ ಗರುಡಾಗ್ರಜ ।
ತ್ರಿಕಾಲಂ ಚಾಪಿ ಗಾಯಿತ್ರೀಂ ಜಪೇದ್ವಾಚಾ ಪುರೋ ಮಮ ॥ ೫೮ ॥

ಮುಖಮಾವೃತ್ಯ ಯತ್ನೇನ ಪೂಜನೀಯೋಽಹಮಾದರಾತ್ ।
ಕಾಮಂ ಚಾಸ್ಯ ಪ್ರಯತ್ನೇನ ತ್ಯಕ್ತ್ವಾ ಕ್ರೋಧಂ ಚ ದೂರತಃ ॥ ೫೯ ॥

ಶೂದ್ರೇಭ್ಯೋ ಯಸ್ತು ವೈಶ್ಯೇಭ್ಯೋ ಲೋಭಾತ್ಕಾಮಾತ್ಪ್ರಯಚ್ಛತಿ ।
ನಿರ್ಮಾಲ್ಯಂ ಮಮ ವೈ ವತ್ಸ ಸ ಯಾತಿ ನರಕಂ ಧ್ರುವಂ ॥ ೬೦ ॥

ಲೋಭಾದ್ವೈ ಭೋಜಕೋ ಯಸ್ತು ಮತ್ಪುಷ್ಪಾಣಿ ಖಗಾಧಿಪ ।
ಯಚ್ಛತೇನ್ಯಸ್ಯ ದುಷ್ಟಾತ್ಮಾ ಮಯ್ಯನಾರೋಪ್ಯ ಖೇಚರ ॥ ೬೧ ॥

ಸ ಜ್ಞೇಯೋ ಮೇ ಪರಃ ಶತ್ರುಃ ಸ ಮಾಮರ್ಹೋ ನ ಚಾರ್ಚಿತುಂ ।
ನಿರ್ಮಾಲ್ಯಂ ಮಮ ದೇಯಂ ಸ್ಯಾದ್ಬ್ರಾಹ್ಮಣಾದಿಷು ವೈ ನೃಷು ॥ ೬೨ ॥

---

೫೮. ನಿತ್ಯವೂ ಮೂರುಕಾಲಗಳಲ್ಲೂ ನನ್ನ ಇದಿರಿನಲ್ಲಿ ಗಾಯತ್ರಿಯನ್ನು ಉಚ್ಚರಿಸಿ ಜಪಮಾಡಬೇಕು.

೫೯. ಬಟ್ಟೆಯಿಂದ ಬಾಯನ್ನು ಮರೆಮಾಡಿಕೊಂಡು ಪ್ರೀತಿಯಿಂದ ನನ್ನನ್ನು ಪೂಜಿಸಬೇಕು. ಕಾಮವನ್ನೂ, ಕ್ರೋಧವನ್ನೂ ಪ್ರಯತ್ನದಿಂದ ದೂರಮಾಡಿ ಪೂಜಿಸಬೇಕು.

೬೦. ಯಾವನು ಲೋಭದಿಂದಲೋ, ಕಾಮದಿಂದಲೋ ನನಗೆ ಧರಿಸಿದ್ದ ಹೂವನ್ನು ಶೂದ್ರರಿಗಾಗಲೀ, ವೈಶ್ಯರಿಗಾಗಲಿ ಕೊಡುತ್ತಾನೋ, ಅವನು ಶಾಶ್ವತವಾದ ನರಕವನ್ನು ಹೊಂದುತ್ತಾನೆ.

೬೧. ಅಯ್ಯಾ ಖೇಚರನಾದ ಖಗಪತಿಯೇ! ಯಾವ ಭೋಜಕನು ನನ್ನ ಪೂಜೆಗಾಗಿ ತಂದ ಪುಷ್ಪಗಳನ್ನು ಲೋಭದಿಂದ ನನಗೆ ಪೂಜೆ ಮಾಡದೆ ದುಷ್ಟಾತ್ಮನಾಗಿ ಬೇರೆಯವರಿಗೆ ಕೊಡುವನೋ ಅವನು ನನಗೆ ಮಹಾಶತ್ರುವೆಂದು ತಿಳಿಯಬೇಕು.

೬೨. ಅಂಥವನು ನನ್ನ ಪೂಜೆಗೇ ಅರ್ಹನಲ್ಲ. ನನ್ನ ನಿರ್ಮಾಲ್ಯವನ್ನು ಬ್ರಾಹ್ಮಣರೇ ಮೊದಲಾದವರಿಗೆ ಕೊಡಬೇಕು.

ನೈವೇದ್ಯಂ ಯನ್ಮದೀಯಂ ತು ತದಶ್ನೀಯಾತ್ಸದೈವ ಹಿ ।
ತೇನಾಸೌ ಶುದ್ಧ್ಯತೇ ಸತ್ಯಂ ಹವಿಷ್ಯಾನ್ನಸಮಂ ತಥಾ ॥ ೬೩ ॥

ತತ್‌ಕ್ಷಣಾದುತ್ಕ್ಷಿಪೇದ್ಯಸ್ತು ಮಮಾಂಗಾತ್ಪುಷ್ಪಮೇವ ಹಿ ।
ನಾನ್ಯಸ್ಯ ದೇಯಂ ನೈವೇದ್ಯಂ ಮದೀಯಂ ಭೋಜಕೇನ ತು ॥ ೬೪ ॥

ಪಂಚಗವ್ಯಸಮಂ ತಸ್ಯ ಮನ್ಮತಂ ನಾತ್ರ ಸಂಶಯಃ ।
ಮಮಾಂಗಲಗ್ನಂ ಯತ್ಕಿಂಚಿತ್ ಗಂಧಂ ಪುಷ್ಪಮಥಾಪಿ ವಾ ॥ ೬೫ ॥

ದಾತವ್ಯಂ ನ ಚ ವೈಶ್ಯಾಯ ನ ಶೂದ್ರಾಯ ಕದಾಚನ ।
ಆತ್ಮನಾ ತದ್ಗ್ರಹೀತವ್ಯಂ ನ ವಿಕ್ರೇಯಂ ಕಥಂಚನ ॥ ೬೬ ॥

ಯಸ್ತು ನಾರೋಪ್ಯ ಪುಷ್ಪಾಣಿ ಅವ್ಯಂಗಾನಿ ಮಮೋಪರಿ ।
ಯಃ ಕಶ್ಚಿದಾಹರೇಲ್ಲೋಕೇ ಸ ಯಾತಿ ನರಕಂ ಧ್ರುವಂ ॥ ೬೭ ॥

---

೬೩. ನನಗೆ ನಿವೇದನ ಮಾಡಿದ್ದನ್ನೇ ತಾನು ನಿತ್ಯವೂ ತಿನ್ನಬೇಕು. ಹವಿಷ್ಯಾನ್ನಕ್ಕೆ ಸಮವಾಗಿ ಶುದ್ಧವಾದ ನೈನೇದ್ಯವನ್ನು ಭೋಜನಮಾಡಿದರೆ ಇವನು ನಿಜವಾಗಿ ಪರಿಶುದ್ಧನಾಗುತ್ತಾನೆ.

೬೪. ನನಗೆ ಪುಷ್ಪವನ್ನು ಪೂಜಿಸಿದ ತತ್‌ಕ್ಷಣವೇ ಅದನ್ನು ನನ್ನ ಪ್ರತಿಮೆಯ ಅಂಗದಿಂದ ಮೇಲಕ್ಕೆ ಎತ್ತಿತೆಗೆದು ಇನ್ನು ಯಾರಿಗೂ ಕೊಡಕೂಡದು.

೬೫. ನನಗೆ ನೈವೇದ್ಯ ಮಾಡಿದುದನ್ನು ಸಿಕ್ಕಿದವರಿಗೆ ಕೊಡಬಾರದು. ಅದನ್ನು ಭೋಜಕರು ಸೇವಿಸಬೇಕು. ಏಕೆಂದರೆ ಆ ನೈವೇದ್ಯವು ಪಂಚಗವ್ಯಕ್ಕೆ ಸಮನಾಗಿ ಶ್ರೇಷ್ಠವಾದುದೆಂದು ನನ್ನ ಮತ. ಇದಕ್ಕೆ ಸಂದೇಹವಿಲ್ಲ.

೬೬. ನನ್ನ ಶರೀರಕ್ಕೆ ಅರ್ಪಿಸಿದ್ದ ಗಂಧವನ್ನಾಗಲಿ, ಪುಷ್ಪವನ್ನಾಗಲಿ ವೈಶ್ಯರಿಗೂ ಶೂದ್ರರಿಗೂ ಯಾವಾಗಲೂ ಕೊಡಬಾರದು. ಅದನ್ನು ತಾನೇ ತೆಗೆದುಕೊಂಡು ಧರಿಸಬೇಕು. ಹೇಗೂ ಅದನ್ನು ಮಾರಬಾರದು.

೬೭. ಹರಕು, ಕೊಳಕು, ಇಲ್ಲದ ಅವ್ಯಂಗವಾದ ಪುಷ್ಪಗಳ ಮಾಲೆಯನ್ನು ನನಗೆ ಪೂಜಿಸದೇ ಯಾವನು ತಾನು ತೆಗೆದುಕೊಳ್ಳುವನೋ, ಅವನು ನರಕವಾಸವನ್ನು ಶಾಶ್ವತವಾಗಿ ಹೊಂದುತ್ತಾನೆ.

ಸ್ನಪನಂ ಮಮ ನಿರ್ಮಾಲ್ಯಂ ಪಾವಕಂ ಯಸ್ತು ಲಂಘಯೇತ್ ।
ಸ ನರೋ ನರಕಂ ಯಾತಿ ಸ ರೌದ್ರಂ ರೌರವಂ ಖಗ ॥ ೬೮ ॥

ಭೋಜಕೇನ ಸದಾ ಕಾರ್ಯಂ ಸ್ನಪನಂ ಮೇ ಪ್ರಯತ್ನತಃ ।
ಯಥಾ ನ ಲಂಘಯೇತ್ಕಶ್ಚಿದ್ಯಥಾ ಶ್ವಾ ನಾಪಿ ಭಕ್ಷಯೇತ್ ॥ ೬೯ ॥

ಯದ್ಯಯತ್ನಪರಃ ಕುರ್ಯಾತ್ ಭೋಜಕಃ ಸ್ನಪನಂ ಮಮ ।
ಯಥಾ ವೈ ಲಂಘಿತಮತಿರ್ಭಕ್ಷ್ಯತಾಂ ಚ ಖಗಾಧಿಪ ॥ ೭೦ ॥

ಸ ಯಾತಿ ನರಕಂ ರೌದ್ರಂ ತಾಮಿಸ್ರಂ ನಾಮ ನಾಮತಃ ।
ಏಕಭಕ್ತಂ ಸದಾ ಕಾರ್ಯಂ ಸ್ನಾನಂ ತ್ರೈಕಾಲಮೇವ ಹಿ ॥ ೭೧ ॥

ತ್ರಿಶ್ಚೇಲಂ ಪರಿವರ್ತೇತ ಭಾವ್ಯಮೇತದ್ದಿನೇದಿನೇ ।
ಪೂಜಾಕಾಲೇಽರ್ಘ ಕಾಲೇ ಚ ಕ್ರೋಧಸ್ತ್ಯಾಜ್ಯಃ ಪ್ರಯತ್ನತಃ ॥ ೭೨ ॥

---

೬೮. ನನಕೆ ಅಭಿಷೇಕಮಾಡಿದ ನೀರು ನಿರ್ಮಾಲ್ಯ ಪುಷ್ಪ, ಅಗ್ನಿ (ಧೂಪದ ಕೆಂಡ) ಇವನ್ನು ಯಾರು ದಾಟುವರೋ ಅವರು ಭಯಂಕರವಾದ ರೌರವವೆಂಬ ನರಕಕ್ಕೆ ಹೋಗುತ್ತಾರೆ.

೬೯. ಈ ಅಭಿಷೇಕವಾದ ನೀರನ್ನು ಯಾರೂ ದಾಟಲು ಅವಕಾಶವಾಗ ದಂತೆಯೂ, ಯಾವ ನಾಯಿಯೂ ಮುಟ್ಟದಹಾಗೂ ಭೋಜಕನು ಯತ್ನಪೂರ್ವಕ ವಾಗಿ ನೋಡಿಕೊಂಡು ಅಭಿಷೇಕಕಾರ್ಯವನ್ನು ಮಾಡಬೇಕು.

೭೦-೭೧. ಅಯ್ಯಾ ಖಗಶ್ರೇಷ್ಠನೇ! ಭೋಜಕನು ಈ ರೀತಿ ಪ್ರಯತ್ನದಿಂದ ನೋಡಿಕೊಳ್ಳದೇ ಈ ವಿಚಾರವನ್ನು ಅಲಕ್ಷ್ಯಮಾಡಿ ತೀರ್ಥವನ್ನು ಜನರು ದಾಟುವು ದಕ್ಕೂ, ನಾಯಿಯು ನೆಕ್ಕುವುದಕ್ಕೂ ಅವಕಾಶ ಮಾಡಿದರೆ, ಅವನು ತಾಮಿಸ್ರ ಎಂಬ ಪ್ರಸಿದ್ಧವಾದ ನರಕಕ್ಕೆ ಹೋಗುತ್ತಾನೆ. ಭೋಜಕನು ಯಾವಾಗಲೂ ತ್ರಿಕಾಲಸ್ನಾನ ವನ್ನೂ ಒಪ್ಪೊತ್ತು ಭೋಜನವನ್ನೂ ಮಾಡಬೇಕು.

೭೨. ಮೂರುಸಾರಿ ಸ್ನಾನಮಾಡಿದಾಗಲೂ ಬಟ್ಟೆಗಳನ್ನು ಬದಲಾಯಿಸ ಬೇಕು. ಹೀಗೆ ಪ್ರತಿದಿನವೂ ಮಾಡಬೇಕು. ಪೂಜಾಸಂಭಾರವನ್ನೇರ್ಪಡಿಸುವಾಗಲೂ ಪೂಜೆಮಾಡುವಾಗಲೂ ಕೋಪಮಾಡಬಾರದು ಕೋಪಬರುವ ಸಂಭವವಿದ್ದರೂ ಪ್ರಯತ್ನದಿಂದ ತಡೆಯಬೇಕು.

ಅಮಾಂಗಲ್ಯಂ ನ ವಕ್ತವ್ಯಂ ವಕ್ತವ್ಯಂ ಚ ಶುಭಂ ತದಾ ।
ಈದೃಗ್ಭೂತೋ ಭೋಜಕೋ ಮೇ ಪ್ರೇಯಾರ್ ಪೂಜಾಕರಸ್ಸದಾ ॥ ೭೩ ॥

ಸನ್ಮಾನ್ಯಃ ಪೂಜನೀಯಶ್ಚ ವಿಪ್ರಾದೀನಾಂ ಯಥಾಸ್ಮ್ಯಹಂ ।
ಯಃ ಕರೋತ್ಯವಮಾನಂ ತು ವೃತ್ತಿರೂಪಂ ತು ಭೋಜಕೇ ॥ ೭೪ ॥

ತಸ್ಯಾಹಂ ರೋಷಮೇಮ್ಯಾಶು ಕುಲಂ ಹನ್ಮಿ ಸಮಂತತಃ ।
ಪ್ರಿಯೋ ಮೇ ಭೋಜಕೋ ನಿತ್ಯಂ ಯಥಾ ತ್ವಂ ವಿನತಾಸುತ ॥ ೭೫ ॥

ಉಪಲೇಪನ ಕರ್ತಾಚ ಸಮ್ಮಾರ್ಜನ ಪರಶ್ಚಯಃ ।
॥ ಪರಾವಸುರುವಾಚ ॥
ಇತ್ಯುಕ್ತ್ವಾ ಭಗವಾನ್ಭಾನುರ್ಬಭ್ರಾಮ ರಥಮಾಸ್ಥಿತಃ ॥ ೭೬ ॥

---

೭೩. ಪೂಜಾಕಾಲದಲ್ಲಿ ಅಮಂಗಳವಾದ ಶಬ್ದಗಳನ್ನು ಆಡದೆ ಮಂಗಳಕರವಾದ ಮಾತನ್ನೇ ಆಡಬೇಕು. ಇಂತಹ ಭೋಜಕನು ನನಗೆ ಸರ್ವದಾ ಪ್ರಿಯವಾದ ಪೂಜಕನೆನಿಸುತ್ತಾನೆ.

೭೪. ವಿಪ್ರರು (ಬ್ರಾಹ್ಮಣರು) ಮುಂತಾದವರಿಗೆ ನಾನು ಹೇಗೆ—ಸನ್ಮಾನ್ಯನೂ, ಪೂಜಿಸಲ್ಪಡತಕ್ಕವನೂ ಆಗಿದ್ದೇನೆಯೋ, ಹಾಗೆಯೇ ಸದಾಚಾರಯುಕ್ತನಾಗಿ ನನ್ನನ್ನು ಪೂಜೆಮಾಡುವಂತಹ ಭೋಜಕನೂ, ಸರ್ವಸನ್ಮಾನ್ಯನೂ, ಪೂಜಾರ್ಹನೂ ಆಗಿ ನನಗೆ ಯಾವಾಗಲೂ ಇಷ್ಟನಾಗಿದ್ದಾನೆ.

೭೫. ಭೋಜಕನ ಜೀವನವನ್ನು ಯಾವನು ಹೀಯಾಳಿಸುವನೋ ಅವನ ಮೇಲೆ ನನಗೆ ಬಹುಕೋಪ ಬರುತ್ತದೆ. ಎಲ್ಲಿದ್ದರೂ ಅವನ ಕುಲವನ್ನು ನಿರ್ಮೂಲ ಮಾಡುವೆನು. ಅಯ್ಯಾ ವಿನತೆಯಮಗನಾದ ಅರುಣನೇ! ನೀನು ನನಗೆ ಹೇಗೆ ಪ್ರಿಯನೋ ಹಾಗೆಯೇ ಭೋಜಕನೂ ಪ್ರಿಯನು.

೭೬. ಮತ್ತು ಸೂರ್ಯದೇವಾಲಯವನ್ನು ಸಾರಿಸುವವನೂ, ಗುಡಿಸುಪವನೂ ಸಹ ಹಾಗೆಯೇ ನನಗೆ ಪ್ರಿಯರು ಎಂದನು.

ಅರುಣೋऽಪಿ ತಥಾ ಶ್ರುತ್ವಾ ಮುದಾ ಪರಮಯಾ ಯುತಃ ।
ಪೂಜ್ಯಸ್ತಸ್ಮಾನ್ಮಹಾರಾಜ ಭೋಜಕಸ್ತು ಮಹಾಮತೇ ॥ ೭೭ ॥

ತಸ್ಮಾದ್ದೇಯಂ ವಾಚಕಾಯ ದ್ವಿತೀಯಮಶನಂ ನರೈಃ ॥ ೭೮ ॥

॥ ಬ್ರಹ್ಮೋವಾಚ ॥
ಇತ್ಥಂ ಶ್ರುತ್ವಾ ಸ ರಾಜಾ ತು ಕರ್ಮಣಃ ಫಲಮಾತ್ಮನಃ ।
ಪುರಾತನಂ ಮಹಾಬಾಹುರ್ಮುದಮಾಪ ಮಹಾಮತಿಃ ॥ ೭೯ ॥

ಯದ್ಯದಾಯತನಂ ಭಾನೋಃ ಪೃಥಿವ್ಯಾಂ ಪಶ್ಯತೇ ನೃಪಃ ।
ತಸ್ಮಿಂಸ್ತಸ್ಮಿನ್ಕಾರಯತಿ ಉಪಲೇಪನಮಾದರಾತ್ ॥ ೮೦ ॥

ಭಾರ್ಯಾ ತಸ್ಯಾಪಿ ಸುಶ್ರೋಣಿಃ ಪುಣ್ಯಶ್ರವಣಮಾದರಾತ್ ।
ವಾಚಕೇ ವೇತನಂ ದತ್ವಾ ಭಾನೋರ್ದೇವಸ್ಯ ಮಂದಿರೇ ॥ ೮೧ ॥

---

೭೭. ಪರಾವಸುವು ಹೇಳುತ್ತಾನೆ—ಸೂರ್ಯನು ಹೀಗೆ ಹೇಳಿ ರಥವನ್ನೇರಿ ಸಂಚಾರ ಹೊರಟನು. ಅರುಣನೂ ಕೂಡ ಆ ಮಾತನ್ನು ಕೇಳಿ ಸಂತೋಷಭರಿತನಾದನು. ಮಹಾಮತಿಯಾದ ಎಲೈ ರಾಜನೇ! ಆದುದರಿಂದ ಭೋಜಕನು ಸರ್ವಥಾ ಪೂಜ್ಯನು

೭೮. ಆದ್ದರಿಂದ ಸೂರ್ಯಾರಾಧಕರಾದ ಮಾನವರು ತಮ್ಮ ಇನ್ನೊಂದು ಹೊತ್ತಿನ ಅನ್ನವನ್ನು ಪುರಾಣವಾಚಕನಿಗೆ ದಾನಕೊಟ್ಟು ಪುರಾಣಶ್ರವಣ ಮಾಡಬೇಕು.

೭೯. ಬ್ರಹ್ಮನು ಹೇಳುತ್ತಾನೆ—ಮಹಾಮತಿಯೂ ಮಹಾಬಾಹುವೂ ಆದ ಆ ರಾಜನು ಈ ಪ್ರಕಾರವಾದ ತನ್ನ ಪುರಾತನ ಕರ್ಮಫಲವನ್ನು ಕೇಳಿ ಸಂತೋಷ ಹೊಂದಿದನು.

೮೦-೮೧. ಆ ರಾಜನು ಭೂಮಿಯಲ್ಲಿ ಯಾವ ಯಾವ ಸೂರ್ಯದೇವಾಲಯವನ್ನು ಕಂಡರೂ ಅಲ್ಲೆಲ್ಲಾ ಪ್ರೀತಿಯಿಂದ ಸಾರಣೆಮಾಡಿಸುತ್ತಾ ಇದ್ದನು. ಸುಶ್ರೋಣಿಯಾದ ಅವನ ಹೆಂಡತಿಯೂ ಸೂರ್ಯಾಲಯದಲ್ಲಿ ಆದರದಿಂದ ಪುರಾಣಶ್ರವಣ ಮಾಡಿ ವಾಚಕನಿಗೆ ದಕ್ಷಿಣೆಯನ್ನು ಕೊಡುತ್ತಿದ್ದಳು.

**ಇತ್ಥಂ ರಾಜಾ ಸಪತ್ನೀಕಃ ಪೂಜ್ಯ ಭಕ್ತ್ಯಾ ದಿವಾಕರಂ ।**
**ಪ್ರಾಪ್ತಾವುಭೌ ಪರಾಂ ಪ್ರೀತಿಂ ಗತಿಂ ಚಾನುತ್ತಮಾಂ ತಥಾ ॥ ೮೨ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಉಪಲೇಪನಸ್ನಾಪನಮಾಹಾತ್ಮ್ಯವರ್ಣನಂ ನಾಮ ಸಪ್ತದಶೋತ್ತರ ಶತತಮೋಽಧ್ಯಾಯಃ**



---

೮೨. ಹೀಗೆ ರಾಜನು ಪತ್ನೀಸಮೇತನಾಗಿ ಸೂರ್ಯನನ್ನು ಭಕ್ತಿಯಿಂದ ಪೂಜಿಸಿ ಅನ್ಯೋನ್ಯವಾಗಿ ನಿರತಿಶಯವಾದ ಪ್ರೀತಿಯನ್ನೂ ಸರ್ವೋತ್ತಮವಾದ ಗತಿಯನ್ನೂ ಹೊಂದಿದರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ ಸಾರಿಸುವುದು, ಅಭಿಷೇಕ ಮಾಡುವುದು ಇವುಗಳ ಮಹಾತ್ಮೆಯ ವರ್ಣನೆಯೆಂಬ ನೂರಹದಿನೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಅಷ್ಟಾದಶೋತ್ತರಶತತಮೋಽಧ್ಯಾಯಃ

---

॥ ಬ್ರಹ್ಮೋವಾಚ ॥

ದೀಪಂ ಪ್ರಯಚ್ಛತಿ ನರೋ ಭಾನೋರಾಯತನೇ ತು ಯಃ ।
ತೇಜಸಾ ರವಿಸಂಕಾಶಃ ಸರ್ವಯಜ್ಞ ಫಲಂ ಲಭೇತ್ ॥ ೧ ॥

ಕಾರ್ತಿಕೇ ತು ವಿಶೇಷೇಣ ಕೌಮಾರೇ ಮಾಸಿ ದೀಪಕಂ ।
ದತ್ವಾ ಫಲಮವಾಪ್ನೋತಿ ಯದನ್ಯೇನ ನ ಲಭ್ಯತೇ ॥ ೨ ॥

ಕೃಷ್ಣ ಕೃಷ್ಣಾತ್ರ ತೇ ವಚ್ಮಿ ಸಂವಾದಂ ಪಾಪನಾಶನಂ ।
ಭ್ರಾತೃಭಿಸ್ಸಹ ಭದ್ರಸ್ಯ ಬ್ರಾಹ್ಮಣಸ್ಯ ಮಹಾತ್ಮನಃ ॥ ೩ ॥

---

### ನೂರಹದಿನೆಂಟನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ--ಯಾವ ಮನುಷ್ಯನು ಸೂರ್ಯನ ಆಲಯದಲ್ಲಿ ದೀಪವನ್ನು ಹಚ್ಚಿಸುವನೋ ಅವನು ತೇಜಸ್ಸಿನಲ್ಲಿ ಸೂರ್ಯನಿಗೆ ಸಮನಾಗಿ ಸರ್ವ ಯಜ್ಞಗಳ ಫಲವನ್ನೂ ಹೊಂದುತ್ತಾನೆ.

೨. ವಿಶೇಷತಃ ಕಾರ್ತಿಕ ಮಾಸದಲ್ಲೂ, ಕುಮಾರಸ್ವಾಮಿಗೆ ಪ್ರಿಯವಾದ ಮಾರ್ಗಶೀರ್ಷ ಮಾಸದಲ್ಲಿಯೂ, ದೀಪವನ್ನು ಹಚ್ಚಿದರೆ ಇತರರಿಗೆ ದುರ್ಲಭವಾದ ಫಲವನ್ನು ಪಡೆಯುವನು.

೩. ಎಲೈ ಕೃಷ್ಣನೇ! ಈ ವಿಷಯದಲ್ಲಿ ಭದ್ರನೆಂಬ ಮಹಾತ್ಮನಾದ ಬ್ರಾಹ್ಮಣನಿಗೂ ಅವನ ಸಹೋದರರಿಗೂ ನಡೆದ ಸಂವಾದವನ್ನು ಉದಾಹರಣೆಗಾಗಿ ಹೇಳುತ್ತೇನೆ. ಅದು ಪಾಪನಾಶಕರವಾದುದು.

ಜಗತ್ಯಸ್ಮಿನ್ ಪುರೀ ರಮ್ಯಾ ನಾಮ್ನಾ ಮಾಹಿಷ್ಮತೀಪುರಾ ।
ತಸ್ಯಾಮಾಸೀದ್ದ್ವಿಜಃ ಕೃಷ್ಣ ನಾಗಶರ್ಮೇತಿ ವಿಶ್ರುತಃ ॥ ೪ ॥

ತಸ್ಯ ಪುತ್ರಶತಂ ಜಾತಂ ಪ್ರಸಾದಾದ್ಭಾಸ್ಕರಸ್ಯ ಚ ।
ತೇಷಾಂ ಕನಿಷ್ಠೋ ಭದ್ರಸ್ತು ತತ್ಪುತ್ರಾಣಾಂ ವಿಚಕ್ಷಣಃ ॥ ೫ ॥

ಸ ಚ ನಿತ್ಯಂ ಜಗದ್ಧಾತುಃ ದೇವದೇವಸ್ಯ ಭಾಸ್ವತಃ ।
ದೀಪವರ್ತಿಕರಸ್ತದ್ವತ್ ತೈಲಾದ್ಯಾಹರಣೋದ್ಯತಃ ॥ ೬ ॥

ಭಾನೋಂರಾಯತನೇ ತಸ್ಯ ಸಹಸ್ರಂ ಭಾರ್ಗವೀಪ್ರಿಯ ।
ಪ್ರದೀಪಾನಾಂ ತು ಜಜ್ವಾಲ ದಿವಾರಾತ್ರಮನಿಂದಿತಂ ॥ ೭ ॥

ತಸ್ಯ ದೀಪ್ತ್ಯಾ ಪರಾಭೂತಾಃ ತಲ್ಲಾವಣ್ಯೇನ ಧರ್ಷಿತಾಃ ।
ಸರ್ವೇ ತೇ ಭ್ರಾತರೋ ಭದ್ರಂ ಪಪ್ರಚ್ಛುರಿದಮಾದರಾತ್ ॥ ೮ ॥

---

೪. ಅಯ್ಯಾ ಕೃಷ್ಣನೇ! ಭೂಮಂಡಲದಲ್ಲಿ ಮಾಹಿಷ್ಮತೀ ಎಂಬ ಸುಂದರವಾದ ಪಟ್ಟಣವುಂಟು. ಅಲ್ಲಿ ನಾಗಶರ್ಮನೆಂಬ ಬ್ರಾಹ್ಮಣನಿದ್ದನು. ಅವನಿಗೆ ಸೂರ್ಯನ ಅನುಗ್ರಹದಿಂದ ನೂರು ಮಂದಿ ಮಕ್ಕಳಾದರು.

೫. ಅವರಲ್ಲಿ ಕಿರಿಯವನಾದ ಭದ್ರನು ಅವನ ಮಕ್ಕಳೊಳಗೆ ಬುದ್ಧಿವಂತನು. ಅವನು ಯಾವಾಗಲೂ ಜಗದ್ಧಾತೃವಾದ ಸೂರ್ಯನ ದೇವಾಲಯದ ದೀಪದ ಬತ್ತಿಯನ್ನು ಮಾಡುವುದರಲ್ಲೂ ಎಣ್ಣೆ ಮೊದಲಾದುವನ್ನು ತಂದುಹಾಕುವುದರಲ್ಲಿಯೂ ಆಸಕ್ತನಾಗಿದ್ದನು.

೬-೭. (ಭಾರ್ಗವೀ) ಲಕ್ಷ್ಮೀಪ್ರಿಯನಾದ ಎಲೈ ಕೃಷ್ಣನೇ! ಆ ಸೂರ್ಯಾಲಯದಲ್ಲಿ ಹೀಗೆ ಹಗಲೂ ರಾತ್ರಿಯೂ ಶ್ರೇಷ್ಠವಾದ ಸಾವಿರಾರು ದೀಪಗಳು ಉರಿಯುತ್ತಿದ್ದುವು.

೮. ಅವನ ಸಹೋದರರು ಮುಖದಲ್ಲಿ ಅವನಷ್ಟು ಕಾಂತಿಯಿಲ್ಲದೆ ಅವನ ಕಾಂತಿಯಿಂದ ಜಿತರೂ ಅವನ ಲಾವಣ್ಯದಿಂದ ತಿರಸ್ಕೃತರೂ ಆಗಿ ಅವರೆಲ್ಲರೂ ಭದ್ರನನ್ನು ಆದರದಿಂದ ಈ ರೀತಿ ಕೇಳಿದರು.

ಭೋ ಭದ್ರ ವದ ವೈ ಭ್ರಾತಃ ಭದ್ರಂ ತೇऽಸ್ತು ಸದಾ ದ್ವಿಜ ।
ಕೌತೂಹಲಪರಾಸ್ಸರ್ವೇ ಯತ್ಪೃಚ್ಛಾಮಸ್ತದುಚ್ಯತಾಂ ॥ ೯ ॥

ತೇಷಾಂ ತದ್ವಚನಂ ಶ್ರುತ್ವಾ ಭದ್ರೋ ವಚನಮಬ್ರವೀತ್ ।
ವಿಷಯೇ ಸತಿ ವಕ್ತವ್ಯಂ ಯನ್ಮಯಾ ತದಿಹೋಚ್ಯತಾಂ ॥ ೧೦ ॥

ನಾಹಂ ಮತ್ಸರಯುಕ್ತೋ ವೈ ನ ಚ ರಾಗಾದಿದೂಷಿತಃ ।
ಭವಂತೋ ಮಮ ಸರ್ವೇ ವೈ ಭ್ರಾತರೋ ಗುರವಸ್ತಥಾ ॥ ೧೧ ॥

ಕಥಂ ನ ಕಥಯಾಮ್ಯೇಷ ಭವತಾಂ ಪುತ್ರಸಮ್ಮಿತಃ ।
ತಸ್ಮಾದ್ಬ್ರುವಂತು ಮಾಂ ಸರ್ವೇ ಭ್ರಾತರೋ ಯದ್ವಿವಕ್ಷಿತಂ ॥ ೧೨ ॥

॥ ಭ್ರಾತರ ಊಚುಃ ॥

ನ ತಥಾ ಪುಷ್ಪಧೂಪೇಷು ನ ತಥಾ ದ್ವಿಜಪೂಜನೇ ।
ಸುಪ್ರಯತ್ನಂ ತು ಪಶ್ಯಾಮೋ ಭಾನೋರಾಯತನೇ ಪರಂ ॥ ೧೩ ॥

---

೯. "ಸಹೋದರವರ್ಯನಾದ ಎಲೈ ಭದ್ರನೇ! ನಿನಗೆ ಮಂಗಳವಾಗಲಿ, ನಾವೆಲ್ಲರೂ ಕುತೂಹಲದಿಂದ ಕೇಳುವ ಪ್ರಶ್ನೆಗೆ ಉತ್ತರ ಹೇಳು" ಎಂದರು.

೧೦. ಆ ಸಹೋದರರು ಹೇಳಿದ ಮಾತನ್ನು ಕೇಳಿ ಭದ್ರನು "ಯಾವ ವಿಚಾರವೆಂಬುದನ್ನು ನೀವು ಹೇಳಿ; ನನಗೆ ತಿಳಿದಿದ್ದರೆ ಹೇಳುತ್ತೇನೆ.

೧೧. ಯಾರ ಮೇಲೂ ನನಗೆ ಹೊಟ್ಟೆಯಕಿಚ್ಚು ಇಲ್ಲ. ರಾಗದ್ವೇಷಾದಿಗಳಿಂದ ನಾನು ದೂಷಿತನೂ ಆಗಿಲ್ಲ. ನೀವೆಲ್ಲರೂ ನನ್ನ ಪೂಜ್ಯ ಸಹೋದರರು. ಅಷ್ಟೇ ಅಲ್ಲದೆ ನನ್ನ ಗುರುಗಳೂ ಆಗಿರುವಿರಿ.

೧೨. "ನಿಮ್ಮ ಪುತ್ರಸಮಾನನಾದ ನಾನು ನೀವು ಕೇಳುವುದನ್ನು ಹೇಳುವುದಿಲ್ಲವೆನ್ನುವುದು ಹೇಗೆ? ನಾನು ಏನನ್ನು ತಿಳಿಸಬೇಕೆಂದು ನಿಮಗೆ ಅಪೇಕ್ಷೆಯಾಗಿದೆಯೋ ಅದನ್ನು ನೀವುಗಳು ಹೇಳಿ" ಎಂದನು.

೧೩. ಆಗ ಸಹೋದರರು ಹೇಳುತ್ತಾರೆ " ನೀನು ಸೂರ್ಯಾರಾಧನೆಯಲ್ಲಿ ಪುಷ್ಪ, ಧೂಪ ಇವುಗಳ ಸಮರ್ಪಣೆಯಲ್ಲಾಗಲಿ, ಸೂರ್ಯಸ್ವರೂಪನಾದ ಬ್ರಾಹ್ಮಣ ಪೂಜೆಯಲ್ಲಾಗಲೀ ಅಷ್ಟೇನೂ ಪ್ರಯತ್ನ ಮಾಡುವುದಿಲ್ಲ.

**ಯಥಾಹನಿ ತಥಾ ರಾತ್ರೌ ಯಥಾ ರಾತ್ರೌ ತಥಾಹನಿ ।**
**ತವ ದೀಪಪ್ರದಾನಾಯ ಯಥಾ ಭದ್ರ ಸದೋದ್ಯಮಂ** ॥ ೧೪ ॥

**ತತ್ತ್ವಂ ತತ್ಕಥಯಾಸ್ಮಾಕಂ ಹಂತ ಕೌತೂಹಲಂ ಹಿ ತಃ ।**
**ಯನ್ನಾಮ ದೀಪದಾನಸ್ಯ ಭವತಾ ವಿದಿತಂ ಫಲಂ** ॥ ೧೫ ॥

**ತದೇತ್ಕಥಯಾಸ್ಮಾಕಂ ಸವಿಶೇಷಂ ಮಹಾಬಲ ।**
**ಏವಂ ಪೃಷ್ಟಸ್ತತಸ್ತೈಸ್ತು ಭ್ರಾತೃಭಿಶ್ಚೋದಿತೋ ಮುದಾ** ॥ ೧೬ ॥

**ವ್ಯಾಜಹಾರ ಸ ಭ್ರಾತೄಣಾಂ ನ ಕಿಂಚಿದಪಿ ಸುವ್ರತ ।**
**ಪುನಃಪುನರಸೌ ತೈಸ್ತು ಭ್ರಾತೃಭಿಶ್ಚೋದಿತೋ ಮುದಾ** ॥ ೧೭ ॥

**ದಾಕ್ಷಿಣ್ಯಸಾರೋ ಭದ್ರಸ್ತು ಕಥಯಾಮಾಸ ಕೃತ್ಸ್ನಶಃ ।**
**ಭವತಾಂ ಕೌತುಕಂ ಚೈತದತೀವಾಲ್ಪೇಽಪಿ ವಸ್ತುನಿ** ॥ ೧೮ ॥

---

೧೪. ಸೂರ್ಯದೇವಾಲಯದಲ್ಲಿ ಹಗಲೂ ರಾತ್ರಿಯೂ ಒಂದೇ ಪ್ರಕಾರವಾಗಿ ಬತ್ತಿಯನ್ನು ಮಿಾಟಿ ಸರಿಪಡಿಸಿ ಎಣ್ಣೆಹಾಕಿ ದೀಪವನ್ನು ಪ್ರಕಾಶಪಡಿಸುವುದರಲ್ಲಿ ಸದಾ ಉದ್ಯೋಗ ಮಾಡುತ್ತಿದ್ದೀ; ಇದರ ರಹಸ್ಯವನ್ನು ನಮಗೆ ಸ್ವಲ್ಪ ಹೇಳು.

೧೫. ಅದನ್ನು ಕೇಳಬೇಕೆಂಬ ಕುತೂಹಲವು ನಮಗೆ ಬಹಳವಾಗಿದೆ. ಈ ಪ್ರಕಾರ ದೀಪ ಸೇವಾರ್ಥಕ್ಕೆ (ದೀಪವನ್ನು ಮೀಟಿ ಸರಿಪಡಿಸುವುದಕ್ಕೆ) ಏನುಫಲ ವೆಂದು ತಿಳಿದಿದ್ದೀಯೆ? ಅದನ್ನು ನಮಗೆ ಹೇಳು.

೧೬. ಎಲೈ ಮಹಾಬಲನಾದ ಭದ್ರನೇ! ನಾವು ಕೇಳಿದ ಈ ವಿಷಯವನ್ನು ನಮಗೆ ವಿವರವಾಗಿ ಹೇಳು " ಎಂದರು. ಅಯ್ಯಾ ಸುವ್ರತನೇ! ಕೇಳು—ತನ್ನ ಸಹೋದರರು ಈ ರೀತಿ ಪ್ರಶ್ನೆ ಮಾಡಿದಮೇಲೆ ಸಂತೋಷದಿಂದ ಪ್ರೇರಿತನಾದರೂ ಭದ್ರನು ಕೂಡಲೆ ತನ್ನ ಅಣ್ಣಂದಿರಿಗೆ ಏನೂ ಹೇಳಲಿಲ್ಲ.

೧೭. ಆ ಸಹೋದರರು ಮತ್ತೆ ಮತ್ತೆ ಇವನನ್ನು ಪ್ರಶ್ನಿಸಿದುದರಿಂದ ದಾಕ್ಷಿಣ್ಯ ಪರನಾದ ಭದ್ರನು ಸಂತೋಷದಿಂದ ಸಮಗ್ರವಾಗಿ ಹೀಗೆ ಹೇಳಿದನು.

೧೮-೧೯. ಸರ್ವದಾ ದೀಪದ ಬತ್ತಿಯನ್ನು ಮಿಾಟಿ ಸರಿಪಡಿಸುವುದೆಂಬ ಅತ್ಯಲ್ಪವಿಷಯದಲ್ಲಿ ನಿಮಗೆ ಇಷ್ಟೊಂದು ಕುತೂಹಲ ಉಂಟಾಗಿದೆಯಲ್ಲಾ! ಆದ್ದ

ತದೇಷ ಕಥಯಾಮ್ಯದ್ಯ ಯದ್ವ್ರತಂ ಮಮ ಸುವ್ರತಾಃ ।
ಇಕ್ಷ್ವಾಕುರಾಜಸ್ಯ ತು ಪುರಾ ವಶಿಷ್ಠೋಽಭೂತ್ಪುರೋಹಿತಃ ॥ ೧೯ ॥

ತೇನ ಚಾಯತನಂ ಭಾನೋಃ ಕಾರಿತಂ ಸರಯೂತಟೇ ।
ಅಹನ್ಯಹನಿ ಶುಶ್ರೂಷಾಂ ಪುಷ್ಪಧೂಪಾನುಲೇಪನೈಃ ॥ ೨೦ ॥

ದೀಪದಾನಾದಿಕಂ ಚೈವ ಚಕ್ರೇ ತತ್ರ ಸ ವೈ ದ್ವಿಜಃ ।
ಕಾರ್ತಿಕೋ ದೀಪಕೋ ಭಕ್ತ್ಯಾ ಪ್ರದತ್ತಸ್ತೇನ ವೈ ಸದಾ ॥ ೨೧ ॥

ಆಸೀನ್ನಿರ್ವಾಣ ಏವಾಸೌ ದೇವಾರ್ಚಾಪುರತೋ ನಿಶಿ ।
ದೇವತಾಯತನೇ ಚಾಹಮವಸಂ ವ್ಯಥಿತೋ ಭೃಶಂ ॥ ೨೨ ॥

ಪೂಯಶೋಣಿತನಿಷ್ಯಂದಃ ಪ್ರಾವಹಂತ್ಕಾಯಸ್ತತದಾ ।
ಶೀರ್ಣಘ್ರಾಣೋ ಹ್ಯರ್ವರವೋ ದುರ್ಗಂಧಪತಿತಸ್ತಥಾ ॥ ೨೩ ॥

---

೧೯. ಸುವ್ರತರೇ! ನಾನು ಮಾಡುವ ಈ ವ್ರತವು ಯಾವುದು ಎಂಬುದನ್ನು ನಿಮಗೆ ಹೇಳುತ್ತೇನೆ. ಪೂರ್ವದಲ್ಲಿ ಇಕ್ಷ್ವಾಕುವೆಂಬ ರಾಜನಿಗೆ ವಸಿಷ್ಠನು ಪುರೋಹಿತನಾಗಿದ್ದನು.

೨೦. ಆತನು ಸರಯೂ ನದಿಯ ದಡದಲ್ಲಿ ಒಂದು ಸೂರ್ಯದೇವಾಲಯವನ್ನು ಕಟ್ಟಿಸಿದನು. ಆ ವಸಿಷ್ಠನು ಪುಷ್ಪ, ಧೂಪ, ಗಂಧ ಇವುಗಳನ್ನು ಸ್ವಾಮಿಗೆ ಸಮರ್ಪಿಸುತ್ತಿದ್ದನು.

೨೧. ಮತ್ತು ಸ್ವಾಮಿಯ ಪ್ರೀತ್ಯರ್ಥವಾಗಿ ದೀಪದಾನ ಮೊದಲಾದುವುಗಳಿಂದ ಪ್ರತಿದಿನವೂ ಸೇವಾಶುಶ್ರೂಷೆ ಮಾಡುತ್ತಿದ್ದನು. ಯಾವಾಗಲೂ ಕಾರ್ತಿಕ ಮಾಸದಲ್ಲಿ ಅವನು ದೇವಾಲಯದಲ್ಲಿ ಒಂದು ನಂದದ ದೀಪವನ್ನು ಭಕ್ತಿಯಿಂದ ಇಡುತ್ತಿದ್ದನು.

೨೨. ಒಂದು ದಿನ ರಾತ್ರಿ ದೇವರಪೂಜೆ ಮಾಡುತ್ತಿದ್ದಾಗಲೇ ಈ ದೀಪವು ಆರಿಹೋಯಿತು. ಹಿಂದಿನ ಜನ್ಮದಲ್ಲಿ ರೋಗಿಯಾದ್ದಾಗ ನಾನು ಆ ದೇವಾಲಯಕ್ಕೆ ಹೋಗಿದ್ದೆ. ನನಗೆ ಇದನ್ನು ನೋಡಿ ಬಹಳ ವ್ಯಥೆಯಾಯಿತು.

೨೩. ಆಗ ರಕ್ತ, ಕೀವು, ಇವುಗಳ ಪ್ರವಾಹವು ನನ್ನ ಶರೀರದಿಂದ ಸ್ರವಿಸಿ ಹರಿಯುತ್ತಿದ್ದಿತು. ಮೂಗುಹರಿದ ಕುದುರೆಯಂತೆ ಧ್ವನಿಮಾಡುತ್ತಾ ದುರ್ಗಂಧಮಯನಾಗಿದ್ದೆನು

**ದುಷ್ಟಬುದ್ಧ್ಯಾ ಸದಾ ಯುಕ್ತಃ ಸಪ್ತಾಶ್ವಂ ಪ್ರತಿ ಸುವ್ರತಾಃ ।**
**ಯದೃಚ್ಛಯಾ ದೀಪದಾನಂ ವರ್ತ್ಯಾದೀನಾಂ ವಿಭಾವಸೌ** ॥ ೨೪ ॥

**ಲಬ್ಧಂ ಭುಕ್ತ್ವಾ ಸದಾ ತುಷ್ಟಿಂ ವ್ರಜಾಮಿ ದ್ವಿಜಸತ್ತಮಾಃ ।**
**ಏಕದಾ ತು ತತಸ್ತಸ್ಮಿನ್ ಭಾನೋಸ್ಸದ್ಮನಿ ತಸ್ಥುಷಾ** ॥ ೨೫ ॥

**ರಾತ್ರೌ ದೃಷ್ಟಾ ಮಯಾ ತತ್ರ ಭಕ್ತಾ ಜಾಗರಣಾಗತಾಃ ।**
**ಪ್ರತಿಶ್ರಯಂ ಪ್ರಾರ್ಥಿತಾಶ್ಚ ತೈಸ್ಸ ದತ್ತೋ ದಯಾನ್ವಿತೈಃ** ॥ ೨೬ ॥

**ವ್ಯಾಧಿತೋಽಯಂ ಸುದೀನಶ್ಚ ಇತಿಕೃತ್ವಾ ಮತಿಂ ಶುಭಾಂ ।**
**ತತೋಽಹಮಗ್ನಿಮಾಶ್ರಿತ್ಯ ಸ್ಥಿತಸ್ತೇಷಾಂ ಸಮೀಪತಃ** ॥ ೨೭ ॥

**ದುಷ್ಟಾಂ ಬುದ್ಧಿಂ ಸಮಾಶ್ರಿತ್ಯ ಹರ್ತುಕಾಮೋ ವಿವಸ್ವತಃ ।**
**ದಿವ್ಯಮಾಭರಣಂ ಭಾನೋಶ್ಛಿದ್ರಾನ್ವೇಷೀ ದ್ವಿಜೋತ್ತಮಾಃ** ॥ ೨೮ ॥

---

೨೪. ಅಯ್ಯಾ ಸುವ್ರತರೇ! ಇಂಥ ನಾನು ಸೂರ್ಯನ ವಿಷಯದಲ್ಲಿ ದುರ್ಬುದ್ಧಿಯಿಂದ ಕೂಡಿದವನಾಗಿ ಸೂರ್ಯನ ಸಮುಖದಲ್ಲಿ ಬತ್ತಿಯನ್ನು ಹಾಕಿ ದೀಪ ಮೀಟುವುದನ್ನು ಏನೋ ಅನುದ್ದೇಶವಾಗಿ (ಅನಿರೀಕ್ಷಿತವಾಗಿ) ಮಾಡುತ್ತಿದ್ದುದೇ ಹೊರತು ಇನ್ನು ಯಾವ ಉದ್ದೇಶಪೂರ್ವಕವಾಗಿಯೂ ಮಾಡಿದ ಕೆಲಸವಲ್ಲ.

೨೫. ಎಲೈ ಬ್ರಾಹ್ಮಣ ಶ್ರೇಷ್ಠರಾದ ಸಹೋದರರೇ! ಆ ದೇವಾಲಯದಲ್ಲಿ ನಾನು ದೊರೆತಷ್ಟನ್ನೇ ತಿಂದುಕೊಂಡು ತೃಪ್ತಿಹೊಂದುತ್ತಿದ್ದೆನು. ಒಂದಾನೊಂದು ದಿನ ಆ ಸೂರ್ಯಾಲಯಕ್ಕೆ ಹೋಗಿದ್ದೆನು.

೨೬. ಆಗ ಜಾಗರಣೆಗೆ ಬಂದಿದ್ದ ಹಲವರು ಭಕ್ತರನ್ನು ನೋಡಿದೆನು. ನನಗೆ ಸ್ವಲ್ಪ ಸ್ಥಳ ಕೊಡಿರಿ ಎಂದು ಅವರನ್ನು ನಾನು ಪ್ರಾರ್ಥಿಸಿದೆನು.

೧೭. ದಯಾಳುಗಳಾದ ಅವರು "ಇವನು ರೋಗಿಷ್ಠನೂ, ಅತಿದೀನನೂ ಆಗಿದ್ದಾನೆ" ಎಂದು ಒಳ್ಳೆಯ ಮನಸ್ಸುಮಾಡಿ ನನಗೆ ಸ್ವಲ್ಪ ಆಶ್ರಯಕೊಟ್ಟರು. ಆಮೇಲೆ ನಾನು ಅವರ ಸಮೀಪದಲ್ಲಿಯೇ ಬೆಂಕಿಯನ್ನು ಕಾಯಿಸುತ್ತಾ ಇದ್ದೆನು.

೨೮. ಬ್ರಾಹ್ಮಣೋತ್ತಮರೇ! (ಭ್ರಾತೃಗಳೇ) ಕೇಳಿ ಅಲ್ಲಿ ಸೂರ್ಯ ಪ್ರತಿಮೆಗೆ ಧರಿಸಿರುವ ದಿವ್ಯವಾದ ಒಡವೆಗಳನ್ನು ಕದ್ದುಬಿಡಬೇಕೆಂಬ ದುರ್ಬುದ್ಧಿ ಹುಟ್ಟಿ ಸಮಯ ಕಾಯುತ್ತಿದ್ದೆನು.

ಸ್ಥಿತೋಽಹಂ ಭೋಜಕಾಹ್ಯತ್ರ ಯದಿ ನಿದ್ರಾಂ ವ್ರಜಂತಿ ತೇ ।
ಯೇನಾಸ್ಯ ವೈರಿವದ್ಭಾನೋಃ ಹರಾಮ್ಯಾಭರಣಂ ಶುಭಂ ॥ ೨೯ ॥

ಅಥ ಸುಪ್ತಾ ಭೋಜಕಾಸ್ತೇ ನಿದ್ರಯಾ ಮೋಹಿತಾಸ್ತದಾ ।
ನಿರ್ವಾಣಾಶ್ಚಾಪಿ ದೀಪಾಸ್ತು ತತೋಽಹಂ ಹ್ಯುತ್ಥಿತಸ್ತ್ವರನ್ ॥ ೩೦ ॥

ಮುದಾ ಪರಮಯಾ ಯುಕ್ತೋ ಗತೋ ವೈಶ್ವಾನರಂ ಪ್ರತಿ ।
ಪ್ರಜ್ವಾಲ್ಯ ಪಾವಕಂ ಯತ್ನಾತ್ ದೀಪವರ್ತಿಸ್ತತೋ ಮಯಾ ॥ ೩೧ ॥

ಯೋಜಯಿತ್ವಾ ತು ವೈ ದೀಪೇ ಧೃತೋ ದೀಪೋಽಗ್ರತೋ ರವೇಃ ।
ಹರ್ತುಕಾಮೇನಾಭರಣಂ ಭಾನೋರ್ದೇವಸ್ಯ ಸುವ್ರತಾಃ ॥ ೩೨ ॥

ಪ್ರಬುದ್ಧಾಃ ಭೋಜಕಾಃ ಪಶ್ಚಾತ್ಸರ್ವೇ ದೇವಸ್ಯ ಪುತ್ರಕಾಃ ।
ತೈಸ್ತು ದೃಷ್ಟೋ ಹ್ಯಹಂ ತತ್ರ ದೀಪಹಸ್ತೋ ವಿಭಾವಸೋಃ ॥ ೩೩ ॥

---

೨೯. ಇಲ್ಲಿರುವ ಭೋಜಕರೆಲ್ಲರಿಗೂ ನಿದ್ದೆ ಬಂದು ಮಲಗಿಕೊಂಡರೆ, ಆ ಸುಸಂಧಿಯಲ್ಲಿ ಸೂರ್ಯದ್ರೋಹಿಯಾದರೂ ಚಿಂತೆಯಿಲ್ಲ; ಅಲ್ಲಿರುವ ದಿವ್ಯಾಭರಣಗಳನ್ನು ಕದ್ದುಬಿಡುತ್ತೇನೆ, ಎಂದುಕೊಂಡು ಅಲ್ಲೇ ಇದ್ದೆನು.

೩೦. ಹೀಗಿರುವಲ್ಲಿ ಆ ಭೋಜಕರೆಲ್ಲರೂ ಗಾಢನಿದ್ದೆಯಿಂದ ಎಚ್ಚರವಿಲ್ಲದೆ ಮಲಗಿದರು. ಉರಿಯುತ್ತಿದ್ದ ದೀಪಗಳೂ ಸಹ ಆರಿಹೋದುವು. ಆ ಕೂಡಲೇ ನಾನು ಆತುರಪಟ್ಟುಕೊಂಡು ಎದ್ದೆನು.

೩೧. ಬಳಿಕ ತುಂಬಾ ಸಂತೋಷಭರಿತನಾಗಿ ಕಾಯಿಸುತ್ತಿದ್ದ ಬೆಂಕಿಯ ಬಳಿಗೆ ಹೋದೆನು. ಬೆಂಕಿಯನ್ನು ಪ್ರಯತ್ನದಿಂದ ಊದಿ ಹತ್ತಿಸಿ, ಉರಿಮಾಡಿ ಅದರ ಬೆಳಕಿನಿಂದ ಬತ್ತಿಯಿರುವ ಸ್ಥಳವನ್ನು ನೆಪ್ಪು ಹಿಡಿದೆನು.

೩೨. ಎಲೈ ಸುವ್ರತರೇ! ಕೇಳಿ. ಬಳಿಕ ದೀಪವನ್ನು ಹತ್ತಿಸಿ ಸೂರ್ಯನ ಆಭರಣವನ್ನು ಕದಿಯುವ ಅಪೇಕ್ಷೆಯಿಂದ ಆ ದೀಪವನ್ನು ಸೂರ್ಯನ ಮುಂದೆ ಎತ್ತಿಹಿಡಿದೆನು.

೩೩. ಅಷ್ಟರಲ್ಲಿ ಸೂರ್ಯಪುತ್ರರೆನಿಸಿದ ಭೋಜಕರೆಲ್ಲರೂ ಎಚ್ಚರಗೊಂಡು ನಾನು ಅಲ್ಲಿ ಸೂರ್ಯನ ಮುಂದೆ ದೀಪವನ್ನು ಕೈಯ್ಯಲ್ಲಿ ಹಿಡಿದುಕೊಂಡು ನಿಂತಿದ್ದುದನ್ನು ಅವರು ನೋಡಿದರು.

ಪುರಸ್ಥಿತೋ ದ್ವಿಜಶ್ರೇಷ್ಠಾ ಗೃಹೀತಶ್ಚಾಪಿ ತೈರಿಹ ।
ತತೋಽಹಂ ತೇಜಸಾ ಮೂಢೋ ಭಾಸ್ಕರಸ್ಯ ಮಹಾತ್ಮನಃ ॥ ೩೪ ॥

ವಿಲಪನ್ಕರುಣಂ ತೇಷಾಂ ಪಾದಯೋರವನಿಂ ಗತಃ ।
ತೈಶ್ಚಾಪಿ ಕರುಣಾಂ ಕೃತ್ವಾ ಮುಕ್ತೋಽಹಂಭೋಜಕೈಸ್ತದಾ ॥ ೩೫ ॥

ಗೃಹೀತೋ ರಾಜಪುರುಷೈಃ ಪೃಷ್ಟಶ್ಚಾಪಿ ಸಮಂತತಃ ।
ಕಿಮಿದಂ ಭವತಾರಬ್ಧಂ ದೇವದೇವಸ್ಯ ಮಂದಿರೇ ॥ ೩೬ ॥

ದೀಪಂ ಪ್ರಜ್ವಾಲ್ಯ ದುಷ್ಟಾತ್ಮನ್ ಕಥ್ಯತಾಂ ಮಾ ಚಿರಂ ಕುರು ।
ಇತ್ಯುಕ್ತ್ವಾ ತು ತತಸ್ತೈಸ್ತು ಶಸ್ತ್ರಹಸ್ತೈಃ ಸಮಾವೃತಃ ॥ ೩೭ ॥

ತತೋಽಹಂ ವ್ಯಾಧಿನಾಕ್ಲಿಷ್ಟೋ ಭಯೇನ ಚ ದ್ವಿಜೋತ್ತಮಾಃ ।
ಹಿತ್ವಾ ಪ್ರಾಣಾನ್ ಗತೋ ಯತ್ರ ಸ್ವಯಂ ದೇವೋ ವಿಭಾವಸುಃ ॥ ೩೮ ॥

---

೩೪. ಓ ಬ್ರಾಹ್ಮಣ ಶ್ರೇಷ್ಠರಾದ ಭಾತೃಗಳೇ! ಸೂರ್ಯನ ಮುಂದೆ ನಿಂತಿದ್ದ ನನ್ನನ್ನು ಅವರು ಕೂಡಲೇ ಹಿಡಿದುಕೊಂಡುಬಿಟ್ಟರು. ಆಮೇಲೆ ನಾನು ಮಹಾತ್ಮನಾದ ಸೂರ್ಯದೇವನ ತೇಜಸ್ಸಿನಿಂದಲೋ ಏನೋ ಮೂಢನಾಗಿ ಗೋಳಾಡುತ್ತಾ

೩೫. ಅವರ ಪಾದಗಳ ಸಮೀಪದಲ್ಲಿ ನೆಲದಮೇಲೆ ಅಡ್ಡಬಿದ್ದೆನು. (ನಮಿಸಿದೆನು) ಆ ಭೋಜಕರೂ ಕೂಡ ಆಗ ದಯೆ ತೋರಿಸಿ ನನ್ನನ್ನು ಬಿಟ್ಟುಬಿಟ್ಟರು.

೩೬–೩೭. ರಾಜಪುರುಷರು (ಪೋಲೀಸಿನವರು) ನನ್ನ ಸುತ್ತಲೂ ಆವರಿಸಿ ಹಿಡಿದುಕೊಂಡು, ದುಷ್ಟಾತ್ಮನಾದ ನೀಚನೇ! ದೇವದೇವನ ಆಲಯದಲ್ಲಿ ದೀಪ ಹತ್ತಿಸಿಕೊಂಡು ಏನುಕೆಲಸ ಮಾಡಲು ಪ್ರಾರಂಭಿಸಿದ್ದೆ? ಬೇಗ ಹೇಳು; ಎಂದು ಹೇಳುತ್ತಾ ಆಯುಧಸಮೇತರಾದ ಅವರು ನನ್ನನ್ನು ಮುತ್ತಿಕೊಂಡರು.

೩೮. ಓ ಬ್ರಾಹ್ಮಣರೇ! ಆಗ ನನಗೆ ಸಹಜವಾಗಿದ್ದ ವ್ಯಾಧಿಯಿಂದಲೂ ಇವರ ಕೈಗೆ ಸಿಕ್ಕಿಬಿದ್ದ ದಿಗಿಲಿನಿಂದಲೂ ಘೋರಾ ಕ್ಲೇಶವುಂಟಾಗಿ ಪ್ರಾಣಹೋಗಿಬಿಟ್ಟಿತು. ಆ ಕೂಡಲೇ ನನಗೆ ಸೂರ್ಯಲೋಕ ಪ್ರಾಪ್ತಿಯಾಯಿತು.

ಸ್ಥಿತ್ವಾಕಲ್ಪಂ ತತಸ್ತತ್ರ ಯುಷ್ಮಾಕಂ ಭ್ರಾತೃತಾಂ ಗತಃ ।
ಏಷ ಪ್ರಭಾವೋ ದೀಪಸ್ಯ ಕಾರ್ತಿಕೇ ಮಾಸಿ ಸುವ್ರತಾಃ ॥ ೩೯ ॥

ದತ್ತಸ್ಯಾರ್ಕಸ್ಯ ಭವನೇ ತಸ್ಯೇಯಂ ಪುಷ್ಟಿರುತ್ತಮಾ ।
ದುಷ್ಟಬುದ್ಧ್ಯಾ ಕೃತಂ ಯತ್ತು ಮಯಾ ದೀಪಪ್ರವರ್ತನಂ ॥ ೪೦ ॥

ಭಗಾಯುತನದೀಪಸ್ಯ ತಸ್ಯೇದಂ ಭುಜ್ಯತೇ ಫಲಂ ।
ಕ್ಷುಧಾಭಿಭೂತೇನ ಮಯಾ ಹರ್ತುಂ ದೇವಸ್ಯ ಭೂಷಣಂ ॥ ೪೧ ॥

ದೀಪಶ್ಚ ದೇವಪುರತೋ ಜ್ವಾಲಿತೋ ಭಾಸ್ಕರಸ್ಯ ತು ।
ತತೋ ಜಾತಿಸ್ಮೃತಿರ್ಜನ್ಮ ಪ್ರಾಪ್ತಂ ಬ್ರಾಹ್ಮಣವೇಶ್ಮನಿ ॥ ೪೨ ॥

ಕುಷ್ಠಿನಾ ಚಾಪಿ ಶೂದ್ರೇಣ ಪ್ರಾಪ್ತಂ ಬ್ರಾಹ್ಮಣ್ಯಮುತ್ತಮಂ ।
ನಾನಾವಿಧಾನಿ ಶಾಸ್ತ್ರಾಣಿ ಸಾಂಗಂ ವೇದಂ ಸಮಾಪ್ತವಾನ್ ॥ ೪೩ ॥

---

೩೯. ಅಲ್ಲಿ ನಾನು ಒಂದು ಕಲ್ಪಾಂತರದವರೆಗೆ ಇದ್ದು ಆ ಬಳಿಕ ಈ ಬ್ರಾಹ್ಮಣ ಜನ್ಮದಲ್ಲಿ ನಿಮ್ಮ ಸಹೋದರರಾಗಿ ಜನಿಸಿದೆನು. ಅಯ್ಯಾ ಸುವ್ರತರಾದ ಸಹೋದರರಿರಾ! ಇದು ಕಾರ್ತಿಕ ಮಾಸದಲ್ಲಿ ದೀಪಾರಾಧನೆ ಮಾಡಿದುದರ ಪ್ರಭಾವ.

೪೦. ಮತ್ತು ಸೂರ್ಯನ ಆಲಯದಲ್ಲಿ ದೀಪ ಇಟ್ಟಿದ್ದಕ್ಕೆ ಈ ದೇಹಪುಷ್ಟಿಯಾದುದೇ ಉತ್ತಮ ಫಲ. ಕದಿಯಬೇಕೆಂಬ ದುಷ್ಟಬುದ್ಧಿಯಿಂದ ನಾನು ಹತ್ತಿಸಿದ ದೀಪವೂ ಕೂಡ ಈ ರೀತಿ ಫಲಪ್ರದವಾಯಿತು.

೪೧. ಆ ಪ್ರಕಾರ ಸೂರ್ಯಾಲಯದಲ್ಲಿ ದೀಪ ಹತ್ತಿಸಿದ ಫಲವನ್ನು ನಾನು ಈಗ ಅನುಭವಿಸುತ್ತೀನೆ. ಹಸಿವಿನಿಂದ ಕಂಗೆಟ್ಟು ನರಳುತ್ತಿದ್ದೆ

೪೨. ಇಂಥ ನಾನು ದೇವದೇವನಾದ ಸೂರ್ಯನ ಆಭರಣವನ್ನು ಕದಿಯಲು ದ್ದೇಶಿಸಿ ಸೂರ್ಯದೇವನ ಮುಂದುಗಡೆ ದೀಪವನ್ನು ಉರಿಸಿದೆನು. ಆದಾಗ್ಯೂ ಈ ನನಗೆ ಪೂರ್ವ ಜನ್ಮ ಸ್ಮರಣೆಯೂ ಬ್ರಾಹ್ಮಣ ಗೃಹದಲ್ಲಿ ಜನನವೂ ಉಂಟಾಯಿತು.

೪೩. ಹಿಂದೆ ಕುಷ್ಠರೋಗವುಳ್ಳ ಶೂದ್ರನಾಗಿದ್ದ ನಾನು ಈಗ ಉತ್ತಮವಾದ ಬ್ರಾಹ್ಮಣ್ಯವನ್ನು ಪಡೆದೆನು. ನಾನಾ ಬಗೆಯ ಶಾಸ್ತ್ರಗಳನ್ನೂ ಸಾಂಗವಾದ ವೇದವನ್ನೂ ಅಭ್ಯಸಿಸಿ ಮುಗಿಸಿದೆನು.

ದುಷ್ಟಬುದ್ಧ್ಯಾ ಧೃತಾದ್ದೀಪಾತ್ಫಲಮೇತನ್ಮಹಾದ್ಭುತಂ ।
ಪ್ರಾಪ್ತಂ ಮಯಾ ದ್ವಿಜಶ್ರೇಷ್ಠಾಃ ಕಿಂಪುನರ್ದೀಪದಾಯಿನಾಂ ॥ ೪೪ ॥

ಏತಸ್ಮಾತ್ಕಾರಣಾದ್ದೀಪಾನಹಮೇವಮಹರ್ನಿಶಂ ।
ಪ್ರಯಚ್ಛಾಮಿ ರವೇರ್ಧಾಮ್ನಿ ಜ್ಞಾತಮಸ್ಯ ಹಿ ಯತ್ಫಲಂ ॥ ೪೫ ॥

ಯುಷ್ಮಾಕಮಿದಮುಕ್ತಂ ವೈ ಸ್ನೇಹಾತ್ಸತ್ಯಂ ನ ಸಂಶಯಃ ।
ಏಷ ಪ್ರಭಾವೋ ದೀಪಸ್ಯ ಕಾರ್ತಿಕೇ ಮಾಸಿ ಸುವ್ರತಾಂ ॥ ೪೬ ॥

ಅರ್ಕಾಯತನದೀಪಸ್ಯ ಭದ್ರೋವೋಚದ್ಯಥಾ ಪುರಾ ।
ದಿನೇದಿನೇ ಜಪನ್ನಾಮ ಭಾಸ್ಕರಸ್ಯ ಸಮಾಹಿತಃ ॥ ೪೭ ॥

ದದಾತಿ ಕಾರ್ತಿಕೇ ಯಸ್ತು ಭಗಾಯತನದೀಪಕಂ ।
ಜಾತಿಸ್ಮರತ್ವಂ ಪ್ರಜ್ಞಾಂ ಚ ಪ್ರಾಕಾಶ್ಯಂ ಸರ್ವಜಂತುಷು ॥ ೪೮ ॥

---

೪೪. ಅಯ್ಯಾ ಬ್ರಾಹ್ಮಣೋತ್ತಮರೇ! ಕದಿಯಬೇಕೆಂಬ ದುಷ್ಟಬುದ್ಧಿಯಿಂದ ದೀಪ ಹತ್ತಿಸಿದ್ದರಿಂದಲೇ ಈ ಮಹಾಶ್ಚರ್ಯಕರವಾದ ಫಲವುಂಟಾಯಿತು. ಎಂದಮೇಲೆ ಇನ್ನು ಸುಬುದ್ಧಿಯಿಂದ ದೀಪ ಹಚ್ಚಿದವರಿಗೆ ಆಗುವ ಫಲವನ್ನು ಹೇಳತಕ್ಕದ್ದೇನು ?

೪೫. ಈ ಪ್ರಕಾರ ದೀಪದಾನದ ಫಲವನ್ನು ತಿಳಿದಕಾರಣದಿಂದ ನಾನು ಹಗಲೂ ಇರಳೂ ಈ ಸೂರ್ಯಾಲಯದಲ್ಲಿ ದೀಪಹಚ್ಚುತ್ತೇನೆ.

೪೬. ನಿಮ್ಮಲ್ಲಿರುವ ಸ್ನೇಹದಿಂದ ನಾನು ಇದನ್ನು ನಿಮಗೆ ಹೇಳಿದ್ದೇನೆ. ಇದು ಸತ್ಯ. ಸಹೋದರರಾದ ಎಲೈ ಸುವ್ರತರೇ ! ಕಾರ್ತಿಕ ಮಾಸದಲ್ಲಿ ದೀಪಹಚ್ಚಿದುದರ ಮಹಿಮೆ ಇಷ್ಟುಮಟ್ಟೆನದು ಎಂದನು.

೪೭. ಪೂರ್ವದಲ್ಲಿ ಭದ್ರನು ಸೂರ್ಯನ ಆಲಯದಲ್ಲಿ ದೀಪ ಹತ್ತಿಸಿದ ಮಹಿಮೆಯನ್ನು ಈ ರೀತಿ ಹೇಳಿದೆ. ಸಮಾಹಿತಚಿತ್ತನಾಗಿ ದಿನೇ ದಿನೇ ಸೂರ್ಯನ ಆಲಯದಲ್ಲಿ ಭಾಸ್ಕರ ನಾಮವನ್ನು ಜಪಿಸುತ್ತಾ ದೀಪ ಹತ್ತಿಸಬೇಕು.

೪೮. ಯಾವನು ಕಾರ್ತಿಕ ಮಾಸದಲ್ಲಿ ಸೂರ್ಯಾಲಯದಲ್ಲಿ ದೀಪವನ್ನು ಹಚ್ಚುತ್ತಾನೋ ಅವನು ಪೂರ್ವಜನ್ಮ ಸ್ಮರಣೆಯನ್ನು ಹೊಂದಿ, ಎಲ್ಲರಿಗಿಂತ ತೇಜಸ್ವಿಯಾಗುವನು.

ಅವ್ಯಾಹತೇಂದ್ರಿಯತ್ವಂ ಚ ಸಮಾಪ್ನೋತಿ ನ ಸಂಶಯಃ ।
ಸರ್ವಕಾಲಂ ಚ ಚಕ್ಷುಷ್ಮಾನ್ ಮೇಧಾವೀ ದೀಪದೋ ನರಃ ॥ ೪೯ ॥

ಜಾಯತೇ ನರಕಂ ಚಾಪಿ ತಮಃ ಸಂಜ್ಞಂ ನ ಪಶ್ಯತಿ ।
ಷಷ್ಠೀಂ ವಾ ಸಪ್ತಮೀಂ ವಾಪಿ ಪ್ರತಿಪಕ್ಷಂ ಚ ಯೋ ನರಃ ॥ ೫೦ ॥

ದೀಪಂ ದದಾತಿ ಯತ್ನಾದ್ಯತ್ಫಲಂ ತಸ್ಯ ನಿಭೋಧ ಮೇ ।
ಕಾಂಚನಂ ಮಣಿಯುಕ್ತಂ ಚ ಮನೋಜ್ಞಮತಿಶೋಭನಂ ॥ ೫೧ ॥

ದೀಪಮಾಲಾಕುಲಂ ದಿವ್ಯಂ ವಿಮಾನಮಧಿರೋಹತಿ ।
ತಸ್ಮಾದಾಯತನೇ ಭಾನೋರ್ದೀಪಾನ್ದದ್ಯಾತ್ಸದಾಚ್ಯುತ ॥ ೫೨ ॥

ತಾಂಶ್ಚ ದತ್ವಾ ನ ಹಿಂಸ್ಯಾಚ್ಚ ನ ಚ ತೈಲವಿಯೋಜಿತಾನ್ ।
ಕುರ್ವೀತ ದೀಪಹರ್ತಾ ತು ಮೂಷಕೋಂಧಶ್ಚ ಜಾಯತೇ ॥ ೫೩ ॥

---

೪೯. ಮತ್ತು ಇಂದ್ರಿಯಗಳ ಬಾಧೆಯಿಲ್ಲದಿರುವಿಕೆಯನ್ನೂ ಹೊಂದುತ್ತಾನೆ. ಸಂಶಯವಿಲ್ಲ. ದೀಪ ಹಚ್ಚಿದ ಮಾನವನು ಸದಾ ಮೇಧಾವಿಯೂ ನೇತ್ರಪಾಟವವುಳ್ಳವನೂ ಆಗುವನು.

೫೦. ಆತನು ತಮಸ್ಸಂಜ್ಞೆಯುಳ್ಳ ನರಕವನ್ನು ಎಂದೂ ಕಾಣುವುದಿಲ್ಲ. ಪ್ರತಿ ಪಕ್ಷದ ಷಷ್ಠಿಯಲ್ಲೂ, ಸಪ್ತಮಿಯಲ್ಲೂ, ದೀಪಹಚ್ಚುವುದರ ಫಲವನ್ನು ಹೇಳುವೆನು ಕೇಳು,

೫೧. ಆ ಪುಣ್ಯಾತ್ಮನು ಸುವರ್ಣಮಯವೂ, ರತ್ನಯುಕ್ತವೂ, ಮನೋಹರವೂ, ಬಹುಮಂಗಳಕರವೂ ಆದುದೂ,

೫೨. ಮತ್ತು ದೀಪಶ್ರೇಣಿಯುಕ್ತವೂ ಆದ ವಿಮಾನವನ್ನೇರಿ ಸಂಚರಿಸುತ್ತಾನೆ. ಎಲೈ ಕೃಷ್ಣನೇ! ಈ ಕಾರಣದಿಂದ ದೇವಾಲಯದಲ್ಲಿ ಸದಾ ಸೂರ್ಯನಿಗೆ ದೀಪಾರ್ಪಣೆಮಾಡಬೇಕು.

೫೩. ಅವುಗಳನ್ನು ಹಚ್ಚಿ ಎಣ್ಣೆಯಿಲ್ಲದಂತೆ ಮಾಡಿ ಅವುಗಳಿಗೆ ತೊಂದರೆ ಮಾಡಬಾರದು. ಉರಿಯುತ್ತಿದ್ದ ದೀಪವನ್ನು ಆರಿಸಿದವನು ಕುರುಡು ಇಲಿಯಾಗಿ ಹುಟ್ಟುತ್ತಾನೆ.

**ತಸ್ಮಾದ್ದದ್ಯಾನ್ನೋಽಹರೇದ್ವೈ ಶ್ರೇಯೋಽರ್ಥೀ ದೀಪಕಂ ನರಃ ॥ ೫೪ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮಿಾ ಕಲ್ಪೇ**
**ಆದಿತ್ಯ ಮಾಹಾತ್ಮ್ಯೇ ಸೂರ್ಯಪೂಜಾವಿಧಿ ವರ್ಣನಂ ನಾಮ**
**ಪಂಚದಶೋತ್ತರ ಶತತಮೋಽಧ್ಯಾಯಃ**



---

೫೪. ಆದುದರಿಂದ ಶ್ರೇಯಸ್ಸನ್ನು ಆಶಿಸುವವನು ದೀಪವನ್ನು ಹಚ್ಚಿಡಬೇಕೇ ಹೊರತು ನೊಂದಿಸಬಾರದು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮಿಾಕಲ್ಪದಲ್ಲಿ
ಭದ್ರನ ಕಥೆಯಲ್ಲಿ ಸೂರ್ಯದೇವಾಲಯಕ್ಕೆ ದೀಪದಾನ ಮಾಡಿದುದರ
ಫಲವೆಂಬ ನೂರಹದಿನೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಏಕೋನವಿಂಶೋತ್ತರಶತತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ಅಂಧೇ ತಮಸಿ ದುಷ್ಪಾರೇ ನರಕೇ ಪತಿತಾನ್ಕಿಲ ।
ಸಂಕ್ರೋಶಮಾನಾನ್ಸಂಕ್ಷುಬ್ಧಾನುವಾಚ ಯಮಕಿಂಕರಃ ॥ ೧ ॥

ವಿಲಾಪೈರಲಮತ್ರೇತಿ ಕಿಂ ವೋ ವಿಲಪಿತೇ ಫಲಂ ।
ಯತ್ಪ್ರಮಾದಾದಿಭಿಃ ಪೂರ್ವಮಾತ್ಮಾಯಂ ಸಮುಪೇಕ್ಷಿತಃ ॥ ೨ ॥

ಪೂರ್ವಮಾಲೋಚಿತಂ ನೈತತ್ಕಥಮಂತೇ ಭವಿಷ್ಯತಿ ।
ಇದಾನೀಂ ಯಾತನಾಂ ಭುಙ್ಕ್ಧ್ವಂ ಕಿಂ ವಿಲಾಪಂ ಕರಿಷ್ಯಥ ॥ ೩ ॥

---

## ನೂರಹತ್ತೊಂಭತ್ತನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಅಂಧತಮಸ್ಸೆಂಬ ಅಗಾಧವಾದ ನರಕಕೂಪದಲ್ಲಿ ಬಿದ್ದು ಕೂಗಿಕೊಳ್ಳುತ್ತಾ ಗಾಬರಿಪಡುವವರನ್ನು ಕುರಿತು ಯಮಕಿಂಕರನು ಈ ರೀತಿ ಹೇಳಿದನು.

೨. ಇಲ್ಲಿ ಹೀಗೆ ಅಳಕೂಡದು. ನೀವು ಅಳುವುದರಿಂದ ಪ್ರಯೋಜನವು ಏನಿದೆ ? ಅನವಧಾನ ಮೊದಲಾದ ಕಾರಣಗಳಿಂದ ನಿಮ್ಮ ಆತ್ಮವನ್ನೇ ನೀವು ಉಪೇಕ್ಷೆ ಮಾಡಿದಿರಿ.

೩. ಈ ವಿಷಯವನ್ನು ಮುಂಚಿತವಾಗಿಯೇ ಆಲೋಚನೆ ಮಾಡಿಕೊಳ್ಳದೆ ಈಗ ಕೊನೆಯಲ್ಲಿ ಆಲೋಚಿಸಿಕೊಂಡರೆ ಸಾಧ್ಯವಾಗುತ್ತದೆಯೇ? ಅದುದರಿಂದ ಸದ್ಯಕ್ಕೆ ಈ ತೀವ್ರವೇದನೆಯನ್ನು ಮೌನವಾಗಿ ಅನುಭವಿಸಿರಿ—ಸುಮ್ಮನೆ ಏಕೆ ಅಳುವಿರಿ ?

ದೇಹೋದಿನಾನಿ ಸ್ವಲ್ಪಾನಿ ವಿಷಯಾಶ್ಚಾತಿ ದುರ್ಬಲಾಃ ।
ಏತತ್ಕೋ ನ ವಿಜಾನಾತಿ ಯೇನ ಯೂಯಂ ಪ್ರಮಾದಿನಃ ॥ ೪ ॥

ಜಂತುರ್ಜನ್ಮಸಹಸ್ರೇಭ್ಯ ಏತಸ್ಮಿನ್ಮಾನುಷೋ ಯದಿ ।
ಸ ತತ್ರಾಪ್ಯತಿಮೂಢಾತ್ಮಾ ಕಿಂ ಭೋಗಾನಭಿಧಾವತಿ ॥ ೫ ॥

ಪುತ್ರದಾರಗೃಹಕ್ಷೇತ್ರಹಿತಾಯ ಸತತೋದ್ಯತಾಃ ।
ನ ಜಾನಂತಿ ತತೋ ಮೂಢಾಃ ಸ್ವಲ್ಪಮಪ್ಯಾತ್ಮನೋ ಹಿತಂ ॥ ೬ ॥

ವಂಚಕೋಽಹಂ ಮಯಾಲಬ್ಧಮಿದಮಸ್ಮಾದುಪಾಗತಂ ।
ನ ವೇತ್ತಿ ಮೋಹಿತಃ ಕಶ್ಚಿತ್ಪ್ರಕ್ರಾಂತನರಕೋ ನರಃ ॥ ೭ ॥

ನ ವೇತ್ತಿ ಸೂರ್ಯಚಂದ್ರಾದೀನ್ಕಾಲಮಾತ್ಮಾನಮೇವ ಚ ।
ಸಾಕ್ಷಿಭೂತಾನಶೇಷಸ್ಯ ಶುಭಸ್ಯೇಹಾಶುಭಸ್ಯ ಚ ॥ ೮ ॥

---

೪. ಏನಾಶ್ಚರ್ಯ! ಜೀವನಕಾಲವು ಸ್ವಲ್ಪ, ಇಂದ್ರಿಯಗಳು ದುರ್ಬಲಗಳು, ಈ ವಿಷಯವನ್ನು ತಿಳಿಯದವರಾರು? ಹೀಗಿದ್ದೂ ನೀವು ಪ್ರಮಾದಹೊಂದಿದುದೇಕೆ?

೫. ಪ್ರಾಣಿಯು ಸಹಸ್ರ ಜನ್ಮಗಳಲ್ಲಿ ಸುತ್ತಾಡಿ ಕಡೆಗೊಂದು ಮನುಷ್ಯಜನ್ಮ ವೆತ್ತಿದರೆ, ಅವನು ಆಗಲೂ ಅತಿಮೂಢನಾಗಿ ಭೋಗಗಳಿಗಾಗಿ ಓಡಾಡಬಹುದೇ?

೬. ಮಕ್ಕಳು, ಹೆಂಡಿರು, ಮನೆ, ಹೊಲ, ಗದ್ದೆಗಳು ಇವುಗಳ ಹಿತಕ್ಕಾಗಿಯೇ ಯಾವಾಗಲೂ ಉದ್ಯೋಗಮಾಡುತ್ತಾ ಮುಂದಿನ ಸದ್ಗತಿಯನ್ನು (ಆತ್ಮದ ಹಿತವನ್ನು) ಸ್ವಲ್ಪವೂ ಯೋಚಿಸುವುದೇ ಬೇಡವೇ?

೭. ನರಕಫಲಾನುಭವಮಾಡುತ್ತಿರುವವನು "ನಾನು ಯಾರಿಗೋ ವಂಚನೆ ಮಾಡಿದ್ದೆ. ಆ ವಂಚನೆಯ ಫಲವಾಗಿ ಈಗ ಈ ನರಕವಾಸವು ನನಗೆ ಪ್ರಾಪ್ತ ವಾಗಿದೆ" ಎಂಬುದನ್ನು ಅಜ್ಞಾನವಶದಿಂದ ತಿಳಿಯಲಾರನು.

೮. ನರಕಫಲಾನುಭವಕ್ಕೆ ಸಿದ್ಧನಾದ ಮನುಷ್ಯನು ತಾನು ಮಾಡುವ ಶುಭಾಶುಭಗಳಾದ ಸಮಸ್ತ ಕರ್ಮಗಳಿಗೂ ಸೂರ್ಯಚಂದ್ರಾದಿಗಳೂ, ಕಾಲವೂ, ಆತ್ಮವೂ ಇವೆಲ್ಲ ಸಾಕ್ಷೀಭೂತವಾಗಿರುವುದೆಂಬುದನ್ನು ತಿಳಿಯದೆ ಹಾಗೆ ನಡೆಯುವನು.

ಜನ್ಮಾನ್ಯನ್ಯಾನಿ ಜಾಯಂತೇ ಪುತ್ರದಾರಾದಿದೇಹಿನಾಂ ।
ಯದರ್ಥಂ ಯತ್ಕೃತಂ ಕರ್ಮ ತಸ್ಯ ಜನ್ಮಶತಾನಿ ತು ॥ ೯ ॥

ಅಹೋ ಮೋಹಸ್ಯ ಮಾಹಾತ್ಮ್ಯಂ ಮಮತ್ವಂ ನರಕೇಷ್ವಪಿ ।
ಕ್ರಂದತೇ ಮಾತರಂ ತಾತಂ ಪೀಡ್ಯಮಾನೋಽಪಿ ಯತ್ಸ್ವಯಂ ॥ ೧೦ ॥

ಏವಮಾಕೃಷ್ಟಚಿತ್ತಾನಾಂ ವಿಷಯೈಃ ಸ್ವಾದುತರ್ಪಣೈಃ ।
ನೃಣಾಂ ನ ಜಾಯತೇ ಬುದ್ಧಿಃ ಪರಮಾರ್ಥವಿಲೋಕಿನೀ ॥ ೧೧ ॥

ತಥಾ ಚ ವಿಷಯಾಸಂಗೇ ಕರೋತ್ಯವಿರತಂ ಮನಃ ।
ಕೋ ಹಿ ಭಾರೋ ರವೇರ್ನಾಮ್ನಿ ಜಿಹ್ವಯಾ ಪರಿಕೀರ್ತನೇ ॥ ೧೨ ॥

---

೯. ಯಾವ ವ್ಯಕ್ತಿಯು ಯಾವ ಫಲಹೊಂದುವುದಕ್ಕಾಗಿ ಯಾವ ಕರ್ಮ ವನ್ನು ಆಚರಿಸುವನೋ, ಆ ವ್ಯಕ್ತಿಗೆ ಆ ಕರ್ಮದ ಫಲಾನುಭವಕ್ಕಾಗಿ ನೂರಾರುಜನ್ಮ ಪ್ರಾಪ್ತಿಯಾಗುತ್ತದೆ. ಇವನ ಹೆಂಡತಿ ಮಕ್ಕಳು ಮುಂತಾದವರಿಗೆ ಅವನ ಕರ್ಮಾನು ಸಾರ ಬೇರೆ ಜನ್ಮಗಳು ಬರುತ್ತವೆ.

೧೦. ನರಕದಲ್ಲಿ ತಾನು ಕ್ಲೇಶಾನುಭವಮಾಡುತ್ತಿದ್ದರೂ, ತಮ್ಮ ಕರ್ಮಾನು ಸಾರವಾಗಿ ಮತ್ತೆಲ್ಲೋ ಇರುವ ತಾಯಿಯನ್ನೂ ತಂದೆಯನ್ನೂ ತನಗೆ ಸಹಾಯ ಮಾಡಿಯಾರು ಎಂಬ ನಿರೀಕ್ಷಣೆಯಿಂದ ಕೂಗಿಕೊಳ್ಳುತ್ತಾನೆ ತಾಯಿ ಎಲ್ಲೋ, ತಂದೆ ಎಲ್ಲೋ, ಆದರೂ ಸುಮ್ಮನೆ ಅರಚುವನು. ನನ್ನದು ಎಂಬ ಭ್ರಾಂತಿಯ ಮಹಿಮೆಯು ಎಷ್ಟು ಬಲವತ್ತರವಾದುದೋ ?

೧೧. ತಮ್ಮಲ್ಲಿರುವ ಆಪ್ಯಾಯನತೆಯಿಂದ ತೃಪ್ತಿಗೊಳಿಸುವ ವಿಷಯಾಭಿ ಲಾಷೆಗೆ ಮನಸೋತ ಮನುಷ್ಯರಿಗೆ, ಪರಮಾರ್ಥವನ್ನು ಆಲೋಚಿಸುವ ಬುದ್ಧಿಯು ಹುಟ್ಟುವುದಿಲ್ಲ.

೧೨. ಮನುಷ್ಯನು ವಿಷಯಸುಖಕ್ಕೆ ಮನಸ್ಸುಕೊಟ್ಟನೆಂದರೆ, ಯಾವಾಗಲೂ ಆ ವ್ಯವಹಾರದಲ್ಲೇ ಆಸಕ್ತನಾಗಿರುತ್ತಾನೆ. ಅಂಥವನಿಗೆ ಸೂರ್ಯನಾಮವನ್ನು ಉಚ್ಚರಿ ಸುವುದಕ್ಕೆ ಕಷ್ಟವೇ ? ಅವನ ನಾಲಿಗೆಗೆ ಎಷ್ಟು ಭಾರವಾದೀತು ? (ಅದನ್ನೂ ಸಹ ಮಾಡುವುದಿಲ್ಲ)

ವರ್ತಿತೈಲೇsಲ್ಪಮೂಲ್ಯೇ ಚ ಯದ್ವರ್ತಿರ್ಲಭ್ಯತೇ ಸುಧಾ ।
ಅತೋ ವೈ ಕತರೋ ಲಾಭಃ ಕಾತಶ್ಚಿಂತಾ ಭವೇತ್ತದಾ ॥ ೧೩ ॥

ಯೇನಾಯತ್ತೇಷು ಹಸ್ತೇಷು ಸ್ವಾತಂತ್ರ್ಯೇ ಸತಿ ದೀಪಕಃ ।
ಮಹಾಫಲೋ ಭಾನುಗೃಹೇ ಪ್ರದತ್ತೋ ನರಕಾಪಹಃ ॥ ೧೪ ॥

ನರೋ ವಿಲಪತೇ ಕಿಂಚಿದಿದಾನೀಂ ದೃಷ್ಟ್ವಾ ಫಲಂ ।
ಅಸ್ವಾತಂತ್ರ್ಯೇ ವಿಲಪತಾಂ ಸ್ವಾತಂತ್ರ್ಯೇ ಸತಿ ಮಾನಿನಾಂ ॥ ೧೫ ॥

ಅವಶ್ಯಂ ಪಾತಿನಃ ಪ್ರಾಣಾ ಭೋಕ್ತಾ ಜೀವೋsಪ್ಯಹರ್ನಿಶಂ ।
ದತ್ತಂ ಚ ಲಭತೇ ಭೋಕ್ತುಂ ಕಾಮಯನ್ವಿಷಯಾನಪಿ ॥ ೧೬ ॥

ಏತತ್ ಸ್ಥಾನಂ ದುಷ್ಕೃತೈರ್ವಾ ಯುಕ್ತಂ ಚಾದ್ಯ ಮಯೇಕ್ಷಿತಂ ।
ಇದಾನೀಂ ಕಿಂ ವಿಲಾಪೇನ ಸಹಧ್ವಂ ಯದುಪಾಗತಂ ॥ ೧೭ ॥

---

೧೩. ಬತ್ತಿ, ಎಣ್ಣೆ ಇವುಗಳಿಗಾಗುವ ಬೆಲೆ ಬಹುಸ್ವಲ್ಪ. ಬತ್ತಿಯಂತೂ ಸುಖವಾಗಿ ಸಿಕ್ಕುವುದು. ಇವುಗಳಿಂದ ದೀಪ ಉರಿಸುವ ಪುಣ್ಯಕ್ಕಿಂತ ಬೇರೆ ಲಾಭ ಯಾವುದಿದೆ ? ಆದ್ದರಿಂದ ಈ ವಿಚಾರದಲ್ಲಿ ಚಿಂತಿಸಬೇಕಾದದ್ದು ಏನಿದೆ ?

೧೪. ಕೈಕಾಲುಗಳು ಸ್ವಾಧೀನವಿದ್ದು ಸ್ವಾತಂತ್ರ್ಯವೂ ಇರಲಾಗಿ, ಮಹಾಫಲ ಪ್ರದವೆಂದು ಪ್ರಸಿದ್ಧವಾದ ದೀಪವನ್ನು ಸೂರ್ಯಾಲಯದಲ್ಲಿ ಹತ್ತಿಸಿದರೆ, ಅವನಿಗೆ ಎಂದಿಗೂ ನರಕಭಯವಿಲ್ಲ.

೧೫. ತಾನು ಅಸ್ವತಂತ್ರನಾಗಿ ಯಾತನೆಹೊಂದಿದಾಗ, 'ಅಯ್ಯೋ' ಎಂದು ವಿಲಾಪಮಾಡುತ್ತಾನೆ. ಸ್ವಾತಂತ್ರ್ಯವಿದ್ದಾಗ ಕೈಯಲ್ಲಾಗುವ ಸಣ್ಣ ಸತ್ಕಾರ್ಯ ವನ್ನೂ ಮಾಡದೇ ಗರ್ವಯುಕ್ತನಾಗಿ ಮೆರೆಯುತ್ತಾನೆ.

೧೬. ದೇಹವು ಸೃಷ್ಟವಾದ ಮೇಲೆ ಪ್ರಾಣ ಅವಶ್ಯವಾಗಿ ಬರುತ್ತದೆ ಹಾಗೆಯೇ ಪ್ರಾಣಹೋಗುತ್ತದೆ. ಜೀವನು ಹಗಲು ರಾತ್ರಿ ಸುಖದುಃಖಾನುಭವ ಮಾಡು ತ್ತಾನೆ. ಇವನು ಬೇಕುಬೇಕಾದ್ದನ್ನೆಲ್ಲಾ ಅಪೇಕ್ಷಿಸಿದರೂ, ಈ ಜನ್ಮದಲ್ಲಿ ಎಷ್ಟು ಕೊಟ್ಟಿದ್ದನೋ ಜನ್ಮಾಂತರದಲ್ಲಿ ಅಷ್ಟೇ ಇವನ ಭೋಗಕ್ಕೆ ಲಭಿಸುವುದು.

೧೭. ಈಗ ನಾನು ನೋಡಿದ (ತಿಳಿಸಿದ) ಸ್ಥಳವು ಪಾಪಫಲದಿಂದ ಲಭ್ಯವಾ ದದ್ದು. ಈಗ ಇಲ್ಲಿ ಅತ್ತುದುದರಿಂದ ಫಲವೇನು ? ಏನು ಬಂದರೂ ಸಹಿಸಿಕೊಂಡು ಅನುಭವಿಸಬೇಕು.

ಯದ್ಯೇತದನಭೀಷ್ಟಂ ವೋ ಯದ್ದುಃಖಂ ಸಮುಪಸ್ಥಿತಂ ।
ತದದ್ಭುತಂ ಮತಿಃ ಪಾಪೇ ನ ಕರ್ತವ್ಯಾ ಕದಾಚನ ॥ ೧೮ ॥

ಕೃತೇಽಪಿ ಪಾಪಕೇ ಕರ್ಮಣ್ಯಜ್ಞಾನಾದಘನಾಶನಂ ।
ಕರ್ತವ್ಯಮನವಚ್ಛಿನ್ನಂ ಪೂಜನಂ ಸವಿತುಃ ಸದಾ ॥ ೧೯ ॥

॥ ಬ್ರಹ್ಮೋವಾಚ ॥

ನಾರಕಾಸ್ತದ್ವಚಶ್ಶ್ರುತ್ವಾ ತಮೂಚುರತಿದುಃಖಿತಾಃ ।
ಕ್ಷುತ್ಕ್ಷಾಮಕಂಠಾಸ್ತೃಟ್ತಾಪವಿಸಂಶೋಷಿತತಾಲುಕಾಃ ॥ ೨೦ ॥

ಭೋ ಭೋಃ ಸಾಧು ಕೃತಂ ಕರ್ಮ ಯದಸ್ಮಾಭಿಸ್ತದುಚ್ಯತಾಮ್ ।
ನರಕಸ್ಥೈರ್ವಿಪಾಕೋಽಯಂ ಭುಜ್ಯತೇ ಯತ್ಸುದಾರುಣಃ ॥ ೨೧ ॥

---

೧೮. ಪಾಪಕೃತ್ಯವನ್ನು ಆಚರಿಸಿ ತತ್ಫಲವಾಗಿ ಈ ಸ್ಥಳಕ್ಕೆ ಬಂದು ಇಲ್ಲಿ ಹೀಗೆ ವಿಲಾಪಮಾಡುವುದು ಅದ್ಭುತವಾಗಿ ಕಾಣುವುದು. ಈಗ ಪ್ರಾಪ್ತವಾಗಿರುವ ದುಃಖವು ನಿಮಗೆ ಇಷ್ಟವಿಲ್ಲದೆ ಹೋದರೆ ನರಕಪ್ರಾಪ್ತಿಗೆ ಕಾರಣವಾದಂಥ ಪಾಪಕಾರ್ಯದಲ್ಲೀ ನೀವು ಪುನಸ್ಸು ಮಾಡಬಾರದು.

೧೯. ಒಂದುವೇಳೆ ಅಜ್ಞಾನದಿಂದ ಪಾಪಕರ್ಮ ಮಾಡಿದಾಗ್ಯೂ, ಪಾಪನಾಶಕರವಾದ ಸೂರ್ಯಾರಾಧನೆಯನ್ನು ತಪ್ಪದೆ ಯಾವಾಗಲೂ ಮಾಡಬೇಕು.

೨೦. ಬ್ರಹ್ಮನು ಹೇಳುತ್ತಾನೆ—ಈ ರೀತಿಯಾಗಿ ಹೇಳಿದ ಯಮಕಿಂಕರನನ್ನು ಕುರಿತು, ನರಕನಿವಾಸಿಗಳು ಅತಿ ದುಃಖಿತರೂ ಹಸಿವಿನಿಂದ ಕುಗ್ಗಿದ ಧ್ವನಿಯುಳ್ಳವರೂ ಬಾಯಾರಿಕೆಯ ತಾಪದಿಂದ ಒಣಗಿದ ಗಂಟಲುಳ್ಳವರೂ ಆಗಿ ಈ ಮಾತನ್ನು ಹೇಳಿದರು.

೨೧ ಎಲೈ ಯಮಕಿಂಕರನೇ! ನಾವು ಮಾಡಿದ ಕರ್ಮ ಯಾವುದೆಂಬುದನ್ನು ಸ್ಪಷ್ಟವಾಗಿ ಹೇಳು. ನಾವು ನರಕದಲ್ಲಿದ್ದು ಕ್ರೂರವಾದ ಈ ವಿಪಾಕವನ್ನು ಅನುಭವಿಸುತ್ತಿದ್ದೇವೆಯಲ್ಲಾ ಇದಕ್ಕೆ ಕಾರಣವೇನು ? ಎಂಬುದನ್ನು ದಯಮಾಡಿ ಹೇಳು (ಎಂದರು.)

॥ ಕಿಂಕರ ಉವಾಚ ॥

ಯುಷ್ಮಾಭಿರ್ಯೌವನೋನ್ಮಾದಾನ್ಮದಿತ್ತೈರವಿವೇಕಿಭಿಃ ।
ಘೃತಲೋಭೇನ ಮಾರ್ತಂಡಗೃಹಾದ್ದೀಪಃ ಪುರಾ ಹೃತಃ ॥ ೨೨ ॥

ತೇನಾಸ್ಮಿನ್ನರಕೇ ಘೋರೇ ಕ್ಷುತ್ತೃಷ್ಣಾ ಪರಿಪೀಡಿತಾಃ ।
ಭವಂತಃ ಪತಿತಾಸ್ತೀವ್ರೇ ಶೀತವಾತ ವಿದಾರಿತಾಃ ॥ ೨೩ ॥

॥ ಬ್ರಹ್ಮೋವಾಚ ॥

ಏತತ್ತೇ ದೀಪದಾನಸ್ಯ ಪ್ರದೀಪಹರಣಸ್ಯ ಚ ।
ಪುಣ್ಯಂ ಪಾಪಂ ಚ ಕಥಿತಂ ಭಾಸ್ಕರಾಯತನೇಽಚ್ಯುತ ॥ ೨೪ ॥

ಸರ್ವತ್ರೈವ ಹಿ ದೀಪಸ್ಯ ಪ್ರದಾನಂ ಕೃಷ್ಣ ಶಸ್ಯತೇ ।
ವಿಶೇಷೇಣ ಜಗದ್ಧಾತುರ್ಭಾಸ್ಕರಸ್ಯ ನಿವೇಶನೇ ॥ ೨೫ ॥

---

೨೨. ಕಿಂಕರನು ಹೇಳುತ್ತಾನೆ—ಹಿಂದೆ ಒಂದು ಕಾಲದಲ್ಲಿ ಪ್ರಾಯದ ಮದದಿಂದ ವಿವೇಕಹೀನರಾದ ನೀವು, ತುಪ್ಪದ ಆಶೆಯಿಂದ ಸೂರ್ಯದೇವಾಲಯದಲ್ಲಿ ಉರಿಯುತ್ತಿದ್ದ ದೀಪವನ್ನು ಆರಿಸಿದಿರಿ.

೨೩. ಆದುದರಿಂದ ಈ ಭಯಂಕರವಾದ ನರಕದಲ್ಲಿ ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿ ಚಳಿಗಾಳಿಗಳಿಂದ ನೊಂದು ಕ್ಲೇಶಪಡುತ್ತಾ ಬಿದ್ದಿದ್ದೀರಿ ಎಂದನು.

೨೪. ಬ್ರಹ್ಮನು ಹೇಳುತ್ತಾನೆ—ಎಲೈ ಕೃಷ್ಣನೇ! ಸೂರ್ಯದೇವಾಲಯದಲ್ಲಿ (ದೀಪಾರಾಧನೆ) ದೀಪಹತ್ತಿಸುವುದರಿಂದ ಬರುವ ಪುಣ್ಯವನ್ನೂ, ಆ ದೇವಾಲಯದಲ್ಲೇ ದೀಪವನ್ನು ಆರಿಸಿದುದರಿಂದ ಬರುವ ಪಾಪವನ್ನೂ ಹೇಳಿದುದಾಯಿತು.

೨೫. ಅಯ್ಯಾ ಕೃಷ್ಣಾ! ದೇವಾಲಯದಲ್ಲಿ ಮಾತ್ರವಲ್ಲದೇ ಜನಗಳಿಗೆ ಉಪಕಾರವಾಗುವಂತೆ ಯಾವ ಸ್ಥಳದಲ್ಲಿಯಾದರೂ ಸರಿಯೆ ದೀಪವನ್ನಿಡುವುದು ಶ್ರೇಷ್ಠ ಪುಣ್ಯವೆಂದಮೇಲೆ, ಲೋಕೇಶ್ವರನಾದ ಸೂರ್ಯಾಲಯದಲ್ಲಿ ದೀಪಹತ್ತಿಸುವುದರಿಂದ ಪುಣ್ಯ, ಉರಿಯುತ್ತಿದ್ದ ದೀಪವನ್ನಾರಿಸುವುದರಿಂದ ಪಾಪ, ಈ ಫಲಗಳು ವಿಶೇಷ ಪರಿಮಾಣದಿಂದ ಉಂಟಾಗುವುವು.

**ಯೇಂಧಾ ಮೂಕಾ ಬಾಧಿರಾ ನಿರ್ವಿವೇಕಾ ।**
**ಹೀನಾಸ್ತ್ರೈಸ್ತ್ರೈಸ್ಸಾಥನ್ಯೈ ವ್ರ್ಯಷ್ಣಿವೀರ ॥**
**ತೈಸ್ತ್ರೈರ್ದೀಪಾಃ ಸಾಧವೋ ಲೋಕದತ್ತಾ ।**
**ದೇವಾಗಾರಾದನ್ಯತಃ ಕೃಷ್ಣ ನೀತಾಃ ॥ ೨೬ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ದೀಪದಾನ ಮಾಹಾತ್ಮ್ಯ ವರ್ಣನಂ ನಾಮ್ನೈಕೋನವಿಂಶೋತ್ತರ ಶತತಮೋಽಧ್ಯಾಯಃ**



೨೬. ಕುರುಡರು, ಕಿವುಡರು, ಮೂಗರು, ಮಂಕರು ಇವರುಗಳು ಸಾಧನ ಹೀನರಾಗಿದ್ದರೂ ಹೇಗೋ ಮಾಡಿ ದೀಪಗಳನ್ನು ಹತ್ತಿಸಿ ಇಟ್ಟು ಲೋಕದಲ್ಲಿ ಸಾಧುಗಳೆನಿಸುತ್ತಾರೆ. ಇನ್ನು ದೇವಾಲಯದಲ್ಲಿ ಉರಿವ ದೀಪವನ್ನು ಆರಿಸಿ ಆ ಘೃತಾದಿಗಳನ್ನು ಬೇರೆಕಡೆ ಸಾಗಿಸಿದರೆ ಆ ದುಷ್ಕೃತ್ಯಕ್ಕೆ ವಿರುದ್ಧವಾದ ಫಲ ಎಂದರೆ ಹಾನಿಯೇ ಸಂಭವಿಸುತ್ತದೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ದೀಪದಾನಮಾಹಾತ್ಮ್ಯ ವರ್ಣನೆಯೆಂಬ ನೂರಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ವಿಂಶೋತ್ತರಶತತಮೋಽಧ್ಯಾಯಃ

॥ ವಿಷ್ಣುರುವಾಚ ॥

ಭಗವನ್ಪ್ರಾಣಿನಃ ಸರ್ವೇ ವಿಷರೋಗಾದ್ಯುಪದ್ರವೈಃ ।
ದುಷ್ಟಗ್ರಹೋಪಘಾತೈಶ್ಚ ಸರ್ವಕಾಲಮುಪದ್ರುತಾಃ ॥ ೧ ॥

ಆಭಿಚಾರಿಕಕೃತ್ಯಾಭಿಃ ಸ್ಪರ್ಶರೋಗೈಶ್ಚ ದಾರುಣೈಃ ।
ಸದಾ ಸಂಪೀಡ್ಯಮಾನಾಸ್ತು ತಿಷ್ಠಂತ್ಯಂಬುಜಸಂಭವ ॥ ೨ ॥

ಯೇನ ಕರ್ಮವಿಪಾಕೇನ ವಿಷರೋಗಾದ್ಯುಪದ್ರವಾಃ ।
ಪ್ರಭವಂತಿ ನೃಣಾಂ ತನ್ಮೇ ಯಥಾವದ್ವಕ್ತುಮರ್ಹಸಿ ॥ ೩ ॥

---

## ನೂರಇಪ್ಪತ್ತನೆಯ ಅಧ್ಯಾಯ

೧-೨. ಕೃಷ್ಣನು ಹೇಳುತ್ತಾನೆ—ಪೂಜ್ಯನಾದ ಬ್ರಹ್ಮನೇ! ಮನುಷ್ಯರು ಮುಂತಾದ ಎಲ್ಲಾ ಪ್ರಾಣಿಗಳೂ ವಿಷ, ರೋಗ ಮೊದಲಾದ ಉಪದ್ರವಗಳಿಂದಲೂ, ದುಷ್ಟಗ್ರಹ (ಪಿಶಾಚಿಗಳು) ಗಳ ಹೊಡೆತಗಳಿಂದಲೂ, ಶೂನ್ಯ (ಮಾಟ)ದ ಕೃತ್ಯಗಳಿಂದಲೂ, ಕ್ರೂರಗಳಾದ ಸ್ಪರ್ಶರೋಗಗಳಿಂದಲೂ, ಯಾವಾಗಲೂ ಪೀಡಿಸಲ್ಪಡುತ್ತಾ ಇದ್ದಾರೆ.

೩. ಯಾವ ಕರ್ಮದ ಫಲದಿಂದ ವಿಷ, ರೋಗ ಮುಂತಾದ ಉಪದ್ರವಗಳು ಮಾನವರಿಗೆ ಉಂಟಾಗುವುದೆಂಬುದನ್ನು ಯಥಾವತ್ತಾಗಿ ಹೇಳು.

॥ ಬ್ರಹ್ಮೋವಾಚ ॥

ವ್ರತೋಪವಾಸೈರ್ಯೈರ್ಭಾನುರ್ನಾನ್ಯಜನ್ಮನಿ ತೋಷಿತಃ ।
ತೇ ನರಾ ದೇವಶಾರ್ದೂಲ ಗ್ರಹರೋಗಾದಿಭಾಗಿನಃ ॥ ೪ ॥

ಯೈರ್ನ ತತ್ಪ್ರವಣಂ ಚಿತ್ತಂ ಸರ್ವದೈವ ನರೈಃ ಕೃತಂ ।
ವಿಷಗ್ರಹಜ್ವರಾಣಾಂ ತೇ ಮನುಷ್ಯಾಃ ಕೃಷ್ಣ ಭಾಗಿನಃ ॥ ೫ ॥

ಆರೋಗ್ಯಂ ಪರಮಾಂ ವೃದ್ಧಿಂ ಮನಸಾ ಯದ್ಯದಿಚ್ಛತಿ ।
ತತ್ತದಾಪ್ನೋತ್ಯಸಂದಿಗ್ಧಂ ಪರತ್ರಾದಿತ್ಯತೋಷಣಾತ್ ॥ ೬ ॥

ನಾಧೀನ್ಪ್ರಾಪ್ನೋತಿ ನ ವ್ಯಾಧೀನ್ನ ವಿಷಗ್ರಹಬಂಧನಂ ।
ಕೃತ್ಯಾಸ್ಪರ್ಶಭಯಂ ವಾಪಿ ತೋಷಿತೇ ತಿಮಿರಾಪಹೇ ॥ ೭ ॥

---

೪. ಬ್ರಹ್ಮನು ಹೇಳುತ್ತಾನೆ—ಅಯ್ಯಾ ದೇವಶ್ರೇಷ್ಠನೇ! ಹಿಂದಿನ ಜನ್ಮದಲ್ಲಿ ಯಾರು ವ್ರತೋಪವಾಸಗಳಿಂದ ಸೂರ್ಯನಿಗೆ ಸಂತೋಷವುಂಟುಮಾಡಲಿಲ್ಲವೋ, ಆ ಮನುಷ್ಯರು ಗ್ರಹಬಾಧೆ ಮುಂತಾದುವುಕ್ಕೆ ಭಾಗಿಗಳಾಗುತ್ತಾರೆ.

೫. ಅಯ್ಯಾ ಕೃಷ್ಣನೇ! ಯಾರು ತಮ್ಮ ಮನಸ್ಸನ್ನು ಯಾವಾಗಲೂ ಸೂರ್ಯನಲ್ಲಿ ಆಸಕ್ತವನ್ನಾಗಿ ಮಾಡಿಲ್ಲವೋ ಅವರು ವಿಷಪೀಡೆ, ಗ್ರಹಪೀಡೆ, ಜ್ವರ, ಇವುಗಳಿಗೆ ಗುರಿಯಾಗುವರು.

೬. ಆದಿತ್ಯನನ್ನು ಸಂತೋಷ (ತೃಪ್ತಿ) ಪಡಿಸಿದರೆ ಇಹದಲ್ಲಿ ಆರೋಗ್ಯವನ್ನೂ ವಿಶೇಷ ಅಭಿವೃದ್ಧಿಯನ್ನೂ, ಪರಲೋಕದಲ್ಲಿ ತಾನು ಬಯಸಿದ ಇಷ್ಟಾರ್ಥಗಳೆಲ್ಲವನ್ನೂ ನಿಸ್ಸಂದೇಹವಾಗಿ ಪಡೆಯುತ್ತಾನೆ.

೭. ಅಂಧಕಾರವಿನಾಶಕನಾದ ಸೂರ್ಯನನ್ನು ಸಂತೋಷಪಡಿಸಿದರೆ ಮನೋವ್ಯಥೆಗಳಾಗಲಿ, ರೋಗಗಳಾಗಲಿ ಉಂಟಾಗುವುದಿಲ್ಲ. ವಿಷಬಾಧೆಯನ್ನಾಗಲಿ, ಗ್ರಹಬಂಧನವನ್ನಾಗಲಿ, ಮಾಟದ ಬೊಂಬೆಗಳ ಸ್ಪರ್ಶದಿಂದುಂಟಾಗುವ ಭೀತಿಯನ್ನಾಗಲಿ ಹೊಂದುವುದಿಲ್ಲ.

ಸರ್ವೇ ದುಷ್ಟಾಃ ಸಮಾಸ್ತಸ್ಯ ಸೌಮ್ಯಾಸ್ತಸ್ಯ ಸದಾ ಗ್ರಹಾಃ ।
ದೇವಾನಾಮಪಿ ಪೂಜ್ಯೋಽಸೌ ತುಷ್ಟೋ ಯಸ್ಯ ದಿನಾಕರಃ ॥ ೮ ॥

ಸ ಸಮಃ ಸರ್ವಭೂತೇಷು ಯಥಾಽತ್ಮನಿ ತಥಾಽಹಿತೇ ।
ಉಪವಾಸಾದಿನಾ ಯೇನ ತೋಷ್ಯತೇ ತಿಮಿರಾಪಹಃ ॥ ೯ ॥

ತೋಷಿತೇಽಸ್ಮಿನ್ ಪ್ರಜಾನಾಥೇ ನರಾಃ ಪೂರ್ಣಮನೋರಥಾಃ ।
ಅರೋಗಾಃ ಸುಖಿನೋ ನಿತ್ಯಂ ಬಹುಧರ್ಮಸುಖಾನ್ವಿತಾಃ ॥ ೧೦ ॥

ನ ತೇಷಾಂ ಶತ್ರವೋ ನೈವ ಶರೀರಾದ್ಯಭಿಚಾರಕಂ ।
ಗ್ರಹರೋಗಾದಿಭಿಶ್ಚಾಪಿ ಪಾಪಕಾರ್ಯಂ ನ ಜಾಯತೇ ॥ ೧೧ ॥

ಅವ್ಯಾಹತಾನಿ ದೇವಸ್ಯ ಧನಜಾಲಾನಿ ತಂ ನರಂ ।
ರಕ್ಷಂತಿ ಸಕಲಾಪತ್ಸು ಯೇನ ಶ್ವೇತಾಧಿಪೋಽರ್ಚಿತಃ ॥ ೧೨ ॥

---

೮. ಯಾವನ ವಿಷಯದಲ್ಲಿ ಸೂರ್ಯನು ತುಷ್ಟನಾಗಿರುತ್ತಾನೆಯೋ ಅವನಿಗೆ ಎಲ್ಲಾ ದುಷ್ಟಗ್ರಹಗಳೂ ಸಮಸ್ಥಿತಿಗೆ ಬರುವುವು. ಅವನಿಗೆ ಯಾವಾಗಲೂ ಗ್ರಹಗಳು ಸೌಮ್ಯಗಳಾಗಿಯೇ ಇರುವುವು. ಅವನಿಗೆ ದೇವತೆಗಳೂ ಗೌರವ ಕೊಡುವರು.

೯. ಅಗ ಸರ್ವಭೂತಗಳಲ್ಲೂ ಅವನು ಸಮನಾಗುವನು ತನ್ನಂತೆ ಇತರ ಸರ್ವಭೂತಗಳನ್ನು ಭಾವಿಸಿ ಪ್ರೀತಿಸುವನು. ಉಪವಾಸಾದಿಗಳಿಂದ ಸೂರ್ಯನನ್ನು ಸಂತೋಷಪಡಿಸಬಹುದು. ಉಪವಾಸಾದಿಗಳಿಂದ ಪ್ರಜಾನಾಥನಾದ ಈ ಸೂರ್ಯನು ಅವನಲ್ಲಿ ತುಷ್ಟನಾಗುವನು.

೧೦. ಈ ಪ್ರಜಾನಾಥನು ಸಂತೋಷಿತನಾಗಲು ಮನುಷ್ಯರ ಮನೋರಥ (ಬಯಕೆ) ಗಳೆಲ್ಲವೂ ಪೂರ್ಣವಾಗುವುವು. ಅವರು ಯಾವಾಗಲೂ ರೋಗರಹಿತರೂ, ಸುಖವುಳ್ಳವರೂ, ಬಹು ಪುಣ್ಯಯುಕ್ತರೂ ಆಗುತ್ತಾರೆ.

೧೧. ಅವರಿಗೆ ಶತ್ರುಗಳಿರುವುದೇ ಇಲ್ಲ. ಅವರ ಶರೀರಕ್ಕೆ ಮಾಟ ಮೊದಲಾದುದರ ಬಾಧೆ ಸಂಭವಿಸುವುದಿಲ್ಲ. ಗ್ರಹರೋಗಾದಿಗಳಿಂದ ಏನೂ ಕೆಡಕಾಗುವುದಿಲ್ಲ.

೧೨. (ಅವ್ಯಾಹತಗಳಾದ) ಸೂರ್ಯನ ಸಂಪದ್ರೂಪಕಿರಣಜಾಲಗಳು ಸೂರ್ಯಾರ್ಚನ ಪ್ರಭಾವಗಳು ಇವು ಆ ಮನುಷ್ಯನನ್ನು ಎಲ್ಲಾ ವಿಪತ್ತುಗಳಲ್ಲೂ ರಕ್ಷಿಸುತ್ತವೆ. ಯಾವನು ಶ್ವೇತಾಧಿಪನಾದ ಸೂರ್ಯನನ್ನು ಅರ್ಚಿಸುವನೋ ಅವನಿಗೆ ಈ ಫಲವಾಗುವುದು ಎಂದನು.

॥ ವಿಷ್ಣುರುವಾಚ ॥

ಅನಾರಾಧಿತಮಾರ್ತಂಡಾ ಯೇ ನರಾಃ ದುಃಖಭಾಗಿನಃ ।
ತೇ ಕಥಂ ನೀ ರುಜಃ ಸಂತು ವಿಜ್ವರಾ ಗತಕಲ್ಮಷಾಃ ॥ ೧೩ ॥

॥ ಬ್ರಹ್ಮೋವಾಚ ॥

ಆರಾಧಯಂತು ದೇವೇಶಂ ಪುಷ್ಪೇಣೈವಮನೂಪಮಂ ।
ಭಾಸ್ಕರಂ ತು ಜಗನ್ನಾಥಂ ಸರ್ವದೇವಗುರುಂ ಪರಂ ॥ ೧೪ ॥

॥ ವಿಷ್ಣುರುವಾಚ ॥

ದೋಷಾಭಿಭೂತದೇಹೈಸ್ತು ಕಥಮಾರಾಧನಂ ರವೇಃ ।
ಕರ್ತವ್ಯಂ ವದ ದೇವೇಶ ಭಕ್ತ್ಯಾ ಶ್ರೇಯೋಽರ್ಥಮಾತ್ಮನಃ ॥ ೧೫ ॥

ಅನುಗ್ರಾಹ್ಯೋಽಸ್ಮಿ ಯದಿ ತೇ ಮಯ್ಯಯಂ ಭಕ್ತಿಮಾನಿತಿ ।
ತನ್ಮೇೂಪದಿಶ ತ್ವಂ ಚ ಮಹದಾರಾಧನಂ ರವೇಃ ॥ ೧೬ ॥

---

೧೩. ವಿಷ್ಣುವು ಹೇಳುತ್ತಾನೆ—ಯಾರು ಮಾರ್ತಂಡನನ್ನು ಆರಾಧಿಸದೆ ದುಃಖಭಾಗಿಗಳೋ; ಅವರು ರೋಗರಹಿತರೂ, ತಾಪರಹಿತರೂ, ಪಾಪರಹಿತರೂ ಹೇಗೆ ಆದಾರು ? (ಎಂದನು)

೧೪. ಬ್ರಹ್ಮನು ಹೇಳುತ್ತಾನೆ—ಜಗನ್ನಾಥನೂ, ಸರ್ವದೇವಗುರುವೂ, ದಿನಾದಿಪನೂ, ಅಸದೃಶನೂ ಆದ ಸೂರ್ಯದೇವನನ್ನು ಹೂವಿನಿಂದ ಹೀಗೆ ಆರಾಧಿಸಿ ಉಪಾಸನೆ ಮಾಡಲಿ.

೧೫. ಕೃಷ್ಣನು ಹೇಳುತ್ತಾನೆ—ದೋಷದಿಂದ ದೂಷ್ಯವಾದ ದೇಹವುಳ್ಳವರು ಭಕ್ತಿಯಿಂದ ಸೂರ್ಯಾರಾಧನೆಯನ್ನು ಹೇಗೆ ಮಾಡಬೇಕು? ದೇವೇಶನೇ! ನನ್ನ ಶ್ರೇಯಸ್ಸಿಗಾಗಿ ಇದನ್ನು ಹೇಳು

೧೬. ನನ್ನಲ್ಲಿ ಇವನು ಭಕ್ತಿಯುಳ್ಳವನೆಂದು ನಿನಗೆ ನಾನು ಅನುಗ್ರಾಹ್ಯನಾಗಿದ್ದರೆ, ನನಗೆ ಶ್ರೇಷ್ಠವಾದ ಸೂರ್ಯಾರಾಧನ ಕ್ರಮವನ್ನು ಉಪದೇಶಿಸು.

ಅನಂತಮಜರಂ ದೇವಂ ದುಷ್ಟಸಂದೇಹನಾಶನಂ ।
ಆರಾಧಯಿತುಮಿಚ್ಛಾಮಿ ಭಗವಂಸ್ತ್ವದನುಜ್ಞಯಾ ।
ಯೇನಾಹಂ ತ್ವತ್ಪ್ರಸಾದೇನ ಭವೇಯಮತಿವಿಕ್ರಮಃ ॥ ೧೭ ॥

॥ ಬ್ರಹ್ಮೋವಾಚ ॥

ಅನುಗ್ರಾಹ್ಯೋಽಸಿ ದೇವಸ್ಯ ನೂನಮವ್ಯಕ್ತಜನ್ಮನಃ ।
ಆರಾಧನಾಯ ತೇ ವಿಷ್ಣೋ ಯದೇತ್ಪ್ರವಣಂ ಮನಃ ॥ ೧೮ ॥

ಯದಿ ದೇವಪತಿಂ ಭಾನುಮಾರಾಧಯಿತುಮಿಚ್ಛಸಿ ।
ಭಗವಂತಮನಾದ್ಯಂ ಚ ಭವ ವೈವಸ್ವತೋಽಚ್ಯುತ ॥ ೧೯ ॥

ನಹ್ಯವೈವಸ್ವತೈರ್ಭಾನುಜ್ಞಾತುಂ ಸ್ತೋತುಂ ಚ ಶಕ್ಯತೇ ।
ದೃಷ್ಟುಂ ವಾ ಶಕ್ಯತೇ ಮೂಢೈಃ ಪ್ರವೇಷ್ಟುಂ ಕುತ ಏವ ತು ॥ ೨೦ ॥

---

೧೭. ನಾಶರಹಿತನೂ, ಜರಾರಹಿತನೂ, ದೇವನೂ ದುಷ್ಟಸಂದೇಹನಾಶಕನೂ, ಆದ ಸೂರ್ಯನನ್ನು ನೀನು ಅಪ್ಪಣೆ ಕೊಡಿಸಿದಂತೆ ಪೂಜಿಸಬೇಕೆಂದು ಆಶೆಯಿದೆ. ನಿನ್ನ ಅನುಗ್ರಹದಿಂದ ನನಗೆ ಸೂರ್ಯಪ್ರಸಾದವುಂಟಾಗಿ ಅದರಿಂದ ನಾನು ಮಹಾ ಪರಾಕ್ರಮಿಯಾಗುವೆನು ಎಂದನು.

೧೮. ಬ್ರಹ್ಮನು ಹೇಳುತ್ತಾನೆ—ಎಲೈ ವಿಷ್ಣುವೇ! ಜನ್ಮವ್ಯಕ್ತಿಯಿಲ್ಲದ ಸೂರ್ಯನಿಗೆ ನಿಶ್ಚಯವಾಗಿ ನೀನು ಅನುಗ್ರಾಹ್ಯನಾಗಿದ್ದೀ. ಏಕೆಂದರೆ ಭಗವಂತನೂ ಅನಾದಿಯೂ, ಆದ ಆ ದೇವನನ್ನಾರಾಧಿಸಲು ನಿನ್ನ ಮನಸ್ಸು ಆಸಕ್ತವಾಗಿದೆ.

೧೯. ಎಲೈ ಅಚ್ಯುತನೇ! ದೇವಪತಿಯಾದ ಭಾನುವನ್ನು ಆರಾಧಿಸಬೇಕೆಂಬ ಇಚ್ಛೆಯು ನಿನಗಿದ್ದರೆ ನೀನು ವೈವಸ್ವತನಾಗು. (ಭಕ್ತನಾಗು)

೨೦. ವೈವಸ್ವತರಲ್ಲದವರು ಭಾನುಸ್ವರೂಪವನ್ನು ತಿಳಿಯುವುದಕ್ಕೂ ಸ್ತುತಿಸುವುದಕ್ಕೂ ದರ್ಶನ ಮಾಡುವುದಕ್ಕೂ ಶಕ್ತರಲ್ಲ. ಹೀಗಿರುವಲ್ಲಿ ಇನ್ನು ಸೂರ್ಯನನ್ನು ಪ್ರವೇಶಿಸುವುದೆಲ್ಲಿ ಬಂತು ?

ತದ್ಭಕ್ತಿಪ್ರಾರ್ಥಿತಾಃ ಪೂತಾಃ ನರಾಸ್ತದ್ಭಕ್ತಿಚೇತಸಃ ।
ವೈವಸ್ವತಾ ಭವಂತ್ಯೇವಂ ವಿವಸ್ವ ತಂ ವಿಶಂತಿ ಚ ॥ ೨೧ ॥

ಅನೇಕಜನ್ಮಸಂಸಾರಹತೇ ಪಾಪಸಮುಚ್ಛ್ರಯೇ ।
ನಾಕ್ಷೀಣೇ ಜಾಯತೇ ಪುಂಸಾಂ ಮಾರ್ತಂಡಾಭಿಮುಖೀಮತಿಃ ॥ ೨೨ ॥

ಪ್ರದ್ವೇಷಂ ಯಾತಿ ಮಾರ್ತಾಂಡೇ ದ್ವಿಜಾನ್ ದೇವಾಂಶ್ಚ ನಿಂದತಿ ।
ಯೋ ನರಸ್ತಂ ವಿಜಾನೀಯಾದಸುರಾಂಶಸಮುದ್ಭವಂ ॥ ೨೩ ॥

ಪಾಷಂಡೇಷು ರತಿಃ ಪುಂಸಾಂ ಹೇತುವಾದಾನುಕೂಲತಾ ।
ಜಾಯತೇ ದಂಭಮಾಯಾಂಭಃಪತಿತಾನಾಂ ದುರಾತ್ಮನಾಂ ॥ ೨೪ ॥

ಯದಾ ಪಾಪಕ್ಷಯಃ ಪುಂಸಾಂ ತದಾ ವೇದದ್ವಿಜಾತಿಷು ।
ಭಾನೌ ಚ ಯಜ್ಞಪುರುಷೇ ಶ್ರದ್ಧಾ ಭವತಿ ನೈಷ್ಠಿಕೀ ॥ ೨೫ ॥

---

೨೧. ಆದುದರಿಂದ ಸೂರ್ಯನಲ್ಲಿ ಭಕ್ತಿಯುಂಟಾಗಲೆಂದು ಪ್ರಾರ್ಥಿಸಿ ಪರಿಶುದ್ಧವಾದ ಮನಸ್ಸಿನಲ್ಲಿ ಆ ಸೂರ್ಯಭಕ್ತಿಯನ್ನಿಟ್ಟುಕೊಂಡವರು ಹೀಗೆ ವೈವಸ್ವತರಾಗುತ್ತಾರೆ. ಮತ್ತು ಸೂರ್ಯನನ್ನು ಪ್ರವೇಶಿಸುತ್ತಾರೆ.

೨೨. ಅನೇಕ ಜನ್ಮಗಳನ್ನು ಹೊಂದಬೇಕಾದಾಗ ಒಂದು ದೇಹದಿಂದ ಮತ್ತೊಂದು ದೇಹಕ್ಕೆ ಸರಿಯುವ ಸಂದರ್ಭದಲ್ಲಿ, ಅವರ ಪಾಪರಾಶಿಯು ಕ್ಷೀಣವಾಗದೆ ಇದ್ದರೆ, ಪುರುಷರಿಗೆ ಸೂರ್ಯನನ್ನು ಆರಾಧಿಸುವ ಬುದ್ಧಿಯು ಹುಟ್ಟುವುದಿಲ್ಲ.

೨೩. ಯಾವನು ಸೂರ್ಯನಲ್ಲಿ ಹೆಚ್ಚಾದ ದ್ವೇಷಹೊಂದುವನೋ, ಮತ್ತು ವೇದವನ್ನೂ ಬ್ರಾಹ್ಮಣರನ್ನೂ ನಿಂದಿಸುವನೋ, ಅವನನ್ನು ರಾಕ್ಷಸಾಂಶದಲ್ಲಿ ಹುಟ್ಟಿದವನೆಂದು ತಿಳಿಯಬೇಕು.

೨೪. ದಂಭ, ಮಾಯಾ ಎಂಬ ಜಲದಲ್ಲಿ ಬಿದ್ದ ದುರಾತ್ಮರಿಗೆ ಪಾಷಂಡರಲ್ಲಿ ಪ್ರೀತಿಯೂ, ಹೇತುವಾದದಲ್ಲಿ (ಎಂದರೆ ಸಲ್ಲದ ಕಾರಣವನ್ನು ತಂದೊಡ್ಡುವುದರಲ್ಲಿ) ಅನುಕೂಲ್ಯವೂ ತೋರುವುದು.

೨೫. ಇಂಥವರಿಗೆ ಆ ಪಾಪವು ಕ್ಷಯ ಹೊಂದಿದಮೇಲೆ ವೇದಗಳಲ್ಲಿಯೂ ಸೂರ್ಯನಲ್ಲಿಯೂ, ಯಜ್ಞಪುರುಷನಲ್ಲಿಯೂ ಸಹ ಫಲಾಭಿಸಂಧಿರಹಿತವಾದ ಶ್ರದ್ಧೆಯುಂಟಾಗುತ್ತದೆ.

ಯದಾ ಸ್ವಲ್ಪಾವಶೇಷಸ್ತು ನರಾಣಾಂ ಪಾಪಸಂಚಯಃ ।
ತದಾ ಭೋಜಕವಿಪ್ರೇಷು ಭಾನೌ ಪೂಜಾಂ ಪ್ರಕುರ್ವತೇ ॥ ೨೬ ॥

ಭ್ರಮತಾಮತ್ರ ಸಂಸಾರೇ ನರಾಣಾಂ ಕರ್ಮದುರ್ಗಮೇ ।
ಕರಾವಲಂಬನಂ ಹ್ಯೇಕೋ ಭಕ್ತಿಪ್ರೀತೋ ದಿವಾಕರಃ ॥ ೨೭ ॥

ಸ ತ್ವಂ ವೈವಸ್ವತೋ ಭೂತ್ವಾ ಸರ್ವಪಾಪಹರಂ ಹರಿಂ ।
ಆರಾಧಯ ಸಮಂ ಭಕ್ತ್ಯಾ ಪ್ರೀತಿಮಭ್ಯೇತಿ ಭಾಸ್ಕರಃ ॥ ೨೮ ॥

॥ ವಿಷ್ಣುರುವಾಚ ॥

ಕಿಂ ಲಕ್ಷಣಾ ಭವಂತ್ಯೇತೇ ನರಾ ವೈವಸ್ವತಾ ಗುಣೈಃ ।
ಯಚ್ಚ ವೈವಸ್ವತಂ ಕಾರ್ಯಂ ತನ್ಮೇ ಕಥಯ ಕಂಜಜ ॥ ೨೯ ॥

॥ ಬ್ರಹ್ಮೋವಾಚ ॥

ಕರ್ಮಣಾ ಮನಸಾ ವಾಚಾ ಪ್ರಾಣಿನಾಂ ಯೋ ನ ಹಿಂಸಕಃ ।
ಭಾವಭಕ್ತಶ್ಚ ಮಾರ್ತಂಡೇ ಕೃಷ್ಣ ವೈವಸ್ವತೋ ಹಿ ಸಃ ॥ ೩೦ ॥

---

೨೬. ಮನುಷ್ಯರಲ್ಲಿ ಈ ಪಾಪರಾಶಿಯು ಸ್ವಲ್ಪ ಮಾತ್ರ ಉಳಿದಿರುವಾಗ ಭೋಜಕರಾದ ವಿಪ್ರರಿಗೂ ಸೂರ್ಯನಿಗೂ ಪೂಜೆ ಮಾಡುವ ಬುದ್ಧಿ ಹುಟ್ಟುವುದು.

೨೭. ದುರ್ಗಮವಾದ ಈ ಸಂಸಾರದಲ್ಲಿ ಸುತ್ತುತ್ತಿರುವ ಮನುಷ್ಯರನ್ನು ಭಕ್ತಿಯಿಂದ ಸಂತುಷ್ಟನಾದ ಸೂರ್ಯನೊಬ್ಬನೇ ಕೈಹಿಡಿದು ಸಲಹುತ್ತಾನೆ.

೨೮. ಇದನ್ನೆಲ್ಲಾ ಕೇಳಿದ ನೀನು ಸೂರ್ಯಭಕ್ತನಾಗಿ ಸರ್ವಪಾಪನಾಶಕನಾದ ಸೂರ್ಯನನ್ನು (ಏಕಪ್ರಕಾರವಾದ) ಭಕ್ತಿಯಿಂದ ಆರಾಧಿಸು. ಸೂರ್ಯನು ಸುಪ್ರೀತನಾಗುವನು.

೨೯. ಕೃಷ್ಣನು ಹೇಳುತ್ತಾನೆ—ಎಲೈ, ಬ್ರಹ್ಮನೇ! ಸೂರ್ಯನ ಭಕ್ತರಾದವರ ಗುಣಗಳು ಯಾವುವು? ಸೂರ್ಯನನ್ನು ತೃಪ್ತಿಪಡಿಸಲು ನಾವು ಮಾಡಬೇಕಾದ ಕಾರ್ಯಗಳಾವುವು ? ಅದನ್ನು ನನಗೆ ಹೇಳು ಎಂದನು.

೩೦. ಬ್ರಹ್ಮನು ಹೇಳುತ್ತಾನೆ—ಯಾವನು ಮನೋವಾಕ್ಕಾಯಕರ್ಮಗಳಲ್ಲಿ ಯಾವುದರಿಂದಲೂ ಪ್ರಾಣಿಗಳಿಗೆ ಹಿಂಸೆ ಮಾಡುವವನಲ್ಲವೋ ಮತ್ತು ಸೂರ್ಯನಲ್ಲಿ ಮನಃ ಪೂರ್ವಕವಾಗಿ ಭಕ್ತಿಮಾಡುವನೋ, ಅವನೇ ಸೂರ್ಯಭಕ್ತನು.

ಯೋ ಭೋಜಕದ್ವಿಜಾನ್ದೇವಾನ್ನಿತ್ಯಮೇವ ನಮಸ್ಯತಿ ।
ನ ಚ ಭೋಕ್ತಾ ಪರಸ್ಯಾದೇರ್ವಿಜ್ಞೇಯೋ ವೈವಸ್ವತೋ ಹಿ ಸಃ ॥ ೩೧ ॥

ಸರ್ವಾನ್ದೇವಾನ್ರವಿಂ ವೇತ್ತಿ ಸರ್ವಾಲ್ಲೋಕಾಂಶ್ಚ ಭಾಸ್ಕರಂ ।
ತಸ್ಮಾಚ್ಚಾ ನನ್ಯಮಾತ್ಮಾನಂ ಕೃಷ್ಣ ವೈವಸ್ವತೋ ಹಿ ಸಃ ॥ ೩೨ ॥

ದೇವಂ ಮನುಷ್ಯಮನ್ಯಂ ವಾ ಪಶುಪಕ್ಷಿಪಿಪೀಲಿಕಂ ।
ತರುಪಾಷಾಣಕಾಷ್ಠಾದಿ ಭೂಮ್ಯಂಭೋಧಿಂ ದಿವಂ ತಥಾ ॥ ೩೩ ॥

ಆತ್ಮಾನಂ ಚಾಪಿ ದೇವೇಶಾನ್ನಾತಿರಿಕ್ತಂ ದಿವಾಕರಾತ್ ।
ಯೋ ನ ಜಾನಾತಿ ತಂ ವಿದ್ಯಾತ್ಕೃಷ್ಣ ವೈವಸ್ವತಂ ನರಂ ॥ ೩೪ ॥

ಸರ್ವೋ ವೈವಸ್ವತೋ ಭಾಗೋ ಯದ್ಭೂತಂ ಯದ್ವ್ಯವಸ್ಥಿತಂ ।
ಇತಿ ವೈ ಯೋ ವಿಜಾನಾತಿ ಸ ತು ವೈವಸ್ವತೋ ನರಃ ॥ ೩೫ ॥

---

೩೧. ಅಯ್ಯಾ ಕೃಷ್ಣನೇ! ಯಾವನು ಭೋಜಕರಾದ ಬ್ರಾಹ್ಮಣರಿಗೂ ದೇವತೆಗಳಿಗೂ ಯಾವಾಗಲೂ ನಮಿಸುವನೋ, ಮತ್ತು ಇತರ ಮನೆಯ ಭೋಜನಕ್ಕೆ ಆಶೆಪಡದೆ ಪರಾನ್ನನಿಯಮಮಾಡಿರುವನೋ, ಅವನನ್ನು ಸೂರ್ಯಭಕ್ತನೆಂದು ತಿಳಿಯಬೇಕು.

೩೨. ಎಲ್ಲ ದೇವರುಗಳನ್ನೂ ಸೂರ್ಯದೇವನ ಸ್ವರೂಪವೆಂದೂ, ಎಲ್ಲಾ ಜನರೂ ಸೂರ್ಯಸ್ವರೂಪರೆಂದೂ, ತಾನೂ ಆ ಸೂರ್ಯನಿಗಿಂತ ಬೇರೆಯಲ್ಲವೆಂದೂ ತಿಳಿಯುವವನೇ ಸೂರ್ಯಭಕ್ತ.

೩೩. ಅಯ್ಯಾ ಕೃಷ್ಣನೇ! ದೇವತೆ, ಮನುಷ್ಯ, ಪಶು, ಪಕ್ಷಿ, ಇರುವೆ, ಮರ, ಕಲ್ಲು, ಭೂಮಿ, ಸಮುದ್ರ, ಸ್ವರ್ಗ ಇವೆಲ್ಲವುಗಳನ್ನೂ ಸೂರ್ಯಸ್ವರೂಪವೆಂದು ಯಾವನು ತಿಳಿಯುವನೋ.

೩೪. ಮತ್ತು ದೇವೇಶನಾದ ಸೂರ್ಯನಿಗಿಂತ ತನ್ನನ್ನು ಅತಿರಿಕ್ತನೆಂದು ಯಾವನು ತಿಳಿಯುವುದಿಲ್ಲವೋ ಆ ಮನುಷ್ಯನನ್ನು ಸೂರ್ಯಭಕ್ತನೆಂದು ತಿಳಿದುಕೋ!

೩೫. ಹಿಂದೆ ಇದ್ದುದು, ಈಗ ಇರುವುದು, ಎಲ್ಲವೂ ಸೂರ್ಯನ ಅಂಶವೇ ಎಂದು ಯಾವನು ತಿಳಿಯುತ್ತಾನೋ ಅವನೇ ಸೂರ್ಯಭಕ್ತನು.

ಭವಭೀತಿಂ ಹರತ್ಯೇಷ ಭಕ್ತಿಭಾವೇನ ಭಾವಿತಃ ।
ವಿವಸ್ವಾನಿತಿ ಭಾವ್ಯೋ ಯಃ ಸ ತು ವೈವಸ್ವತೋ ನರಃ ॥ ೩೬ ॥

ಭಾವಂ ನ ಕುರುತೇ ಯಸ್ತು ಸರ್ವಭೂತೇಷು ಪಾಪಕಂ ।
ಕರ್ಮಣಾ ಮನಸಾ ವಾಚಾ ಸ ತು ವೈವಸ್ವತೋ ನರಃ ॥ ೩೭ ॥

ಬಾಹ್ಯಾರ್ಥನಿರಪೇಕ್ಷೋ ಯಃ ಕ್ರಿಯಾಂ ಭಕ್ತ್ಯಾ ವಿವಸ್ವತಃ ।
ಭಾವೇನ ನಿಷ್ಪಾದಯತಿ ಜ್ಞೇಯೋ ವೈವಸ್ವತೋ ಹಿ ಸಃ ॥ ೩೮ ॥

ನಾರಯೋ ಯಸ್ಯ ನ ಸ್ನಿಗ್ಧಾ ನ ಭೇದಾಧೀನವೃತ್ತಯಃ ।
ವೀಕ್ಷತೇ ಸರ್ವಮೇವೇದಂ ಭಾನುಂ ವೈವಸ್ವತೋ ಹಿ ಸಃ ॥ ೩೯ ॥

ಸುತಪ್ತೇನೇಹ ತಪಸಾ ಯಜ್ಞೈರ್ವಾ ಬಹುದಕ್ಷಿಣೈಃ ।
ತಾಂ ಗತಿಂ ನ ನರಾ ಯಾಂತಿ ಯಾಂ ತು ವೈವಸ್ವತೋ ಗತಃ ॥ ೪೦ ॥

---

೩೬. ಭಕ್ತಿಭಾವದಿಂದ ಭಾವಿತನಾದ ಸೂರ್ಯನು, ಭಕ್ತರ ಸಂಸಾರ ಭಯವನ್ನು ಹೋಗಲಾಡಿಸುತ್ತಾನೆ ಎಂದು ಯಾವನು ನಂಬುವನೋ ಅವನೇ ಸೂರ್ಯಭಕ್ತನು.

೩೭. ಸರ್ವಭೂತಗಳಲ್ಲಿಯೂ ಮನೋವಾಕ್ಕಾಯಕರ್ಮಗಳಲ್ಲಿ ಸಹ, ಪಾಪಕರವಾದ ಕೆಟ್ಟ ಆಲೋಚನೆಯನ್ನು ಯಾವನು ಮಾಡುವುದಿಲ್ಲವೋ, ಅವನೇ ಸೂರ್ಯಭಕ್ತನು.

೩೮. ಯಾವನು ಸೂರ್ಯನಲ್ಲಿ ಭಕ್ತಿಭಾವದಿಂದ ಇದ್ದು, ಹೊರಗಿನ ವಸ್ತುಗಳ ಅಪೇಕ್ಷೆಯಿಲ್ಲದೆ ಸೂರ್ಯಪೂಜೆಯನ್ನು ನೆರವೇರಿಸುವನೋ, ಅವನನ್ನು ಸೂರ್ಯಭಕ್ತನೆಂದು ತಿಳಿಯಬೇಕು.

೩೯. ಯಾವನಲ್ಲಿ ಶತ್ರುಗಳ ಅಥವಾ ಮಿತ್ರರ ಭೇದೋಪಾಯಕ್ಕೆ ಅಧೀನವಾಗುವ ಮನೋಭಾವವು ಇರುವುದಿಲ್ಲವೋ, ಮತ್ತು ಸಮಸ್ತವನ್ನೂ ಭಾನುಸ್ವರೂಪವೆಂದೇ ಯಾವನು ಕಾಣುವನೋ, ಅವನು (ವೈವಸ್ವತನು) ಸೂರ್ಯಭಕ್ತನು.

೪೦. ಸೂರ್ಯಭಕ್ತನು ಹೊಂದುವಂತಹ ಸದ್ಗತಿಯನ್ನು; ಚೆನ್ನಾಗಿ ತಪಸ್ಸು ಮಾಡಿದರಾಗಲಿ ಹೆಚ್ಚಾದ ದಕ್ಷಿಣಾದಿಗಳನ್ನು ಕೊಟ್ಟು ಯಜ್ಞಮಾಡಿದವರಾಗಲಿ ಹೊಂದಲಾರರು.

ಯೇ ನ ಸರ್ವಾತ್ಮನಾ ಭಾನೌ ಭಕ್ತಿಭಾವೋ ನಿವೇಶಿತಃ ।
ದೇವಶ್ರೇಷ್ಠ ಕೃತಾರ್ಥತ್ವಾ ಚ್ಛ್ಲಾಘ್ಯೋ ವೈವಸ್ವತೋ ಹಿ ಸಃ ॥ ೪೧ ॥

ಅಪಿ ನಃ ಸ ಕುಲೇ ಧನ್ಯೋ ಜಾಯೇತ ಕುಲಪಾವನಃ ।
ಭಾಸ್ಕರಂ ಭಕ್ತಿಭಾವೇನ ಯಸ್ತು ವೈ ಪೂಜಯಿಷ್ಯತಿ ॥ ೪೨ ॥

ಯಃ ಕಾರಯತಿ ದೇವಾರ್ಚಾಂ ಹೃದಯಾಲಂಬಿನೀಂ ರವೇಃ ।
ಸ ನರೋಽರ್ಕಮವಾಪ್ನೋತಿ ಧರ್ಮಧ್ವಜಮನೂಪಮಂ ॥ ೪೩ ॥

ಯಶ್ಚ ದೇವಾಲಯಂ ಭಕ್ತ್ಯಾ ಭಾನೋಃ ಕಾರಯತೇ ಸ್ಥಿರಂ ।
ಸ ಸಪ್ತಪುರುಷಾಲ್ಲೋಕಾನ್ಭಾನೋರ್ನಯತಿ ಮಾನವಃ ॥ ೪೪ ॥

ಯಾವಂತ್ಯಬ್ದಾನಿ ದೇವಾರ್ಚಾ ರವೇಸ್ತಿಷ್ಠತಿ ಮಂದಿರೇ ।
ತಾವದ್ವರ್ಷಸಹಸ್ರಾಣಿ ಪುಷ್ಪೋತ್ತರಗೃಹೇ ವಸೇತ್ ॥ ೪೫ ॥

---

೪೧. ಅಯ್ಯಾ ದೇವಶ್ರೇಷ್ಠನೇ! ಯಾವನು ಸೂರ್ಯನಲ್ಲಿ ಈ ಪ್ರಕಾರ ಭಕ್ತಿ ಭಾವವನ್ನಿಟ್ಟಿರುವನೋ ಅವನು ಕೃತಾರ್ಥನಾಗುವುದರಿಂದ ಶ್ಲಾಘ್ಯನಾದ ಸೂರ್ಯಭಕ್ತ ನೆನಿಸುತ್ತಾನೆ.

೪೨. ಭಕ್ತಿಭಾವದಿಂದ ಸೂರ್ಯನನ್ನು ಪೂಜಿಸುವನಾಗಿ ಕುಲವನ್ನು ಪವಿತ್ರ ಮಾಡತಕ್ಕ ಧನ್ಯನು ನಮ್ಮ ವಂಶದದಲ್ಲಿಯೂ ಹುಟ್ಟಲಿ.

೪೩. ಸೂರ್ಯನಿಗೆ ಮನ ಒಪ್ಪುವಂತಹ ದೇವತಾರ್ಚನವನ್ನು ಯಾವನು ಮಾಡುವನೋ, ಆ ಮನುಷ್ಯನು ಅಸದೃಶನೂ, ಧರ್ಮಧ್ವಜನೂ ಆದ ಸೂರ್ಯನನ್ನೇ ಹೊಂದುತ್ತಾನೆ. (ಸೂರ್ಯಸಾಯುಜ್ಯಹೊಂದುತ್ತಾನೆ.)

೪೪. ಯಾವನು ಶಾಶ್ವತವಾಗಿರುವಂತೆ ದೃಢವಾದ ದೇವಾಲಯವನ್ನು ಸೂರ್ಯ ನಿಗೆ ನಿರ್ಮಿಸುವನೋ, ಅವನು ತನ್ನ ಕುಲದ ಏಳುತಲೆಯವರನ್ನು ಸೂರ್ಯಲೋಕಕ್ಕೆ ಕರೆದೊಯ್ಯುತ್ತಾನೆ,

೪೫. ಸೂರ್ಯದೇವಾಲಯದಲ್ಲಿ ಇವನ ಏರ್ಪಾಡಿನಿಂದ ಎಷ್ಟುವರ್ಷ ಪೂಜೆ ನಡೆಯುವುದೋ ಅಷ್ಟು ಸಹಸ್ರವರ್ಷಗಳು ಪುಷ್ಪೋತ್ತರ ಸದಸ್ಸಿನಲ್ಲಿ ವಾಸಿಸುವನು.

ದೇವಾರ್ಚಾಲಕ್ಷಣೋಪೇತೋ ಯದ್ಗೃಹೇ ಸಂತತೋ ವಿಧಿಃ ।
ನಿಷ್ಕಾಮಂ ಚ ಮನೋ ಯಸ್ಯ ಸ ಯಾತ್ಯಕ್ಷರಸಾಮ್ಯತಾಂ ॥ ೪೬ ॥

ಪುಷ್ಪಾಣ್ಯತಿ ಸುಗಂಧೀನಿ ಮನೋಜ್ಞಾನಿ ಚ ಯಃ ಪುಮಾನ್ ।
ಪ್ರಯಚ್ಛತಿ ಜಗನ್ನಾಥೇ ಸಪ್ತಾಶ್ವೇ ಜ್ಯೋತಿಷಾಂಪತೌ ।
ಸ ಯಾತಿ ಪರಮಂ ಸ್ಥಾನಂ ಯತ್ರ ಜ್ಯೋತಿಃ ಸನಾತನಂ ॥ ೪೭ ॥

ಯೇನ ಯೇನ ವಿಹೀನೋ ಯೋ ದೇಶೋ ಯದ್ವರ್ಜಿತಂ ಚ ಯತ್ ।
ಧೂಪಾಂಶ್ಚ ವಿವಿಧಾಂಸ್ತಾಂಸ್ತಾದ್ಗಂಧಾಢ್ಯಂ ಸುವಿಲೇಪನಂ ॥ ೪೮ ॥

ದೀಪವರ್ತ್ಯುಪಹಾರಾಂಶ್ಚ ಯಚ್ಚಾಭೀಷ್ಟಮಥಾತ್ಮನಃ ।
ನರಃ ಸೋಽನುದಿನಂ ಯಜ್ಞಾತ್ಕರೋತ್ಯಾರಾಧನಾದ್ರವೇಃ ॥ ೪೯ ॥

ಯಜ್ಞೇಶೋ ಭಗವಾನ್ಭಾನುರ್ಮಖೈರಪಿ ನ ತೋಷ್ಯತೇ ।
ಬಹೂಪಕರಣಾ ಯಜ್ಞಾ ನಾನಾಸಂಭಾರವಿಸ್ತರಾಃ ।
ಸಂಪ್ರಾಪ್ಯಂತೇ ಧನಯುತೈರ್ಮನುಷ್ಯೈರ್ನಾಲ್ಪ ಸಂಚಯೈಃ ॥ ೫೦ ॥

---

೪೬. ಯಾರ ಮನೆಯಲ್ಲಿ ಲಕ್ಷಣಯುಕ್ತವಾದ ವಿಧಾನದಿಂದ ದೇವರ ಪೂಜೆಯು ಸಂತತವಾಗಿ ನಡೆಯುವುದೋ, ಮತ್ತು ಯಾವನ ಮನಸ್ಸು ನಿರಪೇಕ್ಷವಾಗಿರುವುದೋ, ಅವನು ನಾಶರಹಿತವಾದ ಸ್ವರೂಪವನ್ನು ಹೊಂದುತ್ತಾನೆ.

೪೭. ಸಪ್ತಾಶ್ವನೂ, ಜಗನ್ನಾಥನೂ, ಜ್ಯೋತಿಷ್ಪತಿಯೂ ಆದ ಸೂರ್ಯನಿಗೆ ಯಾವ ಮನುಷ್ಯನು ಅತಿ ಸುಗಂಧಯುಕ್ತಗಳಾಗಿ—ಮನೋಹರಗಳಾಗಿರುವ ಪುಷ್ಪಗಳನ್ನು ಸಮರ್ಪಿಸುವನೋ ಅವನು ಪುರಾತನತೇಜೋಮಯನಿರುವ ಶ್ರೇಷ್ಠವಾದ ಸ್ಥಳಕ್ಕೆ ಹೋಗುತ್ತಾನೆ.

೪೮–೪೯. ಯಾವ ದೇಶದಲ್ಲಿ ಏನೇನು ಸಿಕ್ಕುವುದಿಲ್ಲವೋ, ಯಾವ ಗಂಧ, ಧೂಪವಾಸನಾಯುತವಾದ ಅನುಲೇಪನ, ದೀಪದಬತ್ತಿ ನೈವೇದ್ಯ, ಮುಂತಾದ ತನಗೆ ಇಷ್ಟವಾದ್ದು ಯಾವುದೋ ಆಯಾಪದಾರ್ಥಗಳು ಮನಃಕಲ್ಪಿತಗಳಾದರೆ ನಿತ್ಯತೃಪ್ತನಾದ ಸೂರ್ಯನಿಂದ ಅವೇ ಸಿದ್ಧಿಯಾಗುವುವು.

೫೦. ಯಜ್ಞಾಧಿಪತಿಯಾದ ಸೂರ್ಯನು ಯಜ್ಞಗಳಿಂದ ಸಹ ಅಷ್ಟು ತುಷ್ಟನಾಗುವುದಿಲ್ಲ. ಏಕೆಂದರೆ ಯಜ್ಞಗಳು ಅನೇಕ ಉಪಕರಣಗಳ ಸಹಾಯದಿಂದ

ಭಕ್ತ್ಯಾ ತು ಪುರುಷೈಃ ಪೂಜಾ ಕೃತೈರ್ದೂರ್ವಾಂಕುರೈರಪಿ ।
ರವೇರ್ದದಾತಿ ಹಿ ಫಲಂ ಸರ್ವಯಜ್ಞೈಃ ಸುದುರ್ಲಭಂ ॥ ೫೧ ॥

ಯಾನಿ ಪುಷ್ಪಾಣಿ ಹೃದ್ಯಾನಿ ಧೂಪ ಗಂಧಾನುಲೇಪನಂ ।
ದಯಿತಂ ಭೂಷಣಂ ಯಚ್ಚ ತಥಾ ರಕ್ತೇ ಚ ವಾಸಸೀ ॥ ೫೨ ॥

ಯಾನಿ ಚಾಭ್ಯವಹಾರ್ಯಾಣಿ ಭಕ್ಷ್ಯಾಣಿ ಚ ಫಲಾನಿ ಚ ।
ಪ್ರಯಚ್ಛ ತಾನಿ ಮಾರ್ತಂಡೇ ಭವ ತ್ವಮಪಿ ತನ್ಮನಾಃ ॥ ೫೩ ॥

ಆದ್ಯಂ ತು ಯಜ್ಞಪುರುಷಂ ಯಥಾಭಕ್ತ್ಯಾ ಪ್ರಸಾದಯ ।
ಆರಾಧ್ಯ ಯಾತಿ ತಂ ದೇವಂ ಯತ್ತದ್ಬ್ರಹ್ಮಪರಂ ಸ್ಮೃತಂ ॥ ೫೪ ॥

---

ನಡೆಯತಕ್ಕುವು ಅನೇಕ ಸಂಭಾರ ವಿಸ್ತಾರಗಳುಳ್ಳವು; ಹಣಗಾರರಿಗೆ ಮಾತ್ರ ಅಂಥ ಯಜ್ಞಗಳನ್ನು ಮಾಡಲು ಸಾಧ್ಯ; ಸ್ವಲ್ಪ ಧನವುಳ್ಳವರಿಂದ ನಡೆಯಿಸಲು ಅಸಾಧ್ಯ

೫೧. ಯಜ್ಞದ ವಿಚಾರ ಹೀಗಿದೆ: ದ್ರವ್ಯರಹಿತನಾದ ಮನುಷ್ಯನು ಭಕ್ತಿಯುಕ್ತನಾಗಿ ಎಳೆಯ ಗರಿಕೆಗಳಿಂದ ಸೂರ್ಯನನ್ನು ಆರಾಧಿಸಿದರೆ, ಸಮಸ್ತ ಯಜ್ಞಗಳಿಂದಲೂ ಹೊಂದಬಹುದಾದ ಫಲಗಳನ್ನು ಸೂರ್ಯನು ಕೊಡುವನು.

೫೨. ಯಾವ ಹೂವು, ಗಂಧ, ಧೂಪ ಮೊದಲಾದುವು ಸೂರ್ಯಪೂಜೆಗೆ ಮನೋಹರಗಳೋ, ಯಾವ ಒಡವೆಗಳು ಆ ದೇವನಿಗೆ ಪ್ರಿಯವೆನಿಸಿವೆಯೋ, ಅಂತಹ ಕೆಂಪಾಗಿರುವ ಪುಷ್ಪ, ವಸ್ತ್ರ, ಭಕ್ಷ್ಯಗಳು.

೫೩. ಭುಂಜಿಸಲು ಅರ್ಹಗಳಾದ ಭಕ್ಷ್ಯಗಳು, ಹಣ್ಣುಗಳು, ಇವುಗಳನ್ನು ಸೂರ್ಯನಿಗೆ ಸಮರ್ಪಿಸಿ ಅವನಲ್ಲೇ ಮನಸ್ಸಿಟ್ಟುಕೊಂಡಿರು.

೫೪. ಸನಾತನನಾದ ಆ ಯಜ್ಞಪುರುಷನನ್ನು ಭಕ್ತಿಯಿದ್ದಷ್ಟುಮಟ್ಟಿಗೂ ಆರಾಧಿಸಿ ಪ್ರಸನ್ನನನ್ನಾಗಿ ಮಾಡಿಕೋ. ಹೀಗೆ ಸೂರ್ಯನನ್ನು ಆರಾಧಿಸಿದವನು ಪರಬ್ರಹ್ಮವನ್ನೇ ಹೊಂದುತ್ತಾನೆ.

ಪುಣ್ಯೈಸ್ತೀರ್ಥೋದಕೈಃ ಪುಷ್ಪೈಃ ಮಧುನಾ ಸರ್ಪಿಷಾ ತಥಾ ।
ಕ್ಷೀರೇಣ ಸ್ನಾಪಯೆದ್ದೇವಮಚ್ಯುತಂ ಜಗತಾಂ ಪತಿಂ ॥ ೫೫ ॥

ದಧಿಕ್ಷೀರಹ್ರದಾನ್ಪುಣ್ಯಾಂಸ್ತತೋ ಲೋಕಾನ್ಮಧುಶ್ಚ್ಯುತಃ ।
ಪ್ರಯಾಸ್ಯತಿ ಯದುಶ್ರೇಷ್ಠ ನಿರ್ವೃತಿಂ ಚಾಪಿ ಐಶ್ವರೀಂ ॥ ೫೬ ॥

ಮನಸಶ್ಚೈಕತಾಯೋಗಾದಾರಾಧಯ ದಿವಾಕರಂ ॥ ೫೭ ॥

ಆರಾಧ್ಯ ತಂ ಮಹಾದೇವೋ ಮಹಚ್ಛಬ್ಧಮವಾಪ್ತವಾನ್ ॥ ೫೮ ॥

ಅಹಂ ಚಾಪಿ ಸಮಸ್ತಾನಾಂ ಲೋಕಾನಾಂ ಸೃಷ್ಟಿಕಾರಕಃ ।
ತಮಾರಾಧ್ಯ ವಿವಸ್ವಂತಂ ತತ್ಪ್ರಸಾದಾಜ್ಜನಾರ್ದನ ॥ ೫೯ ॥

---

೫೫. ಪುಣ್ಯಕರವಾದ ಜಲ, ಹೂವುಗಳು, ಹಾಲು, ತುಪ್ಪ, ಜೇನುತುಪ್ಪ ಇವುಗಳಿಂದ ಜಗತ್ಪತಿಯೂ ನಾಶರಹಿತನೂ ಆದ ಸೂರ್ಯನಿಗೆ ಅಭಿಷೇಕಮಾಡಬೇಕು.

೫೬. ಅಯ್ಯಾ ಯದುಶ್ರೇಷ್ಠನೇ! ಹೀಗೆ ಅಭಿಷೇಕಮಾಡಿದವನು ಪುಣ್ಯಲಭ್ಯಗಳಾದ ಹಾಲು ಮೊಸರಿನ ಮಡುಗಳನ್ನೂ, ಜೇನುತುಪ್ಪಹನಿಯುವ ಲೋಕಗಳನ್ನೂ ಈಶ್ವರಸಂಬಂಧವಾದ ಸೌಖ್ಯವನ್ನೂ ಹೊಂದುತ್ತಾನೆ.

೫೭. ಮನೋಹರಗಳಾದ ಸ್ತುತಿಗಳಿಂದಲೂ, ವಾದ್ಯ ಬಾರಿಸುವಿಕೆಯಿಂದಲೂ, ಬ್ರಾಹ್ಮಣ ಸಂತರ್ಪಣೆಯಿಂದಲೂ, ಮನಸ್ಸಿನ ಏಕಾಗ್ರತೆಯಿಂದಲೂ ಸೂರ್ಯನನ್ನು ಆರಾಧಿಸು.

೫೮. ಈಶ್ವರನಿಗೆ ಮಹತ್ ಶಬ್ದದ ಯೋಗಬಂದು ಮಹಾದೇವ, ಮಹೇಶ್ವರ ಎಂದು ರೂಢಿಯಾಗಿರುವುದು ಸೂರ್ಯಾರಾಧನೆಯ ಮಹಿಮೆಯಿಂದಲೇ ಆಗಿದೆ.

೫೯. ನಾನೂಕೂಡ ಸೃಷ್ಟಿಕರ್ತನಾಗಿರುವುದು, ಈ ಭಾಸ್ಕರ ಪೂಜಾಮಹಿಮೆಯಿಂದಲೇ. ಅಯ್ಯಾ ಜನಾರ್ದನನೇ! ನೀನೂಕೂಡ ಆ ಸೂರ್ಯನನ್ನು-ಆರಾಧಿಸಿ ಅವನ ಅನುಗ್ರಹದಿಂದಲೇ ಹೀಗೆ ಈ ಲೋಕಗಳನ್ನು ಪಾಲನೆ ಮಾಡುವನಾಗಿದ್ದೀ.

ತ್ವಮಪ್ಯೇವಂ ಪಾಲಯಸಿ ತತ್ಪ್ರಸಾದಾನ್ನ ಸಂಶಯಃ ।
ಸಮರ್ಥೋ ದೇವಶತ್ರೂಣಾಂ ದೈತ್ಯಾನಾಂ ನಾಶನೇ ಸದಾ ॥ ೬೦ ॥

ದಕ್ಷಿಣಃ ಕಿರಣಸ್ತಸ್ಯ ಯೋ ದೇವಸ್ಯ ವಿವಸ್ವತಃ ।
ಅಹಂ ತಸ್ಮಾತ್ಸಮುತ್ಪನ್ನೋ ವೇದವೇದಾಂಗಸಮ್ಮಿತಃ ॥ ೬೧ ॥

ವಾಮೋ ಯಃ ಕಿರಣಃ ಕೃಷ್ಣ ರಶ್ಮಿಮಾಲಾಕುಲಃ ಸದಾ ।
ತಸ್ಮಾದೀಶಃ ಸಮುತ್ಪನ್ನಃ ಪಾರ್ವತೀದಯಿತೋऽಚ್ಯುತ ॥ ೬೨ ॥

ವಕ್ಷಸಸ್ತ್ವಂ ಸಮುತ್ಪನ್ನಃ ಶಂಖಚಕ್ರಗದಾಧರಃ ।
ತಥಾಂಬುಜಕರಾ ದೇವೀ ಅಂಬುಜಾಸನವಲ್ಲಭಾ ॥ ೬೩ ॥

ತಮಾರಾಧ್ಯ ಬಲಂ ಕೀರ್ತಿಂ ಶ್ರಿಯಂ ಚಾವಾಪ್ತವಾನಹಂ ।
ತಥಾ ತ್ವಮಪಿ ರಾಜೇಂದ್ರ ತಮಾರಾಧ್ಯ ದಿವಾಕರಂ ।
ಯಾನ್ಯಾನಿಚ್ಛಸಿ ಕಾಮಾಂಸ್ತ್ವಂ ತಾಂಸ್ತಾಂಸ್ಸರ್ವಾನವಾಪ್ಸ್ಯಸಿ ॥ ೬೪ ॥

---

೬೦. ಅಲ್ಲದೆ ದೇವತೆಗಳ ಶತ್ರುಗಳಾದ ದೈತ್ಯರನ್ನು ನಾಶಮಾಡುವುದರಲ್ಲಿ ಸದಾ ಸಮರ್ಥನಾಗಿರುವುದೂ ಈ ಸೂರ್ಯಾರಾಧನ ಮಹಿಮೆಯಿಂದಲೇ ಆಗಿದೆ.

೬೧. ಸೂರ್ಯದೇವನ ಬಲಭಾಗದ ಕಿರಣ ಯಾವುದೋ ಅದರ ಸಂಬಂಧದಿಂದ, ವೇದ ವೇದಾಂಗಯುಕ್ತನಾದ ನಾನು ಉತ್ಪನ್ನನಾದೆನು.

೬೨. ಅಯ್ಯಾ ಕೃಷ್ಣನೇ! ಆ ಸೂರ್ಯನ ಎಡಭಾಗದ ಕಿರಣ ಸಮೂಹದಿಂದ ಪಾರ್ವತೀಪ್ರಿಯನಾದ ಈಶ್ವರನು ಜನಿಸಿದನು.

೬೩. ಎಲೈ ಅಚ್ಯುತನೇ! ಸೂರ್ಯನ ಹೃದಯಪ್ರದೇಶದಿಂದ ಶಂಖ, ಚಕ್ರ, ಗದಾಧರನಾದ ನೀನು ಜನಿಸಿದೆ. ಮತ್ತು ಪದ್ಮಹಸ್ತೆಯೂ, ಬ್ರಹಪತ್ನಿಯೂ ಆದ ದೇವಿಯು ಹುಟ್ಟಿದಳು,

೬೪. ಅವನನ್ನು ಆರಾಧಿಸಿ ನಾನೂ ಶಕ್ತಿ, ಯಶಸ್ಸು,-ಸಂಪತ್ತು, ಇವುಗಳನ್ನೆಲ್ಲಾ ಹೊಂದಿದೆನು. ಎಲೈ ರಾಜೇಂದ್ರನೇ! ಆದುದರಿಂದ ನೀನೂ ಸೂರ್ಯನನ್ನು ಆರಾಧಿಸಿದರೆ ಯಾವ ಯಾವುದನ್ನು ಬಯಸುವೆಯೋ ಆಯಾ ಇಚ್ಛೆಗಳೆಲ್ಲವನ್ನೂ ಹೊಂದುತ್ತೀಯೆ.

**ಯ ಇದಂ ಶೃಣುಯಾನ್ನಿತ್ಯಂ ಸಂವಾದಂ ವಿಧಿಕೃಷ್ಣಯೋಃ ।**
**ಸೋಽಪಿ ಕಾಮಾನವಾಪ್ಯಾಗ್ರ್ಯಾಂಸ್ತತೋ ಲೋಕಮವಾಪ್ನುಯಾತ್॥ ೬೫॥**

**ಗೈರಿಕಂ ಯಾನಮಾರೂಢೋ ಯುಕ್ತಂ ಕುಂಜರವಾಜಿಭಿಃ ।**
**ತೇಜಸಾ ವಹ್ನಿಸಂಕಾಶಃ ಪ್ರಭಯಾಂಡಜಸನ್ನಿಭಃ ॥ ೬೬ ॥**

**ಕಾಂತ್ಯಾ ಚಂದ್ರಸಮೋ ರಾಜನ್ ವೃಂದಾರಕಗಣೈರ್ವೃತಃ ।**
**ಗಂಧರ್ವೈರ್ಗೀಯಮಾನಸ್ತು ತಥಾಚಾಪ್ಸರಸಾಂ ಗಣೈಃ ॥ ೬೭ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಆದಿತ್ಯ ಪೂಜಾವರ್ಣನಂ ನಾಮ ವಿಂಶೋತ್ತರ ಶತತಮೋಽಧ್ಯಾಯಃ**



---

೬೫-೬೭ ಯಾವನು ಬ್ರಹ್ಮ ಕೃಷ್ಣ ಇವರಿಗೆ ನಡೆದ ಸಂವಾದವನ್ನು ನಿತ್ಯವೂ ಕೇಳುವನೋ, ಅವನು ಶ್ರೇಷ್ಠವಾದ ತನ್ನ ಇಷ್ಟಾರ್ಥಗಳನ್ನು ಪಡೆದವನಾಗಿ ಆನೆ ಕುದುರೆಗಳಿಂದ ಕೂಡಿದುದೂ, ಧಾತುವಸ್ತುಗಳ ಬಣ್ಣದಿಂದ ಚಿತ್ರಿಸಿದುದೂ, ಆದ ವಿಮಾನವನ್ನೇರಿ ತೇಜಸ್ಸಿನಲ್ಲಿ ಅಗ್ನಿ ಸಮಾನನೂ, ಪ್ರಭೆಯಲ್ಲಿ ಸೂರ್ಯನಿಗೆ ಸಮಾನನೂ, ಕಾಂತಿಯಲ್ಲಿ ಚಂದ್ರನಿಗೆ ಸಮಾನನೂ, ಆಗಿ ದೇವತಾಸಮೂಹದಿಂದಲೂ ನೃತ್ಯಗಾನರತರಾದ ಗಂಧರ್ವರು ಅಪ್ಸರಸರು ಇವರುಗಳಿಂದಲೂ, ಕೂಡಿ ಚಿತ್ರಭಾನುವಿನ ಲೋಕಕ್ಕೆ ಹೋಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಆದಿತ್ಯ ಪೂಜಾ ವರ್ಣನೆಯೆಂಬ ನೂರಿಪ್ಪತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಏಕವಿಂಶತ್ಯುತ್ತರಶತತಮೋಽಧ್ಯಾಯಃ

॥ ಶತಾನೀಕ ಉವಾಚ ॥

ಶರೀರಲೇಖನಂ ಭಾನೋರುಕ್ತಃ ಸಂಕ್ಷೇಪತಸ್ತ್ವಯಾ ।
ವಿಸ್ತರಾಚ್ಛ್ರೋತುಮಿಚ್ಛಾಮಿ ತನ್ಮಮಾಚಕ್ಷ್ವ ಸುವ್ರತ ॥ ೧ ॥

॥ ಸುಮಂತುರುವಾಚ ॥

ಪಿತುರ್ಗೃಹಂ ತು ಯಾತಾಯಾಂ ಸಂಜ್ಞಾಯಾಂ ಕುರುನಂದನ ।
ಭಾಸ್ಕರಶ್ಚಿಂತಯಾಮಾಸ ಸಂಜ್ಞಾ ಮದ್ರೂಪ ಕಾರಿಣೀ ॥ ೨ ॥

---

## ನೂರಇಪ್ಪತ್ತೊಂದನೆಯ ಅಧ್ಯಾಯ

೧. ಶತಾನೀಕ ರಾಜನು ಹೇಳುತ್ತಾನೆ—ಸೂರ್ಯನ ಶರೀರವನ್ನು ಸಾಣೆ ಹಿಡಿದು (ಕಡೆದು) ದನ್ನು ನೀನು ಹಿಂದೆ ಸಂಕ್ಷೇಪವಾಗಿ ಹೇಳಿದ್ದೆ. ಎಲೈ ಸುವ್ರತನೇ! ಆ ವಿಚಾರವನ್ನು ವಿಸ್ತಾರವಾಗಿ ಕೇಳಲು ಆಶಿಸುತ್ತೇನೆ. ಅದನ್ನು ನನಗೆ ಹೇಳು ಎಂದನು

೨. ಸುಮಂತು ಮುನಿವರ್ಯರು ಹೇಳುತ್ತಾರೆ—ಎಲೈ ಕುರುನಂದನನೇ! ಸಂಜ್ಞಾದೇವಿಯು ತನ್ನ ತಂದೆಯ ಮನೆಗೆ ಹೋಗಲಾಗಿ ಆ ವಿಚಾರ ಗೊತ್ತಿಲ್ಲದ ಸೂರ್ಯನು, ಈ ಸಂಜ್ಞಾದೇವಿಯು ನನ್ನ ರೂಪವನ್ನೇ ಧರಿಸಿಕೊಂಡಿರಬೇಕು ಎಂದು ಆಲೋಚಿಸಿದನು.

ಏತಸ್ಮಿನ್ನಂತರೇ ಬ್ರಹ್ಮಾ ತತ್ರಾಗತ್ಯ ದಿವಾಕರಂ ।
ಅಬ್ರವೀನ್ಮಧುರಾಂ ವಾಚಂ ರವೇಃ ಪ್ರೀತಿಕರಾಂ ಶುಭಾಂ ॥ ೩ ॥

ಆದಿದೇವೋಽಸಿ ದೇವಾನಾಂ ವ್ಯಾಪ್ತಮೇತತ್ತ್ವಯಾ ಜಗತ್ ।
ಶ್ವಶುರೋ ವಿಶ್ವಕರ್ಮಾ ತೇ ರೂಪಂ ನಿರ್ವರ್ತಯಿಷ್ಯತಿ ॥ ೪ ॥

ಏವಮುಕ್ತ್ವಾ ರವಿಂ ಬ್ರಹ್ಮಾ ವಿಶ್ವಕರ್ಮಾಣಮಬ್ರವೀತ್ ।
ನಿರ್ವರ್ತಯಸ್ವ ಮಾರ್ತಂಡಸ್ವರೂಪಂ ತತ್ಸುಶೋಭನಂ ॥ ೫ ॥

ತತೋಽಬ್ರಹ್ಮಸಮಾದೇಶಾದ್ಭ್ರಮಿಮಾರೋಪ್ಯ ಭಾಸ್ಕರಂ ।
ರೂಪಂ ನಿರ್ವರ್ತಯಾಮಾಸ ವಿಶ್ವಕರ್ಮಾ ಶನೈಃ ಶನೈಃ ॥ ೬ ॥

ತತಸ್ತುಷ್ಟಾವ ತಂ ಬ್ರಹ್ಮಾ ಸರ್ವದೇವಗಣೈಃಸಹ ।
ಗುಹ್ಯೈರ್ನಾನಾವಿಧೈಃ ಸ್ತೋತ್ರೈರ್ವೇದವೇದಾಂಗಪಾರಗೈಃ ॥ ೭ ॥

---

೩. ಇಷ್ಟರಲ್ಲಿ ಬ್ರಹ್ಮನು ಅಲ್ಲಿಗೆ ಬಂದು ಸೂರ್‍ಯನಿಗೆ ಪ್ರೀತಿಕರವೂ ಮಂಗಳ ಕರವೂ ಆದ ಒಂದು ಸವಿಮಾತನ್ನು ಹೇಳಿದನು.

೪. ನೀನು ದೇವತೆಗಳಿಗೆಲ್ಲಾ ಆದಿದೇವನಾಗಿರುವೆ. ಈ ಎಲ್ಲಾ ಜಗತ್ತಿನಲ್ಲೂ ನೀನು ವ್ಯಾಪಿಸಿರುವೆ. ಆದ್ದರಿಂದ ನಿನಗೆ ಅದಕ್ಕೆ ತಕ್ಕರೂಪವಿರಬೇಕು. ನಿನ್ನ ಮಾವ ನಾದ ವಿಶ್ವಕರ್ಮನು ನಿನಗೆ ಸುರೂಪವನ್ನು ಏರ್ಪಡಿಸುತ್ತಾನೆ (ಎಂದನು.)

೫. ಬ್ರಹ್ಮನು ಸೂರ್ಯನಿಗೆ ಈ ಮಾತನ್ನು ಹೇಳಿ ಆಮೇಲೆ ವಿಶ್ವಕರ್ಮನ ಬಳಿಗೆ ಹೋಗಿ " ಸೂರ್ಯನ ರೂಪವು ಮಂಗಳಕರವಾಗಿ ಚೆನ್ನಾಗುವಂತೆ ಏರ್ಪಡಿಸು ಎಂದು ಹೇಳಿದನು.

೬. ಅನಂತರ ಬ್ರಹ್ಮನ ಅಪ್ಪಣೆಯಂತೆ ವಿಶ್ವಕರ್ಮನು ಸೂರ್‍ಯನನ್ನು ಕಡೆ ಯುವ ಯಂತ್ರದ ಮೇಲಿಟ್ಟು ನಿಧಾನವಾಗಿ ಕಡೆಯುತ್ತಾ ಸೂರ್‍ಯನ ರೂಪನ್ನು ತಿದ್ದತೊಡಗಿದನು.

೭. ಆಗ ಬ್ರಹ್ಮನು ಸಮಸ್ತ ದೇವತಾಸಮೂಹದಿಂದ ಕೂಡಿದವನಾಗಿ ರಹ ಸ್ಯಗಳಾದ ವೇದ ವೇದಾಂಗಗಳಲ್ಲಿ ಪ್ರತಿಪಾದ್ಯವಾಗಿರುವ ಸ್ತೋತ್ರಗಳಿಂದ ಸ್ತುತಿಸಿ ದನು.

ಸ್ವಸ್ತಿ ತೇऽಸ್ತು ಜಗನ್ನಾಥ ಘರ್ಮವರ್ಷಹಿಮಾಕರ ।
ಶಾಂತಿಸ್ತೇ ಸರ್ವಲೋಕಾನಾಂ ದೇವದೇವ ದಿವಾಕರ ॥ ೮ ॥

ತತೋ ರುದ್ರಶ್ಚ ವಿಷ್ಣ್ವಾದ್ಯಾಃ ಸ್ತುವಂತಸ್ತಂ ದಿವಾಕರಂ ।
ತೇಜಸ್ತೇ ವರ್ಧತಾಂ ದೇವ ಲಿಖಿತೇ ಏಪಿ ದಿವಸ್ಪತೇ ॥ ೯ ॥

ಇಂದ್ರಶ್ಚಾಗತ್ಯ ತಂ ದೇವಂ ಲಿಖ್ಯಮಾನಮಥಾಸ್ತುವತ್ ।
ಜಯ ದೇವ ಸಮಸ್ತಾನಾಂ ಸತ್ವದೋऽಸಿ ಜಗತ್ಪತೇ ॥ ೧೦ ॥

ಋಷಯಸ್ತು ತತಃ ಸಪ್ತ ವಿಶ್ವಾಮಿತ್ರಪುರೋಗಮಾಃ ।
ತುಷ್ಟುವುರ್ವಿವಿಧೈಃ ಸ್ತೋತ್ರೈಃ ಸ್ವಸ್ತಿಸ್ವಸ್ತೀತಿ ವಾದಿನಃ ॥ ೧೧ ॥

ವೇದೋಕ್ತಾಭಿರಥಾಶೀರ್ಭಿರ್ವಾಲಖಿಲ್ಯಾಶ್ಚ ತುಷ್ಟುವುಃ ।
ಮುಮುಕ್ಷೂಣಾಂ ತು ಮೋಕ್ಷಸ್ಯ ಧ್ಯೇಯಸ್ತ್ವಂ ಧ್ಯಾನಿನಾಮಪಿ ॥ ೧೨ ॥

---

೮. ಸೆಕೆಯನ್ನೂ, ಮಳೆಯನ್ನೂ, ಹಿಮವನ್ನೂ ಉಂಟುಮಾಡತಕ್ಕ ಜಗನ್ನಾಥನೇ! ನಿನಗೆ ಕ್ಷೇಮವಾಗಲಿ. ಎಲ್ಲಾ ಲೋಕದವರಿಂದ ದೇವ ದೇವನೆಂದು ಭಾವಿಸಲ್ಪಡುವ ದಿವಾಕರನೇ! ನಿನಗೆ ಶಾಂತಿ ಲಭಿಸಲಿ, ಎಂದು ಸ್ತುತಿಸಿದರು.

೯. ಅನಂತರ ಶಿವ, ವಿಷ್ಣು ಮೊದಲಾದವರು ಸೂರ್ಯನನ್ನು ಸ್ತುತಿಸುತ್ತಾ " ದಿವಸ್ಪತಿ (ಆಕಾಶಾಧಿಪತಿ) ಯಾದ ದೇವನೇ! ನಿನ್ನನ್ನು ಕಡೆತ (ಸಾಣೆಗೆ) ಮಾಡಿದುದರಿಂದ ನಿನ್ನ ತೇಜಸ್ಸು ವೃದ್ಧಿಯಾಗಲಿ " ಎಂದು ಹರಸಿದರು.

೧೦. ದೇವೇಂದ್ರನೂ ಸಹ ಅಲ್ಲಿಗೆ ಬಂದು ಸಾಣೆಮಾಡಲ್ಪಡುವ ಸೂರ್ಯನನ್ನು ಕುರಿತು "ಎಲೈ ಜಗತ್ತುಗಳಿಗೆ ಒಡೆಯನೇ! ನೀನು ಸಮಸ್ತರಿಗೂ ಬಲವನ್ನು ಕೊಡುವವನಾಗಿದ್ದೀಯೆ. ಸ್ವಾಮಿಯೇ ಈ ಕಾರ್ಯ ಜಯಪ್ರದವಾಗಲಿ. ಸರ್ವೋತ್ಕೃಷ್ಟನಾಗು " ಎಂದು ಸ್ತುತಿಸಿದನು.

೧೧. ಅನಂತರ ವಿಶ್ವಾಮಿತ್ರರೇ ಮೊದಲಾದ ಸಪ್ತರ್ಷಿಗಳೂ ಸಹ ಬಂದು ಸ್ವಸ್ತಿ, ಸ್ವಸ್ತಿ ಎಂದು ಹೇಳುತ್ತಾ ನಾನಾಬಗೆಯಾದ ಸ್ತೋತ್ರಗಳಿಂದ ಹೊಗಳಿದರು.

೧೨. ವಾಲಖಿಲ್ಯರೂ ಕೂಡ ವೇದೋಕ್ತಗಳಾದ ಆಶೀರ್ವಾದಪೂರ್ವಕವಾಗಿ ಸ್ತುತಿಸುವವರಾಗಿ. " ಎಲೈ ಸ್ವಾಮಿಯೇ ಮೋಕ್ಷವನ್ನು ಆಶಿಸುವವರಿಗೆ ಮೋಕ್ಷಸ್ವರೂಪನಾಗಿದ್ದೀ. ಧ್ಯಾನಮಾಡುವವರಿಗೆ ಧ್ಯೇಯವಸ್ತುವಾಗಿರುವೆ.

ತ್ವಂ ಗತಿಃ ಸರ್ವಭೂತಾನಾಂ ತ್ವಯಿ ಸರ್ವಂ ಪ್ರತಿಷ್ಠಿತಂ ।
ಪ್ರಜಾಭ್ಯಶ್ಚೈವ ದೇವೇಶ ಶಂ ನೋಽಸ್ತು ಜಗತಃ ಪತೇ ॥ ೧೩ ॥

ತ್ವತ್ತೋ ಭವತಿ ವೈ ನಿತ್ಯಂ ಜಗತ್ಸಂಲೀಯತೇ ತ್ವಯಿ ।
ಏಕಧಾ ತ್ವಂ ದ್ವಿಧಾ ಚೈವ ತ್ರಿಧಾ ಚ ತ್ವಂ ನ ಸಂಶಯಃ ॥ ೧೪ ॥

ತ್ವಯ್ಯೈಕೇನ ಜಗತ್ಸೃಷ್ಟಂ ತ್ವಯ್ಯೈಕೇನ ಪ್ರಬೋಧಿತಂ ।
ತತೋ ವಿದ್ಯಾಧರಗಣಾ ಯಕ್ಷರಾಕ್ಷಸಪನ್ನಗಾಃ ॥ ೧೫ ॥

ಕೃತಾಂಜಲಿಪುಟಾಸ್ಸರ್ವೇ ಶಿರೋಭಿಃ ಪ್ರಣತಾ ರವಿಂ ।
ಊಚುರೇವಂವಿಧಾವಾಚೋ ಮನಃಶ್ರೋತ್ರಸುಖಪ್ರದಾಃ ॥ ೧೬ ॥

ಸಹ್ಯಂ ಭವತು ತೇ ತೇಜೋ ಭೂತಾನಾಂ ಭೂತಭಾವನ ।
ಹಾಹಾ ಹೂಹೂ ಸ್ತತಶ್ಚೈವ ತುಂಬುರು ರ್ನಾರದಸ್ತಥಾ ॥ ೧೭ ॥

---

೧೩. ನೀನು ಸರ್ವ ಭೂತಗಳಿಗೂ ಗತಿಯಾಗಿರುವೆ. ನಿನ್ನಲ್ಲಿಯೇ ಎಲ್ಲವೂ ನೆಲಸಿವೆ. ದೇವೇಶನಾದ ಜಗತ್ಪತಿಯೇ! ಪ್ರಜೆಗಳಿಗೂ ನಮಗೂ ಸುಖವಾಗಲಿ.

೧೪. ಜಗತ್ತು ಯಾವಾಗಲೂ ನಿನ್ನಿಂದಲೇ ಉತ್ಪತ್ತಿಯಾಗುವುದು. ನಿನ್ನಲ್ಲಿಯೇ ಲೀನವಾಗುವುದು. ನೀನು ಒಂದು ಬಗೆಯಾಗಿ, ಎರಡು ಬಗೆಯಾಗಿ, ಮೂರು ಬಗೆಯಾಗಿ, ಇದ್ದೀಯೆ. ಇದರಲ್ಲಿ ಸಂಶಯವಿಲ್ಲ.

೧೫. ನೀನೊಬ್ಬನೇ ಜಗತ್ತನ್ನು ಸೃಷ್ಟಿಸಿದೆ. ನೀನೊಬ್ಬನೇ ಅದಕ್ಕೆ ಚೇತನ ಕೊಟ್ಟೆ. ಎಂಬದಾಗಿ ಈ ರೀತಿ ಸ್ತೋತ್ರಮಾಡಿದರು.

೧೬. ಅನಂತರ ವಿದ್ಯಾಧರಸಮೂಹಗಳೂ, ಯಕ್ಷರೂ, ರಾಕ್ಷಸರೂ ಪನ್ನಗರೂ, ಕೈಮುಗಿದುಕೊಂಡು ತಲೆವಾಗಿ ಸೂರ್ಯನನ್ನು ಕುರಿತು, "ಪ್ರಾಣಿಗಳನ್ನುಂಟು ಮಾಡುವ (ಭೂತಭಾವನನಾದ) ಸೂರ್ಯನೇ! ನಿನ್ನ ತೇಜಸ್ಸು ಲೋಕಗಳಿಗೆಲ್ಲಾ ಸಹಿಸಲು ಅರ್ಹವಾಗಲಿ. ಎಂಬದಾಗಿ ಮನಸ್ಸಿಗೂ, ಕಿವಿಗೂ ಸುಖವುಂಟಾಗುವಂತೆ ಹೇಳಿದರು.

ಉಪಗಾತುಂ ಸಮಾರಬ್ಧಾ ಗಾಮುಚ್ಚೈಃ ಕುಶಲಾಂ ರವಿಂ ।
ಷಡ್ಜಮಧ್ಯಮಗಾಂಧಾರಗ್ರಾಮತ್ರಯವಿಶಾರದಾಃ ॥ ೧೮ ॥

ಮೂರ್ಛನಾಭಿಸ್ತತಶ್ಚೈವ ತಥಾ ಧೈವತಪಂಚಮೈಃ ।
ನಾನಾನುಭಾವಮಂದ್ರೈಶ್ಚ ಅರ್ಧಮಂದ್ರೈಸ್ತಥೈವ ಚ ॥ ೧೯ ॥

ತ್ರಿಸಾಧನೈಃ ಪ್ರಕಾರೈಸ್ತು ವಾದ್ಯತಾಲಸಮನ್ವಿತೈಃ ।
ವಿಶ್ವಾಚೀ ಚ ಘೃತಾಚೀ ಚ ಊರ್ವಶೀ ಚ ತಿಲೋತ್ತಮಾ ॥ ೨೦ ॥

ಮೇನಕಾ ಸಹಜನ್ಯಾ ಚ ರಂಭಾಚಾಪ್ಸರಸಾಂ ವರಾ ।
ಹಾವಭಾವವಿಲಾಸೈಶ್ಚ ಕುರ್ವತೇಽಭಿನಯಾನ್ಬಹೂನ್ ॥ ೨೧ ॥

ತತೋಽತೀವ ಕಲಂ ಗಾನಂ ಮಧುರಂ ಚ ಪ್ರವರ್ತತೇ ।
ಸರ್ವೇಷಾಂ ದೇವಸಂಘಾನಾಂ ಮನಃಶ್ರೋತ್ರಸುಖಪ್ರದಂ ॥ ೨೨ ॥

---

೧೮. ಆ ವೇಳೆ ಹಾ ಹಾ ಹೂ ಹೂ ಮುಂತಾದ ಗಂಧರ್ವ ಗಾಯಕರೂ, ತುಂಬುರನಾರದ ಮೊದಲಾದ ದೇವಗಾಯಕರೂ, ಎಲ್ಲರೂ ತಮ್ಮ ಕುಶಲತೆ (ಕೌಶಲ್ಯ) ಯನ್ನು ತೋರಿಸುತ್ತಾ ಸೂರ್ಯನ ಸಮೀಪದಲ್ಲಿ ಗಾನಮಾಡಲು ಸಿದ್ಧರಾಗಿ ತಕ್ಕ ಹಾಡಿನ ಸಾಹಿತ್ಯವನ್ನು ಷಡ್ಜ, ಮಧ್ಯಮ, ಗಾಂಧಾರ ಎಂಬ ಮೂರು ಸ್ವರ ಸಮೂಹವಲ್ಲೂ ಹಾಡಲು ಉಪಕ್ರಮಿಸಿದರು.

೧೯-೨೦. ಆ ಸ್ವರದ ಆರೋಹಣ ಅವರೋಹಣ ಕ್ರಮದಿಂದಲೂ ಧೈವತ, ಪಂಚಮ ಎಂಬ ಬೇರೆ ಸ್ವರ ಸಮೂಹಗಳಿಂದಲೂ, ಮಂದ್ರ ಅನುಮಂದ್ರ ಅರ್ಧ ಮಂದ್ರ ಮುಂತಾದ ಧ್ವನಿ ಗತಿ ಭೇದಗಳ ಮೂರುಸಾಧನಗಳಿಂದಲೂ, ಮೂರುಪ್ರಕಾರಗಳಿಂದಲೂ, ವಾದ್ಯ ತಾಳ ಇವುಗಳು ಹೊಂದಿಕೆಯಾಗುವಂತೆ ಗಾನಮಾಡಿದರು.

೨೧. ವಿಶ್ವಾಚೀ, ಘೃತಾಚೀ, ಊರ್ವಶೀ, ತಿಲೋತ್ತಮೆ, ಮೇನಕೆ, ಸಹಜನ್ಯೆ, ರಂಭೆ ಮೊದಲಾದ ಅಪ್ಸರಸ್ತ್ರೀಯರು ಹಾವಭಾವ ವಿಲಾಸಯುಕ್ತವಾಗಿ ನಾನಾ ಪ್ರಕಾರ ಅಭಿನಯ ಮಾಡುತ್ತಿದ್ದರು.

೨೨. ಈ ಪ್ರಕಾರವಾಗಿ ಅವ್ಯಕ್ತಮಧುರವಾದ ಗಾನವು ನಡೆಯುತ್ತಿತ್ತು. ಇದರಿಂದ ಸಮಸ್ತ ದೇವತಾ ಸಮೂಹಗಳ ಮನಸ್ಸಿಗೂ ಕಿವಿಗೂ ಸುಖವುಂಟಾಗುತ್ತಿದ್ದಿತು

ಪ್ರವಾದ್ಯಂ ತು ತತಸ್ತತ್ರ ವೀಣಾವಂಶಾದಿ ಸುವ್ರತ ।
ಪಣವಾಃ ಪುಷ್ಕರಾಶ್ಚೈವ ಮೃದಂಗಾಃ ಪಟಹಾಸ್ತಥಾ ॥ ೨೩ ॥

ದೇವದುಂದುಭಯಃ ಶಂಖಾಃ ಶತಶೋಽಥ ಸಹಸ್ರಶಃ ।
ಗಾಯದ್ಭಿಶ್ಚೈವ ಗಂಧರ್ವೈರ್ನೃತ್ಯದ್ಭಿಶ್ಚಾಪ್ಸರೋಗಣೈಃ ॥ ೨೪ ॥

ತೂರ್ಯವಾದಿತ್ರಘೋಷೈಶ್ಚ ಸರ್ವಂ ಕೋಲಾಹಲೀಕೃತಂ ।
ತತಃ ಕೃತೈಃ ಕರಪುಟೈಃ ಪದ್ಮಕುಡ್ಮಲಸನ್ನಿಭೈಃ ॥ ೨೫ ॥

ಲಲಾಟೋಪರಿ ವಿನ್ಯಸ್ತೈಃ ಪ್ರಣೇಮುಃ ಸರ್ವದೇವತಾಃ ।
ತತಃ ಕೋಲಾಹಲೇ ತಸ್ಮಿನ್ಸರ್ವದೇವಸಮಾಗಮೇ ॥ ೨೬ ॥

ತೇಜಸಃ ಶಾತನಂ ಚಕ್ರೇ ವಿಶ್ವಕರ್ಮಾ ಶನೈಃ ಶನೈಃ ॥ ೨೭ ॥

---

೨೩. ಅಯ್ಯಾ ಸುವ್ರತನೇ! ಅಲ್ಲಿ ವೀಣೆ, ಕೊಳಲು ಮುಂತಾದ ಉತ್ತಮವಾದ ವಾದ್ಯಗಳೂ ಢಕ್ಕೆ, ಡಮರುಗ, ಮೃದಂಗ, ತಮಟೆ, ದೇವದುಂದುಭಿ, ಶಂಖ ಇವುಗಳೂ ನೂರುಗಟ್ಟಲೆ ಸಾವಿರಗಟ್ಟಲೆಯಾಗಿ ಧ್ವನಿಮಾಡಲ್ಪಡುತ್ತಿದ್ದುವು.

೨೪. ಗಂಧರ್ವರು ಗಾನಮಾಡುತ್ತಿರುವ ಧ್ವನಿ, ಅಪ್ಸರಸ್ತ್ರೀಸಮೂಹದ ನರ್ತನಧ್ವನಿ, ಓಲಗ ಮುಂತಾದ ವಾದ್ಯಧ್ವನಿ ಎಲ್ಲವೂ ಸೇರಿ ಕೋಲಾಹಲಮಯವಾಗಿದ್ದಿತು.

೨೫. ತಾವರೆಯ ಮೊಗ್ಗುಗಳಂತೆ ಮುಗಿದ ಕೈಗಳನ್ನು ಹಣೆಯ ಪ್ರದೇಶದಲ್ಲಿಟ್ಟುಕೊಂಡು ಸಮಸ್ತ ದೇವತೆಗಳೂ ನಮಸ್ಕಾರಮಾಡಿದರು.

೨೬. ಎಲ್ಲಾ ದೇವತೆಗಳೂ ಸೇರಿರುವುದರಿಂದ ಆಗುತ್ತಿರುವ ಆ ಗದ್ದಲದಲ್ಲಿ ವಿಶ್ವಕರ್ಮನು ಸ್ವಲ್ಪಸ್ವಲ್ಪವಾಗಿ (ನಿಧಾನವಾಗಿ) ಸೂರ್ಯನ ತೇಜಸ್ಸನ್ನು ಕಡೆದು ಸಾಣೆ ಹಿಡಿದನು.

ಇತಿ ಹಿಮಜಲಘರ್ಮಕಾಲಹೇತೋಃ
ಹರಕಮಲಾಸನವಿಷ್ಣುಸಂಸ್ತುತಸ್ಯ ।
ತದುಪರಿ ಲಿಖನಂ ನಿಶಮ್ಯ ಭಾನೋಃ
ವ್ರಜತಿ ದಿವಾಕರಲೋಕಮಾಯುಷೋಽಂತೇ ॥ ೨೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ ವಿಶ್ವಕರ್ಮಕೃತ ಸೂರ್ಯತೇಜಶ್ಶಾತನಂ ನಾಮ ಏಕವಿಂಶೋತ್ತರ ಶತತಮೋಽಧ್ಯಾಯಃ



೨೭-೨೮. ಮಳೆಗಾಲ, ಚಳಿಗಾಲ, ಬೇಸಿಗೆಕಾಲಗಳಿಗೆ ಕಾರಣನಾಗಿರುವವನೂ; ಶಿವ, ಬ್ರಹ್ಮ, ವಿಷ್ಣುಗಳಿಂದ ಸ್ತೋತ್ರಮಾಡಲ್ಪಟ್ಟವನೂ; ಆದ ಸೂರ್ಯನ ಹೊರ ಮೈಯನ್ನು ಲೇಖನಮಾಡಿದ ವಿಚಾರವನ್ನು ಕೇಳಿದವನು ದೇಹತ್ಯಾಗಾನಂತರ ಸೂರ್ಯಲೋಕಕ್ಕೆ ಹೋಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ವಿಶ್ವಕರ್ಮನು ಸೂರ್ಯನಿಗೆ ಸಾಣೆಮಾಡಿದುದು ಎಂಬ ನೂರಿಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ದ್ವಾವಿಂಶೋತ್ತರಶತತಮೋಽಧ್ಯಾಯಃ

॥ ಶತಾನೀಕ ಉವಾಚ ॥

ತಸ್ಮಿನ್ ಕಾಲೇ ಸಮಾರೂಢೋ ಲಿಖ್ಯಮಾನೋ ದಿವಸ್ಪತಿಃ ।
ಬ್ರಹ್ಮಾದಿಭಿಃ ಸ್ತುತೋ ದೇವೈರ್ಯಥಾ ವ್ನೈ ತದ್ವದಸ್ವ ಮೇ ॥ ೧ ॥

॥ ಸುಮಂತುರುವಾಚ ॥

ಶೃಣುಷ್ವೈಕಮನಾ ರಾಜನ್ ಯಥಾ ದೇವೋ ದಿವಸ್ಪತಿಃ ।
ಬ್ರಹ್ಮಾದಿಭಿಃ ಸ್ತುತೋ ದೇವೈ ಋಷಿಭಿಶ್ಚ ಪುರಾನಘಃ ॥ ೨ ॥

ಪ್ರಯತ್ನತಃ ಪ್ರಣತಹಿತಾನುಕಂಪಿನೇ ।
ಸ್ವರೂಪತೋ ಲೋಕವಿಭಾವಿನೇ ನಮಃ ।

---

## ನೂರಇಪ್ಪತ್ತೆರಡನೆಯ ಅಧ್ಯಾಯ

೧. ಶತಾನೀಕ ರಾಜನು ಹೇಳುತ್ತಾನೆ—ಸೂರ್ಯನನ್ನು ಯಂತ್ರಕ್ಕೆ ಏರಿಸಿ ಸಾಣೆ ಹಿಡಿಯುವಕಾಲದಲ್ಲಿ ಬ್ರಹ್ಮಾದಿದೇವತೆಗಳು ಸ್ತುತಿಸಿದ ಪ್ರಕಾರವನ್ನು ನನಗೆ ಹೇಳು ಎಂದನು.

೨. ಸುಮಂತುಮುನಿವರ್ಯರು ಹೇಳುತ್ತಾರೆ—ಪ್ರಭುವೇ! ಅನಘನೂ, ದಿವಸ್ಪತಿಯೂ ಆದ ಸೂರ್ಯದೇವನನ್ನು ಬ್ರಹ್ಮಾದಿಗಳೂ, ಋಷಿಗಳೂ ಸ್ತುತಿಸಿದ ರೀತಿಯನ್ನು ಒಂದೇ ಮನಸ್ಸಿನಿಂದ ಕೇಳು.

೩. ಪ್ರಯತ್ನಪೂರ್ವಕವಾಗಿ ನಮಿಸಿದವರಿಗೆ ಹಿತಕರನೂ, ದಯಾಳುವೂ, ಲೋಕಗಳು ನಿಜರೂಪದಲ್ಲಿ ಚೆನ್ನಾಗಿ ನಿಲ್ಲುವಂತೆ ಮಾಡುವವನೂ, ಆದ ಸೂರ್ಯನಿಗೆ

ದಿವಸ್ಪತೇ ಕಮಲಕುಲಾವಬೋಧಿನೇ ।
ನಮಸ್ತಮಃಪಟಲಪಟಾವಪಾಟಿನೇ ॥ ೩ ॥

ಪಾವನಾತಿಶಯಪುಣ್ಯಕರ್ಮಣೇ ।
ನೈಕಕಾಮವಿಭವಪ್ರದಾಯಿನೇ ।
ಭಾಸುರಾಮಲಮಯೂಖಮಾಲಿನೇ ।
ಸರ್ವಲೋಕಹಿತಕಾರಿಣೇ ನಮಃ ॥ ೪ ॥

ಅಜಾಯ ಲೋಕತ್ರಯಭಾವನಾಯ ।
ಭೂತಾತ್ಮನೇ ಗೋಪತಯೇ ಪ್ರಿಯಾಯ ।
ನಮೋ ಮಹಾಕಾರುಣಿಕೋತ್ತಮಾಯ ।
ಸೂರ್ಯಾಯ ಲೋಕತ್ರಯಭಾವನಾಯ ॥ ೫ ॥

ವಿವಸ್ವತೇ ಜ್ಞಾನಕೃದಂತರಾತ್ಮನೇ ।
ಜಗತ್ಪ್ರತಿಷ್ಠಾಯ ಜಗದ್ಧಿತೈಷಿಣೇ ।
ಸ್ವಯಂಭುವೇ ಲೋಕಸಮಸ್ತಚಕ್ಷುಷೇ ।
ಸುರೋತ್ತಮಾಯಾಮಿತತೇಜಸೇ ನಮಃ ॥ ೬ ॥

---

ನಮಸ್ಕಾರ. ಕಮಲದಸಮೂಹವನ್ನು ವಿಕಾಸಪಡಿಸುವವನೂ, ಅಂಧಕಾರಸಮೂಹವೆಂಬ ಬಟ್ಟೆಯನ್ನು ಸೀಳಿ ಎಸೆಯುವವನೂ ಆದ ಸೂರ್ಯನಿಗೆ ನಮಸ್ಕಾರ.

೪. ಪರಿಶುದ್ಧವೂ, ಅತಿಶಯ ಪುಣ್ಯಕರವೂ ಆದ ಕರ್ಮವುಳ್ಳವನೂ, ಇಷ್ಟವಾದ ಅನೇಕ ಸಂಪತ್ತುಗಳನ್ನು ಕೊಡುವವನೂ, ಪ್ರಕಾಶಮಾನವೂ ನಿರ್ಮಲವೂ ಆದ ಕಿರಣವನ್ನು ಮಾಲಾರೂಪವಾಗಿ ಧರಿಸಿದವನೂ, ಸರ್ವಲೋಕಗಳಿಗೂ ಹಿತವನ್ನು ಉಂಟುಮಾಡತಕ್ಕವನೂ, ಆದ ಸೂರ್ಯದೇವನಿಗೆ ನಮಸ್ಕಾರ.

೫. ಜ್ಞಾನವನ್ನು ಉಂಟುಮಾಡುವ ಅಂತರಾತ್ಮವುಳ್ಳವನೂ, ಸ್ಪಷ್ಟವಾಗಿ ಅಳಿಯುವ ಈ ಲೋಕದಲ್ಲಿ ನಾಶವಾಗದೇ ಸ್ಥಿರವಾಗಿ ನಿಂತಿರುವವನೂ, ಸಮಸ್ತ ಲೋಕಗಳಿಗೂ ಕಣ್ಣಾಗಿರುವವನೂ, ದೇವತೆಗಳಲ್ಲಿ ಶ್ರೇಷ್ಠನೂ, ಅಳತೆಗೆ ಸಿಕ್ಕದ ತೇಜಸ್ಸುಳ್ಳವನೂ ಆದ ಸೂರ್ಯದೇವನಿಗೆ ನಮಸ್ಕಾರ.

ನಿಜೋದಯಾಯ ಸುರಗಣಮೌಲಿಪದೇ ।
ಜಗತಾಂ ತ್ವಂ ಮಹಿತಸ್ತ್ವಮುರುಮಯೂಖಸಹಸ್ರತಪಃ ।
ಜಗತಿ ವಿಭೋಽವ ತಮಸಸ್ತ್ವದ ಘನತಿಮಿರಾಸವ
ಪಾನ ಮದಾದ್ಭವತಿ ವಿಲೋಹಿತ ವಿಗ್ರಹತಾತಿ ತಿಮಿರವಿನಾಶಿನಮುಗ್ರಂ
ಸುತರಾಂ ತ್ರಿಭುವನ ಭಾಪ್ರಕರೈಃ ।
ರಥಮಾರುಹ್ಯ ಸಮಾಮಯಂ ।
ಭ್ರಮತಿ ಸದಾ ಜಗತೋ ಹಿತದಃ ॥ ೮ ॥

ಇತ್ಯೇವಂ ಸಂಸ್ತುತೋ ದೇವೋ ಭಾಸ್ಕರೋ ವೇಧಸಾ ಪುರಾ ।
ದೈವತೈಶ್ಚ ಮಹಾಬಾಹೋ ಶಿವವಿಷ್ಣ್ವಾದಿಭಿರ್ನೃಪ ॥ ೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ
ಆದಿತ್ಯಸ್ತವೋ ನಾಮ ದ್ವಾವಿಂಶೋತ್ತರ ಶತತಮೋಽಧ್ಯಾಯಃ

---

೭. ನೀನು ಸ್ವಯಂ ಪ್ರಕಾಶನೂ, ದೇವತಾಸಮೂಹಗಳ ಕಿರೀಟದಲ್ಲಿ ಸ್ಥಾನವನ್ನು ಹೊಂದಿರತಕ್ಕವನೂ, ಜಗತ್ತಿನಿಂದ ಪೂಜಿತನಾದವನೂ, ಆಗಿರುವೆಯಲ್ಲದೆ ಸಹಸ್ರ ಕಿರಣಗಳಿಂದ ತಪಿಸತಕ್ಕವನೂ, ಲೋಕದ ಕತ್ತಲೆಯನ್ನು ಹೋಗಲಾಡಿಸಬಲ್ಲ ವಿಭುವೂ ಆಗಿದ್ದೀಯೆ.

೮. ಘನವಾದ ಕತ್ತಲೆ ಎಂಬ ಮದ್ಯವನ್ನು ಪಾನಮಾಡಿದುದರಿಂದ ಉಂಟಾದ ಮದದಿಂದ ಶರೀರವೆಲ್ಲಾ ಕೆಂಪು ಕಾಂತಿಯುಳ್ಳವನಾಗಿರುವೆ. ಕತ್ತಲೆಯನ್ನು ಹೋಗಲಾಡಿಸುವವನೂ, ಮೂರುಲೋಕದಲ್ಲಿ ವ್ಯಾಪಿಸಿರುವ ಕಾಂತಿಸಮೂಹಗಳಿಂದ ವಿಶೇಷವಾಗಿ ಉಗ್ರನೂ, ಕಾಂತಿಪ್ರಚುರವಾದ ರಥವನ್ನೇರಿಕೊಂಡು ಲೋಕಕ್ಕೆ ಸದಾ ಹಿತವನ್ನು ಉಂಟುಮಾಡುವವನೂ ಆಗಿ ತಿರುಗುತ್ತಿದ್ದೀ.

೯. ಎಲೈ ಮಹಾಬಾಹುವಾದ ನೃಪನೇ! ಪೂರ್ವದಲ್ಲಿ ಶಿವ ವಿಷ್ಣು ಮೊದಲಾದ ದೇವತೆಗಳೂ, ಬ್ರಹ್ಮನೂ ಈ ಪ್ರಕಾರವಾಗಿ ಸ್ತೋತ್ರಮಾಡಿದರು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ
ಆದಿತ್ಯಸ್ತೋತ್ರವೆಂಬ ನೂರಇಪ್ಪತ್ತೆರಡನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ತ್ರಯೋವಿಂಶತ್ಯುತ್ತರಶತತಮೋಽಧ್ಯಾಯಃ

---

॥ ಶತಾನೀಕ ಉವಾಚ ॥

ಭೂಯೋಽಪಿ ಕಥಯಸ್ವೇಮಾಂ ಕಥಾಂ ಸೂರ್ಯಸಮಾಶ್ರಯಾಂ ।
ನ ತೃಪ್ತಿಮುಪ ಗಚ್ಛಾಮಿಶೃಣ್ವನ್ನೇತಾಂ ಕಥಾಂ ಮುನೇ ॥ ೧ ॥

॥ ಸುಮಂತುರುವಾಚ ॥

ಭಾಸ್ಕರಸ್ಯ ಕಥಾಂ ಪುಣ್ಯಾಂ ಸರ್ವಪಾಪಪ್ರಣಾಶಿನೀಂ ।
ವಕ್ಷ್ಯಾಮಿ ಕಥಿತಾಂ ಪೂರ್ವಂ ಬ್ರಹ್ಮಣಾ ಲೋಕಕರ್ತೃಣಾ ॥ ೨ ॥

ಋಷಯಃ ಪರಿಪೃಚ್ಛಂತಿ ಬ್ರಹ್ಮಲೋಕೇ ಪಿತಾಮಹಂ ।
ತಾಪಿತಾಃ ಸೂರ್ಯಕಿರಣೈಃ ತೇಜಸಾ ಸಂಪ್ರಮೋಹಿತಾಃ ॥ ೩ ॥

---

### ನೂರಇಪ್ಪತ್ತಮೂರನೆಯ ಅಧ್ಯಾಯ

೧. ಶತಾನೀಕ ರಾಜನು ಹೇಳುತ್ತಾನೆ—ಎಲೈ ಮುನಿಯೇ ಸೂರ್ಯನ ವಿಚಾರವಾದ ಈ ಕಥೆಯನ್ನು ಮತ್ತೆಯೂ ಹೇಳು.ಎಷ್ಟುಸಾರಿ ಕೇಳಿದರೂ ನನಗೆ ತೃಪ್ತಿಯೇ ಆಗುತ್ತಿಲ್ಲ ಎಂದನು.

೨. ಸುಮಂತು ಮುನಿವರ್ಯರು ಹೇಳುತ್ತಾರೆ—ಪೂರ್ವದಲ್ಲಿ ಲೋಕಕರ್ತೃವಾದ ಬ್ರಹ್ಮನು ಹೇಳಿದುದೂ, ಸರ್ವಪಾಪಹರವೂ, ಪುಣ್ಯಪ್ರದವೂ, ಆದ ಸೂರ್ಯನ ಕಥೆಯನ್ನು ಹೇಳುವೆನು.

೩. ಸೂರ್ಯಕಿರಣದಿಂದ ತಾಪಹೊಂದಿ ಸೂರ್ಯತೇಜಸ್ಸಿನಿಂದ ಮೂರ್ಛಿತರಾದ ಋಷಿಗಳು ಬ್ರಹ್ಮಲೋಕದಲ್ಲಿದ್ದ ಬ್ರಹ್ಮನನ್ನು ಕುರಿತು ಈ ರೀತಿ ಪ್ರಶ್ನಿಸಿದರು.

॥ ಋಷಯ ಊಚುಃ ॥
ಕೋಽಯಂ ದೀಪ್ತೋ ಮಹಾತೇಜಾ ಹವಿರ್ರಾಶಿಸಮಪ್ರಭಃ ।
ಏತದ್ವೇದಿತುಮಿಚ್ಛಾಮಃ ಪ್ರಭಾವೋಽಸ್ಯ ಕುತಃ ಪ್ರಭೋ ॥ ೪ ॥

॥ ಬ್ರಹ್ಮೋವಾಚ ॥
ತಮೋಭೂತೇಷು ಲೋಕೇಷು ನಷ್ಟೇ ಸ್ಥಾವರಜಂಗಮೇ ।
ಪ್ರವೃತ್ತೇ ಗುಣಹೇತುತ್ವೇ ಪೂರ್ವಂ ಬುದ್ಧಿರಜಾಯತ ॥ ೫ ॥

ಅಹಂಕಾರಸ್ತತೋ ಜಾತಃ ಮಹಾಭೂತವರ್ತಕಃ ।
ವಾಯುರಗ್ನಿರಥಾಪಃ ಖಂ ಭೂಸ್ತತೋಽಂಡಮಜಾಯತ ॥ ೬ ॥

ತಸ್ಮಿನ್ನಂಡ ಇಮೇಲೋಕಾಃ ಸಪ್ತ ವೈ ಸಂಪ್ರತಿಷ್ಠಿತಾಃ ।
ಪೃಥ್ವೀ ಚ ಸಪ್ತಭಿರ್ದ್ವೀಪೈಃ ಸಮುದ್ರೈಶ್ಚಾಪಿ ಸಪ್ತಭಿಃ ॥ ೭ ॥

---

೪. ಋಷಿಗಳು ಹೇಳುತ್ತಾರೆ—ಅಯ್ಯಾ ಪ್ರಭುವೇ ! ಹವಿಸ್ಸನ್ನು ಭುಂಜಿಸುವವನು ಅಗ್ನಿಗೆ ಸಮನಾದ ಪ್ರಭೆಯುಳ್ಳವನೂ, ಮಹಾತೇಜಸ್ಸುಳ್ಳವನೂ ಆದ ಇವನು ಯಾರು ? ಇವನಿಗೆ ಈ ಪ್ರಭಾವವು ಎಲ್ಲಿಂದ ಬಂದಿತು ? ಮತ್ತು ಹೇಗೆ ಬಂದಿತು ? ಈ ವಿಚಾರವನ್ನು ತಿಳಿಯಲು ಅಪೇಕ್ಷಿಸುತ್ತೇವೆ (ಎಂದರು.)

೫. ಬ್ರಹ್ಮನು ಹೇಳುತ್ತಾನೆ—ಲೋಕವೆಲ್ಲಾ ಕತ್ತಲೆಯಿಂದ ತುಂಬಿ ಚರಾಚರವಸ್ತುಗಳು ಕಾಣದೇ ಇರಲು ಸತ್ವಾದಿಗುಣಗಳಿಗೆ ಜಗತ್ಕಾರಣತ್ವವುಂಟಾಗಲು ಮೊದಲು ಬುದ್ಧಿಯು ಸೃಷ್ಟವಾಯಿತು.

೬. ಅದರಿಂದ ಸ್ಥೂಲಭೂತಸೃಷ್ಟಿಕಾರಿಯಾದ ಅಹಂಕಾರವು ಹುಟ್ಟಿತು. ಆಮೇಲೆ ಪ್ರಥಮದಲ್ಲಿ ಆಕಾಶ ಸೃಷ್ಟಿಯಾಯ್ತು. ಆಕಾಶದಿಂದ ವಾಯುವೂ, ವಾಯುವಿನಿಂದ ಅಗ್ನಿಯೂ, ಅಗ್ನಿಯಿಂದ ಜಲವೂ, ಜಲದಿಂದ ಭೂಮಿಯೂ ಉತ್ಪನ್ನವಾಯಿತು.

೭. ಭೂಮಿಯ ಹೊರಗೆ ಬ್ರಹ್ಮಾಂಡವು ಏರ್ಪಟ್ಟಿತು. ಆ ಅಂಡಮೊಳಗೆ ಈ ಏಳು ಲೋಕಗಳೂ ಸೃಷ್ಟಿಯಾಗಿವೆ. ಅವುಗಳಲ್ಲಿ ಭೂಲೋಕವು ಸಪ್ತದ್ವೀಪಗಳಿಂದಲೂ, ಏಳು ಸಮುದ್ರಗಳಿಂದಲೂ ಕೂಡಿದ್ದಾಗಿದೆ.

ತತ್ರೈವಾವಸ್ಥಿತಾಹ್ಯಾಸನ್ಮ ಅಹಂ ವಿಷ್ಣುರ್ಮಹೇಶ್ವರಃ ।
ಪ್ರಮೂಢಾಸ್ತಮಸಾ ಸರ್ವೇ ಪ್ರಧ್ಯಾತಾ ಈಶ್ವರಂ ಪರಂ ॥ ೮ ॥

ತತೋ ಭಿತ್ವಾ ಮಹಾತೇಜಃ ಪ್ರಾದುರ್ಭೂತಂ ತಮೋಮಯಂ ।
ಧ್ಯಾನಯೋಗೇನ ಚಾಸ್ಮಾಭಿರ್ವಿಜ್ಞಾತಂ ಸವಿತುಸ್ತಥಾ ॥ ೯ ॥

ಜ್ಞಾತ್ವಾ ಚ ಪರಮಾತ್ಮಾನಂ ಸರ್ವಏವ ಪೃಥಕ್ಪೃಥಕ್ ।
ದಿವ್ಯಾಭಿಸ್ತುತಿಭಿರ್ದೇವಂ ಸಮ್ಯಕ್ ಸ್ತೋತುಂ ಸಮುದ್ಯತಾಃ ॥ ೧೦ ॥

ಆದಿದೇವೋಽಸಿ ದೇವಾನಾಂ ಈಶ್ವರಾಣಾಂ ತ್ವಮೀಶ್ವರಃ ।
ಆದಿಕರ್ತಾಸಿ ಭೂತಾನಾಂ ದೇವದೇವ ಸನಾತನ ॥ ೧೧ ॥

ಜೀವನಂ ಸರ್ವಸತ್ವಾನಾಂ ದೇವಗಂಧರ್ವರಕ್ಷಸಾಂ ।
ಮುನಿಕಿನ್ನರಸಿದ್ಧಾನಾಂ ತಥೈವೋರಗಪಕ್ಷಿಣಾಂ ॥ ೧೨ ॥

---

೮. ವಿಷ್ಣು, ಮಹೇಶ್ವರ, ನಾನು ಎಲ್ಲರೂ ಅಲ್ಲಿಯೇ ಇದ್ದೆವು. ಹಾಗೆ ಅಲ್ಲಿದ್ದ ನಾವೆಲ್ಲರೂ ಕತ್ತಲೆಯಿಂದ ಆವೃತರಾಗಿ ಪರಬ್ರಹ್ಮವನ್ನು (ಶ್ರೇಷ್ಠನಾದ ಈಶ್ವರ) ಧ್ಯಾನಿಸುತ್ತಿದ್ದೆವು.

೯. ಆ ಮೇಲೆ ಅಂಧಕಾರವನ್ನು ಭೇದಿಸಿಕೊಂಡು ಮಹತ್ತಾದ ಒಂದು ಅವ್ಯಕ್ತತೇಜಸ್ಸು ಗೋಚರವಾಯಿತು. ದಿವ್ಯಜ್ಞಾನದಿಂದ ನಾವು ಆ ಚೇತನವನ್ನು ಸವಿತೃವೆಂದು ತಿಳಿದುಕೊಂಡೆವು.

೧೦. ನಾವೆಲ್ಲರೂ ಅವೇ ಪರಮಾತ್ಮನೆಂದೂ ತಿಳಿದುಕೊಂಡೆವು, ಎಲ್ಲರೂ ಬೇರೆ ಬೇರೆಯಾಗಿ ದೇವಯೋಗ್ಯವಾದ ಸ್ತೋತ್ರಗಳಿಂದ ದೇವನನ್ನು ಹೀಗೆ ಸ್ತೋತ್ರ ಮಾಡಲು ಉದ್ಯುಕ್ತರಾದೆವು.

೧೧. ನೀನು ದೇವತೆಗಳಿಗೆಲ್ಲಾ ಆದಿದೇವನಾಗಿದ್ದೀಯೆ. ಈಶ್ವರರಿಗೆಲ್ಲಾ ಈಶ್ವರನಾಗಿದ್ದೀ. ಎಲೈ ಪುರಾಣಪುರುಷನಾದ ದೇವದೇವನೇ! ಪ್ರಾಣಿಗಳಿಗೆಲ್ಲಾ ನೀನು ಆದಿಕರ್ತೃವಾಗಿದ್ದೀ.

೧೨. ದೇವತೆಗಳು, ಗಂಧರ್ವರು, ರಾಕ್ಷಸರು, ಮುನಿಗಳು, ಕಿನ್ನರರು, ಸಿದ್ಧರು, ಉರಗಗಳು, ಪಕ್ಷಿಗಳು ಮುಂತಾದ ಸರ್ವ ಪ್ರಾಣಿಗಳಿಗೂ ಜೀವನಕಾರಣನು ಆಗಿರುತ್ತೀ.

ತ್ವಂ ಬ್ರಹ್ಮಾ ತ್ವಂ ಮಹಾದೇವ ತ್ವಂ ವಿಷ್ಣುಸ್ತ್ವಂ ಪ್ರಜಾಪತಿಃ ।
ವಾಯುರಿಂದ್ರಶ್ಚ ಸೋಮಶ್ಚ ವಿವಸ್ವಾನ್ವರುಣಸ್ತಥಾ ।
ತ್ವಂ ಕಾಲಃ ಸೃಷ್ಟಿಕರ್ತಾ ಚ ಹರ್ತಾ ತ್ರಾತಾ ಪ್ರಭುಸ್ತಥಾ ॥ ೧೩ ॥

ಸರಿತಃ ಸಾಗರಾಃ ಶೈಲಾ ವಿದ್ಯುದಿಂದ್ರಧನೂಂಷಿ ಚ ।
ಪ್ರಲಯಃ ಪ್ರಭವಶ್ಚೈವ ವ್ಯಕ್ತಾವ್ಯಕ್ತಃ ಸನಾತನಃ ॥ ೧೪ ॥

ಈಶ್ವರಾತ್ಪರತೋ ವಿದ್ಯಾ ವಿದ್ಯಾಯಾಃ ಪರತಃ ಶಿವಃ ।
ಶಿವಾತ್ಪರತರೋ ದೇವಸ್ತ್ವಮೇವ ಪರಮೇಶ್ವರಃ ॥ ೧೫ ॥

ಸರ್ವತಃ ಪಾಣಿಪಾದಸ್ತ್ವಂ ಸರ್ವತೋಽಕ್ಷಿಶಿರೋ ಮುಖಃ ।
ಸಹಸ್ರಾಂಶುಸ್ತ್ವಂ ತು ದೇವ ಸಹಸ್ರಕಿರಣಸ್ತಥಾ ॥ ೧೬ ॥

ಭೂರಾದಿರ್ಭೂರ್ಭುವಃ ಸ್ವಶ್ಚ ಮಹರ್ಜನತಪಸ್ತಥಾ ।
ಪ್ರದೀಪ್ತಂ ದೀಪ್ತಿಮನ್ನಿತ್ಯಂ ಸರ್ವಲೋಕಪ್ರಕಾಶಕಂ ।
ದುರ್ನಿರೀಕ್ಷ್ಯಂ ಸುರೇಂದ್ರಾಣಾಂ ಯದ್ರೂಪಂ ತಸ್ಯ ತೇ ನಮಃ ॥ ೧೭ ॥

---

೧೩-೧೪. ನೀನೇ-ಬ್ರಹ್ಮ, ನೀನೇ ರುದ್ರ, ನೀನೇ ಪ್ರಜಾಪತಿಯಾದ ವಿಷ್ಣುವು, ವಾಯು, ಇಂದ್ರ, ಚಂದ್ರ, ವಿವಸ್ವಂತ, ವರುಣ ಇವರೆಲ್ಲರೂ ನೀನೇ. ಕಾಲಪುರುಷ, ಸೃಷ್ಟಿಕರ್ತ, ಸೃಷ್ಟರಕ್ಷಕ, ಸೃಷ್ಟನಾಶಕ, ಸೃಷ್ಟಿಗೊಡೆಯ ಎಲ್ಲವೂ ನೀನೇ. ನದಿ, ಸಮುದ್ರ, ಬೆಟ್ಟ, ಮಿಂಚು, ಕಾಮನಬಿಲ್ಲು ಎಲ್ಲವೂ ನೀನೇ. ಎಲ್ಲವನ್ನೂ ನಾಶಮಾಡ ತಕ್ಕವನೂ, ಮತ್ತು ಉತ್ಪನ್ನಮಾಡತಕ್ಕವನೂ, ವ್ಯಕ್ತವಾಗಿರುವ ಅಧಿಷ್ಠಾನವೂ, ಸ್ವಯಂ ಅವ್ಯಕ್ತನೂ, ಪುರಾತನನೂ, ನೀನೇ ಆಗಿರುವೆ.

೧೫. ವಿದ್ಯೆ ಎಂಬುದು ಈಶ್ವರನಿಗಿಂತ ಪರವಾಗಿರುವುದು. ಶಿವನು ವಿದ್ಯೆಗಿಂತ ಪರನಾಗಿರುವನು. ಎಲೈ ಪರಮೇಶ್ವರನಾದ ಸೂರ್ಯನೇ! ಆ ಶಿವನಿಗಿಂತ ನೀನೇ ಅತ್ಯಂತ ಶ್ರೇಷ್ಠನಾಗಿ ಪ್ರಕಾಶಿಸುವೆ.

೧೬. ಎಲ್ಲಾ ಕಡೆಯಲ್ಲಿಯೂ ಕಾಲುಗಳು, ಎಲ್ಲಕಡೆಯಲ್ಲಿಯೂ ಕೈಗಳು, ಎಲ್ಲಕಡೆಯಲ್ಲಿಯೂ ಕಣ್ಣುಗಳು, ಎಲ್ಲಕಡೆ ಶಿರಸ್ಸುಗಳು, ಎಲ್ಲಕಡೆಯೂ ಮುಖಗಳು ಉಳ್ಳವನು ನೀನೇ ; ಸಹಸ್ರಾಂಶುವೂ, ಸಹಸ್ರಕಿರಣನೂ ನೀನೇ ಆಗಿದ್ದೀ.

೧೭. ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹೋಲೋಕ, ಜನೋಲೋಕ, ತಪೋಲೋಕ, ಸತ್ಯಲೋಕಗಳಲ್ಲಿ ಪ್ರತಿಯೊಂದೂ ನೀನೇ

**ಸುರಸಿದ್ಧಗಣೈರ್ಜುಷ್ಟಂ ಭೃಗ್ವತ್ರಿಪುಲಹಾದಿಭಿಃ ।**
**ಶುಭಂ ಪರಮಮವ್ಯಗ್ರಂ ಯದ್ರೂಪಂ ತಸ್ಯ ತೇ ನಮಃ ॥ ೧೮ ॥**

**ಪಂಚಾತೀತಸ್ಥಿತಂ ತದ್ವೈ ದಶೈಕಾದಶ ಏವ ಚ ।**
**ಅರ್ಧಮಾಸಮತಿಕ್ರಮ್ಯ ಸ್ಥಿತಂ ತತ್ಸೂರ್ಯಮಂಡಲೇ ।**
**ತಸ್ಮೈ ರೂಪಾಯ ವೈ ದೇವ ಪ್ರಣತಾಃ ಸರ್ವದೇವತಾಃ ॥ ೧೯ ॥**

**ವಿಶ್ವಕೃದ್ವಿಶ್ವ ಭೂತಂ ಚ ವಿಶ್ವಾನರ ಸುರಾರ್ಚಿತಂ ।**
**ವಿಶ್ವಸ್ಥಿತಮಚಿಂತ್ಯಂ ಚ ಯದ್ರೂಪಂ ತಸ್ಯ ತೇ ನಮಃ ॥ ೨೦ ॥**

---

ಆಗಿದ್ದೀ. ಕಣ್ಣುಕೋರೈಸುವ ಹೊಳಪೂ, ನಿತ್ಯವಾದ ಪ್ರಕಾಶವೂ, ಲೋಕಗಳನ್ನೆಲ್ಲಾ ಬೆಳಗಿಸುವಂತಹ ಕಾಂತಿಯೂ, ದೇವಶ್ರೇಷ್ಠರಿಗೂ ಕೂಡ ದೃಷ್ಟಿಸಿ ನೋಡಲು ಸಾಧ್ಯವಲ್ಲದ ತೇಜಸ್ಸೂ, ಇವುಗಳಿಂದ ಕೂಡಿದ ರೂಪವುಳ್ಳ ನಿನಗೆ ನಮಸ್ಕಾರ.

೧೮. ದೇವತೆಗಳು, ಸಿದ್ಧರು, ಭೃಗು, ಅತ್ರಿ, ಪುಲಹ ಇವರುಗಳೂ ಯಾವ ನಿನ್ನ ರೂಪವನ್ನು ಸೇವಿಸಿದರೋ ಅಂತಹ ಶುಭಕರವೂ, ಶ್ರೇಷ್ಠವೂ, ನಿರ್ವ್ಯಾಕುಲವೂ ಆದ ರೂಪಿನಿಂದ ಕೂಡಿರುವ ನಿನಗೆ ನಮಸ್ಕಾರ.

೧೯. ಜ್ಞಾನೇಂದ್ರಿಯ ದೃಷ್ಟಿಯಿಂದ ಮಾತ್ರ ಹೇಳುವಾಗ ಚಕ್ಷುರಾದಿ ಪಂಚ ಜ್ಞಾನೇಂದ್ರಿಯಗಳಿಗೆ (ಅತೀತ) ಮೀರಿರತಕ್ಕದ್ದು ಎಂದೂ, ಕರ್ಮೇಂದ್ರಿಯ ಜ್ಞಾನೇಂದ್ರಿಯಗಳೆಲ್ಲವನ್ನೂ ಕೂಡಿಸಿದ ದೃಷ್ಟಿಯಿಂದ ಹೇಳುವಾಗ ದಶೇಂದ್ರಿಯಾತೀತವೆಂತಲೂ. ಮನಸ್ಸನ್ನೂ ಸೇರಿಸಿಕೊಂಡು ಏಕಾದಶೇಂದ್ರಿಯ ದೃಷ್ಟಿಯಿಂದ ವ್ಯವಹರಿಸುವಾಗ ಏಕಾದಶೇಂದ್ರಿಯಾತೀತವೆಂದೂ ಹೇಳಿಸಿಕೊಳ್ಳುವುದಾಗಿ ಅರ್ಧ ತಿಂಗಳಿಗಿಂತ ಹೆಚ್ಚುಕಾಲದವರೆಗೆ ಸೂರ್ಯಮಂಡಲದಲ್ಲಿ ಯಾವುದಿದೆಯೋ ನಿನ್ನ ಆ ರೂಪಕ್ಕೆ ಸಮಸ್ತ ದೇವತೆಗಳೂ ನಮಸ್ಕರಿಸಿದ್ದಾರೆ.

೨೦ ಪ್ರಪಂಚ ಸೃಷ್ಟಿಕರ್ತೃವೂ, ಪ್ರಪಂಚಸ್ವರೂಪವಾಗಿಯೇ, ಇರುವುದೂ, ಸಮಸ್ತ ಮಾನವರು ದೇವತೆಗಳು ಇವರಿಂದ ಪೂಜಿತವೂ, ಪ್ರಪಂಚದಲ್ಲಿ ಕಾರಣರೂಪದಿಂದ ಇರುವುದೂ, ಆಲೋಚಿಸಲ್ಪಡಲು ಅಶಕ್ಯವೂ, ಆದ ರೂಪ್ಯಾವುದುಂಟೋ ಅಂಥ ರೂಪವುಳ್ಳ ನಿನಗೆ ನಮಸ್ಕಾರ.

ಪರಂ ಯಜ್ಞಾತ್ಪರಂ ದೇವಾತ್ ಪರಂ ಲೋಕಾತ್ಪರಂ ದಿವಃ
ದುರತಿಕ್ರಮೋತಿ ಯಃ ಖ್ಯಾತಃ ತಸ್ಮಾದಪಿ ಪರಂ ಪರಾತ್
ಪರಮಾತ್ಮೇತಿ ವಿಖ್ಯಾತಂ ಯದ್ರೂಪಂ ತಸ್ಯ ತೇ ನಮಃ ॥ ೨೧ ॥

ಅವಿಜ್ಞೇಯಮಚಿಂತ್ಯಂ ಚ ಅಧ್ಯಾತ್ಮಗತಮವ್ಯಯಂ ।
ಅನಾದಿನಿಧನಂ ದೇವಂ ಯದ್ರೂಪಂ ತಸ್ಯ ತೇ ನಮಃ ॥ ೨೨ ॥

ನಮೋ ನಮಃ ಕಾರಣ ಕಾರಣಾಯ ।
ನಮೋ ನಮಃ ಪಾಪವಿನಾಶನಾಯ ।
ನಮೋ ನಮೋ ವಂದಿತವಂದಿತಾಯ ।
ನಮೋ ನಮೋ ರೋಗವಿನಾಶನಾಯ ॥ ೨೩ ॥

ನಮೋ ನಮಃ ಸರ್ವವರಪ್ರದಾಯ ।
ನಮೋ ನಮಃ ಸರ್ವಬಲಪ್ರದಾಯ ।
ನಮೋ ನಮೋ ಜ್ಞಾನನಿಧೇ ಸದೈವ ।
ನಮೋ ನಮಃ ಪಂಚದಶಾತ್ಮಕಾಯ ॥ ೨೪ ॥

---

೨೧. ಯಜ್ಞಕ್ಕಿಂತ ಉತ್ಕೃಷ್ಟನೂ, ದೇವನಿಗಿಂತ ಉತ್ಕೃಷ್ಟನೂ, ಲೋಕಕ್ಕಿಂತಲೂ ಉತ್ಕೃಷ್ಟನೂ, ಸ್ವರ್ಗಕ್ಕಿಂತ ಶ್ರೇಷ್ಠನೂ, ಅತಿಕ್ರಮಿಸಲು ಅಸಾಧ್ಯವೆಂದು ಪ್ರಸಿದ್ಧವಾದ ಪರವಸ್ತುವಿಗಿಂತ ಶ್ರೇಷ್ಠನೂ, ಆಗಿರುವ ಯಾವ ನಿನ್ನ ರೂಪವು ಪರಮಾತ್ಮ ಎಂದು ಪ್ರಸಿದ್ಧವಾದುದೋ ಅಂತಹ ನಿನಗೆ ನಮಸ್ಕಾರ.

೨೨. ತಿಳಿಯಲು ಅಸಾಧ್ಯವಾದುದು. ಚಿಂತಿಸಲು ಅಸಾಧ್ಯವಾದುದು. ಆತ್ಮನಲ್ಲಿ ಅಧಿಗತವಾದುದು, (ಎಂದರೆ ಶರೀರದಲ್ಲಿ ವ್ಯಾಪ್ತವಾದುದು) ನಾಶರಹಿತವಾದುದು, ಆದ್ಯಂತರಹಿತವಾದುದು, ಇಂಥ ದೇವಸ್ವರೂಪವುಳ್ಳ ನಿನಗೆ ನಮಸ್ಕಾರ.

೨೩. ಕಾರಣಕ್ಕೆ ಕಾರಣನೂ, ಪಾಪಗಳನ್ನು ನಾಶಮಾಡತಕ್ಕವನೂ, ವಂದನಾರ್ಹರಾದ ಪೂಜ್ಯರಿಂದ ವಂದನೆಮಾಡಿಸಿಕೊಳ್ಳತಕ್ಕವನೂ, ರೋಗಗಳನ್ನು ಹೋಗಲಾಡಿಸತಕ್ಕವನೂ, ಆದ ನಿನಗೆ ನಮಸ್ಕಾರ.

೨೪. ಸರ್ವರಿಗೂ ವರಗಳನ್ನು ಕೊಡತಕ್ಕವನೂ, ಸರ್ವರಿಗೂ ಶಕ್ತಿಯನ್ನು ಕೊಡತಕ್ಕವನೂ, ಸರ್ವದಾ ಜ್ಞಾನಕ್ಕೆ ಆಶ್ರಯನೂ' ಪಂಚದಶಾ ಎಂದರೆ ಜಾಗ್ರತ್

ಸ್ತುತಃ ಸ ಭಗವಾನೇವಂ ತೇಜಸಾಂ ರೂಪಮಾಸ್ಥಿತಃ ।
ಉವಾಚ ವಾಚಂ ಕಲ್ಯಾಣೀಂ ಕೋ ವರೋ ವಃ ಪ್ರದೀಯತಾಂ ॥ ೨೫ ॥

ತವಾತಿತೇಜಸೋ ರೂಪಂ ನ ಕಶ್ಚಿತ್ಸಹತೇ ವಿಭೋ ।
ಸಹನೀಯಂ ಭವತ್ವೇತದ್ಧಿತಾಯ ಜಗತಃ ಪ್ರಭೋ ॥ ೨೬ ॥

ಏವಮಸ್ತ್ವಿತಿ ಗಾಮುಕ್ತ್ವಾ ಭಗವಾನ್ ಸರ್ವಕೃತ್ಸ್ವಯಂ ।
ಲೋಕಾನಾಂ ಕಾರ್ಯಸಿದ್ಧ್ಯರ್ಥಂ ಘರ್ಮವರ್ಷಹಿಮಪ್ರದಃ ॥ ೨೭ ॥

ಅತಃ ಸಾಂಖ್ಯಾಶ್ಚ ಯೋಗಾಶ್ಚ ಯೇ ಚಾನ್ಯೇ ಮೋಕ್ಷಕಾಂಕ್ಷಿಣಃ ।
ಧ್ಯಾಯಂತಿ ಧ್ಯಾಯಿನೋ ನಿತ್ಯಂ ಹೃದಯಸ್ಥಂ ದಿವಾಕರಂ ॥ ೨೮ ॥

---

ಸ್ವಪ್ನ ಸುಷುಪ್ತಿ, ತುರೀಯ, ತುರೀಯಾತೀತ, ಎಂಬ ಐದು ಅವಸ್ಥೆಗಳ ಸ್ವರೂಪನೂ ಆದ ನಿನಗೆ ನಮಸ್ಕಾರ. ಎಂದು ಸ್ತುತಿಸಿದರು.

೨೫. ತೇಜಸ್ಸುಗಳ ರೂಪವನ್ನು ಹೊಂದಿರುವ ಭಗವಂತನಾದ ಸೂರ್ಯನು ಈ ಪ್ರಕಾರವಾದ ಅವರ ಸ್ತುತಿಯಿಂದ ಸುಪ್ರೀತನಾಗಿ " ನಿಮಗೆ ಯಾವ ವರಬೇಕು ? ಹೇಳಿ " ಎಂದು ಶುಭಕರವಾದ ಮಾತನ್ನಾಡಿದನು.

೨೬. ಆಗ ದೇವಾದಿಗಳು ಪ್ರಭುವೇ! ಮಹಾ ತೇಜವುಳ್ಳ ನಿನ್ನ ರೂಪವನ್ನು ನೋಡಲು ಯಾವನೊಬ್ಬನೂ ಶಕ್ತನಾಗಲಾರನು. ಲೋಕದ ಹಿತಕ್ಕಾಗಿ ನಿನ್ನ ಈ ತೇಜಸ್ಸು ದೃಷ್ಟಿಸಲು ಶಕ್ಯವಾಗಲಿ (ಎಂದು ಹೇಳಿಕೊಂಡರು )

೨೭. ಸರ್ವಸ್ರಷ್ಟುವಾದ ಭಗವಂತನು " ಹಾಗೆಯೇ ಆಗಲಿ " ಎಂದು ಹೇಳಿ ಲೋಕಗಳ ಕಾರ್ಯಗಳು ಅನುಕೂಲವಾಗುವುದಕ್ಕಾಗಿ ತಾನು ಸೆಕೆ, ಮಳೆ, ಹಿಮ ಇವುಗಳನ್ನು ಕೊಡತಕ್ಕವನಾದವನು.

೨೮. ಆದುದರಿಂದ ಜ್ಞಾನಯೋಗಿಗಳೂ, ಕರ್ಮಯೋಗಿಗಳೂ ಮತ್ತು ಇತರ ಮುಕ್ತ್ಯಭಿಲಾಷಿಗಳೂ ಧ್ಯಾನತತ್ಪರರಾಗಿ ಯಾವಾಗಲೂ ಹೃದಯ ಸನ್ನಿಹಿತನಾದ ಸೂರ್ಯನನ್ನು ಧ್ಯಾನಿಸುತ್ತಾರೆ.

ಸರ್ವಲಕ್ಷಣಹೀನೋऽಪಿ ಯುಕ್ತೋ ವಾ ಸರ್ವಪಾತಕೈಃ ।
ಸರ್ವಂ ತರತಿ ವೈ ಪಾಪಂ ದೇವಕರ್ಮಸಮಾಶ್ರಿತಃ ॥ ೨೯ ॥

ಅಗ್ನಿಹೋತ್ರಂ ಚ ವೇದಾಶ್ಚ ಯಜ್ಞಾಶ್ಚ ಬಹುದಕ್ಷಿಣಾಃ ।
ಭಾನೋರ್ಭಕ್ತ್ಯಾ ನಮಸ್ಕಾರಕಲಾಂ ನಾರ್ಹಂತಿ ನಿಶ್ಚಿತಾಂ ॥ ೩೦ ॥

ತೀರ್ಥಾನಾಂ ಪರಮಂ ತೀರ್ಥಂ ಮಂಗಲಾನಾಂ ಚ ಮಂಗಲಂ ।
ಪವಿತ್ರಂ ಚ ಪವಿತ್ರಾಣಾಂ ತಂ ಪ್ರಪದ್ಯೇ ದಿವಾಕರಂ ॥ ೩೧ ॥

ಬ್ರಹ್ಮಾದ್ಯೈಃ ಸಂಸ್ತುತಂ ದೇವೈರ್ಯೇ ಪ್ರಪದ್ಯಂತಿ ಭಾಸ್ಕರಂ ।
ನಿರ್ಮುಕ್ತಾಃ ಕಿಲ್ಬಿಷೈಃ ಸರ್ವೈಃ ತೇ ಯಾಂತಿ ರವಿಮಂದಿರಂ ॥ ೩೨ ॥

ಉಪಚರ್ಯಾದಿಭಿಃ ಸೇವ್ಯೋ ಯಥಾ ವೇದೇ ದಿವಸ್ಪತಿಃ ।
ಲೋಕಾನಾಮಿಹ ಸರ್ವೇಷಾಂ ತಥಾ ದೇವೋ ದಿವಾಕರಃ ॥ ೩೩ ॥

---

೨೯. ಮಾನವನು ಶುದ್ಧ ಅವಲಕ್ಷಣಯುಕ್ತನೂ; ಸರ್ವಪಾತಕಯುಕ್ತನೂ ಆಗಿದ್ದರೂ, ದೇವತಾ ಕಾರ್ಯವನ್ನು ಮಾಡತೊಡಗಿದರೆ ಆ ಪಾಪವೆಲ್ಲವನ್ನೂ ದಾಟಿ ಬಿಡುವನು.

೩೦. ಅಗ್ನಿಹೋತ್ರ, ವೇದಗಳು, ಬಹುದಕ್ಷಿಣೆಗಳನ್ನು ಕೊಟ್ಟು ಮಾಡುವ ಯಜ್ಞಗಳು, ಮುಂತಾದ್ದೆಲ್ಲಾ ಸೂರ್ಯನಿಗೆ ಭಕ್ತಿಯಿಂದ ನಮಸ್ಕಾರ ಮಾಡಿದ ಪುಣ್ಯದ ಹದಿನಾರನೆಯ ಒಂದುಭಾಗಕ್ಕೆ ಸರಿಬರಲಾರದು.

೩೧. ಆದ್ದರಿಂದ ತೀರ್ಥಗಳಲ್ಲಿ ಉತ್ತಮ ತೀರ್ಥವೂ, ಮಂಗಳಗಳಲ್ಲಿ ಪರಮ ಮಂಗಳವೂ, ಪರಿಶುದ್ಧವಸ್ತುಗಳಲ್ಲಿ ಅತಿ ಪರಿಶುದ್ಧನೂ ಆದ ಸೂರ್ಯನನ್ನು ಸೇವಿಸು ತ್ತೇನೆ ಎಂದನು.

೩೨. ಬ್ರಹ್ಮಾದಿ ದೇವತೆಗಳಿಂದ ಹೀಗೆ ಸ್ತುತಿಸಲ್ಪಟ್ಟ ಸೂರ್ಯನನ್ನು ಯಾರು ಆಶ್ರಯಿಸುತ್ತಾರೆಯೋ, ಅವರು ಎಲ್ಲಾ ಪಾಪಗಳಿಂದಲೂ ಬಿಡುಗಡೆ ಹೊಂದಿ ಸೂರ್ಯ ಸನ್ನಿಧಿಯನ್ನು ಹೊಂದುವರು.

೩೩. ವೇದಗಳಲ್ಲಿ ಇಂದ್ರನು ಹೇಗೆ ಉಪಚಾರಾದಿಗಳಿಂದ ಸೇವ್ಯನೆಂದು ಹೇಳಲ್ಪಟ್ಟಿದೆಯೋ, ಹಾಗೆಯೇ ಸೂರ್ಯನು ಎಲ್ಲಾ ಲೋಕದ ಜನರಿಗೂ ಸೇವ್ಯನು.

॥ ಶತಾನೀಕ ಉವಾಚ ॥

ಶರೀರಲೇಖನಂ ಸೂರ್ಯೇ ಕಥಂ ವೈ ಪ್ರತಿಪಾದಕಂ ।
ದೇವೈಃ ಸಋಷಿಭಿರ್ವಾಪಿ ತನ್ಮಮಾಚಕ್ಷ್ವ ಸುವ್ರತ ॥ ೩೪ ॥

॥ ಸುಮಂತುರುವಾಚ ॥

ಬ್ರಹ್ಮಲೋಕೇ ಸುಖಾಸೀನಂ ಬ್ರಹ್ಮಾಣಂ ತೇ ಸುರಾಸುರಾಃ ।
ಋಷಯಃ ಸಮುಪಾಗಮ್ಯ ಇದಮೂಚುಃ ಸಮಾಹಿತಾಃ ॥ ೩೫ ॥

ಭಗವನ್ ದೇವತಾಪುತ್ರೋ ಯ ಏಷ ದಿವಿ ರಾಜತೇ ।
ತೇನಾಂಧಕಾರೋ ನಿಕೃತ್ತಃ ಸೋಽಯಂ ಜಾಜ್ವಲಿತೀತಿ ಹಿ ॥ ೩೬ ॥

ಅಸ್ಯ ತೇಜೋಭಿರಖಿಲಂ ಜಗತ್ಸ್ಥಾವರಜಂಗಮಂ ।
ನಾಶಮಾಯಾತಿ ದೇವೇಶ ಯಥಾ ಕ್ಲಿಷ್ಟಂ ನದೀತಟಂ ॥ ೩೭ ॥

---

೩೪. ಶತಾನೀಕ ರಾಜನು ಹೇಳುತ್ತಾನೆ—ಸೂರ್ಯನಿಗೆ ಮಾಡಿದ ಶರೀರ ಲೇಖನವನ್ನು (ಸಾಣೆಯನ್ನು) ದೇವತೆಗಳೂ ಋಷಿಗಳೂ ಹೇಗೆ ನಿರೂಪಣೆ ಮಾಡಿದ್ದಾರೆ ? ಎಲೈ ಸುವ್ರತನೇ ! ಅದನ್ನು ನನಗೆ ಹೇಳು ಎಂದನು.

೩೫. ಸುಮಂತು ಮುನಿವರ್ಯರು ಹೇಳುತ್ತಾರೆ—ಬ್ರಹ್ಮಲೋಕದಲ್ಲಿ ಸುಖವಾಗಿ ಕುಳಿತಿರುವ ಬ್ರಹ್ಮನನ್ನು ಸಂದರ್ಶಿಸಿ, ದೇವಾಸುರರೂ, ಋಷಿಗಳೂ, ಸಮೀಪಕ್ಕೆ ಬಂದು ಸಮಾಧಾನ ಚಿತ್ತರಾಗಿ ಮುಂದೆ ಹೇಳುವ ಮಾತನ್ನು ಹೇಳಿದರು.

೩೬. ಭಗವಂತನಾದ ಬ್ರಹ್ಮನೇ ! ಅದಿತಿ ಎಂಬ ದೇವಪುತ್ರನಾದ ಆದಿತ್ಯನು ಅಂತರಿಕ್ಷದಲ್ಲಿ ಪ್ರಕಾಶಿಸುತ್ತಾನೆ. ಅದರಿಂದ ಅಂಧಕಾರವು ನಾಶವಾಗುವುದು ನಿಜ. ಆದರೆ ಅವನ ಪ್ರಕಾಶವು ಅತ್ಯತಿಶಯವಲ್ಲವೇ ?

೩೭. ನದಿಯ ಪ್ರವಾಹದಿಂದ ದಡವು ಕುಸಿದುಬೀಳುವಂತೆ ಸ್ಥಾವರಜಂಗಮಾತ್ಮಕವಾದ ಈ ಸಮಸ್ತ ಪ್ರಪಂಚವೂ ಇವನ ಅತಿಶಯ ತೇಜಸ್ಸುಗಳಿಂದ ನಾಶ ಹೊಂದುತ್ತದೆ.

ವಯಂ ಚ ಪೀಡಿತಾಃ ಸರ್ವೇ ತೇಜಸಾ ತಸ್ಯ ಮೋಹಿತಾಃ ।
ಪದ್ಮಶ್ಚಾಯಂ ಯಥಾ ಮ್ಲಾನೋ ಯೋಯಂ ಯೋನಿಸ್ತ್ವವ ಪ್ರಭೋ

ದಿವಿ ಭುವ್ಯಂತರಿಕ್ಷೇ ಚ ಶರ್ಮ ನೋಪಾಲಭಾಮಹೇ ।
ತಥಾ ಕುರು ಸುರಜ್ಯೇಷ್ಠ ಯಥಾ ತೇಜಃ ಪ್ರಶಾಮ್ಯತಿ ॥ ೩೯ ॥

ಏವಮುಕ್ತಃ ಸ ಭಗವಾನ್ಪದ್ಮಯೋನಿಃ ಪ್ರಜಾಪತಿಃ ।
ಉವಾಚ ಭಗವಾನ್ಬ್ರಹ್ಮಾ ದೇವಾನ್ವಿಷ್ಣುಪುರೋಗಮಾನ್ ॥ ೪೦ ॥

ಮಹಾದೇವೇನ ಸಹಿತಾ ಇಂದ್ರೇಣ ಚ ಮಹಾತ್ಮನಾ ।
ತಮೇವ ಶರಣಂ-ದೇವಂ ಗಚ್ಛಾಮಃ ಸಹಿತಾ ವಯಂ ॥ ೪೧ ॥

ತತಸ್ತೇ ಸಹಿತಾಃ ಸರ್ವೇ ಬ್ರಹ್ಮವಿಷ್ಣ್ವಾದಯಃ ಸುರಾಃ ।
ಗತ್ವಾ ತೇ ಶರಣಂ ಸರ್ವೇ ಭಾಸ್ಕರಂ ಲೋಕಭಾಸ್ಕರಂ ॥ ೪೨ ॥

---

೩೮. ನಾವುಗಳೆಲ್ಲರೂ ಕೂಡ ಅವನ ತೇಜಸ್ಸಿನಿಂದ ಬೆಪ್ಪುಹಿಡಿದಿದ್ದೇವೆ. (ಮೋಹಿತರಾಗಿದ್ದೇವೆ) ಎಲೈ ಬ್ರಹ್ಮನೇ! ನಿನ್ನ ಜನ್ಮಸ್ಥಾನವಾದ ಕಮಲವೂ ಕೂಡ ಎಷ್ಟು (ಬಾಡಿಹೋಗಿ) ಮ್ಲಾನಮಾಗಿದೆ ?

೩೯. ಸ್ವಾಮಿ ಸುರಜ್ಯೇಷ್ಠ! ಸ್ವರ್ಗ, ಭೂಮಿ, ಆಕಾಶ ಮುಂತಾದ ಎಲ್ಲಿಯೂ ನಮಗೆ ನೆಮ್ಮದಿಯಿಲ್ಲ. (ಎಲ್ಲಿ ಹೋದರೂ ಸುಖವಿಲ್ಲ ಅವನ ತಾಪವೇ ಆಗಿದೆ) ಆದ್ದರಿಂದ ಆ ತೇಜಸ್ಸು ಶಾಂತವಾಗುವಂತೆ ಏನಾದರೂ ಮಾಡು (ಎಂದರು.)

೪೦-೪೧. ಪದ್ಮದಲ್ಲಿ ಹುಟ್ಟಿದ ಬ್ರಹ್ಮನು ಈ ಮಾತನ್ನು ಕೇಳಿ, ವಿಷ್ಣುವೇ ಮೊದಲಾದ ದೇವತೆಗಳನ್ನು ಕುರಿತು “ ಮಹಾತ್ಮನಾದ ಶಿವನೊಡನೆಯೂ, ಮತ್ತು ಇಂದ್ರನೊಡನೆಯೂ ಕೂಡಿ ನಾವೆಲ್ಲರೂ ಒಟ್ಟಿಗೆ ಹೋಗಿ ಆ ಸೂರ್ಯದೇವನಿಗೆ ಶರಣಾಗತರಾಗೋಣ ” ಎಂದು ಹೇಳಿದನು.

೪೨. ಅನಂತರ ಬ್ರಹ್ಮ ವಿಷ್ಣು ಮೊದಲಾದ ದೇವತೆಗಳೆಲ್ಲರೂ ಗುಂಪಾಗಿ ಹೋಗಿ ಲೋಕಪ್ರಕಾಶಕನಾದ ಸೂರ್ಯನನ್ನು ಮರೆಹೊಕ್ಕು ಅವನ ಸುತ್ತಲೂ ಭಕ್ತಿನಮ್ರರಾಗಿ ನಿಂತು ಸ್ತೋತ್ರಮಾಡಲು ಆರಂಭಿಸಿದರು.

ಸ್ತೋತುಂ ಪ್ರಚಕ್ರಮುಃ ಸರ್ವೇ ಭಕ್ತಿನಮ್ರಾಃ ಸಮಂತತಃ ।
ಕೇಶಾದಿದೇವತಾಃ ಸರ್ವಾ ಭಕ್ತಿಭಾವಸಮನ್ವಿತಾಃ ॥ ೪೩ ॥

॥ ಬ್ರಹ್ಮವಿಷ್ಣ್ವೀಶಾ ಊಚುಃ ॥
ನಮೋನಮಃ ಸುರವರ ತಿಗ್ಮತೇಜಸೇ
ನಮೋನಮಃ ಸುರವರ ಸಂಸ್ತುತಾಯ ವೈ
ಜಡಾಂಧಮೂಕಾನ್ ಬಧಿರಾನ್ಸ ಕುಷ್ಠಾನ್
ಸಶ್ವಿತ್ರಿಣೋsಂಧಾನ್ವಿವಿಧ ವ್ರಣಾವೃತಾ
ಕರೋಷಿ ತಾನೇವ ಪುನರ್ನವಾನ್ಸದಾ ।
ಅತೋ ಮಹಾಕಾರುಣಿಕಾಯ ತೇ ನಮಃ ॥ ೪೪ ॥

ಯದೌದರಂ ಜ್ಯೋತಿರತಿತ್ವರನ್ಮಹ
ದ್ಯದಲ್ಪತೇಜೋ ಯದಪೀಹ ಚಕ್ಷುಷಾಂ
ಯದತ್ರ ಯಜ್ಞೇಷ್ವ ಪನೀತಮಾಹಿತಂ
ತದೈವ ತದ್ರೂಪಮನೇಕತಃ ಸ್ಥಿತಂ ॥ ೪೫ ॥

---

೪೩. (ಕ-ಈಶ) ಬ್ರಹ್ಮ; ಈಶ್ವರ ಮೊದಲಾದ ಸಮಸ್ತ ದೇವತೆಗಳೂ ಭಕ್ತಿ ಭಾವದಿಂದ ಕೂಡಿದವರಾಗಿ ಈ ರೀತಿ ಸ್ತುತಿಸತೊಡಗಿದರು.

೪೪. ಬ್ರಹ್ಮ ವಿಷ್ಣು ಈಶ್ವರ ಇವರು ಹೇಳುತ್ತಾರೆ—ದೇವಶ್ರೇಷ್ಠನೇ! ತೀಕ್ಷ್ಣವಾದ ತೇಜಸ್ಸುಳ್ಳ ನಿನಗೆ ಅನೇಕ ನಮಸ್ಕಾರ. ದೇವಶ್ರೇಷ್ಠರಿಂದ ಚೆನ್ನಾಗಿ ಸ್ತುತಿಸಲ್ಪಟ್ಟ ನಿನಗೆ ನಮಸ್ಕಾರ. ಜಡರು, ಕುರುಡರು, ಮೂಗರು, ಕಿವುಡರು, ಕುಷ್ಠರೋಗಿಗಳು, ತೊನ್ನು ಹತ್ತಿದವರು, ಬಗೆಬಗೆಯ ಹುಣ್ಣುಗಳಿಂದ ಆವರಿಸಲ್ಪಟ್ಟವರು ಇಂಥ ಜನರನ್ನೆಲ್ಲಾ ನಿನ್ನ ಕಿರಣಗಳ ಪ್ರಸಾರದಿಂದ ವಿಲಕ್ಷಣತೆ ಹೋಗಿ ಪುನಃ ಬೇರೆ ರೂಪ ಪಡೆದವರ (ಹೊಸಬರ) ನ್ನಾಗಿ ಮಾಡಿಬಿಡುತ್ತೀಯೆ. ಇಂಥ ಮಹಾದಯಾವಂತನಾದ ನಿನಗೆ ನಮಸ್ಕಾರ.

೪೫. ಅತಿವೇಗವುಳ್ಳದ್ದೂ, ಮಹತ್ಪರಿಣಾಮವುಳ್ಳದ್ದೂ ಆದ ಜಠರಾಗ್ನಿಯ ತೇಜಸ್ಸು, ಕಣ್ಣುಗಳಿಗೆ ಅಲ್ಪಪರಿಮಾಣವಾಗಿ ಕಾಣುವುದು. ಯಜ್ಞಗಳಲ್ಲಿ ಈಚೆಗೆ ತೆಗೆಯಲ್ಪಟ್ಟು ಪುನಃ ಧರಿಸಲ್ಪಡುವುದಾದರೂ, ಅನೇಕ ಕಡೆಗಳಲ್ಲಿ ಇದ್ದರೂ, ನಿನ್ನ ರೂಪು ಒಂದೇ ಪ್ರಕಾರ ಕಾಣುವುದು.

ಸುರದ್ವಿಷಃ ಸಾಗರತೋಯವಾಸಿನಃ
ಪ್ರಚಂಡಪಾಶಾಸಿಪರಶ್ವಧಾಯುಧಾಃ
ಸಮುಚ್ಛ್ರಿತಾಸ್ತೇ ಭುವಿ ಪಾಪಚೇತಸಃ
ಪ್ರಯಾಂತಿ ನಾಶಂ ತವ ದೇವ ದರ್ಶನಾತ್ ॥ ೪೬ ॥

ಯತೋ ಭವಾಂಸ್ತೀರ್ಥಫಲಂ ಸಮಸ್ತಂ
ಯಜ್ಞೇಷು ನಿತ್ಯಂ ಭಗವಾನವಸ್ಥಿತಃ
ನಮೋ ಭವನ್ನಾತ್ರ ವಿಚಾರಣಾಸ್ತಿ
ಸದಾ ನೃಣಾಂ ಶಾಂತಿಕರಾಯ ತೇ ನಮಃ
ಯಚ್ಚಾಪಿ ಲೋಕೇ ತಪ ಉಚ್ಯತೇ ಬುಧೈಃ
ತತ್ತೇ ಮಹಾತೇಜ ಉಶಂತಿ ಪಂಡಿತಾಃ ॥ ೪೭ ॥

ಸ್ತುತಃ ಸ ಭಗವಾನೇವಂ ಪ್ರಜಾಪತಿಮುಖೈಃ ಸುರೈಃ ।
ಅವಧಾನಂ ಮನಶ್ಚಕ್ರೇ ಶ್ರವಣಾಭ್ಯಾಂ ಮಹೀಪತೇ ॥ ೪೮ ॥

---

೪೬. ಎಲೈ ದೇವ! ಸಮುದ್ರದ ನೀರಿನಲ್ಲಿ ವಾಸಮಾಡಿಕೊಂಡಿರುವ ದೇವ ವೈರಿಗಳು ಪ್ರಚಂಡವಾದ ಗಂಡುಗೊಡಲಿ, ಪಾಶ, ಕತ್ತಿ ಮುಂತಾದ ಆಯುಧವುಳ್ಳವರಾಗಿ, ಭೂಲೋಕದಲ್ಲಿ ಬಹುಕೊಬ್ಬಿಹೋಗಿ, ಪಾಪಯುಕ್ತವಾದ ಮನಸ್ಸುಳ್ಳವರೂ ಸಹ ನಿನ್ನ ದರ್ಶನವಾದ ಕೂಡಲೇ ನಾಶಹೊಂದುತ್ತಾರೆ.

೪೭. ನೀನು ಸಮಸ್ತ ತೀರ್ಥಗಳ ಫಲರೂಪನಾಗಿರುವುದರಿಂದಲೂ, ಯಜ್ಞಗಳಲ್ಲಿ ನೀನು ಯಾವಾಗಲೂ ಸನ್ನಿಹಿತನಾಗಿರುವುದರಿಂದಲೂ, ನಿನಗೆ ನಮಸ್ಕಾರ. ಪೂಜ್ಯನೇ! ಈ ವಿಷಯದಲ್ಲಿ ವಿಚಾರಮಾಡಬೇಕಾದುದೇ ಇಲ್ಲ. ಮನುಷ್ಯರಿಗೆ ಸದಾ ಶಾಂತಿ ಕಾರಣನಾದ ನಿನಗೆ ನಮಸ್ಕಾರ. ಲೋಕದಲ್ಲಿ ಪ್ರಾಜ್ಞರು ಯಾವುದನ್ನು ತಪಸ್ಸು ಎಂದು ಹೇಳುವರೋ ಅದನ್ನು ಪಂಡಿತರು ನಿನ್ನ ಮಹತ್ತಾದ ತೇಜಸ್ಸು ಎಂದು ಹೇಳಲು ಅಪೇಕ್ಷೆಪಡುತ್ತಾರೆ.

೪೮. ಅಯ್ಯಾ ಶತಾನೀಕರಾಜನೇ! ಸೂರ್ಯದೇವನು ಬ್ರಹ್ಮನೇ ಮೊದಲಾದವರಿಂದ ಈ ರೀತಿ ಹೊಗಳಿಸಿಕೊಂಡವನಾಗಿ ಅವರು ಹೇಳಿದ್ದನ್ನೆಲ್ಲಾ ಅವಹಿತ (ಅವಧಾನ) ನಾಗಿ ಕಿವಿಗಳಿಂದ ಆಲಿಸಿದನು.

ಸ್ತುವಂತಿ ತೇ ತತೋ ಭೂಯಃ ಶಿವವಿಷ್ಣುಪುರೋಗಮಾಃ ।
ಕೃತ್ವಾ ಮಾಂ ಪುರತಃ ಸರ್ವೇ ಭಕ್ತಿನಮ್ರಾಃ ಸಮಂತತಃ ॥ ೪೯ ॥

ನಮೋನಮಸ್ತ್ರಿಭುವನಭೂತಿದಾಯಿನೇ ।
ಕ್ರತುಕ್ರಿಯಾಸತ್ಫಲಸಂಪ್ರದಾಯಿನೇ ।
ನಮೋನಮಃ ಪ್ರತಿದಿನಕರ್ಮಸಾಕ್ಷಿಣೇ ।
ಸಹಸ್ರ ಸಂದೀಧಿತಯೇ ನಮೋನಮಃ ॥ ೫೦ ॥

ಪ್ರಸಕ್ತ ಸಪ್ತಾಶ್ವಯುಜೇಽಕ್ಷಯಾಯು ।
ಧ್ರುವೈಕರಶ್ಮಿಗ್ರಥಿನೇ ನಮೋನಮಃ ।
ಸವಾಲಖಿಲ್ಯಾಪ್ಸರಕಿನ್ನರೋರಗೈಃ ।
ಸಂಸಿದ್ಧಗಂಧರ್ವಪಿಶಾಚಮಾನುಷ್ಯೈಃ ॥ ೫೧ ॥

ಯತೋ ರಸಾನ್ ಸಂಕ್ಷಿಪಸೇ ಶರೀರಿಣಾಂ
ಗಭಸ್ತಿಭಿರ್ಹಿಮಜಲಘರ್ಮನಿಸ್ರವೈಃ
ಜಗಚ್ಚ ಸಂಶೋಷಯಸೇ ಸದೈವ
ಅತೋಽಸಿ ಲೋಕೇ ಜಗತೋ ವಿಶೋಷಣಂ ॥ ೫೨ ॥

---

೪೯. ಶಿವ, ವಿಷ್ಣು ಮೊದಲಾದವರು ಪುನಃ ಬ್ರಹ್ಮನನ್ನು ಮುಂದಿಟ್ಟುಕೊಂಡು ಭಕ್ತಿನಮ್ರರಾಗಿ ಸುತ್ತಲೂ ನಿಂತು ಮತ್ತೆ ಹೀಗೆ ಸ್ತುತಿಸಿದರು.

೫೦. ಮೂರು ಲೋಕಗಳಿಗೂ ಐಶ್ವರ್ಯದಾಯಕನಾದವನೇ ! ಯಜ್ಞಕಾರ್ಯಗಳಿಗೆ ತಕ್ಕ ಸತ್ಫಲವನ್ನು ಕೊಡತಕ್ಕವನೇ ! ಪ್ರತಿದಿನವೂ ಆಚರಿಸುವ ಕರ್ಮಗಳಿಗೆ ಸಾಕ್ಷೀ ಭೂತನಾಗಿರುವವನೇ! ಸಹಸ್ರ ಕಿರಣವುಳ್ಳ ಸ್ವಾಮಿಯೇ! ನಿನಗೆ ನಮಸ್ಕಾರ.

೫೧. ನಾಶರಹಿತವೂ, ಶಾಶ್ವತವೂ ಆದ ಒಂದು ರಶ್ಮಿಯಿಂದ ಕಟ್ಟಿರುತ್ತಾ ಯಾವಾಗಲೂ ಉತ್ಸಾಹಯುಕ್ತವಾದ ಏಳು ಕುದುರೆಗಳುಳ್ಳವನಾದ ನಿನಗೆ ನಮಸ್ಕಾರ. ಅಪ್ಸರರು, ಕಿನ್ನರರು, ಉರಗರು, ಸಿದ್ಧರು,ಗಂಧರ್ವರು, ಪಿಶಾಚರು, ಮನುಷ್ಯರು ಇವರುಗಳಿಂದ ಸಹಿತರಾದ ವಾಲಖಿಲ್ಯರೆಂಬವರಿಂದ ಸಂಸ್ತುತನಾದ ನಿನಗೆ ನಮಸ್ಕಾರ.

೫೨. ನೀನು ಹಿಮವನ್ನೂ ಜಲವನ್ನೂ ಸೆಕೆಯನ್ನೂ ಸ್ರವಿಸುವ ಕಿರಣದಿಂದ ಪ್ರಾಣಿಗಳ ಶರೀರದಲ್ಲಿರುವ ರಸಗಳನ್ನು ಹೀರಿಬಿಡುತ್ತೀಯೆ. ಆದುದರಿಂದ ನೀನು ಜಗತ್ತನ್ನೆಲ್ಲಾ ಸದಾ ಶೋಷಿಸತಕ್ಕವನೆಂದು ಪ್ರಸಿದ್ಧನಾಗಿದ್ದೀಯೆ.

ಜ್ಞಾತ್ವಾತೇಷಾ ಮಭಿಪ್ರಾಯಮುವಾಚ ವದತಾಂವರಃ ।
ಲಬ್ಧ್ವಾನುಜ್ಞಾಂ ತತಃ ಸರ್ವೇ ಸುರಾಃ ಸಂಹೃಷ್ಟಚೇತಸಃ ॥ ೫೩ ॥

ತ್ವಷ್ಟಾರಂ ಪೂಜಯಾಮಾಸುರ್ಮನೋವಾಕ್ಕಾಯಕರ್ಮಭಿಃ ।
ವಿಶ್ವಕರ್ಮಾ ತವಾದೇಶಾತ್ಕರೋತು ತವ ಸೌಮ್ಯತಾಂ ॥ ೫೪ ॥

ತತಸ್ತು ತೇಜಸೋ ರಾಶಿಂ ಸರ್ವಕರ್ಮವಿಧಾನವಿತ್ ।
ಭ್ರಮಿಮಾರೋಪಯಾಮಾಸ ವಿಶ್ವಕರ್ಮಾ ವಿಭಾವಸುಂ ॥ ೫೫ ॥

ಅಮೃತೇನಾಭಿಷಿಕ್ತಸ್ಯ ತದಾ ಸೂರ್ಯಸ್ಯ ವೈ ವಿಭೋಃ ।
ತೇಜಸಃ ಶಾತನಂ ಚಕ್ರೇ ವಿಶ್ವಕರ್ಮಾ ಶನೈಃಶನೈಃ ॥ ೫೬ ॥

ಆಜಾನುಲಿಖಿತಶ್ಚಾಸೌ ಸಸುರಾಸುರಪೂಜಿತಃ ।
ನಾಭ್ಯನಂದತ್ತತೋ ದೇವ ಉಲ್ಲೇಖನಮತಃಪರಂ ॥ ೫೭ ॥

---

೫೩-೫೪. ಅವರ ಅಭಿಪ್ರಾಯವನ್ನು ತಿಳಿದು ಮಾತುಬಲ್ಲವರಲ್ಲಿ ಶ್ರೇಷ್ಠನಾದ ದೇವನು ತಕ್ಕ ಉತ್ತರ ಹೇಳಿದನು. ಆ ಮೇಲೆ ದೇವತೆಗಳೆಲ್ಲರೂ ಅವನಿಂದ ಅಪ್ಪಣೆ ಹೊಂದಿ ಸಂತುಷ್ಟಚಿತ್ತರಾಗಿ ತ್ವಷ್ಟೃವಾದ ಶಿಲ್ಪಿಯನ್ನು ಮನೋವಾಕ್ಕಾಯ ಕರ್ಮಗಳಿಂದ ಪೂಜಿಸಿದರು. "ವಿಶ್ವಕರ್ಮನು ನಿನ್ನ ಅಪ್ಪಣೆ ಆದರೆ ಸಾಣೆಹಿಡಿದು ನಿನಗೆ ಸೌಮ್ಯತ್ವವುಂಟುಮಾಡುವವನು" ಎಂದು ಸ್ತುತಿಸಿದರು.

೫೫. ಬಳಿಕ ಸಮಸ್ತ ಕಾರ್ಯಗಳ ಕ್ರಮಗಳನ್ನೂ ಬಲ್ಲ ವಿಶ್ವಕರ್ಮನು ತೇಜೋನಿಧಿಯಾದ ಸೂರ್ಯನನ್ನು ಭ್ರಮಣಯಂತ್ರಕ್ಕೆ ಏರಿಸಿದನು.

೫೬. ಅಯ್ಯಾ ವಿಭುವೇ! ಸೂರ್ಯನಿಗೆ ಅಮೃತಾಭಿಷೇಕಮಾಡಿ ಆಮೇಲೆ ವಿಶ್ವಕರ್ಮನು ಮೆಲ್ಲಮೆಲ್ಲಗೆ ತೇಜಸ್ಸಿನ ಕಡೆತದ ಕೆಲಸವನ್ನು ಮಾಡಲಾರಂಭಿಸಿದನು.

೫೭. ಸುರರು, ಅಸುರರು ಇವರುಗಳಿಂದ ಪೂಜಿತನಾದ ಸೂರ್ಯನ ಶರೀರ ಶಾತನ ಕಾರ್ಯವು ಮೊಳಕಾಲಿನವರೆಗೂ ಸಾಗಿತು. ಅಲ್ಲಿಂದ ಮುಂದಕ್ಕೆ ಶಾತನಮಾಡಲು ಸೂರ್ಯನು ಒಪ್ಪಲಿಲ್ಲ.

ತತಃಪ್ರಭೃತಿ ದೇವಸ್ಯ ಚರಣೌ ನಿತ್ಯಸಂವೃತೌ ।
ತಾಪಯನ್ ಗ್ಲಾಪಯಂಶ್ಚೈವ ಯುಕ್ತತೇಜೋऽಭವತ್ತದಾ ॥ ೫೮ ॥

ಯಚ್ಚಾಸ್ಯ ಶಾತಿತಂ ತೇಜಃ ತೇನ ಚಕ್ರಂ ವಿನಿರ್ಮಿತಂ ।
ಯೇನ ವಿಷ್ಣುರ್ಜಘಾನೋಗ್ರಾನ್ಸದಾ ವೈ ದೈತ್ಯದಾನವಾನ್ ॥ ೫೯ ॥

ಶೂಲಶಕ್ತಿಗದಾವಜ್ರಶರಾಸನಪರಶ್ವಧಾನ್ ।
ದೇವತಾನಾಂ ದದೌ ಕೃತ್ವಾ ವಿಶ್ವಕರ್ಮಾ ಮಹಾಮತಿಃ ॥ ೬೦ ॥

ತ್ರಿದೇವನಿರ್ಮಿತಂ ಸ್ತೋತ್ರಂ ಸಂಧ್ಯಯೋರುಭಯೋರ್ಜಪನ್ ।
ಕುಲಂ ಪುನಾತಿ ಪುರುಷೋ ವ್ಯಾಧಿಭಿರ್ನ ಚ ಪೀಡ್ಯತೇ ॥ ೬೧ ॥

ಪ್ರಜಾವಾನ್ ಸಿದ್ಧಕರ್ಮಾ ಚ ಜೀವೇತ್ಸಾಗ್ರಂ ಶರಚ್ಛತಂ
ಪುತ್ರವಾನ್ ಧನವಾಂಶ್ಚೈವ ಸರ್ವತ್ರ ಚಾಪರಾಜಿತಃ ।
ಹಿತ್ವಾ ಪುರಂ ಭೂತಮಯಂ ಗಚ್ಛೇತ್ಸೂರ್ಯಮಯಂ ಪುರಂ ॥ ೬೨ ॥

---

ಅದು ಮೊದಲುಗೊಂಡು ದೇವನ ಎರಡು ಕಾಲುಗಳು ಸ್ಫುಟವಾಗಿ ಕಾಣಿಸದೆ ಮುಚ್ಚಲ್ಪಟ್ಟವಾಗಿವೆ. ಆದರೂ ತಪಿಸುವ ಮತ್ತು ಗ್ಲಾನಿಪಡಿಸುವ ಪ್ರಕಾಶವುಳ್ಳದ್ದು ಮಾತ್ರ ಆಯಿತು.

೫೯. ಇವನ ತೇಜಸ್ಸನ್ನು ಕಡತ (ಶಾತನ) ಮಾಡಿದುದರಿಂದ ಉದುರಿದ ತೇಜಃಕಣಗಳಿಂದ ವಿಶ್ವಕರ್ಮನು ಒಂದು ಚಕ್ರವನ್ನು ನಿರ್ಮಿಸಿದನು. ವಿಷ್ಣುವು ಭಯಂಕರರಾದ ದೈತ್ಯದಾನವರನ್ನು ಸಂಹರಿಸಲು ಆ ಚಕ್ರವು ಸಾಧನವಾಯಿತು.

೬೦. ಮಹಾಮತಿಯಾದ ವಿಶ್ವಕರ್ಮನು ಸಾಣೆಹಿಡಿದಾಗ ಉದುರಿದ ತೇಜಃಕಣಗಳಿಂದ ಶೂಲ, ಕತ್ತಿ, ಶಕ್ತಿ,ಗದೆ, ವಜ್ರ,ಬಿಲ್ಲು, ಗಂಡುಗೊಡಲಿ ಇವಸ್ನೂ ಇತರ ಆಯುಧಗಳನ್ನೂ ನಿರ್ಮಿಸಿ ಅವನ್ನು ನಾನಾ ದೇವತೆಗಳಿಗೆ ಕೊಟ್ಟನು.

೬೧. ತ್ರಿಮೂರ್ತಿಗಳಿಂದ ರಚಿತವಾದ ಈ ಸ್ತುತಿಯನ್ನು ಪ್ರಾತಃಕಾಲ ಸಾಯಂಕಾಲ ಎಂಬ ಎರಡು ಸಂಧ್ಯೆಗಳಲ್ಲೂ ಜಪಿಸುವ ಮನುಷ್ಯನ ಕುಲವು ಪಾವನವಾಗುವುದು. ಅಲ್ಲದೆ ಆತನು ವ್ಯಾಧಿಪೀಡಿತನೂ ಆಗುವುದಿಲ್ಲ.

೬೨. ಹೀಗೆ ಸ್ತುತಿ ಮಾಡಿದ ಮನುಷ್ಯನು ಸಂತಾನವಂತನೂ ಕಾರ್ಯಸಿದ್ಧಿ ಹೊಂದುವನೂ ಆಗಿ, ನೂರು ಸಂವತ್ಸರಗಳ ಕಾಲ ಬದುಕುತ್ತಾನೆ. ಮತ್ತು ಪುತ್ರ

ಭೂಯೋಽಪಿ ತುಷ್ಟುವುರ್ದೇವಾಸ್ತಥಾ ದೇವರ್ಷಯೋ ರವಿಂ ।
ವಾಗ್ಭಿರಿತ್ಥಮಶೇಷಸ್ಯ ತ್ರೈಲೋಕ್ಯಸ್ಯ ಸಮಾಗತಃ ॥ ೬೩ ॥

॥ ದೇವಾ ಊಚುಃ ॥

ನಮಸ್ತೇ ರವಿರೂಪಾಯ ಸೋಮರೂಪಾಯ ತೇ ನಮಃ ।
ನಮೋ ಯಜುಃಸ್ವರೂಪಾಯ ಅಥರ್ವಶಿರಸೇ ನಮಃ ॥ ೬೪ ॥

ಜ್ಞಾನೈಕಧಾಮಭೂತಾಯ ನಿರ್ಧೂತತಮಸೇ ನಮಃ ।
ಶುದ್ಧಜ್ಯೋತಿಃಸ್ವರೂಪಾಯ ನಿಸ್ತತ್ತ್ವಾಯಾಮಲಾತ್ಮನೇ ॥ ೬೫ ॥

ನಮೋಽಖಿಲಜಗದ್ವ್ಯಾಪ್ತಿಸ್ವರೂಪಾಯಾತ್ಮಮೂರ್ತಯೇ ।
ಸರ್ವಕಾರಣಭೂತಾಯ ನಿಷ್ಠಾಯೈ ಜ್ಞಾನಚೇತಸಾಂ ॥ ೬೬ ॥

ನಮೋಽಸ್ತು ಜ್ಞೇಯರೂಪಾಯ ಪ್ರಕಾಶೇ ಲಕ್ಷ್ಯರೂಪಿಣೇ ।
ಭಾಸ್ಕರಾಯ ನಮಸ್ತುಭ್ಯಂ ತಥಾ ಶಬ್ದಕೃತೇ ನಮಃ ॥ ೬೭ ॥

---

ವಂತನೂ, ಧನಿಕನೂ, ಎಲ್ಲಿಯೂ ಪರಾಜಯವಿಲ್ಲದವನೂ ಆಗಿ ಬಾಳಿ, ದೇಹತ್ಯಾಗ ಮಾಡಿದ ಮೇಲೆ ಸೂರ್ಯಲೋಕಕ್ಕೆ ಹೋಗುತ್ತಾನೆ.

೬೩. ತ್ರಿಲೋಕಗಳಿಂದಲೂ ಬಂದಿದ್ದ ದೇವತೆಗಳೂ ಋಷಿಗಳೂ ಪುನಃ ಈ ಪ್ರಕಾರವಾಗಿ ದೇವನನ್ನು ಸ್ತುತಿಸಿದರು.

೬೪-೬೫. ದೇವತೆಗಳು ಹೇಳುತ್ತಾರೆ—ಸೂರ್ಯಸ್ವರೂಪನೂ, ಚಂದ್ರಸ್ವರೂಪನೂ, ಯಜುರ್ವೇದ ಸ್ವರೂಪನೂ, ಅಥರ್ವಶಿರೋರೂಪನೂ, ಜ್ಞಾನಕ್ಕೆ ಮುಖ್ಯ ಸಾಧನನೂ, ಅಜ್ಞಾನನಾಶಕನೂ, ಪಂಚವಿಂಶತಿತತ್ತ್ವಗಳ ಸಂಬಂಧರಹಿತನೂ, ಪರಿಶುದ್ಧ ಸ್ವರೂಪನೂ, ಆದ ನಿನಗೆ ನಮಸ್ಕಾರ.

೬೬. ಸಮಸ್ತ ಈ ಜಗತ್ತನ್ನೂ ವ್ಯಾಪಿಸಿರುವ ಸ್ವರೂಪವುಳ್ಳವನೂ, ಪರಮಾತ್ಮ ಸ್ವರೂಪನೂ, ಸರ್ವಕ್ಕೂ ಕಾರಣನಾದವನೂ, ಜ್ಞಾನಿಗಳ ಮನಸ್ಸಿನಲ್ಲಿ ಆಸಕ್ತಿ ಸ್ವರೂಪನೂ ಆಗಿರುವ ನಿನಗೆ ನಮಸ್ಕಾರ.

೬೭. ಸಾಮಾನ್ಯವಾಗಿ ಎಲ್ಲಾ ವಿಧವಾದ ಇಂದ್ರಿಯಜ್ಞಾನಕ್ಕೆ ವಿಷಯವಾದ ವಸ್ತುಗಳ ಸ್ವರೂಪವುಳ್ಳವನೂ, ಪ್ರಕಾಶವಿರುವಾಗ ಚಕ್ಷುರ್ಗೋಚರವಾದ ವಸ್ತುಗಳ

ಸಂಸಾರಹೇತವೇ ಚೈವ ಸಂಧ್ಯಾಜ್ಯೋತ್ಸ್ನಾ ಕೃತೇನಮಃ ।
ತ್ವಂ ಸರ್ವಮೇತದ್ಭಗವಾನ್ ಜಗದ್ವೈ ಭ್ರಮತಿ ತ್ವಯಾ ॥ ೬೮ ॥

ಭ್ರಮತ್ವಾವಿದ್ಧಮಖಿಲಂ ಬ್ರಹ್ಮಾಂಡಂ ಸಚರಾಚರಂ ।
ತ್ವದಂಶುಭಿರಿದಂ ಸರ್ವಂ ಸಂಸ್ಪೃಷ್ಟಂ ಜಾಯತೇ ಶುಚಿ ॥ ೬೯ ॥

ಕ್ರಿಯತೇ ತ್ವತ್ಕರಸ್ಪರ್ಶಾಜ್ಜಲಾದೀನಾಂ ಪವಿತ್ರತಾ ।
ಹೋಮದಾನಾದಿಕೋ ಧರ್ಮೋ ನೋಪಕಾರಾಯ ಜಾಯತೇ ॥ ೭೦ ॥

ತಾವದ್ಯಾವನ್ನ ಸಂಯೋಗೀ ಜಗತ್ಯತ್ರ ಭವಾಞ್ಛುಚಿ ।
ಪ್ರಾತರ್ಹೋಮಂ ಪ್ರಶಸ್ತಂ ಹಿ ಉದಿತೇ ತ್ವಯಿ ಜಾಯತೇ ॥ ೭೧ ॥

---

ಸ್ವರೂಪನಾದವನೂ, ಪ್ರಕಾಶವನ್ನುಂಟುಮಾಡತಕ್ಕವನೂ, ಶಬ್ದವನ್ನುಂಟುಮಾಡತಕ್ಕವನೂ, ಆದ ನಿನಗೆ ನಮಸ್ಕಾರ.

೬೮. ಜನನ ಮರಣಾದಿಗಳನ್ನು ಉಂಟುಮಾಡತಕ್ಕವನೂ, ಸಂಧ್ಯಾಕಾಲದಲ್ಲಿ ಬೆಳದಿಂಗಳಿಗೆ ಸದೃಶವಾದ ಮಂದಪ್ರಕಾಶವನ್ನುಂಟುಮಾಡತಕ್ಕವನೂ, ಭಗವಂತನೂ, ಆದ ನಿನಗೆ ನಮಸ್ಕಾರ. ನೀನು ಇದೆಲ್ಲವೂ ಆಗಿರುತ್ತೀಯೆಯಾಗಿ ಜಗದ್ವಸ್ತುಗಳೆಲ್ಲವೂ ನಿನ್ನಿಂದ ಚಲಿಸುತ್ತವೆ.

೬೯-೭೦. ಚರ, ಅಚರಗಳಿಂದ ಕೂಡಿದ ಸಮಸ್ತ ಬ್ರಹ್ಮಾಂಡವೂ ಆ ನಿನ್ನ ಸಂಚಾರಕ್ಕೊಳಪಟ್ಟಿವೆ. ನಿನ್ನ ಕಿರಣವು ಅವುಗಳಿಗೆಲ್ಲಾ ತಗಲುವುದರಿಂದ ಅವು ಪರಿಶುದ್ಧವಾಗಿರುವುವು. ನಿನ್ನ ಕಿರಣಸ್ಪರ್ಶದಿಂದ ನೀರು ಮೊದಲಾದುವುಗಳಿಗೆ ಪಾರಿಶುಧ್ಯವುಂಟಾಗುತ್ತದೆ. ಹೋಮ ಮಾಡುವುದು; ದಾನ ಕೊಡುವುದು, ಮೊದಲಾದ ಧರ್ಮಕಾರ್ಯಗಳಿಂದ ಸಮಸ್ತ ಪ್ರಪಂಚಕ್ಕೆ ಅಷ್ಟೇನೂ ಉಪಕಾರವಾಗುವುದಿಲ್ಲ.

೭೧. ಜಗತ್ತಿನಲ್ಲಿ ಯಾವ ಪರ್ಯಂತ ವಸ್ತುವಿಗೆ ನಿನ್ನ ತೇಜಸ್ಸಂಪರ್ಕವಾಗಿರುವುದಿಲ್ಲವೋ ಅಲ್ಲಿಯವರೆಗೂ ಅದು ಶುಚಿಯಲ್ಲ. (ನಿನ್ನ ಬಿಸಿಲುಸೋಕದೇ ಯಾವುದೂ ಪರಿಶುದ್ಧವಲ್ಲ)

ಋಚೋಽಥ ಸಕಲಾ ಹ್ಯೇತಾ ಯಜೂಂಷಿ ತ್ವಂ ಜಗತ್ಪತೇ ।
ಸಕಲಾನಿ ಚ ಸಾಮಾನಿ ತಪತ್ಯೇವಂ ಜಗತ್ಸದಾ ॥ ೭೨ ॥

ಋಙ್ಮಯಸ್ತ್ವಂ ಜಗನ್ನಾಥ ಸ್ತ್ವಮೇವ ಚ ಯಜುರ್ಮಯಃ ।
ತಥಾ ಸಾಮಮಯಶ್ಚೈವ ತತೋ ನಾಥ ತ್ರಯೀಮಯಃ ॥ ೭೩ ॥

ತ್ವಮೇವ ಬ್ರಹ್ಮಣೋ ರೂಪಂ ಪರಂ ಚಾಪರಮೇವ ಚ ।
ಮೂರ್ತೋಽಮೂರ್ತಸ್ತಥಾ ಸೂಕ್ಷ್ಮಃ ಸ್ಥೂಲರೂಪತಯಾ ಸ್ಥಿತಃ ॥ ೭೪ ॥

ನಿಮೇಷಕಾಷ್ಠಾದಿಮಯಃ ಕಾಲರೂಪಃ ಕ್ಷಯಾತ್ಮಕಃ ।
ಪ್ರಸೀದ ಸ್ವೇಚ್ಛಯಾ ರೂಪಂ ಸ್ವತೇಜೋಮಯಮಾದಿಶ ॥ ೭೫ ॥

ಇತ್ಥಂ ಸಂಸ್ತೂಯಮಾನಸ್ತು ದೇವೋ ದೇವರ್ಷಿಭಿಸ್ತಥಾ ।
ಚಕ್ರೇ ಚ ಸ್ವಂ ತದಾ ತೇಜಸ್ತೇಜಸಾಂ ರಾಶಿರವ್ಯಯಃ ॥ ೭೬ ॥

---

೭೨. ನಿನ್ನ ಉದಯಕಾಲದಲ್ಲಿ ಪ್ರಾತರ್ಹೋಮವು ಪ್ರಶಸ್ತವು. ಜಗತ್ಪತಿಯೇ! ಈ ಸಮಸ್ತವಾದ ಋಕ್ಕುಗಳೂ, ಯಜುಸ್ಸುಗಳೂ, ಸಾಮಗಳೂ ಎಲ್ಲವೂ ನೀನೇ. ಈ ಜಗತ್ತು ನಿನ್ನಿಂದಲೇ ತಪಿಸುತ್ತದೆ.

೭೩–೭೪. ಎಲೈ ಲೋಕೇಶನೇ! ನೀನು ಋಗ್ವೇದಮಯನೂ, ಯಜುರ್ವೇದಮಯನೂ, ಸಾಮವೇದಮಯನೂ ಆಗಿ ಮೂರು ವೇದಗಳ ಸ್ವರೂಪನಾಗಿರುವೆ. ನೀನು ಪರಬ್ರಹ್ಮರೂಪನು, ಮತ್ತು ಅಪರಬ್ರಹ್ಮರೂಪನು, ಕ್ರಿಯಾಶ್ರಯವಾದ ಮೂರ್ತವೆನಿಸಿಕೊಂಡೂ, ಸೂಕ್ಷ್ಮರೂಪವಾಗಿ ಅಮೂರ್ತವೆನಿಸಿಕೊಂಡೂ ಇದ್ದೀಯೆ.

೭೫. ನೀನು ನಿಮೇಷ, ಕಾಷ್ಠ ಇವುಗಳಿಂದ ಏರ್ಪಟ್ಟ ಕಾಲಸ್ವರೂಪನಾಗಿರುವೆ. ನಿನ್ನ ಇಚ್ಛಾಪೂರ್ವಕವಾಗಿ ಸಾಣೆ ಹಿಡಿದುದರಿಂದ ಆಕಾರದಲ್ಲಿ ಕುಗ್ಗಿದ ನೀನು ಪ್ರಸನ್ನನಾಗಿ ಪ್ರಕಾಶಯುಕ್ತವಾದ ನಿನ್ನ ರೂಪವನ್ನು ತೋರಿಸು.

೭೬. ತೇಜೋರಾಶಿಯೂ, ನಾಶರಹಿತನೂ ಆದ ಸೂರ್ಯನು ದೇವತೆಗಳಿಂದಲೂ, ದೇವರ್ಷಿಗಳಿಂದಲೂ ಈ ರೀತಿಯಾಗಿ ಹೊಗಳಲ್ಪಟ್ಟವನಾಗಿ ತನ್ನ ಅಪರಿಮಿತ ತೇಜಸ್ಸನ್ನು ಸಂಕೋಚಮಾಡಿಕೊಂಡನು. ಹೀಗೆ ಸಂಕೋಚಿತವಾದ ಭಾಗಗಳಲ್ಲಿ ಕೆಲವು ಋಗ್ವೇದಸ್ವರೂಪಗಳೂ, ಕೆಲವು ಯಜರ್ವೇದಸ್ವರೂಪಗಳೂ, ಕೆಲವು ಸಾಮ

ಯತ್ತಸ್ಯ ಋಙ್ಮಯಂ ತೇಜೋ ಭವಿತಾ ತೇನ ಮೇದಿನೀ ।
ಯಜುರ್ಮಯೇನಾಪಿ ದಿವಂ ಸ್ವಯಂ ಸಾಮಮಯೋ ರವಿಃ ॥ ೭೭ ॥

ಶಾತಿತಾಸ್ತೇಜಸೋ ಭಾಗಾಃ ಯೇ ಚ ಸ್ಯುರ್ದಶಪಂಚ ಚ ।
ತಸ್ಯೈವ ತೇನ ಶರ್ವಸ್ಯ ಕೃತಂ ಶೂಲಂ ಮಹಾತ್ಮನಾ ॥ ೭೮ ॥

ಚಕ್ರಂ ವಿಷ್ಣೋರ್ವಸೂನಾಂ ಚ ಶಂಕರಸ್ಯ ಚ ದಾರುಣಂ ।
ಷಣ್ಮುಖಸ್ಯ ತಥಾ ಶಕ್ತಿಃ ಶಿಬಿಕಾ ಧನದಸ್ಯ ಚ ॥ ೭೯ ॥

ಅನ್ಯೇಷಾಂ ಚಾಸುರಾರೀಣಾಂ ಶಸ್ತ್ರಾಣ್ಯಗ್ರಾಣಿ ಯಾನಿ ವೈ ।
ಯಕ್ಷ ವಿದ್ಯಾಧರಾಣಾಂ ಚ ತಾನಿ ಚಕ್ರೇ ಸ ವಿಶ್ವಕೃತ್ ॥ ೮೦ ॥

ತತಶ್ಚ ಷೋಡಶಂ ಭಾಗಂ ಬಿಭರ್ತಿ ಭಗವಾನ್ರವಿಃ ।
ತತ್ತೇಜಸಃ ಪಂಚದಶ ಶಾತಿತಾ ವಿಶ್ವಕರ್ಮಣಾ ॥ ೮೧ ॥

---

ವೇದಸ್ವರೂಪಗಳೂ ಆದುವು. ಋಗ್ವೇದಸ್ವರೂಪವಾದ ತೇಜಸ್ಸಿನಿಂದ ಭೂಮಿಯು ಉತ್ಪನ್ನವಾಯಿತು. ಯಜೂರ್ವೇದಾತ್ಮಕವಾದ ತೇಜಸ್ಸಿನಿಂದ ಸ್ವರ್ಗವು ಉತ್ಪನ್ನವಾಯಿತು. ಸಾಮವೇದವು ಸ್ವಯಂ ಸೂರ್ಯಸ್ವರೂಪವಾಯಿತು.

೭೭–೭೮. ಶಾತನ ಮಾಡುವಾಗ (ಕಡೆಯುವಾಗ) ಸೂರ್ಯದೇಹದಿಂದ ಉದುರಿದ ಕಣಗಳ ಹದಿನೈದುಭಾಗಗಳಿಂದ ತ್ರಿಶೂಲವನ್ನು ಮಾಡಿ ಮಹಾತ್ಮನಾದ ವಿಶ್ವಕರ್ಮನು ಶಿವನಿಗೆ ಅದನ್ನು ಕೊಟ್ಟನು.

೭೯. ಇದಲ್ಲದೆ ಆ ವಿಶ್ವಕರ್ಮನು ಸಾಣೆ ಹಿಡಿದಾಗ ಉದುರಿದ ತೇಜೋಭಾಗದಿಂದ ವಿಷ್ಣುವಿಗೆ ಚಕ್ರಾಯುಧವನ್ನೂ, ವಸುಗಳಿಗೂ ಈಶಾನನಿಗೂ ಶೂಲವನ್ನೂ, ಷಣ್ಮುಖನಿಗೆ ಕ್ರೂರವಾದ ಶಕ್ತ್ಯಾಯುಧವನ್ನೂ, ಕುಬೇರನಿಗೆ ಶಿಬಿಕವೆಂಬ ಖಡ್ಗವನ್ನೂ ನಿರ್ಮಿಸಿ ಕೊಟ್ಟನು.

೮೦. ಆ ವಿಶ್ವಕರ್ಮನು ರಾಕ್ಷಸರ ಅರಿಗಳಾದ ಇತರ ದೇವತೆಗಳು, ಯಕ್ಷರು, ವಿದ್ಯಾಧರರು ಇವರಿಗೂ ಭಯಂಕರವಾದ ಶಸ್ತ್ರಗಳನ್ನು ಮಾಡಿಕೊಟ್ಟನು.

೮೧. ಅನಂತರ ಆ ಸೂರ್ಯದೇವನು ಹದಿನಾರನೆಯ ತೇಜೋಭಾಗವನ್ನು ಧರಿಸಿದನು. ಹೀಗೆ ಸೂರ್ಯನತೇಜಸ್ಸಿನಲ್ಲಿ ಹದಿನೈದು ಭಾಗಗಳನ್ನು ವಿಶ್ವಕರ್ಮನು ಕಡೆದು ಹಾಕಿದನು.

**ತತಃ ಸುರೂಪದೃಗ್ಭಾನುಃ ಉತ್ತರಾನಗಮತ್ಕುರೂನ್ ।**
**ದದರ್ಶ ತತ್ರ ಸಂಜ್ಞಾಂ ಚ ವಡವಾರೂಪಧಾರಿಣೀಂ　　॥ ೮೨ ॥**

**ಇತ್ಯೇತನ್ನಿಖಿಲಂ ಭಾನೋಃ ಕಥಿತಂ ಮುನಿಸತ್ತಮಾಃ ।**
**ಶೃಣುಯಾದ್ಯೋ ನರೋ ಭಕ್ತ್ಯಾ ಅಶ್ವಮೇಧಫಲಂ ಲಭೇತ್　　॥ ೮೩ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಬ್ರಹ್ಮರ್ಷಿ ಸಂವಾದೇ ಪರಿಲೇಖನ ವರ್ಣನಂ ನಾಮ ತ್ರಯೋವಿಂಶತ್ಯುತ್ತರ ಶತತಮೋಽಧ್ಯಾಯಃ**



೮೨. ಅನಂತರ ಒಳ್ಳೆಯ ರೂಪವಂತನಾಗಿ ಕಾಣಿಸುವಂತಾದ ಸೂರ್ಯನು ಉತ್ತರ ಕುರುದೇಶಕ್ಕೆ ಹೋದನು. ತನ್ನ ಹೆಂಡತಿಯಾದ ಸಂಜ್ಞೆಯು ಅಲ್ಲಿ ಹೆಣ್ಣು ಕುದುರೆಯ ರೂಪದಿಂದ ಇದ್ದುದನ್ನು ಕಂಡನು.

೮೩. ಎಲೈ ಋಷಿಶ್ರೇಷ್ಠನೇ! ಸೂರ್ಯನ ಸಮಸ್ತ ವೃತ್ತಾಂತವನ್ನೂ ಹೇಳಿದೇನೆ. ಇದನ್ನು ಯಾವ ಮನುಷ್ಯನು ಭಕ್ತಿಯಿಂದ ಕೇಳುವನೋ ಅವನು ಅಶ್ವಮೇಧದ ಫಲವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಬ್ರಹ್ಮರ್ಷಿ ಸಂವಾದದಲ್ಲಿ ಪರಿಲೇಖನವರ್ಣನವೆಂಬ ನೂರ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಚತುರ್ವಿಂಶೋತ್ತರಶತತಮೋಽಧ್ಯಾಯಃ

॥ ಬ್ರಹ್ಮೋವಾಚ ॥

ವಕ್ಷ್ಯಾಮ್ಯಹಂ ತೇ ಪುನರೇವ ದಿಂಡೇ
ಸೂರ್ಯಸ್ಯ ಸರ್ವಪ್ರವರಪ್ರಧಾನಂ
ವ್ಯೋಮ್ನಃ ಪರಂ ತಿಷ್ಠತಿ ಯಸ್ತು ಮಗ್ನಃ
ಸ ಉಚ್ಯತೇ ರುದ್ರ ಇಹಾಪಿ ದಿಂಡೀ ॥ ೧ ॥

ಛಿತ್ವಾ ಪುರಾ ಬ್ರಹ್ಮಶಿರಃ ಕಿಲಾಸೌ
ಪ್ರಗೃಹ್ಯ ತತ್ತಸ್ಯ ಶಿರಃ ಕಪಾಲಂ
ತತೋಽಹ್ಯಸಾವಾಶ್ರಮಮುತ್ತಮಂ ಶಿವೋ
ಬಹೂದಕೈಃ ಪುಷ್ಪಫಲೈಃ ಸಮೃದ್ಧಂ ॥ ೨ ॥

---

## ನೂರಇಪ್ಪತ್ತನಾಲ್ಕನೆಯ ಅಧ್ಯಾಯ

೧. ಬ್ರಹ್ಮನು ಹೇಳುತ್ತಾನೆ—ಅಯ್ಯಾ ದಿಂಡಿಯೇ! ಸೂರ್ಯನ ಪರಿವಾರದಲ್ಲೆಲ್ಲಾ ಮುಖ್ಯನಾದವನ ವಿಚಾರವನ್ನು ಪುನಃ ಹೇಳುತ್ತೇನೆ. ಅಂತರಿಕ್ಷದಿಂದ ಹೊರಗೆ ಮಗ್ನನಾಗಿರುವ ರುದ್ರನೇ ಇಲ್ಲಿ ದಿಂಡಿಯೆನಿಸಿಕೊಂಡಿರುತ್ತಾನೆ.

೨. ಪೂರ್ವದಲ್ಲಿ ಶಿವನು ಬ್ರಹ್ಮ ಶಿರಸ್ಸನ್ನು ಕತ್ತರಿಸಿ ಆ ಅವನ ತಲೆಬುರುಡೆಯನ್ನು ಕೈಯ್ಯಲ್ಲಿ ಹಿಡಿದುಕೊಂಡು ಜಲ, ಪುಷ್ಪ, ಫಲಗಳು ಇವುಗಳಿಂದ ಸಮೃದ್ಧವಾಗಿರುವ ದಾರುವನವನ್ನು ಬತ್ತಲೆಯಾಗಿಯೇ ಪ್ರವೇಶಿಸಿ ಭಿಕ್ಷೆ ಬೇಡತೊಡಗಿದನು.

ನಗ್ನಃ ಸ್ವಯಂ ದಾರುವನಪ್ರವಿಷ್ಟಂ
ದೃಷ್ಟ್ವಾ ಚ ತಂ ಭೈಕ್ಷ್ಯಚರಂ ಸುರೇಶಂ
ಯೋಷಿತ್ಸುತಾಃ ಸಂಕ್ಷುಭಿತಾಸ್ತು ಸರ್ವೇ
ಜಗ್ಮುರ್ಹರಂ ತಂ ಮುನಯಃ ಸುರುಷ್ಟಾಃ ॥ ೩ ॥

ಸ ಹನ್ಯಮಾನೋ ಮುನಿಮುಖ್ಯಸಂಘೈಃ
ಗೃಹೀತಲೋಷ್ಟೈ ರ್ಧೃತದಂಡಕಾಷ್ಟೈಃ
ವಿಹಾಯ ದಿಂಡಿಃ ಸ ತು ತಾನ್ ಸುರರ್ಷೀನ್
ತತೋ ರವೇರ್ಲೋಕಮಥಾಜಗಾಮ ॥ ೪ ॥

ಆಗಚ್ಛಮಾನಂ ಪ್ರಮಥಾಸ್ತಮೂಚುಃ
ದೇವೇಶ ನಿತ್ಯಂ ಭ್ರಮಸೇ ಕಿಮರ್ಥಂ
ಸ ಪ್ರಾಹ ತಾನ್ ಪಾಪವಿಮೋಚನಾರ್ಥಂ
ಅಟಾಮಿ ತೀರ್ಥಾನಿ ಸುರಾಲಯಾಂಶ್ಚ ॥ ೫ ॥

ತೇ ಭೂಯ ಊಚುಃ ಪ್ರಮಥಾಸ್ತಮೇವಂ
ಅತ್ರೈವ ತಿಷ್ಠಸ್ವ ರವೇಃ ಪುರಸ್ತಾತ್

---

೩. ಭಿಕ್ಷಾಟನ ಮಾಡುತ್ತಿರುವ ಸುರೇಶನಾದ ಅವನನ್ನು ನೋಡಿ ಅಲ್ಲಿದ್ದ ಹೆಂಗಸರು ಮಕ್ಕಳೆಲ್ಲಾ ಗಾಬರಿಗೊಂಡರು. ಅಲ್ಲಿದ್ದ ಋಷಿಗಳು ಆ ಶಿವನು ಆ ರೂಪ ದಲ್ಲಿರುವುದನ್ನು ನೋಡಿ ಕೋಪಗೊಂಡು ಅವನ ಸಮೀಪಕ್ಕೆ ಬಂದರು.

೪. ಋಷಿಪ್ರವರರು ಗುಂಪುಗೂಡಿ ಮಣ್ಣು, ಹೆಂಚು, ಕೋಲು, ಕಟ್ಟಿಗೆ ಇವು ಗಳನ್ನು ಹಿಡಿದುಕೊಂಡು ಬಂದು ; ಭಿಕ್ಷುಕರೂಪಿಯೂ, ದಿಗಂಬರನೂ ಆದ ಶಿವನನ್ನು ಹೊಡೆಯಲಾಗಿ ಆಗ ಶಿವನು ಆ ಋಷಿಗಳ ಸಮೀಪವನ್ನು ಬಿಟ್ಟು ದಿಂಡಿಯಾಗಿ ಸೂರ್ಯಲೋಕಕ್ಕೆ ಬಂದನು.

೫. ಹಾಗೆ ಅಲ್ಲಿಗೆ ಬರುತ್ತಿರುವಾಗ ಪ್ರಮಥಗಣಗಳು ಅವನನ್ನು ಕುರಿತು ಸ್ವಾಮೀ! 'ದೇವೇಶನೇ, ನಿತ್ಯವೂ ಸುಮ್ಮನೆ ಏತಕ್ಕೆ ತಿರುಗುತ್ತೀಯೆ' ಎಂದು ಕೇಳಿದರು. ಆದಕ್ಕೆ ಆ ದಿಗಂಬರನು ಆ ಪ್ರಮಥಗಣಗಳನ್ನು ಕುರಿತು 'ನನ್ನ ಪಾಪವಿಮೋಚ ನೆಗಾಗಿ ತೀರ್ಥಕ್ಷೇತ್ರಗಳು, ದೇವಾಲಯಗಳು ಇವುಗಳನ್ನು ಸುತ್ತುತ್ತೇನೆ' ಎಂದನು.

ಶುದ್ಧಿಂ ತವೈಷ ಪ್ರಕರಿಷ್ಯತೀತಿ
ಶುದ್ಧಸ್ತತೋ ಯಾಸ್ಯಸಿ ರುದ್ರಲೋಕಂ ॥ ೬ ॥

ಇತ್ಯೇವಮುಕ್ತಃ ಪ್ರಮಥೈಸ್ತು ರುದ್ರ
ಸ್ತತ್ರೈವ ತಸ್ಥೌ ರವಿತೋಷಣಾಯ
ನಗ್ನೋ ಜಟೀ ಜುಷ್ಟಕಪಾಲಪಾಣೀ
ರೂಪೇಣ ಚೈವಾಪ್ರತಿಮಸ್ತ್ರಿಲೋಕೇ ॥ ೭ ॥

ಉಕ್ತಃ ಸ ತುಷ್ಟೇನ ತತಃ ಸವಿತ್ರಾ
ಪ್ರೀತೋಽಸ್ಮಿ ದೇವಾಗಮನಾತ್ತವಾಹಂ
ಮದ್ದರ್ಶನಾದೇವ ಭವಾನ್ವಿಶುದ್ಧೋ
ದಿಂಡೀತಿ ನಾಮ್ನಾ ಭವಿತಾಸಿ ಲೋಕೇ ॥ ೮ ॥

ಅಷ್ಟಾದಶೈತೇ ಪ್ರಮಥಾಸ್ತು ಭಾನೋಃ
ಚತುರ್ದಶಾನ್ಯೇ ತು ರವೇ ರಥಸ್ಥಾಃ

---

೬. ಪ್ರಮಥಗಣಗಳು ಪುನಃ ಅವನನ್ನು ಕುರಿತು 'ನೀನು ಇಲ್ಲಿಯೇ ಸೂರ್ಯನ ಸಮ್ಮುಖದಲ್ಲಿದ್ದುಬಿಡು : ಈ ಸೂರ್ಯನು ನಿನಗೆ ಶುದ್ಧಿಯನ್ನು ಉಂಟುಮಾಡುತ್ತಾನೆ. ನೀನು ಶುದ್ಧವಾದಮೇಲೆ ಮತ್ತೆ ರುದ್ರಲೋಕಕ್ಕೆ ಹೋಗುವೆಯಂತೆ' ಎಂದರು.

೭. ಪ್ರಮಥಗಣಗಳು ಹೀಗೆ ಹೇಳಲಾಗಿ ರುದ್ರನು ಸೂರ್ಯನನ್ನು ಸಂತೋಷ ಪಡಿಸುವುದಕ್ಕಾಗಿ ಬತ್ತಲೆಯಾಗಿಯೂ, ಜಟಾಧಾರಿಯಾಗಿಯೂ. ಕೈಯಲ್ಲಿ ಕಪಾಲ ವನ್ನು ಹಿಡಿದವನಾಗಿಯೂ, ತ್ರಿಲೋಕದಲ್ಲಿಯೂ ಅಸದೃಶವಾದ ರೂಪವುಳ್ಳವನಾ ಗಿಯೂ ಆ ಸೂರ್ಯಲೋಕದಲ್ಲಿಯೇ ನಿಂತನು.

೮. ಕೆಲಕಾಲದ ಅನಂತರ ಸೂರ್ಯನು ಅವನ ಭಕ್ತಿಗೆ ಸಂತುಷ್ಟನಾಗಿ ಅವ ನನ್ನು ಕುರಿತು ಎಲೈ ದೇವನೇ ! ನೀನು ಬಂದದ್ದು ಬಹಳ ಸಂತೋಷ. ನಾನು ಸುಪ್ರೀತನಾಗಿದ್ದೇನೆ. ನನ್ನ ದರ್ಶನದಿಂದಲೇ ನೀನು ಶುದ್ಧನಾದೆ. ಲೋಕದಲ್ಲಿ ದಿಂಡಿ ಎಂಬ ಹೆಸರಿನಿಂದ ಪ್ರಸಿದ್ಧನಾಗುತ್ತೀ.

೯. ಸೂರ್ಯನ ಪರಿದವರಾಗಿ ಪ್ರಮಥರು ಹದಿನೆಂಟು ಮಂದಿ ಇರುವರು. ಸೂರ್ಯನ ರಥದಲ್ಲಿ ಇರತಕ್ಕವರು ಬೇರೆ ಹದಿನಾಲ್ಕು ಮಂದಿ. ಅವರಲ್ಲಿ

ದ್ವೇ ದೇವತೇ ದ್ವೌ ಚ ಋಷಿಪ್ರಧಾನೌ
ಗಂಧರ್ವಸರ್ಪಾವಪಿ ತಾವದೇವ ॥ ೯ ॥

ಯಕ್ಷೌ ಚ ಸಿದ್ಧೌ ಚ ನಿಶಾಚರೌ ಚ
ಆದಿತ್ಯಜಾವಪ್ಸರಸಾಂ ಪ್ರಧಾನೇ
ವಸಂತಿ ತೇ ಹ್ಯಸ್ತ ಉಶಂತಿ ಸೂರ್ಯೇ
ತೇಷಾಮಶೀತಿಶ್ಚ ರುತ್ತರಾ ಸಾ ॥ ೧೦ ॥

ಇತ್ಯಾದಿ ದೇವಪ್ರವರಾಸ್ತು ಸರ್ವೇ ।
ಧಾತ್ವರ್ಥಶಬ್ದೈಶ್ಚ ಭವಂತಿ ಸಿದ್ಧಾಃ ॥ ೧೧ ॥

॥ ಋಷಯ ಊಚುಃ ॥

ವಿಸ್ತರಾದ್ಬ್ರೂಹಿ ಮೇ ಬ್ರಹ್ಮನ್ ಪ್ರವರಾನ್ಧಾತುವಾಚಕಾನ್ ।
ಯತಶ್ಚ ಕೌತುಕಂ ಬ್ರಹ್ಮನ್ನಸ್ಮಾಕಮಿಹಜಾಯತೇ ॥ ೧೨ ॥

---

ಇಬ್ಬರು ದೇವತೆಗಳು, ಇಬ್ಬರು ಪ್ರಧಾನರಾದ ಋಷಿಗಳು, ಇಬ್ಬರು ಗಂಧರ್ವರು, ಇಬ್ಬರು ನಾಗರು.

೧೦. ಇಬ್ಬರು ಯಕ್ಷರು, ಇಬ್ಬರು ಸಿದ್ಧರು, ಇಬ್ಬರು ರಾಕ್ಷಸರು ಇವರೇ ಈ ಹದಿನಾಲ್ಕು ಮಂದಿ ರಥದಲ್ಲಿರುವವರು. ಆದಿತ್ಯರು ಇಬ್ಬರು, ಅಪ್ಸರಸ್ತ್ರೀ ಮುಖ್ಯರಿಬ್ಬರು ಇವರು ಸೂರ್ಯನಲ್ಲಿಯೇ ಇರುತ್ತಾರೆ. ಆರು ಋತುಗಳಲ್ಲಿಯೂ ಸರದಿಯಾಗಿ ಬರುವ ಇವರೆಲ್ಲಾ ಒಟ್ಟು ಎಂಭತ್ತುನಾಲ್ಕು ಜನಗಳೆಂದು ಗೊತ್ತಾಗಿದೆ.

೧೧. ಇವರೇ ಮೊದಲಾದ ದೇವಶ್ರೇಷ್ಠರಿಗೆ ಧಾತ್ವರ್ಥಸಿದ್ಧಗಳಾದ ಶಬ್ದಗಳಿಂದ ಹೆಸರು ಏರ್ಪಟ್ಟಿರುವುದರಿಂದ ಇವರು ಸಿದ್ಧರೆನಿಸಿದರು.

೧೨. ಋಷಿಗಳು ಹೇಳುತ್ತಾರೆ—ಎಲೈ ಬ್ರಹ್ಮನೇ! ನಮಗೆ ತಿಳಿದುಕೊಳ್ಳಬೇಕೆಂದು ಕುತೂಹಲವಾಗಿರುವುದರಿಂದ ಯಾವ ಧಾತುವಿನ ಅರ್ಥದಿಂದ ಪ್ರವರರ ಯಾವ ಹೆಸರುಗಳು ವ್ಯುತ್ಪನ್ನ ಶಬ್ದಗಳಾಗಿವೆ. ಎಂಬುದನ್ನು ನಮಗೆ ವಿಸ್ತಾರವಾಗಿ ಹೇಳು ಎಂದರು.

॥ ಬ್ರಹ್ಮೋವಾಚ ॥
ಭೂಯಸ್ತವ ಪ್ರವಕ್ಷ್ಯಾಮಿ ದಂಡನಾಯಕಪಿಂಗಲೌ ।
ರಾಜ್ಞಸ್ರೌಷಾದಯಶ್ಚಾನ್ಯೇ ದಿಗ್ದೇವಾ ದಿಂಡಿನಾ ಸಹ ॥ ೧೩ ॥

ಮಯಾಸಹ ಸಮಾಗಮ್ಯ ಪುರಾ ದೇವೈರ್ವಿಚಾರಿತಂ ।
ಏಷ ಕಾರುಣಿಕಃ ಸೂರ್ಯೋ ಯುಧ್ಯತೇ ದಾನವೈಃ ಸಹ ॥ ೧೪ ॥

ತೇ ತು ಲಬ್ಧವರಾ ಭೂತ್ವಾ ಅಮಾತ್ಯಾದ್ಯಾಹ್ಯಭೀಕ್ಷ್ಣಶಃ ।
ಆದಿತ್ಯಂ ಮನ್ಯಮಾನಾಸ್ತೇ ತಪಂತಂ ಹಂತುಮುದ್ಯತಾಃ ॥ ೧೫ ॥

ತಸ್ಮಾತ್ತೇಷಾಂ ವಿಘಾತಾರ್ಥಂ ಪ್ರವರಾಶ್ಚ ಭವಾಮಹೇ ।
ಅಸ್ಮಾಭಿಃ ಪ್ರತಿರುದ್ಧಾಸ್ತೇ ನ ದ್ರಕ್ಷ್ಯಂತಿ ದಿವಾಕರಂ ॥ ೧೬ ॥

ಸಂಮಂತ್ರ್ಯೈವಂ ತತಃ ಸ್ಕಂದೋ ವಾಮಪಾರ್ಶ್ವೇ ರವೇಃ ಸ್ಥಿತಃ ।
ದಂಡನಾಯಕಸಂಜ್ಞಸ್ತು ಸರ್ವಲೋಕಸ್ಯ ಸ ಪ್ರಭುಃ ॥ ೧೭ ॥

---

೧೩. ಬ್ರಹ್ಮನು ಹೇಳುತ್ತಾನೆ—ದಂಡನಾಯಕ, ಪಿಂಗಳ ಇವರ ವಿಚಾರವನ್ನೂ ದಿಂಡಿಯ ಜತೆಯಲ್ಲಿರುವ ರಾಜ್ಞ ಸ್ರೌಷ ಮೊದಲಾದ (ಅಂಗರಕ್ಷಕರು) ಇತರ ದಿಗ್ದೇವತೆಗಳು ಇವರ ವಿಚಾರವನ್ನೂ ಪುನಃ ಹೇಳುವೆನು.

೧೪. ಪೂರ್ವದಲ್ಲಿ ದೇವತೆಗಳು ನನ್ನ ಸಮೀಪಕ್ಕೆ ಬಂದು, ಲೋಕದ ವಿಷಯದಲ್ಲಿ ಕರುಣಾಮಯನಾದ ಈ ಸೂರ್ಯನು ದಾನವರೊಡನೆ ಯುದ್ಧಮಾಡಬೇಕಾಗುತ್ತದೆ.

೧೫. (ದಾನವರಾದ) ಅವರು ಹಿಂದೆ, ವರ ಪಡೆದು ಮಂದೇಹರೆಂಬ ಹೆಸರು ಹೊಂದಿ ಅಮಾತ್ಯರಾಗಿ(ಎಂದರೆ ಅಮಾಃ–ಸಹ ಅಮಾಭವಂತೀತ್ಯಮಾತ್ಯಾಃ ಸೂರ್ಯನ ಜೊತೆಯಲ್ಲಿಯೇ ಇರತಕ್ಕವರಾಗಿ) ಇವರು ಪದೇ ಪದೇ ತಪಿಸುತ್ತಿರುವ ವ್ಯಕ್ತಿಯನ್ನು ಸೂರ್ಯನೆಂದು ತಿಳಿದುಕೊಂಡು ಕೊಲ್ಲುವುದಕ್ಕೆ ಉದ್ಯುಕ್ತರಾಗುತ್ತಾರೆ. ಆದ್ದರಿಂದ ಆ ಮಂದೇಹರ ನಾಶಕ್ಕಾಗಿ ನಾವು (ದೇವತೆಗಳು) ಪ್ರವರರೆಂಬ ಹೆಸರಿನಿಂದ ಸೂರ್ಯಮಂಡಲದಲ್ಲಿ ಇದ್ದೇವೆ. ನಾವು ಸೂರ್ಯನಿಗೆ ಅಡ್ಡಲಾಗಿ ಮರೆಯಾಗಿ ನಿಂತುಬಿಡುವುದರಿಂದ ಸೂರ್ಯನನ್ನು ಅವರು ಕಾಣುವುದಿಲ್ಲ.

೧೭. ಹೀಗೆ ಆಲೋಚನೆ ಮಾಡಿ ಸರ್ವಲೋಕ ಪ್ರಭುವಾದ ಸ್ಕಂದನು ಸೂರ್ಯನ ಎಡಗಡೆ ದಂಡನಾಯಕ ಸಂಜ್ಞನಾಗಿ ನಿಂತನು.

ಉಕ್ತಶ್ಚ ಸ ತದಾರ್ಕೇಣ ತ್ವಂ ಪ್ರಜಾದಂಡನಾಯಕಃ ।
ದಂಡನೀತಿಕರೋ ಯಸ್ಮಾತ್ತ ಸ್ಮಾತ್ತ್ವಂ ದಂಡನಾಯಕಃ ॥ ೧೮ ॥

ಲಿಖತೇ ಯಃ ಪ್ರಜಾನಾಂ ಚ ಸುಕೃತಂ ಯಚ್ಚ ದುಷ್ಕೃತಂ ।
ಅಗ್ನಿರ್ದಕ್ಷಿಣಪಾರ್ಶ್ವೇ ತು ಪಿಂಗಲತ್ವಾತ್ಸ ಪಿಂಗಲಃ ॥ ೧೯ ॥

ಅಶ್ವಿನೌ ಚಾಪಿ ಸೂರ್ಯಸ್ಯ ಪಾರ್ಶ್ವಯೋರುಭಯೋಃ ಸ್ಥಿತೌ ।
ಅಶ್ವರೂಪಾತ್ಸಮುತ್ಪನ್ನೌ ತೇನ ತಾವಾಶ್ವಿನೌ ಸುರೌ ॥ ೨೦ ॥

ದ್ವಾರಪಾಲೌ ಸ್ಮೃತೌ ತಸ್ಯ ರಾಜ್ಞಃಸ್ರೌಷೌ ಮಹಾಬಲೌ ।
ಕಾರ್ತಿಕೇಯಃ ಸ್ಮೃತೋ ರಾಜ್ಞಃ ಸ್ರೌಷಶ್ಚಾಪಿ ಹರಃ ಸ್ಮೃತಃ ॥ ೨೧ ॥

ರಾಜೃದೀಪ್ತೌ ಸ್ಮೃತೋ ಧಾತುರ್ನಕಾರಸ್ತಸ್ಯ ಪ್ರತ್ಯಯಃ ।
ಸುರಸೇನಾಪತಿತ್ವೇನ ಸ ಯಸ್ಮಾದ್ದೀಪ್ಯತೇ ಸದಾ
ತಸ್ಮಾತ್ಸ ಕಾರ್ತಿಕೇಯಸ್ತು ನಾಮ್ನಾ ರಾಜ್ಞ ಇತಿ ಸ್ಮೃತಃ ॥ ೨೨ ॥

---

೧೮. ಆಗ ಸೂರ್ಯನು ಆತನನ್ನು ಕುರಿತು ನೀನು ಪ್ರಜೆಗಳಿಗೆ ದಂಡವಿಧಾನ ಮಾಡತಕ್ಕ ಅಧಿಕಾರಿಯಾಗಿದ್ದೀ. ಆದರಿಂದಲೂ ದಂಡನೀತಿ ಶಾಸ್ತ್ರವನ್ನು ನೀನು ಏರ್ಪಡಿಸಿದ್ದೀ. ಆದುದರಿಂದಲೂ ನೀನು ದಂಡನಾಯಕನಾಗಿರು ಎಂದನು.

೧೯. ಪ್ರಜೆಗಳ ಪುಣ್ಯವನ್ನೂ ಪಾತಕವನ್ನೂ ಬರೆದುಕೊಳ್ಳುವುದೇ ಮುಖ್ಯ ಕೆಲಸವಾಗಿ ಬಲಭಾಗದಲ್ಲಿ ಅಗ್ನಿಯು ಇದ್ದಾನೆ. ಅವನು ಪಿಂಗಳವರ್ಣದವನಾಗಿ ಇದ್ದುದರಿಂದ ಅವನಿಗೆ ಪಿಂಗಳನೆಂದೇ ಹೆಸರಾಯಿತು.

೨೦. ಅಶ್ವಿನೀ ದೇವತೆಗಳೆಂಬವರಿಬ್ಬರು ಸೂರ್ಯನ ಉಭಯ ಪಾರ್ಶ್ವಗಳಲ್ಲಿಯೂ ಇದ್ದಾರೆ. ಅಶ್ವರೂಪದ ರಾಜ್ಞಿಯಿಂದ ಉತ್ಪನ್ನರಾದುದರಿಂದ ಅವರಿಗೆ ಅಶ್ವಿನೀ ದೇವತೆಗಳೆಂದು ಹೆಸರಾಯಿತು.

೨೧. ಶ್ರೇಷ್ಠರೂ ಮಹಾಬಲಶಾಲಿಗಳೂ ಆದ ರಾಜ್ಞ ಮತ್ತು ಸ್ರೌಷ ಇವರಿಬ್ಬರೂ ಸೂರ್ಯನ ದ್ವಾರಪಾಲಕರು. ಅವರಲ್ಲಿ ಕಾರ್ತಿಕೇಯನೇ ರಾಜ್ಞ ಸಂಜ್ಞಕನು, ಹರನೇ ಸ್ರೌಷ ಸಂಜ್ಞಕನೂ ಆದರು.

೨೨. ದೀಪ್ತ್ಯರ್ಥವಾದ ರಾಜೃಧಾತುವಿಗೆ ನ್ ಪ್ರತ್ಯಯ ಸೇರಿ ನಿಷ್ಪನ್ನವಾದ ರಾಜ್ಞನ್ ಪ್ರಕೃತಿಯ ನಾಮವಾಚಕವಾಗಿ ರಾಜ್ಞ ಎಂದು ಸಿದ್ಧವಾಗುತ್ತದೆ. ದೇವ

ಸ್ರುಗತೌ ಚ ಸ್ಮೃತೋ ಧಾತುರ್ಯಸ್ಯ ಸ ಪ್ರತ್ಯಯಃ ಸ್ಮೃತಃ ।
ಗಚ್ಛತೀತಿ ರಹಸ್ತಸ್ಮಾತ್ಪರ್ಯಾಯಾತ್ ಸ್ರೌಷ ಉಚ್ಯತೇ ॥ ೨೩ ॥

ಪ್ರಥಮಂ ಯದ್ಭವೇದ್ದ್ವಾರಂ ಧರ್ಮಾರ್ಥಾಭ್ಯಾಂ ಸಮಾಶ್ರಿತಂ ।
ತತ್ರೈತೌ ಸಂಸ್ಥಿತೌ ದೇವೌ ಲೋಕಪೂಜ್ಯಾದ್ವಿಜೋತ್ತಮಾಃ ॥ ೨೪ ॥

ದ್ವಿತೀಯಾಯಾಂ ತು ಕಕ್ಷ್ಯಾಯಾಂ ಅಪ್ರಧೃಷ್ಯೌ ವ್ಯವಸ್ಥಿತೌ ।
ಪಕ್ಷಿಪ್ರೇತಾಧಿಪೌ ನಾಮ್ನಾ ಸ್ಮೃತೌ ಕಲ್ಮಾಷಪಕ್ಷಿಣೌ ॥ ೨೫ ॥

ವರ್ಣಸ್ಯ ಶಬಲತ್ವಾಚ್ಚ ಯಮಃ ಕಲ್ಮಾಷ ಉಚ್ಯತೇ ।
ಪಕ್ಷಾವಸ್ಯೇತಿ ಯಃ ಪಕ್ಷೀ ಗರುಡಃ ಪರಿಕೀರ್ತಿತಃ ॥ ೨೬ ॥

ಸ್ಥಿತೋ ದಕ್ಷಿಣತಸ್ತಸ್ಯ ದಂಡಹಸ್ತಸಮನ್ವಿತಃ ।
ಉತ್ತರೇಣ ಸ್ಥಿತೋಽರ್ಕಸ್ಯ ಕುಬೇರಶ್ಚ ವಿನಾಯಕಃ ॥ ೨೭ ॥

---

ಸೇನಾಪತಿಯಾಗಿ ದೇದೀಪ್ಯಮಾನನಾಗಿರೋಣದರಿಂದ ರಾಜ್ಞ ಎಂಬುದು ಕಾರ್ತಿಕೇಯನ ಹೆಸರಾಗಿರುತ್ತದೆ ಎಂದು ಪ್ರಸಿದ್ಧವಾಗಿದೆ.

೨೩. ಗತ್ಯರ್ಥಕವಾದ ಸ್ರು ಧಾತುವಿಗೆ ರಹಸ್ಯಾರ್ಥದಲ್ಲಿ ಸ ಪ್ರತ್ಯಯ ಸೇರಿ ವೃದ್ಧ್ಯಾದೇಶವೂ ಷಕಾರವೂ ಬಂದು ಸ್ರೌಷ ಎಂದು ಪರ್ಯಾಯ ಶಬ್ದವು ಶಿವರೂಪನಾದ ದಿಂಡಿಯ ನಾಮವಾಗಿದೆ.

೨೪. ಎಲೈ ಬ್ರಾಹ್ಮಣೋತ್ತಮರೇ ! ಧರ್ಮಾರ್ಥಗಳಿಂದ ಕೂಡಿದ ಮೊದಲನೆಯ ದ್ವಾರದಲ್ಲಿ ಲೋಕಪೂಜ್ಯರಾದ ಈ ರಾಜ್ಞ ಸ್ರೌಷ ಎಂಬ ಈ ಇಬ್ಬರೂ ದ್ವಾರಪಾಲಕರಾಗಿ ಇದ್ದಾರೆಂದು ತಿಳಿಯಬೇಕು.

೨೫. ಎರಡನೆಯ (ಎಂದರೆ ದಕ್ಷಿಣದ) ಬಾಗಿಲಲ್ಲಿ ತಿರಸ್ಕರಿಸಲಸಾಧ್ಯವಾದ ಪಕ್ಷಿಗಳ ಅಧಿಪತಿಯಾದ ಗರುಡ, ಪ್ರೇತಾಧಿಪನಾದ ಯಮ ಈ ಇಬ್ಬರೂ ಕಲ್ಮಾಷ ಪಕ್ಷಿ ಎಂಬ ಹೆಸರು ಉಳ್ಳ ದ್ವಾರಪಾಲಕರಾಗಿದ್ದಾರೆ.

೨೬. ಶಬಲವರ್ಣನಾದುದರಿಂದ ಯಮನನ್ನು ಕಲ್ಮಾಷನೆನ್ನುವರು. (ಪಕ್ಷಗಳೂ) ರಕ್ಕೆಗಳೆರಡು ಇರುವ ಕಾರಣದಿಂದ ಗರುಡನಿಗೆ ಪಕ್ಷಿ ಎಂದು ಹೆಸರಾಯಿತು.

೨೭. ದಕ್ಷಿಣದ್ವಾರದಲ್ಲಿರುವ ಕಲ್ಮಾಷ ಸಂಜ್ಞಕನಾದ ಯಮನು ದಂಡಹಸ್ತನಾಗಿದಾನೆ. ಉತ್ತರದಿಕ್ಕಿನ ಬಾಗಿಲಲ್ಲಿರತಕ್ಕವರು ಕುಬೇರ ಮತ್ತು ವಿನಾಯಕ. ಕುಬೇರನು ಧನಾಧಿಪನೆಂದೂ ವಿನಾಯಕನು ಗಜರೂಪನು ಎಂದೂ ತಿಳಿಯಬೇಕು.

**ಕುಬೇರೊ ಧನದೋ ಜ್ಞೇಯೋ ಹಸ್ತಿರೂಪೋ ವಿನಾಯಕಃ ।**
**ಕುತ್ಸಯೊ ಕುಪ್ಯತಾ ಶಪ್ತಂ ಕುಶರೀರಮಜಾಯತ ।**
**ಕುಬೇರಃ ಕುಶರೀರತ್ವಾತ್ಸ ನಾಮ್ನಾ ಧನದಃ ಸ್ಮೃತಃ ॥ ೨೮ ॥**

**ನಾಯಕಃ ಸರ್ವಸತ್ವಾನಾಂ ತೇನ ನಾಯಕ ಉಚ್ಯತೇ ।**
**ವಿವಿಧಂ ನಯತೇ ಯಸ್ಮಾತ್ಸ ತು ತಸ್ಮಾದ್ವಿನಾಯಕಃ ॥ ೨೯ ॥**

**ರೈವತಶ್ಚೈವ ದಿಂಡಿಶ್ಚ ತೌ ರವೇಃ ಪೂರ್ವತಃ ಸ್ಥಿತೌ ।**
**ತತೋ ದಿಂಡಿಃಸ್ಮೃತೋ ರುದ್ರೋ ರೇವತಸ್ತನಯೋ ರವೇಃ ॥ ೩೦ ॥**

**ಪ್ಲುತಂ ಗಚ್ಛತ್ಯಸೌ ಯಸ್ಮಾತ್ ಸರ್ವಲೋಕನಮಸ್ಕೃತಃ ।**
**ರೇವೃಪ್ಲವ ಗತೌ ಧಾತೋ ರೇವತಸ್ತೇನ ಸ ಸ್ಮೃತಃ ॥ ೩೧ ॥**

**ಡೀನ್ಗತಾವಸ್ಯ ವೈ ಧಾತೋರ್ದಿಂಡಿಶಬ್ದೋ ನಿಪಾತ್ಯತೇ ।**
**ಡಯತೇಽಸೌ ಸದಾ ದಿಂಡೀ ತೇನ ದಿಂಡೀ ಪ್ರಕೀರ್ತಿತಃ ॥ ೩೨ ॥**

---

೨೮. ನಿಂದೆಯಿಂದ ಕುಪಿತನಾಗಿ ಶಾಪವನ್ನು ಕೊಟ್ಟು ಇವನ ಶರೀರವನ್ನು ಕುತ್ಸಿತವಾಗಿ ಮಾಡಿದುದರಿಂದ ಕುತ್ಸಿತ ಶರೀರವುಳ್ಳವನೆಂದು ಅರ್ಥಕೊಡುವ ಕುಬೇರ ಶಬ್ದದಿಂದ ಕುಬೇರನೆಂದು ಪ್ರಸಿದ್ಧನಾದನು. ಅವನೇ ಧನದನು.

೨೯. ಎಲ್ಲಾ ಪ್ರಾಣಿಗಳನ್ನೂ (ನಯನ ಮಾಡತಕ್ಕವನಿಗೆ) ನಡೆಸತಕ್ಕವನಿಗೆ ನಾಯಕನೆಂದು ಹೆಸರು. ವಿವಿಧ ಮಾರ್ಗಗಳಲ್ಲಿ ನಯನಮಾಡೋಣದರಿಂದ ಗಜ ಮುಖನಿಗೆ ವಿನಾಯಕನೆಂದೂ ಹೆಸರಾಯಿತು.

೩೦. ರೈವತ, ದಿಂಡಿ ಇವರು ಸೂರ್ಯನ ಪೂರ್ವದಿಕ್ಕಿನ ಬಾಗಿಲಲ್ಲಿರುವವರು. ದಿಂಡಿಯನ್ನು ರುದ್ರನೆಂದೂ, ರೈವತನನ್ನು ಸೂರ್ಯಪುತ್ರನೆಂದೂ ತಿಳಿಯಬೇಕು.

೩೧. ಸರ್ವಲೋಕ ನಮಸ್ಕೃತನಾದ ಇವನು ಕುಪ್ಪಳಿಸುತ್ತಾ ಸಾಗುವುದರಿಂದ ಪ್ಲುತಗತ್ಯರ್ಥಕವಾದ ರೇವೃ ಧಾತುವಿನಿಂದ ಏರ್ಪಟ್ಟು ರೈವತನೆಂದು ಹೇಳಲ್ಪಟ್ಟಿದ್ದಾನೆ.

೩೨. ಡೀನ್ ಗತೌ ಎಂಬ ಧಾತುವಿನ ಮೂಲಕ ದಿಂಡಿ ಎಂಬ ರೂಪವು ನಿಪಾತಿತವಾಯಿತು. ಯಾವಾಗಲೂ ಇವನು ಹಾರಿಕೊಂಡು ಹೋಗುವವನಾದುದರಿಂದ ದಿಂಡಿ ಎಂದು ಹೆಸರಾಯಿತು.

ಇತ್ಯೇತೇಪ್ರವರಾಃ ಪ್ರೋಕ್ತಾಧಾತ್ವರ್ಥಾ ನ್ನೈಗಮ್ಯೈಃ ಶುಭೈಃ ।
ಏಷಾಂ ಸಂಕ್ಷೇಪತೋ ಭೂಯ ಸಂಖ್ಯಾವೋ ನಿಗದಾಮಿ ವೈ ॥ ೩೩ ॥

ಅಶ್ವಿನೌ ತೌ ತತೋ ಜ್ಞೇಯೌ ದಂಡನಾಯಕ ಪಿಂಗಲೌ ।
ತೌ ಸೂರ್ಯ ದ್ವಾರಪೌ ಜ್ಞೇಯೌ ರಾಜ್ಞಃ ಸ್ರೋಷೌ ತತಃ ಸ್ಮೃತೌ ॥ ೩೪ ॥

ರೇವತಶ್ಚೈವ ದಿಂಡಿಶ್ಚ ಇತ್ಯೇತೇ ಪ್ರವರಾ ಮಯಾ ।
ಅಷ್ಟಾದಶ ಸಮಾಖ್ಯಾತಾಃ ಸಂಕ್ಷೇಪಾತ್ಸಂಖ್ಯಯಾ ಮಯಾ ॥ ೩೫ ॥

ಇತ್ಯೇಭಿರ್ನಾಮಭಿಸ್ತ್ವೇತೇ ದಾನವಾನಾಂ ಜಿಂಘಾಂಸಯಾ ।
ಪರಿವಾರ್ಯ ಸ್ಥಿತಾಃ ಸೂರ್ಯಂ ನಾನಾಪ್ರಹರಣಾಯುಧಾಃ ॥ ೩೬ ॥

ಸರೂಪಾಶ್ಚಾನ್ಯರೂಪಾಶ್ಚ ವಿರೂಪಾಃ ಕಾಮರೂಪಿಣಃ ।
ಪರಿವಾರ್ಯ ಸ್ಥಿತಾಃ ಸೂರ್ಯಂ ಗರುಡಶ್ಚ ಮಹಾಬಲಃ ॥ ೩೭ ॥

---

೩೩. ಶಾಸ್ತ್ರವನ್ನನುಸರಿಸಿ ನಡೆಯುವ ಸಜ್ಜನರು ಈ ಪ್ರವರರಿಗೆ ಧಾತ್ವರ್ಥಾನುಸಾರವಾಗಿ ಹೇಳಬಹುದಾದ ಅರ್ಥವನ್ನು ಮೇಲೆ ಹೇಳುವ ರೀತಿ ಹೇಳಿದಾರೆ ಇವರುಗಳ ಲೆಕ್ಕವನ್ನು ಸಂಕ್ಷೇಪವಾಗಿ ತಿಳಿಸುವೆನು.

೩೪–೩೫. ಅಶ್ವಿನೀ ದೇವತೆಗಳಿಬ್ಬರು, ದಂಡನಾಯಕ ಪಿಂಗಳ ಇವರಿಬ್ಬರು, ಸೂರ್ಯನ ದ್ವಾರಪಾಲಕರಾದ ರಾಜ್ಞ ಸ್ರೌಷ ಎಂಬಿಬ್ಬರು, ರೈವತ ದಿಂಡಿ ಇವರಿಬ್ಬರು ಅಂತು ಇವರುಗಳು ಸಂಕ್ಷೇಪವಾಗಿ ಲೆಕ್ಕಿಸಿರುವ ಪ್ರವರರು ಎನಿಸುವರು.

೩೬. ಈ ಹೆಸರಿನಿಂದ ಕೂಡಿದವರು ಹದಿನೆಂಟು ಜನರು ಇರುತ್ತಾ ಆ ರಾಕ್ಷಸರನ್ನು ಸಂಹರಿಸಬೇಕೆಂಬ ಇಚ್ಛೆಯಿಂದ ನಾನಾಬಗೆಯಾದ ಆಯುಧಧಾರಿಗಳಾಗಿ ಸೂರ್ಯನನ್ನು ಆವರಿಸಿಕೊಂಡಿದ್ದಾರೆ.

೩೭. ಒಂದೇ ಸಮನಾದ ರೂಪವುಳ್ಳವರೂ, ಬೇರೆ ಬೇರೆ ಪ್ರಕಾರದ ರೂಪವುಳ್ಳವರೂ, ವಿಕೃತವಾದ ರೂಪವುಳ್ಳವರೂ ಇಚ್ಛಾನುಸಾರವಾದ ರೂಪನ್ನು ಧರಿಸಬಲ್ಲವರೂ ಆದ ಮಹಾಬಲಶಾಲಿಗಳಾದ ಗರುಡ ಮುಂತಾದ ಇವರೆಲ್ಲರೂ ಸೂರ್ಯನ ಸುತ್ತಲೂ ಇದ್ದಾರೆ.

ಧಾತುರ್ದಿವ್ವಿತಿ ವೈ ಪ್ರೋಕ್ತೋ ಕ್ರೀಡಾಯಾಂ ಸ ತು ಉಚ್ಯತೇ ।
ಕ್ರೀಡಂತೇ ದಿವಿ ವೈ ಯಸ್ಮಾತ್ ತಸ್ಮಾತ್ತೇ ದೇವತಾಃ ಸ್ಮೃತಾಃ ॥ ೩೮ ॥

ಋಚೋ ಯಜೂಂಷಿ ಸಾಮಾನಿ ಯಾನ್ಯುಕ್ತಾನೀಹ ವೈ ಮಯಾ ।
ನಾನಾರೂಪೈಃ ಸ್ಥಿತಾನ್ಯೇವ ರವೇಸ್ಥಾನಿ ಸಮಂತತಃ ॥ ೩೯ ॥

॥ ಸುಮಂತುರುವಾಚ ॥

ಇತ್ಯೇವಮುಕ್ತವಾನ್ ಬ್ರಹ್ಮಾ ಋಷೀಣಾಂ ಪೃಚ್ಛತಾಂ ಪುರಾ ।
ತೇ ಶ್ರುತ್ವಾಽಽರಾಧ್ಯ ದೇವೇಶಂ ಸಂಸಿದ್ಧಾ ದಿವಿ ಸಂಸ್ಥಿತಾಃ ॥ ೪೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ ಬ್ರಹ್ಮರ್ಷಿಸಂವಾದೇ ಪ್ರವರ ವರ್ಣನಂ ನಾಮ ಚತುರ್ವಿಂಶತ್ಯುತ್ತರ ಶತತಮೋಽಧ್ಯಾಯಃ



೩೮. ಕ್ರೀಡಾರ್ಥವಾದ ದಿವ್ ಎಂಬ ಧಾತುವಿದೆ. ಅಂತರಿಕ್ಷದಲ್ಲಿ ಅವರು ದೇವನ ಮಾಡೋಣದರಿಂದ ಅವರಿಗೆ ದೇವತೆಗಳೆಂದು ಹೆಸರಾಯಿತು.

೩೯. ಋಕ್ಕುಗಳು, ಯಜಸ್ಸುಗಳು, ಸಾಮಗಳು ಎಂದು ಯಾವ ಯಾವದನ್ನು ನಾನು ಹೇಳಿದ್ದೇನೋ ಅವುಗಳೇ ನಾನಾರೂಪಗಳಿಂದ ಕೂಡಿ ಸೂರ್ಯನ ಸುತ್ತಲೂ ಇವೆ. ಎಂದು ಹೇಳಿದನು.

೪೦. ಸುಮಂತು ಮುನಿವರ್ಯರು ಹೇಳುತ್ತಾರೆ—ಅಯ್ಯಾ ರಾಜನೇ! ಪೂರ್ವದಲ್ಲಿ ಋಷಿಗಳು ಬ್ರಹ್ಮನನ್ನು ಪ್ರಶ್ನಿಸಲಾಗಿ ಬ್ರಹ್ಮನು ಈ ಪ್ರಕಾರವಾಗಿ ಹೇಳಿದನು ಆ ಋಷಿಗಳು ಅದನ್ನು ಕೇಳಿ ದೇವೇಶನಾದ ಆ ಸೂರ್ಯನನ್ನು ಪೂಜಿಸಿ ಸಿದ್ಧಿಯನ್ನು ಪಡೆದು ಸ್ವರ್ಗಕ್ಕೆ ಹೋದರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸಪ್ತಮೀಕಲ್ಪದಲ್ಲಿ ಪ್ರವರ ವರ್ಣನೆ ಎಂಬ ನೂರಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಪಂಚವಿಂಶತ್ಯುತ್ತರಶತತಮೋಽಧ್ಯಾಯಃ

---

॥ ಶತಾನೀಕ ಉವಾಚ ॥

ಯದೇತದ್ದೃಶ್ಯತೇ ವ್ಯೋಮ ಸೂರ್ಯಸ್ಯ ಪುರತೋ ದ್ವಿಜ ।
ತದುಚ್ಯತೇ ಕಿಮಾತ್ಮಾ ಚ ಕಥಂ ಭೂತಂ ಚ ಕಥ್ಯತಾಂ ॥ ೧ ॥

॥ ಸುಮಂತುರುವಾಚ ॥

ಹಂತ ! ವ್ಯೋಮ ಪ್ರವಕ್ಷ್ಯಾಮಿ ಸೂರ್ಯಪ್ರಹರಣಂ ಶುಭಂ ।
ಯದಾತ್ಮಕಂ ಹಿ ಯತ್ಪ್ರೋಕ್ತಂ ಯಥಾ ವಸತಿ ದೇವತಾ ॥ ೨ ॥

---

## ನೂರಇಪ್ಪತ್ತೈದನೆಯ ಅಧ್ಯಾಯ

೧. ಶತಾನೀಕ ರಾಜನು ಹೇಳುತ್ತಾನೆ—ಅಯ್ಯಾ ವಿಪ್ರನೇ! ಸೂರ್ಯನ ಮುಂದುಗಡೆ ಇರುವ ವ್ಯೋಮ ಎಂಬ ಪದಾರ್ಥವು ಯಾವ ಸ್ವರೂಪದ್ದು ? ಅದು ಹೇಗೆ ಇರುವುದು ಎಂಬುದನ್ನು ಹೇಳು ಎಂದನು.

೨. ಸುಮಂತು ಮುನಿವರ್ಯರು ಹೇಳುತ್ತಾರೆ—ವ್ಯೋಮವೆಂಬುದು ಸೂರ್ಯ ದೇವನ ಶುಭಕರವಾದ ಆಯುಧ. ನಾನು ಈಗ ಆ ವ್ಯೋಮದ ವಿಚಾರವನ್ನು ಹೇಳ ತೊಡಗಿ ಆ ವ್ಯೋಮವೆಂಬುದು ಎಂತಹದು ; ಅದು ಯಾವ ಸ್ವರೂಪವಾಗಿ ಹೇಳಲ್ಪ ಟ್ಟಿದೆ; ಅದು ಹೇಗೆ ಸಮಸ್ತ ದೇವತೆಗಳಿಗೂ ಆ ವಾಸವಾಗಿದೆ ಎಂಬುದನ್ನು ಹೇಳು ತ್ತೇನೆ.

ಪುರಸ್ತಾಚ್ಚ ಚತುಃಶೃಂಗಂ ತದ್ವ್ಯೋಮಾಯತನಂ ರವೇಃ ।
ವ್ಯೋಮಶಬ್ದಂ ಚತುಃಶೃಂಗಂ ಸರ್ವದೇವಮಯಂ ಚ ಯತ್ ॥ ೩ ॥

ಗೈರಿಕಾವರ್ಣಸಂಭೂತಂ ಯದಂತರ್ಗರ್ಭಮಾಶ್ರಿತಂ ।
ತತೋತ್ಪನ್ನಮಿಡಂ ವ್ಯೋಮ ಕಲೇವ್ಯೋಮ ಮಹೀಸ್ಮೃತಾ ॥ ೪ ॥

ವರುಣಸ್ಯ ಯಥಾಪಾಶೋ ಹುಂ ಕಾರೋ ವೇಧಸೇ ಯಥಾ ।
ವಿಷ್ಣೋಶ್ಚಾಪಿ ಯಥಾ ಚಕ್ರಂ ತ್ರಿಶೂಲಂ ತ್ರ್ಯಂಬಕಸ್ಯ ಚ ॥ ೫ ॥

ಇಂದ್ರಸ್ಯ ಚ ಯಥಾ ವಜ್ರಂ ತಥಾ ವ್ಯೋಮ ರವೇಃ ಸ್ಮೃತಂ ।
ತಸ್ಮಿನ್ ವ್ಯೋಮ್ನಿ ತ್ರಯಸ್ತ್ರಿಂಶತ್ ಕ್ರೀಡಂತೋ ಯಜ್ಞಿಯಾಃ ಸುರಾಃ

ಹರಶ್ಚ ವರ್ಷಶುದ್ಧೌ ಚ ತ್ರ್ಯಂಬಕಶ್ಚಾಪರಾಜಿತಃ ।
ವೃಷಾಕಪಿಶ್ಚ ಶಂಭುಶ್ಚ ಕಪರ್ದೀ ರೈವತಸ್ತಥಾ ॥
ಈಶ್ವರೋ ಭುವನಶ್ಚೈತೇ ರುದ್ರಾ ಏಕಾದಶ ಸ್ಮೃತಾಃ । ॥ ೭ ॥

---

೩. ಮುಂಭಾಗದಲ್ಲಿ ನಾಲ್ಕು ಶೃಂಗವುಳ್ಳದ್ದಾಗಿ ಸೂರ್ಯನ ಸ್ಥಾನವೆನಿಸಿರುವ ಇದು ವ್ಯೋಮಶಬ್ದವಾಚ್ಯವಾಗಿಯೂ ಸರ್ವದೇವತೆಗಳಿಗೂ ಆಶ್ರಯಸ್ಥಾನವಾಗಿಯೂ ಇದೆ.

೪. ಮಣಿಶಿಲೆ ಮುಂತಾದ ಗೈರಿಕ ಧಾತುವಸ್ತುಗಳ ಬಣ್ಣದಿಂದ ಕೂಡಿದ್ದಾಗಿಯೂ, ಬ್ರಹ್ಮಾಂಡದ ಒಳಭಾಗದಲ್ಲಿ ಹುಟ್ಟಿ ಅಲ್ಲಿಯೇ ಆಶ್ರಯಿಸಿರುವುದೂ, ಆದ ಈ ವ್ಯೋಮಾಯುಧವು ಯುದ್ಧಕ್ಕೆ ಮುಖ್ಯಾಶ್ರಯವೆಂದು ಹೇಳಲ್ಪಟ್ಟಿದೆ

೫. ವರುಣನಿಗೆ ಪಾಶಾಯುಧ, ಬ್ರಹ್ಮನಿಗೆ ಹುಂಕಾರ, ವಿಷ್ಣುವಿಗೆ ಚಕ್ರ, ಶಿವನಿಗೆ ತ್ರಿಶೂಲ.

೬. ಇಂದ್ರನಿಗೆ ವಜ್ರ, ಇವು ಹೇಗೆ ಅವರಿಗೆ ಪ್ರಶಸ್ತವಾದ ಆಯುಧಗಳಾಗಿವೆಯೋ, ಹಾಗೆ ವ್ಯೋಮವು ಸೂರ್ಯನಿಗೆ ಆಯುಧವಾಗಿದೆ. ಯಜ್ಞೀಯರಾದ ಮೂವತ್ತುಮೂರು ಮಂದಿ ದೇವತೆಗಳೂ ಆ ವ್ಯೋಮದಲ್ಲಿ ಕ್ರೀಡಿಸುವರು.

೭. (ಅವರುಗಳ ವಿವರ) ಹರ, ವರ್ಷ, ಶುದ್ಧ, ತ್ರ್ಯಂಬಕ, ಅಪರಾಜಿತ, ವೃಷಾಕಪಿ, ಶಂಭು, ಕಪರ್ದಿ, ರೈವತ, ಈಶ್ವರ, ಭುವನ ಎಂಬ ಹೆಸರಿನ ಏಕಾದಶ ರುದ್ರರು.

ಆದಿತ್ಯಾನಾಂ ಚ ನಾಮಾನಿ ವಿಷ್ಣೋಶ್ಚಕ್ರಸ್ಯ ದೀಯತಾಂ ।
ಆರ್ಯಮಾ ಚ ತಥಾ ಮಿತ್ರೋ ಭಗೋಥ ವರುಣಸ್ತಥಾ ॥ ೮ ॥

ವಿವಸ್ವಾನ್ಸವಿತಾ ಚೈವ ಪೂಷಾ ತ್ವಷ್ಟಾ ತಥೈವ ಚ ।
ಅಂಶೋ ಭಗಶ್ಚಾತಿತೇಜಾ ಆದಿತ್ಯಾ ದ್ವಾದಶ ಸ್ಮೃತಾಃ ॥ ೯ ॥

ಧ್ರುವೋಧರಶ್ಚ ಸೋಮಶ್ಚ ಆಪಶ್ಚೈವಾನಿಲೋನಲಃ ।
ಪ್ರತ್ಯೂಷ ಶ್ಚ ಪ್ರಭಾತಶ್ಚ ವಸವೋಽಷ್ಟೌ ಪ್ರಕೀರ್ತಿತಾಃ ॥ ೧೦ ॥

ನಾಸತ್ಯಶ್ಚೈವ ದಸ್ರಶ್ಚ ಸ್ಮೃತೌ ದ್ವಾವಶ್ವಿನಾವುಭೌ ।
ವಿಶ್ವಾನ್ ದೇವಾನ್ ಪ್ರವಕ್ಷ್ಯಾಮಿ ನಾಮತಃ ಸನ್ನಿಬೋಧತ ॥ ೧೧ ॥

ಕ್ರತುರ್ದಕ್ಷೋ ವಸುಃ ಸತ್ಯಃ ಕಾಲಕಾಮೌ ಧೃತಿಃ ಕುರುಃ ।
ಶಂಕುಮಾತ್ರೋ ವಾಮನಶ್ಚ ವಿಶ್ವೇದೇವಾ ದಶ ಸ್ಮೃತಾಃ ॥ ೧೨ ॥

---

೮. ವಿಷ್ಣು ಚಕ್ರದಲ್ಲಿ ಹನ್ನೆರಡು ಆರೆಕಾಲುಗಳಿರುವಂತೆ ಆದಿತ್ಯರು ಹನ್ನೆರಡುಮಂದಿ ಇದ್ದಾರೆ ಅವರ ಹೆಸರುಗಳನ್ನು ಈ ಮುಂದೆ ಹೇಳಿದೆ.

೯. ಆರ್ಯಮ, ಮಿತ್ರ, ಭಗ, ವರುಣ ವಿವಸ್ವಾನ್, ಸವಿತಾ, ಪೂಷಾ, ತ್ವಷ್ಟಾ, ಅಂಶು, ಭಗ, ಅತಿತೇಜ, ಆದಿತ್ಯ ಎಂಬ ಹನ್ನೆರಡುಮಂದಿ ಆದಿತ್ಯರು.

೧೦. ಧ್ರುವ, ಧರ, ಸೋಮ, ಆಪಃ, ಅನಿಲ, ಅನಲ, ಪ್ರತ್ಯೂಷ, ಪ್ರಭಾತ ಎಂಬ ಎಂಟುಮಂದಿಯೂ ವಸುಗಳು.

೧೧. ನಾಸತ್ಯ, ದಸ್ರ ಎಂಬ ಅಶ್ವಿನೀ ದೇವತೆಗಳಿಬ್ಬರು, ಇವರೇ ಯಜ್ಞೀಯರಾದ ಆ ಮೂವತ್ತು ಮೂರುಮಂದಿ, ದೇವತೆಗಳು. ಇನ್ನು ವಿಶ್ವೇದೇವರ ಹೆಸರುಗಳನ್ನು (ಎರಡೆರಡಾಗಿ) ಹೇಳುತ್ತೇನೆ ಕೇಳು.

೧೨. ಕ್ರತು–ದಕ್ಷ, ವಸು–ಸತ್ಯ, ಕಾಲ-ಕಾಮ, ಧೃತಿ-ಕುರು, ಶಂಕುಮಾತ್ರ ವಾಮನ ಇವರು ಹತ್ತುಮಂದಿಯೂ ವಿಶ್ವೇದೇವತೆಗಳು. ಇವರುಗಳು ಪ್ರಸಕ್ತಕಾಲದಲ್ಲಿ ಇರತಕ್ಕವರು.

ವರ್ತಮಾನಾः ಇಮೇ ದೇವಾ ಭವಿಷ್ಯಾನಂತರೇ ಶೃಣು ।
ಯಮಶ್ಚ ತುಷಿತೌಶ್ಚೈವ ವಸವೋ ವಶವರ್ತಿನಃ ॥
ಸತ್ಯಾಶ್ಚ ಭೂತರಜಸಃ ಸಾಧ್ಯಾಶ್ಚ ತದನಂತರಾಃ ॥ ೧೩ ॥

ಷಟ್ಸು ಮನ್ವಂತರೇಷ್ವೇವಂ ದೇವಾ ದ್ವಾದಶ ವೈ ಸ್ಮೃತಾಃ ।
ಪಾರಾವತಾಸ್ತಥಾ ಚಾನ್ಯೇ ತೇ ಹ್ಯಾಸಂಸ್ತುಷಿತೈಃ ಸಹ ॥ ೧೪ ॥

ಸಾಧ್ಯಾನ್ ದೇವಾನ್ ಪ್ರವಕ್ಷ್ಯಾಮಿ ನಾಮತಸ್ತಾನ್ನಿಬೋಧ ಮೇ ।
ಮನೋಽನುಮಂತಾ ಪ್ರಾಣಶ್ಚ ನರೋ ನಾರಾಯಣಸ್ತಥಾ ॥ ೧೫ ॥

ವೃತ್ತಿಲಂಬೋ ಮನುಶ್ಚೈವ ಸಮೋಧರ್ಮಶ್ಚ ವೀರ್ಯವಾನ್ ।
ವಿತ್ತಸ್ವಾಮೀ ಪ್ರಭುಶ್ಚೈವ ಸಾಧ್ಯಾ ದ್ವಾದಶ ಕೀರ್ತಿತಾಃ ॥ ೧೬ ॥

ಏತೇ ಯಜ್ಞಭುಜೋ ದೇವಾಃ ಸರ್ವಲೋಕೇಷು ಪೂಜಿತಾಃ ।
ಅದಿತ್ಯಾಮೇವ ತೇ ಧೀರ ಕಶ್ಯಪಸ್ಯಾತ್ಮಜಾಃ ಸ್ಮೃತಾಃ ॥ ೧೭ ॥

---

೧೩. ಮುಂದೆ ಬರುವ ವಿಶ್ವೇದೇವರನ್ನು ಹೇಳುವೆನು. ಜೋಡಿಜೋಡಿಯಾದ ತುಷಿತರು, ವಸುಗಳು, ವಶವರ್ತಿಗಳು, ಸತ್ಯರು, ಭೂತರಜ್ಯರು, ಸಾಧ್ಯರು ಇವರೇ ಭವಿಷ್ಯಕಾಲದ ವಿಶ್ವೇದೇವರು.

೧೪. ಈ ಆರು ಜೋಡಿಯವರು ಮುಂದಿನ ಆರು ಮನ್ವಂತರಗಳಲ್ಲಿ ಹನ್ನೆರಡು ವಿಶ್ವೇದೇವರಾಗುವರು. ಪಾರಾವತ ಮುಂತಾದ ಇತರರೂ ತುಷಿತರು ಮುಂತಾದವ ರೊಡನೆ ಇರುವರು.

೧೫. ಸಾಧ್ಯರೆಂಬ ದೇವತೆಗಳ ಹೆಸರುಗಳನ್ನು ಮುಂದೆ ಹೇಳುತ್ತೇನೆ ಕೇಳು. ಮನಃ, ಅನುಮಂತಾ, ಪ್ರಾಣ, ನರ, ನಾರಾಯಣ.

೧೬. ವೃತ್ತಿಲಂಬ, ಮನು, ಸಮ, ಧರ್ಮ, ವೀರ್ಯವಾನ್, ವಿತ್ತಸ್ವಾಮಿ. ಪ್ರಭು ಇವರು ಹನ್ನೆರಡುಮಂದಿಯೂ ಸಾಧ್ಯರೆಂದು ಹೇಳಲ್ಪಟ್ಟಿದ್ದಾರೆ.

೧೭-೧೮. ಇವರು ಎಲ್ಲಾ ಲೋಕಗಳಲ್ಲೂ ಪೂಜಿತರಾಗಿ ಯಜ್ಞದಲ್ಲಿ ಹವಿರ್ಭಾಗಗಳನ್ನು ಅನುಭವಿಸುವ ದೇವತೆಗಳಾಗಿದ್ದಾರೆ. ಎಲೈ ಧೀರನೇ! ಇವರು ಕಾಶ್ಯಪರಿಗೆ ಅದಿತಿಯಲ್ಲಿ ಜನಿಸಿದ ಪುತ್ರರೆಂದು ತಿಳಿಯಬೇಕು. ಹೀಗೆ ವಿಶ್ವೇದೇವರು,

ವಿಶ್ವೇಚ ವಸವಃ ಸಾಧ್ಯಾ ವಿಜ್ಞೇಯಾ ಧರ್ಮಸೂನವಃ ।
ಏವಂ ಧರ್ಮಸುತಃ ಸೋಮಸ್ತೃತೀಯೋ ವಸುರಿಷ್ಯತೇ. ॥ ೧೮ ॥

ಧರ್ಮೋಽಪಿ ಬ್ರಹ್ಮಣಃ ಪುತ್ರಃ ಪುರಾಣೇ ನಿಶ್ಚಯಂಗತಃ ।
ಅಥ ಚೇಂದ್ರಾನ್ಮನೂಂಶ್ಚೈವ ನಾಮಭಿಶ್ಚ ನಿಬೋಧ ಮೇ ॥ ೧೯ ॥

ಸ್ವಾಯಂಭುವೋ ಮನುಃ ಪೂರ್ವಂ ತತಃ ಸ್ವಾರೋಚಿಷಃ ಸ್ಮೃತಃ ।
ಉತ್ತಮುಸ್ತಾಮಸಶ್ಚೈವ ರೈವತಶ್ಚಾಕ್ಷುಷಸ್ತಥಾ ॥ ೨೦ ॥

ಇತ್ಯೇತೇ ಷಡತಿಕ್ರಾಂತಾಃ ಸಪ್ತಮಃ ಸಾಂಪ್ರತೋ ಮನುಃ ।
ವೈವಸ್ವತೇತಿ ವಿಜ್ಞೇಯೋ ಭವಿಷ್ಯಾಃ ಸಪ್ತಚಾಪರೇ ॥ ೨೧ ॥

ಏಷಾಮಾದ್ಯೋಽರ್ಕಸಾವರ್ಣಿರ್ಬ್ರಹ್ಮಸಾವರ್ಣಿರೇವ ಚ ।
ತಸ್ಮಾಚ್ಚ ಭವಸಾವರ್ಣಿರ್ಧರ್ಮಸಾವರ್ಣಿರಿತ್ಯುತ ॥ ೨೨ ॥

ಪಂಚಮೋ ದಕ್ಷಸಾವರ್ಣಿಃ ಸಾವರ್ಣಿಃ ಪಂಚ ಕೀರ್ತಿತಾಃ ।
ರೌಚ್ಯೋ ಭೌಮ್ಯಶ್ಚ ದ್ವಾವನ್ಯಾವಿತ್ಯೇತೇ ಮನವಃ ಸ್ಮೃತಾಃ ॥ ೨೩ ॥

---

ವಸುಗಳು, ಸಾಧ್ಯರು, ಇವರೆಲ್ಲ ಧರ್ಮನ ಸೂನುಗಳು ಎಂಬದಾಗಿಯೂ ಹೇಳುತ್ತಾರೆ. ಧರ್ಮನ ಸುತನಾದ ಸೋಮನು ಮೂರನೆಯ ವಸುವೆಂದು ಹೇಳಲ್ಪಟ್ಟಿದ್ದಾನೆ.

೧೯. ಈ ಧರ್ಮನೆಂಬುವನು ಬ್ರಹ್ಮನ ಮಗನೆಂದು ಪುರಾಣಗಳಲ್ಲಿ ನಿಶ್ಚಿತನಾಗಿದ್ದಾನೆ. ಇನ್ನು ಇಂದ್ರರ ಹೆಸರುಗಳನ್ನೂ ಮನುಗಳ ಹೆಸರುಗಳನ್ನೂ ನಿರ್ದೇಶ ಮಾಡಿ ಹೇಳುತ್ತೇನೆ ಕೇಳು.

೨೦-೨೧. ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಚಾಕ್ಷುಷ ಈ ಆರು ಮನುಗಳ ಅಂತರಗಳು ಅತಿಕ್ರಮಿಸಿ ಹೋದವು. ಈಗ ಏಳನೆಯದಾದ ವೈವಸ್ವತಮನ್ವಂತರ ನಡೆಯುತ್ತಿದೆ ಸೂರ್ಯಸಾವರ್ಣಿ, ಬ್ರಹ್ಮಸಾವರ್ಣಿ, ಭವಸಾವರ್ಣಿ, ಧರ್ಮಸಾವರ್ಣಿ, ದಕ್ಷಸಾವರ್ಣಿ ಈ ರೀತಿ ಐದು ಸಾವರ್ಣಿಗಳೂ

೨೩. ರೌಚ್ಯ, ಭೌಮ್ಯ ಎಂಬುವವರೂ ಸೇರಿ ಈ ಏಳು ಮಂದಿಗಳೂ (ಭವಿಷ್ಯ ಕಾಲದ) ಮುಂದೆ ಮನುಗಳಾಗಿ ಅಧಿಕಾರಕ್ಕೆ ಬರತಕ್ಕವರು.

**ಇಂದ್ರಸ್ತು ವಿಷ್ಣುಭುಕ್‌ಜ್ಞೇಯೋ ವಿದ್ಯುತಿಸ್ತದನಂತರಂ ।**
**ವಿಭುಃ ಪ್ರಭುಶ್ಚೈವ ಶಿಖೀ ತಥೈವ ಚ ಮನೋಜವಃ ॥ ೨೪ ॥**

**ಓಜಸ್ವೀ ಸಾಂಪ್ರತಸ್ತ್ವಿಂದ್ರೋ ಬಲಿರ್ಭಾವ್ಯಸ್ತತಃ ಪರಂ ।**
**ಅದ್ಭುತಸ್ತ್ರಿದಿವಶ್ಚೈವ ದಶಮಸ್ತ್ವಿಂದ್ರ ಉಚ್ಯತೇ ॥ ೨೫ ॥**

**ಸುಸಾತ್ವಿಕಶ್ಚ ಕೀರ್ತಿಶ್ಚ ಶತಧಾಮಾ ದಿವಸ್ಪತಿಃ ।**
**ಇತಿ ಭೂತಾ ಭವಿಷ್ಯಾಶ್ಚ ಇಂದ್ರಾ ಜ್ಞೇಯಾ ಚತುರ್ದಶ ॥ ೨೬ ॥**

**ಕಶ್ಯಪೋತ್ರಿ ವಶಿಷ್ಠಶ್ಚ ಭರದ್ವಾಜಶ್ಚ ಗೌತಮಃ ।**
**ವಿಶ್ವಾಮಿತ್ರೋ ಜಮದಗ್ನಿಃ ಸಪ್ತೈತೇ ಋಷಯಃ ಸ್ಮೃತಾಃ ॥ ೨೭ ॥**

**ಅತಃ ಪರಂ ಪ್ರವಕ್ಷ್ಯಾಮಿ ಮರುತೋಗ್ನಿ ಪರಿಗ್ರಹಾನ್ ।**
**ಪ್ರವಹೋऽಥಾವಹಶ್ಚೈವ ಉದ್ವಹಃ ಸಂವಹಸ್ತಥಾ ॥ ೨೮ ॥**

**ವಿವಹೋ ನಿವಹಶ್ಚೈವ ಪರಿವಾಹಸ್ತಥೈವ ಚ ।**
**ಅಂತರಿಕ್ಷಚರಾ ಹ್ಯೇತೇ ಪೃಥಙ್ಮಾರ್ಗ ವಿಸಾರಿಣಃ ॥ ೨೯ ॥**

---

೨೪. ವಿಷ್ಣುಭುಕ್, ವಿದ್ಯುತಿ, ಪ್ರಭು, ವಿಭು, ಶಿಖೀ, ಮನೋಜವ ಇವರು ಹಿಂದೆ ಆಳಿದ ಇಂದ್ರರು.

೨೫. ಓಜಸ್ವಿಯೆಂಬುವನು ಪ್ರಸಕ್ತಕಾಲದ ಇಂದ್ರ. ಮುಂದೆ ಇಂದ್ರ ಪದವಿಗೆ ಬರುವವನು ಬಲಿ; ಅವನ ಅನಂತರ ಅದ್ಭುತ, ಹತ್ತನೆಯವನು ತ್ರಿದಿವೇಂದ್ರ.

೨೬. ಸುಸಾತ್ವಿಕ, ಕೀರ್ತಿ, ಶತಧಾಮ, ದಿವಸ್ಪತಿ ಎಂಬವರು ಅಲ್ಲಿಂದ ಮುಂದೆ ಇಂದ್ರಪದವಿಗೆ ಬರತಕ್ಕವರಾಗಿದ್ದಾರೆ. ಇವರೇ ಭೂತಕಾಲದ ಮತ್ತು ಭವಿಷ್ಯಕಾಲದ ಹದಿನಾಲ್ಕು ಮಂದಿ ಇಂದ್ರರು ಎಂದು ತಿಳಿಯಬೇಕು.

೨೭. ಕಶ್ಯಪ, ಅತ್ರಿ, ವಸಿಷ್ಠ, ಭರದ್ವಾಜ, ಗೌತಮ, ವಿಶ್ವಾಮಿತ್ರ, ಜಮದಗ್ನಿ ಇವರೇ ಸಪ್ತರ್ಷಿಗಳೆಂದು ತಿಳಿಯಬೇಕು.

೨೮–೨೯. ಇನ್ನು ಅಗ್ನಿಗೆ ಪರಿವಾರವಾಗಿ ಆಕಾಶದಲ್ಲಿ ಬೇರೆ ಬೇರೆ ಮಾರ್ಗದಲ್ಲಿ ಚಲಿಸುವ ಮರುತ್ತುಗಳನ್ನು ಹೇಳುತ್ತೇನೆ ಕೇಳು. ಪ್ರವಹ, ಆವಹ, ಉದ್ವಹ ಸಂವಹ, ವಿವಹ, ನಿಹವ, ಪರಿವಹ ಇವೇ ಸಪ್ತ ಮರುತ್ತುಗಳು.

ಸೂರ್ಯೋಽಗ್ನಿಶ್ಚ ಶುಚಿರ್ನಾಮ್ನಾ ವೈದ್ಯುತಃ ಪಾವಕಃ ಸ್ಮೃತಃ ।
ನಿರ್ಮಂಥಃ ಪವಮಾನೋಽಗ್ನಿಸ್ತ್ರಯಃ ಪ್ರೋಕ್ತಾ ಇಮೇಗ್ನಯಃ ॥ ೩೦ ॥

ಅಗ್ನೀನಾಂ ಪುತ್ರ ಪೌತ್ರಸ್ತು ಚತ್ವಾರಿಂಶತ್ತಥೈವ ತು ।
ಮರುತಾಮಪಿ ಸರ್ವೇಷಾಂ ವಿಜ್ಞೇಯಾಃ ಸಪ್ತಸಪ್ತಕಾಃ ॥ ೩೧ ॥

ಋತುಃ ಸಂವತ್ಸರೋಽಹ್ಯಗ್ನಿಃ ಋತವಸ್ತಸ್ಯ ಜಜ್ಞಿರೇ ।
ಋತುಪುತ್ರಾಶ್ಚ ವೈ ಪಂಚ ಇತಿ ಸರ್ಗಃ ಸನಾತನಃ ॥ ೩೨ ॥

ಸಂವತ್ಸರಸ್ತು ಪ್ರಥಮೋ ದ್ವಿತೀಯಃ ಪರಿವತ್ಸರಃ ।
ಇದ್ವತ್ಸರಸ್ತೃತೀಯಸ್ತು ಚತುರ್ಥಸ್ತ್ವನುವತ್ಸರಃ ॥ ೩೩ ॥

ಪಂಚಮೋ ವತ್ಸರಸ್ತೇಷಾಂ ಇತ್ಯೇವಂ ಪಂಚ ತೇ ಸ್ಮೃತಾಃ ।
ತೇಷು ಸಂವತ್ಸರೋಹ್ಯಗ್ನಿಃ ಸೂರ್ಯಸ್ತು ಪರಿವತ್ಸರಃ ॥ ೩೪ ॥

---

೩೦. ಶುಚಿ ಸಂಜ್ಞೆಯುಳ್ಳ ಸೂರ್ಯರೂಪವಾದ ಅಗ್ನಿ, ಪಾವಕ ಸಂಜ್ಞೆಯುಳ್ಳ ವಿದ್ಯುದ್ರೂಪವಾದ ಅಗ್ನಿ, ಪವಮಾನ ಸಂಜ್ಞೆಯುಳ್ಳ ನಿರ್ಮಂಥಾಗ್ನಿ, ಎಂಬದಾಗಿ ಅಗ್ನಿಗಳು ಮೂರು ಎಂದು ಹೇಳಿದೆ

೩೧. ಅಗ್ನಿಗಳ ಪುತ್ರರು ಪೌತ್ರರು ನಲವತ್ತುಮಂದಿ ಇರುವರು. ಮರುತ್ತುಗಳೂ ಏಳೇಳು ಮಂದಿಗಳುಳ್ಳ ಏಳು ಗುಂಪಾಗಿರುವರು.

೩೨. ಋತುಗಳಿಂದ ಕೂಡಿದ ಸಂವತ್ಸರಾತ್ಮಕನೇ ಅಗ್ನಿ; ಋತುಗಳು ಆ ಅಗ್ನಿಗೆ ಪುತ್ರರಾಗಿ ಹುಟ್ಟಿದರು. ಋತುವಿನ ಮಕ್ಕಳು ಐದುಮಂದಿ; ಅನಾದಿಸೃಷ್ಟಿಕ್ರಮವು ಈ ರೀತಿ ಇರುವುದು.

೩೩. ಸಂವತ್ಸರವು ಪ್ರಥಮಪುತ್ರ, ಪರಿವತ್ಸರವು ದ್ವಿತೀಯಪುತ್ರ, ಇದ್ವತ್ಸರವು ತೃತೀಯಪುತ್ರ, ಅನುವತ್ಸರವು ಚತುರ್ಥಪುತ್ರ, ವತ್ಸರವು ಐದನೆಯಪುತ್ರ.

೩೪. ಹೀಗೆ ಅವರಿಗೆ ಐದುಮಂದಿ ಮಕ್ಕಳಿರುವರು. ಅದರಲ್ಲಿ ಅಗ್ನಿಯು ಸಂವತ್ಸರ (ಪ್ರಥಮಪುತ್ರ) ಸೂರ್ಯನು ಪರಿವತ್ಸರನು (ದ್ವಿತೀಯಪುತ್ರ.)

ಸೋಮ ಇದ್ವತ್ಸರಸ್ತೇಷಾಂ ವಾಯುಶ್ಚೈವಾನುವತ್ಸರಃ ।
ರುದ್ರಸ್ತು ವತ್ಸರೋ ಜ್ಞೇಯಃ ಪಂಚೈತಾ ಯುಗದೇವತಾಃ ॥ ೩೫ ॥

ಆರ್ತವಾಃ ಪಿತರೋ ಜ್ಞೇಯಾಃ ಯೇ ಜಾತಾಃ ಋತುಸೂನವಃ ।
ಪಿತಾಮಹಸ್ತು ವಿಜ್ಞೇಯಾ ಪಂಚಾಬ್ದಾ ಬ್ರಹ್ಮಣಃ ಸುತಾಃ ॥ ೩೬ ॥

ಸೌಮ್ಯಾ ಬರ್ಹಿಷದಶ್ಚೈವ ಅಗ್ನಿಷ್ವಾತ್ತಾ ಚ ಯೇ ತ್ರಯಃ ।
ಏತೇ ವೈ ಪಿತರಸ್ತೇಷಾಂ ಯೇ ಜೀವತ್ಪಿತೃಕಾ ನರಾಃ ॥ ೩೭ ॥

ಆದಿತ್ಯಶ್ಚೈವ ಸೋಮಶ್ಚ ಲೋಹಿತಾಂಗೋ ಬುಧಸ್ತಥಾ ।
ಬೃಹಸ್ಪತಿಶ್ಚ ಶುಕ್ರಶ್ಚ ತಥಾ ಹೇಲಿಸುತಶ್ಚ ಯಃ ॥ ೩೮ ॥

ಉಪರಾಗಃ ಶಿಖೀ ಚೋಭೌ ನವೈತೇ ನು ಗ್ರಹಾ ಸ್ಮೃತಾಃ ।
ತ್ರೈಲೋಕ್ಯಸ್ಯ ತ್ವಿಮೇ ನಿತ್ಯಂ ಭಾವಾಭಾವ ನಿವೇದಕಾಃ ॥ ೩೯ ॥

---

೩೫. ಮತ್ತು (ಸೋಮ) ಚಂದ್ರನು ಇದ್ವತ್ಸರನು (ತೃತೀಯಪುತ್ರ) ವಾಯುವು ಅನುವತ್ಸರ (ಚತುರ್ಥಪುತ್ರ) ರುದ್ರನು ವತ್ಸರ (ಐದನೇಪುತ್ರ) ಈ ಐದುಮಂದಿಯೂ ಯುಗದೇವತೆಗಳು.

೩೬. ಋತುಸಂಬಂಧಿಗಳಾಗಿ ಎಂದರೆ ಋತುಪುತ್ರರಾಗಿ ಹುಟ್ಟಿದ ಐವರನ್ನೂ ಪಿತೃಗಳೆಂದು ತಿಳಿಯಬೇಕು. ಬ್ರಹ್ಮನ ಪುತ್ರರಾದ ಪಂಚಸಂವತ್ಸರಗಳನ್ನೂ ಪಿತಾಮಹರೆಂದು ತಿಳಿಯಬೇಕು.

೩೭. ಸೌಮ್ಯರು, ಬರ್ಹಿಷದರು, ಅಗ್ನಿಷ್ವಾತ್ತರು ಎಂಬ ಮೂವರು ಜೀವತ್ಪಿತೃಕರಾದ ಮನುಷ್ಯರಿಗೆ ಪಿತೃಸಮರು.

೩೮. ಆದಿತ್ಯ, ಸೋಮ, ಲೋಹಿತಾಂಗ, ಬುಧ, ಬೃಹಸ್ಪತಿ, ಶುಕ್ರ, ಸೂರ್ಯಪುತ್ರ (ಶನಿ) (ಸೂರ್ಯ, ಚಂದ್ರ, ಅಂಗಾರಕ, ಬುಧ, ಗುರು, ಶುಕ್ರ, ಶನಿ), ರಾಹು, ಕೇತು ಇವು ಒಂಭತ್ತೂ ಗ್ರಹಗಳೆನಿಸಿಕೊಂಡವು.

೩೯. ಇವರು ಯಾವಾಗಲೂ ಮೂರುಲೋಕದ ಸ್ಥಿತಿ ಪ್ರಳಯಪ್ರಾಪ್ತಿಗಳನ್ನು ಸೂಚಿಸತಕ್ಕ ವ್ಯಕ್ತಿಗಳು ಎನಿಸಿದಾರೆ.

ಆದಿತ್ಯಶ್ಚೈವ ಸೋಮಶ್ಚ ದ್ವಾವೇತೌ ಮಂಡಲಗ್ರಹೌ ।
ರಾಹುಶ್ಛಾಯಾಗ್ರಹಸ್ತೇಷಾಂ ಶೇಷಾಸ್ತಾರಾಗ್ರಹಾ ಸ್ಮೃತಾಃ ॥ ೪೦ ॥

ನಕ್ಷತ್ರಾಧಿಪತಿಃ ಸೋಮೋ ಗ್ರಹರಾಜೋ ದಿವಾಕರಃ ।
ಪಠ್ಯತೇ ಚಾಗ್ನಿರಾದಿತ್ಯ ಉದಕಶ್ಚಂದ್ರಮಾ ಸ್ಮೃತಃ ॥ ೪೧ ॥

ಆದಿತ್ಯಃ ಪಠ್ಯತೇ ಬ್ರಹ್ಮಾ ವಿಷ್ಣುಸ್ತೇಷಾಂ ತು ಚಂದ್ರಮಾಃ ।
ಮಹೇಶ್ವರಸ್ತು ವಿಜ್ಞೇಯಸ್ತೃತೀಯಸ್ತಾರಕಗ್ರಹಃ ॥ ೪೨ ॥

ಕಶ್ಯಪಸ್ಯ ಸುತಃ ಸೂರ್ಯಃ ಸೋಮೋ ಧರ್ಮಸುತಃ ಸ್ಮೃತಃ ।
ದೇವಾಸುರಗುರೂ ಪ್ವೌ ತು ನಾಮತಸ್ತೌ ಮಹಾಗ್ರಹೌ ॥ ೪೩ ॥

ಪ್ರಜಾಪತಿಸುತಾವೇತಾವುಭೌ ಶುಕ್ರಬೃಹಸ್ಪತೀ ।
ಬುಧಃ ಸೋಮಾತ್ಮಜಃ ಶ್ರೀಮಾನ್ ಶನೀ ರವಿಸುತಃ ಸ್ಮೃತಃ ॥ ೪೪ ॥

---

೪೦. ಆದಿತ್ಯ, ಚಂದ್ರ ಇವೆರಡೂ ಮಂಡಲಾಕಾರವಾಗಿರುವ (ಮಂಡಲ ಎನಿಸಿಕೊಳ್ಳುವ) ಗ್ರಹಗಳು. ಈ ಗ್ರಹಗಳಲ್ಲಿ ರಾಹುವೆಂಬುದು ಛಾಯಾಗ್ರಹ. ಉಳಿದುವು ತಾರಾ ಗ್ರಹಗಳೆನಿಸುವುವು.

೪೧. ಗ್ರಹಗಳು, ನಕ್ಷತ್ರಗಳು, ಇವುಗಳಲ್ಲಿ ಚಂದ್ರನು ನಕ್ಷತ್ರಾಧಿಪತಿಯು. ಸೂರ್ಯನು ಗ್ರಹಗಳಿಗೆ ಅಧಿಪತಿಯು. ಅಗ್ನಿಗೆ ಆದಿತ್ಯನೆಂದೂ ಉದಕಕ್ಕೆ ಚಂದ್ರನೆಂದೂ ಹೆಸರೆಂದು ತಿಳಿಯಬೇಕು.

೪೨. ಈ ಗ್ರಹಗಳಲ್ಲಿ ಬ್ರಹ್ಮನು ಆದಿತ್ಯನೆಂದೂ, ವಿಷ್ಣುವು ಚಂದ್ರಗ್ರಹವೆಂದೂ ಮಹೇಶ್ವನು ಮೂರನೆಯ ಗ್ರಹವಾದ ಅಂಗಾರಕ ಗ್ರಹವೆಂದೂ ಕರೆಯುತ್ತಾರೆ.

೪೩. ಆದಿತ್ಯನು ಕಶ್ಯಪರ ಮಗನು, ಚಂದ್ರನು ಧರ್ಮಸುತನು, ದೇವಗುರುವಾದ ಬೃಹಸ್ಪತಿ, ಅಸುರ ಗುರುವಾದ ಶುಕ್ರ ಇವರಿಬ್ಬರೂ ಮಹಾಗ್ರಹಗಳೆಂದು ಪ್ರಸಿದ್ಧರು.

೪೪. ಬೃಹಸ್ಪತಿ, ಶುಕ್ರ ಎಂಬ ಇಬ್ಬರೂ ಪ್ರಜಾಪತಿಯ ಮಕ್ಕಳು, ಬುಧನು ಚಂದ್ರನ ಮಗನು, ಶನಿಯು ಸೂರ್ಯನ ಮಗನೆಂದು ಹೇಳಲ್ಪಟ್ಟಿದೆ.

ಸಿಂಹಿಕಾಯಾಃ ಸುತೋ ರಾಹುಃ ಕೇತುಸ್ತು ಬ್ರಹ್ಮಣಃ ಸ್ಮೃತಃ ।
ಸರ್ವೇಷಾಂ ಚ ಗ್ರಹಾಣಾಂ ಹಿ ಅಧಸ್ತಾಚ್ಚರತೇ ರವಿಃ ॥ ೪೫ ॥

ತತೋ ದೂರಂ ಸ್ಮೃತಂ ತಾವತ್ ವಿಧುನಕ್ಷತ್ರ ಮಂಡಲಂ ।
ನಕ್ಷತ್ರೇಭ್ಯಃ ಕುಜಬುಧೌ ಶ್ವೇತಾಹ್ವಸ್ತದನಂತರಂ ॥ ೪೬ ॥

ತಸ್ಮಾನ್ಮಹೇಶ್ವರಶ್ಚೋರ್ಧ್ವಂ ಧಿಷಣಸ್ತದನಂತರಂ ।
ಕೃಷ್ಣಶ್ಚೋರ್ಧ್ವಂ ತತಸ್ತಸ್ಮಾದಥ ಚಿತ್ರಶಿಖಂಡಿನಃ ॥ ೪೭ ॥

ಏಷಾಮೇವ ಕ್ರಮಃ ಪ್ರೋಕ್ತಾಶ್ಚಾಸಕ್ತಂ ತ್ರಿದಿವಂ ಧ್ರುವೇ ।
ಆದಿತ್ಯನಿಲಯೋ ರಾಹುಃ ಕದಾಚಿತ್ಸೋಮ ಮಾರ್ಗಗಃ ॥ ೪೮ ॥

ಸೂರ್ಯಮಂಡಲ ಸಂಸ್ಥಸ್ತು ಶಿಖೀ ಸರ್ಪತಿ ಸರ್ವದಾ ।
ನವಯೋಜನ ಸಾಹಸ್ರೋ ವಿಸ್ತಾರೋ ಭಾರ್ಗವಸ್ಯ ತು ॥ ೪೯ ॥

---

೪೫. ರಾಹುವು ಸಿಂಹಿಕೆಯ ಮಗನು, ಕೇತುವು ಬ್ರಹ್ಮನ ಮಗನು ಸೂರ್ಯನು ಎಲ್ಲಾ ಗ್ರಹಗಳಿಗಿಂತ ಕೆಳಭಾಗದಲ್ಲಿ ಸಂಚಾರಮಾಡುತ್ತಾನೆ. ಚಂದ್ರಮಂಡಲವೂ ನಕ್ಷತ್ರಮಂಡಲವೂ ಎಲ್ಲಾ ಗ್ರಹಗಳಿಗಿಂತ ದೂರದಲ್ಲಿದೆ ಎಂದು ತಿಳಿಯಬೇಕು.

೪೬. ನಕ್ಷತ್ರ ಮಂಡಲಕ್ಕಿಂತ ದೂರದಲ್ಲಿ ಕುಜ, ಬುಧ ಈ ಗ್ರಹಗಳು ಇವೆ. ಅಲ್ಲಿಂದಾಚೆಗೆ ಶ್ವೇತಾಹ್ವ (ಶುಕ್ರ) ಗ್ರಹವಿದೆ.

೪೭. ಅನಂತರ ಅದಕ್ಕಿಂತ ಮೇಲೆ ಮಹೇಶ್ವರ ಸದೃಶವಾದ ಗುರುಃಗ್ರಹವೂ ಅಲ್ಲಿಂದ ಮೇಲೆ ಕೃಷ್ಣ (ಶನಿ) ಗ್ರಹವೂ, ಅಲ್ಲಿಂದಾಚೆಗೆ ಸಪ್ತರ್ಷಿಮಂಡಲವೂ ಇವೆ.

೪೮. ಧ್ರುವಮಂಡಲ, ಸ್ವರ್ಗ, ಇವುಗಳೂ ಇದೇ ಕ್ರಮದಲ್ಲಿ ಇವೆಯೆಂದು ಹೇಳಿದೆ. ರಾಹುವು ಸೂರ್ಯನ ಮಾರ್ಗದಲ್ಲಿ ಇರತಕ್ಕವನು. ಒಂದೊಂದು ಸಾರಿ ಚಂಪ್ರನ ಮಾರ್ಗದಲ್ಲಿ ಸಂಚರಿಸತಕ್ಕವನು.

೪೯. ಕೇತುವು ಸದಾ ಸೂರ್ಯಮಂಡಲದಲ್ಲಿಯೇ ಇದ್ದುಕೊಂಡು ಸಂಚರಿಸುವನು. ಶುಕ್ರಗ್ರಹದ ವಿಸ್ತಾರವು ಒಂಭತ್ತುಸಹಸ್ರ ಯೋಜನ ಪ್ರಮಾಣವುಳ್ಳದ್ದು.

ದ್ವಿಗುಣಃ ಸೂರ್ಯವಿಸ್ತಾರಾದ್ವಿಸ್ತಾರಃ ಶಶಿನಃ ಸ್ಮೃತಃ ।
ತ್ರಿಗುಣಂ ಮಂಡಲಂ ಜ್ಞೇಯಂ ನಾಕ್ಷತ್ರಂ ವಿಸ್ತರಾದ್ವಿಧೋಃ ॥ ೩೦ ॥

ನಕ್ಷತ್ರಮಂಡಲಾತ್ತತ್ರ ಪಾದಹೀನೋ ಬೃಹಸ್ಪತಿಃ ।
ಬೃಹಸ್ಪತೇಃ ಪಾದಹೀನಃ ಶುಕ್ರೋಂಗಾರಕ ಏವ ಹಿ ॥ ೩೧ ॥

ವಿಸ್ತಾರೇ ಮಂಡಲಾನಾಂ ತು ಪಾದಹೀನಸ್ತಯೋರ್ಬುಧಃ ।
ಬುಧತುಲ್ಯಾನಿ ಋಕ್ಷಾಣಿ ಸರ್ವಋಕ್ಷಾಣಿ ಯಾನಿ ತು ॥ ೩೨ ॥

ಯೋಜನಾನ್ಯರ್ಧಮಾತ್ರಾಣಿ ತೇಭ್ಯೋ ಹ್ರಸ್ವಂ ನ ವಿದ್ಯತೇ ।
ರಾಹುಃ ಸೂರ್ಯಪ್ರಮಾಣಶ್ಚ ಕದಾಚಿತ್ಸೋಮಸನ್ನಿಭಃ ॥ ೩೩ ॥

ನಕ್ಷತ್ರಗ್ರಹಮಾನಸ್ತು ಕೇತುಸ್ತ್ವನಿಯತಃ ಸ್ಮೃತಃ ।
ಅವಿಜ್ಞಾತಗತಿಶ್ಚೈವ ಚಂಚಲತ್ವಾನ್ನರಾಧಿಪ ॥ ೩೪ ॥

೩೦. ಸೂರ್ಯನ ವಿಸ್ತಾರದ ಎರಡರಷ್ಟು ಚಂದ್ರನ ವಿಸ್ತಾರವಿದೆಯೆಂದು ತಿಳಿಯಬೇಕು. ನಕ್ಷತ್ರಮಂಡಲವು ಚಂದ್ರಮಂಡಲದ ಮೂರರಷ್ಟು ಇರುತ್ತದೆ.

೩೧. ಗುರುಗ್ರಹದ ಗಾತ್ರವು ನಕ್ಷತ್ರಮಂಡಲಕ್ಕಿಂತಲೂ ಕಾಲುಭಾಗ ಕಡಿಮೆ ಇರತಕ್ಕದ್ದು. ಶುಕ್ರ ಅಂಗಾರಕ ಇವೆರಡೂ ಸೇರಿ, ಬೃಹಸ್ಪತಿಗಿಂತ ಕಾಲುಭಾಗಕ್ಕೆ ಕಡಿಮೆ.

೩೨. ಬುಧಗ್ರಹವು ಶುಕ್ರ ಅಂಗಾರಕ ಇವೆರಡಕ್ಕಿಂತಲೂ ಕಾಲುಭಾಗ ಕಡಿಮೆಯಾಗಿದೆ. ನಕ್ಷತ್ರಗಳಲ್ಲಿ ಯಾವುದನ್ನು ತೆಗೆದುಕೊಂಡರೂ ಅವೆಲ್ಲಾ ಬುಧನಿಗೆ ಸಮಾನವಾದುವು. ಇವುಗಳಲ್ಲಿ ಅರ್ಧಯೋಜನವುಳ್ಳ ನಕ್ಷತ್ರವೇ ಚಿಕ್ಕದು. ಅದಕ್ಕಿಂತ ಚಿಕ್ಕದು ಇನ್ನೊಂದಿಲ್ಲ.

೩೩-೩೪. ರಾಹುವು ಸೂರ್ಯನ ಪ್ರಮಾಣದಷ್ಟೇ ಪ್ರಮಾಣವುಳ್ಳವನು. ಒಂದೊಂದುವೇಳೆ ಚಂದ್ರನ ಸಮಾನ ಪ್ರಮಾಣವುಳ್ಳವನೂ ಆಗುತ್ತಾನೆ. ಕೇತುವು ಪ್ರಮಾಣದಲ್ಲಿ ನಕ್ಷತ್ರ ಗ್ರಹ ಇವುಗಳ ಪ್ರಮಾಣದಂತೆ ಒಂದು ನಿಯತ ಪ್ರಮಾಣವಿಲ್ಲ. ಏಕೆಂದರೆ ಅವನು ಚಂಚಲನಾದುದರಿಂದ ಅವನ ಗಮನವನ್ನು ಗೊತ್ತುಮಾಡಲು ಸಾಧ್ಯವಾಗುವುದಿಲ್ಲ. ಕೇಳಯ್ಯಾ ರಾಜನೇ! ಹೀಗೆ ಅವನು ಕಾಣಿಸದ ರೂಪವುಳ್ಳವನಾದರೂ ಅವನು ನಾನಾರೂಪದಿಂದ ಇರಬಲ್ಲನು.

ತಥಾಲಕ್ಷಿತರೂಪಸ್ತು ಬಹುರೂಪಧರೋ ಹಿ ಸಃ ।
ಭೂಲೋಕಃ ಪೃಥಿವೀ ಪ್ರೋಕ್ತಾ ಅಂತರಿಕ್ಷಂ ಭುವಃ ಸ್ಮೃತಂ ॥ ೫೫ ॥

ಸ್ವರ್ಲೋಕಸ್ತ್ರಿದಿವಂ ಜ್ಞೇಯಂ ಶೇಷಾದೂರ್ಧ್ವಂ ಯಥಾಕ್ರಮಂ ।
ಭುವಃಪತಿಸ್ಸದಾತ್ವಗ್ನಿಸ್ತೇನಾಸೌ ಭೂಪತಿಃ ಸ್ಮೃತಃ ॥ ೫೬ ॥

ವಾಯುರ್ನಭಸ್ಪತಿಸ್ತೇನ ತಥಾ ಸೂರ್ಯೋ ದಿವಸ್ಪತಿಃ ।
ಗಂಧರ್ವಾಪ್ಸರಸಶ್ಚೈವ ಗುಹ್ಯಕಾಃ ಸಿದ್ಧರಾಕ್ಷಸಾಃ ॥ ೫೭ ॥

ಭೂಲೋಕವಾಸಿನಃ ಸರ್ವೇ ಅಂತರಿಕ್ಷಚರಾನ್ ಶೃಣು ।
ಮರುತಃ ಸಪ್ತಮಸ್ಕಂಧೇ ರುದ್ರಾಸ್ತತ್ರೈವ ಚಾಶ್ವಿನಾ ॥ ೫೮ ॥

ಆದಿತ್ಯಾ ವಸವಃ ಸರ್ವೇ ತಥೈವ ಚ ಗವಾಂ ಗಣಾಃ ।
ಚತುರ್ಥೇ ತು ಮಹಲೋಕೇ ವಸಂತೇ ಕಲ್ಪವಾಸಿನಃ ॥ ೫೯ ॥

---

೫೫. ಭೂಲೋಕವು ಪೃಥಿವೀ ಎನಿಸಿಕೊಂಡಿದೆ. ಭುವರ್ಲೋಕವು ಅಂತರಿಕ್ಷ. ಸ್ವರ್ಲೋಕವೇ ಸ್ವರ್ಗ, ಉಳಿದುವು ಹೀಗೆ ಒಂದರಮೇಲೊಂದು ಇವೆ.

೫೬–೫೭. ಅಗ್ನಿಯು ಸದಾ ಭೂಲೋಕಕ್ಕೆ ಅಧಿಪತಿಯಾದ್ದರಿಂದ ಅವನಿಗೆ ಭೂಪತಿ ಎಂಬದಾಗಿ ಹೆಸರೆಂದು ತಿಳಿಯಬೇಕು. ವಾಯುವು ಅಂತರಿಕ್ಷಾಧಿಪತಿ. ಹಾಗೆಯೇ ಸೂರ್ಯನು ದ್ಯು (ಆಕಾಶ) ಲೋಕಕ್ಕೆ ಅಧಿಪತಿ ಆದ್ದರಿಂದ ದಿವಸ್ಪತಿಯು. ಗಂಧರ್ವರು, ಅಪ್ಸರರು, ಗುಹ್ಯಕರು, ಸಿದ್ಧರು, ರಾಕ್ಷಸರು ಇವರೆಲ್ಲಾ ಭೂಲೋಕ ವಾಸಿಗಳಾಗಿದ್ದಾರೆ.

೫೮. ಆಕಾಶ ಸಂಚಾರಿಗಳ ವಿಷಯವನ್ನು ಕೇಳು. ವಾಯುಲೋಕವು ಏಳು ಅಂತಸ್ತುಳ್ಳದ್ದು, ಅದರಲ್ಲಿ ಏಳನೇ ಅಂತಸ್ತಿನಲ್ಲಿ ಏಕಾದಶ ರುದ್ರರು, ಅಶ್ವಿನೀ ದೇವತೆಗಳು, ದ್ವಾದಶಾದಿತ್ಯರು, ಅಷ್ಟವಸುಗಳು, ಕಿರಣ ಸಮೂಹಗಳು ಇವೆಲ್ಲಾ ಇವೆ.

೫೯. ನಾಲ್ಕನೆಯದಾದ ಮಹರ್ಲೋಕದಲ್ಲಿ ಕಲ್ಪವಾಸಿಗಳು ವಾಸಿಸುತ್ತಾರೆ.

ಪ್ರಜಾನಾಂ ಪತಿಭಿಃ ಸರ್ವೈಃ ಸಹಿತಾ ಕುರುನಂದನ ।
ಜನಲೋಕೇ ಪಂಚಮೇ ಚ ವಸಂತೇ ಭೂಮಿದಾಃ ಸದಾ ॥ ೬೦ ॥

ಋತೌ ಸನತ್ಕುಮಾರಾದ್ಯಾ ವೈರಾಜಶ್ಚ ತದಾಶ್ರಯಾಃ ।
ಸತ್ಯಸ್ತು ಸಪ್ತಮೋ ಲೋಕೋ ಹ್ಯಪುನರ್ಮಾರ್ಗಗಾಮಿನಾಂ ॥ ೬೧ ॥

ಬ್ರಹ್ಮಲೋಕಃ ಸಮಾಖ್ಯಾತೋ ಹ್ಯಪ್ರತೀಘಾತಲಕ್ಷಣಃ ।
ಇತಿಹಾಸವಿದೋ ಯತ್ರ ಕ್ರೀಡತೇ ಕುರುನಂದನ ॥ ೬೨ ॥

ಶೃಣ್ವಂತಿ ಹಿ ಪುರಾಣಾನಿ ಯೇ ಸದಾ ಭೀಮನಂದನ ।
ಮಹೀತಲಾತ್ಸಹಸ್ರಾಣಾಂ ಶತಾದೂರ್ಧ್ವಂ ದಿವಾಕರಃ ॥ ೬೩ ॥

ಶತಯೋಜನಕೋಟ್ಯಾಸ್ತು ಭೂಮೇರೂರ್ಧ್ವಂ ಧ್ರುವಃ ಸ್ಥಿತಃ ।
ತತೋ ವಿಶಂತಿಲಕ್ಷಸ್ತು ತ್ರೈಲೋಕ್ಯೋತ್ಸೇಧ ಉಚ್ಯತೇ ॥ ೬೪ ॥

---

೬೦. ಅಯ್ಯಾ ಕುರುನಂದನನೇ! ಐದನೆಯದಾದ ಜನಲೋಕದಲ್ಲಿ ಭೂದಾನ ಮಾಡಿದವರೆಲ್ಲರೂ ಸಮಸ್ತ ಪ್ರಜಾಪತಿಗಳೊಡನೆ ಕೂಡಿ ವಾಸಿಸುತ್ತಾರೆ.

೬೧. ಆರನೆಯದಾದ ತಪೋಲೋಕದಲ್ಲಿ ಸನತ್ಕುಮಾರನೇ ಮೊದಲಾದವರೂ, ವೈರಾಜರೂ ಅವರನ್ನು ಆಶ್ರಯಿಸಿಕೊಂಡಿರುವವರೂ ಇದ್ದಾರೆ. ಏಳನೆಯದಾದ ಸತ್ಯ ಲೋಕವು ಪುನರಾವೃತ್ತಿರಹಿತರಾದ ಉಪಾಸಕರಿಗೆ ಲಭಿಸುವುದು. ಅದನ್ನೇ ಕಲ್ಪಾಂತ ಪರ್ಯಂತ ನಾಶರಹಿತವಾದ ಬ್ರಹ್ಮಲೋಕವೆನ್ನುವುದು ಪ್ರಸಿದ್ಧವಾಗಿದೆ

೬೨. ಅಯ್ಯಾ ಕುರುನಂದನನೇ! ಪುರಾಣಗಳನ್ನು ವಾಚನಮಾಡತಕ್ಕ ಪೌರಾಣಿಕರು ಆ ಲೋಕವಲ್ಲಿ ಕ್ರೀಡಿಸುತ್ತಾರೆ.

೬೩. ಅಯ್ಯಾ ಭೀಮಸೂನುವೇ! ಯಾರು ಸರ್ವದಾ ಪುರಾಣಶ್ರವಣ ಮಾಡುವರೋ ಅವರು ಭೂಲೋಕದಿಂದ ಸಹಸ್ರ ಯೋಜನದಮೇಲೆ ಸೂರ್ಯನಿರುವ ಕಡೆಯಲ್ಲೇ ವಾಸಿಸುವರು.

೬೪. ಭೂಮಿಗಿಂತಲೂ ನೂರುಕೋಟಿ ಯೋಜನದಮೇಲೆ ಧ್ರುವಲೋಕವಿ ರುತ್ತದೆ. ಆ ಮೇಲೆ ಇಪ್ಪತ್ತು ಯೋಜನದವರೆಗೆ ತ್ರೈಲೋಕ್ಯದ ಔನ್ನತ್ಯವಿದೆ ಎಂದು ಹೇಳುತ್ತಾರೆ.

ದ್ವಿಗುಣೈಸ್ತು ಸ ಹಸ್ರೈಸ್ತು ಯೋಜನಾನಾಂ ಶತೇಷು ಚ ।
ಲೋಕಾಂತರಮಥೋ ಚೈವಂ ಧ್ರುವಾಧೂರ್ಧ್ವಂ ವಿಧೀಯತೇ ॥ ೬೫ ॥

ದೇವದಾನವಗಂಧರ್ವಾಃ ಯಕ್ಷರಾಕ್ಷಸಪನ್ನಗಾಃ ।
ಭೂತಾ ವಿದ್ಯಾಧರಾಶ್ಚೈವ ಅಷ್ಟೌ ತೇ ದೇವಯೋನಯಃ ॥ ೬೬ ॥

ಯಸ್ಮಿನ್ ವ್ಯೋಮ್ನಿ ತ್ವಿಮೇ ಲೋಕಾಃ ಸಪ್ತ ವೈ ಸಂಪ್ರತಿಷ್ಠಿತಾ ।
ಮರುತಃ ಪಿತರೋ ಹ್ಯೇತೇ ತಸ್ಮಿನ್ನೇವಾಗ್ನಯೋ ಗ್ರಹಾಃ ॥ ೬೭ ॥

ಯಾಸ್ತ್ವಸ್ಯೇತಾಃ ಸಮಾಖ್ಯಾತಾಃ ಮಯಾಷ್ಟೌ ದೇವಯೋನಯಃ ।
ಮೂರ್ತಾಶ್ಚಾಮೂರ್ತಯಶ್ಚೈವ ಸರ್ವಾಸ್ತಾ ವ್ಯೋಮ್ನಿ ಸಂಸ್ಥಿತಾಃ॥ ೬೮ ॥

ಏವಂ ಏಥಮಿದಂ ವ್ಯೋಮ ಸರ್ವಂ ವ್ಯೋಮಮಯಂ ಸ್ಮೃತಂ ।
ಸರ್ವ ದೇವಮಯಂ ಚೈವ ಸರ್ವಗ್ರಹಮಯಂ ತಥಾ ॥ ೬೯ ॥

---

೬೫. ಧ್ರುವಮಂಡಲದಿಂದ ಶತಯೋಜನಗಳ ಎರಡುಸಾವಿರ ಸಲದಷ್ಟು ಎಂದರೆ ಎರಡುಲಕ್ಷ ಯೋಜನದಷ್ಟು ಹೋದರೆ, ಆ ಧ್ರುವಕ್ಕಿಂತ ಮೇಲೆ ಇನ್ನೊಂದು ಲೋಕಾಂತರವಿದೆ.

೬೬. ದೇವ, ದಾನವ, ಗಂಧರ್ವ, ಯಕ್ಷ, ರಾಕ್ಷಸ, ಪನ್ನಗ, ಭೂತ, ವಿದ್ಯಾಧರ ಈ ಎಂಟೂ ದೇವಯೋನಿಗಳು.

೬೭. ಈ ಏಳು ಲೋಕಗಳೂ ಆ ವ್ಯೋಮದಲ್ಲಿ ಪ್ರತಿಷ್ಠಿತಗಳಾಗಿವೆ. ಅದೇ ಲೋಕಗಳಲ್ಲಿ ಮರುತ್ತುಗಳು, ಪಿತೃದೇವತೆಗಳು, ಅಗ್ನಿಗಳು, ಗ್ರಹಗಳು ಎಲ್ಲರೂ ಇದ್ದಾರೆ.

೬೮. ನಾನು ಹೇಳಿದ ಎಂಟು ದೇವಯೋನಿಗಳ ವ್ಯಕ್ತಿಗಳು ಸಾಕಾರರೂ, ನಿರಾಕಾರರೂ ಆಗಿ, ಆ ಎಲ್ಲರೂ ಆ ವ್ಯೋಮದಲ್ಲಿದ್ದಾರೆ.

೬೯. ಈ ವ್ಯೋಮವೆಂಬುದು ಈ ಪ್ರಕಾರವಾದುದು. ಎಲ್ಲವನ್ನೂ ವ್ಯೋಮ ರೂಪವೆಂದು ತಿಳಿಯಬೇಕು. ಹೀಗೆ ಈ ವ್ಯೋಮವೆಂಬುದು ಸಮಸ್ತ ದೇವತೆಗಳಿಂದ ಯುಕ್ತವಾದುದೂ ಸಮಸ್ತ ಗ್ರಹಗಳಿಂದ ಯುಕ್ತವಾದುದೂ ಆಗಿದೆ.

ತಸ್ಮಾದ್ವ್ಯೋಮ್ನ್ಯರ್ಚಯೇದ್ವ್ಯೋಮ ತೇನ ಸರ್ವೇ ಽರ್ಚಿತಾಃ ಸುರಾಃ ।
ತಸ್ಮಾತ್ಸರ್ವಪ್ರಯತ್ನೇನ ಶುಭಾರ್ಥೀ ವ್ಯೋಮಮರ್ಚಯೇತ್ ॥ ೨೦ ॥

ಯಸ್ತ್ವರ್ಚಯೇತ್ಸದಾ ವ್ಯೋಮ ಭಕ್ತಿ ಶ್ರದ್ಧಾಸಮನ್ವಿತಃ ।
ವೃಷಧ್ವಜಸದೋ ರಾಜನ್ ಸ ಗಚ್ಛೇನ್ನಾತ್ರ ಸಂಶಯಃ ॥ ೨೧ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ವ್ಯೋಮ
ಮಾಹಾತ್ಮ್ಯೇ ಭುವನಕೋಶ ವರ್ಣನ ನಾಮ
ಪಂಚವಿಂಶತ್ಯುತ್ತರಶತತಮೋಽಧ್ಯಾಯಃ.



೨೦. ಯಾವನು ವ್ಯೋಮವನ್ನು ಅರ್ಚನೆ ಮಾಡುವನೋ ಅವನು ಎಲ್ಲಾ ದೇವತೆಗಳನ್ನೂ ಅರ್ಚಿಸಿದಂತೆಯೇ ಆಗುವುದು. ಶುಭಾರ್ಥಿಗಳಾದ ಎಲ್ಲರೂ ಪ್ರಯತ್ನ ಪುರಃಸರವಾಗಿ ಈ ವ್ಯೋಮವನ್ನು ಪೂಜಿಸಬೇಕು.

೨೧. ಅಯ್ಯಾ ರಾಜನೇ! ಯಾವನು ಭಕ್ತಿ ಶ್ರದ್ಧೆಗಳಿಂದ ಕೂಡಿ ವ್ಯೋಮವನ್ನು ಸದಾ ಪೂಜಿಸುವನೋ ಅವನು ಧರ್ಮಧ್ವಜನಾದ ಸೂರ್ಯನ ಸನ್ನಿಧಿಗೆ ಹೋಗುತ್ತಾನೆ. ಇದರಲ್ಲಿ ಸಂಶಯವಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪವಲ್ಲಿ
ವ್ಯೋಮ ಮಹಾತ್ಮೆಯಲ್ಲಿ ಭುವನಕೋಶವರ್ಣನವೆಂಬ
ನೂರಿಪ್ಪತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಷಡ್ವಿಂಶತ್ಯುತ್ತರಶತತಮೋಽಧ್ಯಾಯಃ

॥ ಸುಮಂತುರುವಾಚ ॥

**ಆಕಾಶಂ ಖಂ ದಿವೋ ವ್ಯೋಮ ಅಂತರಿಕ್ಷಂ ನಭೋಽಂಬರಂ ।**
**ಪುಷ್ಕರಂ ಗಗನಂ ಮೇರುರ್ವಿಪುಲಂ ಚ ಬಿಲಂ ತಥಾ ॥ ೧ ॥**

**ಆಪೋಚ್ಛಿದ್ರಂ ತಥಾ ಶೂನ್ಯಂ ತಮೋ ವೈ ರೋದಸೀ ತಥಾ ।**
**ನಾಮಾನ್ಯೇತಾನಿ ತೇ ವ್ಯೋಮ್ನಃ ಕೀರ್ತಿತಾನಿ ಮಹೀಪತೇ ॥ ೨ ॥**

**ಲವಣಂ ಕ್ಷೀರದಧ್ಯಮ್ಲ ಘೃತಮಧ್ವಿಕ್ಷವಸ್ತಥಾ ।**
**ಸ್ವಾದೂದಕಶ್ಚ ಸಪ್ತೈತೇ ಸಮುದ್ರಾಃ ಪರಿಕೀರ್ತಿತಾಃ ॥ ೩ ॥**

---

### ನೂರಇಪ್ಪತ್ತಾರನೆಯ ಅಧ್ಯಾಯ

೧. ನಕಾಶಂ,-ಖಂ-;ದಿಶಃ ವ್ಯೋಮ, ಅಂತರಿಕ್ಷ, ನಭಃ-ಅಂಬರಂ, ಪುಷ್ಕರಂ,-ಗಗನಂ, ಮೇರು, ಮಹಾಬಿಲಂ (ಮೇಘದ್ವಾರಂ ಮಹಾಬಿಲಂ)

೨. ಅಪೋಚ್ಛಿದ್ರಂ,-ಶೂನ್ಯಂ,-ತಮಃ-ರೋದಸಿ ಎಂಬದಾಗಿ ವ್ಯೋಮ ಪರ್ಯಾಯ ನಾಮಗಳನ್ನು ಹೇಳಿದುದಾಯಿತು.

೩. ಲವಣಸಮುದ್ರ, ಕ್ಷೀರಸಮುದ್ರ, ದಧಿಸಮುದ್ರ, ಆಮ್ಲಸಮುದ್ರ, ಘೃತಸಮುದ್ರ, ಮಧುಸಮುದ್ರ, ಸ್ವಾದೂದಕಸಮುದ್ರ ಎಂದು ಏಳುಬಗೆಯ ಸಮುದ್ರಗಳು ಇವೆ.

ಹಿಮವಾನ್ ಹೇಮಕೂಟಶ್ಚ ನಿಷಧೋ ನೀಲ ಏವ ಚ ।
ಶ್ವೇತಶ್ಚ ಶೃಂಗವಾಂಶ್ಚೈವ ಷಡೇತೇ ವರ್ಷಪರ್ವತಾಃ ॥ ೪ ॥

ಮಧ್ಯಸಂಸ್ಥಸ್ತಥೈತೇಷಾಂ ಮಹಾರಾಜತಪರ್ವತಃ ।
ಮಾಹೇಂದ್ರೀ ಚಾಪ್ಯಥಾಗ್ನೇಯೀ ಯಾಮ್ಯಾ ಚ ನೈಋತೀ ತಥಾ ॥ ೫ ॥

ವಾರುಣೀ ಚಾಥ ವಾಯವ್ಯಾ ಸೌಮ್ಯೇಶಾನೀ ತಥೈವ ಚ ।
ಏತಾಃ ಪುರ್ಯಸ್ತು ದೇವಾನಾಂ ತಥೋಪರಿ ಸಮಾಶ್ರಿತಾಃ ॥ ೬ ॥

ಪೃಥಿವ್ಯಾಂ ತುಸ್ಥಿತೋ ವೀರ ಲೋಕಾಲೋಕಸ್ತು ಪರ್ವತಃ ।
ತತಸ್ತ್ವಂಡಕಪಾಲಂ ತು ತಸ್ಮಾತ್ತತ್ಪರತಸ್ತು ಯಃ ॥ ೭ ॥

ತತೋಗ್ನಿರ್ವಾಯುರಾಕಾಶಂ ತತೋ ಭೂತಾದಿರುಚ್ಯತೇ ।
ತತೋ ಮಹಾನಹಂಕಾರಃ ಪ್ರಕೃತಿಃ ಪುರುಷಸ್ತತಃ ॥ ೮ ॥

ಪುರುಷಾದೀಶ್ವರೋ ಜ್ಞೇಯ ಈಶ್ವರೇಣಾವೃತಂ ಜಗತ್ ।
ಈಶ್ವರೋ ಭಗವಾನ್ ಭಾನುಃ ತೇನೇದಂ ಪೂರಿತಂ ಜಗತ್ ॥ ೯ ॥

---

೪. ಹಿಮವಂತ, ಹೇಮಕೂಟ, ನಿಷಧ, ನೀಲ, ಶ್ವೇತ, ಶೃಂಗವಾನ್ ಈ ಆರೂ ವರ್ಷಪರ್ವತಗಳು.

೫. ಇವುಗಳ ಮಧ್ಯದಲ್ಲಿ ಮಹತ್ತಾದ ರಜತಪರ್ವತವಿದೆ. ಮಾಹೇಂದ್ರೀ ಆಗ್ನೇಯೀ, ಯಾಮ್ಯಾ, ನೈಋತೀ, ವಾರುಣೀ, ವಾಯವ್ಯಾ, ಸೌಮ್ಯಾ, (ಕೌಬೇರೀ) ಐಶಾನೀ ಎಂಬ ಹೆಸರ ಪಟ್ಟಣಗಳು ದೇವತೆಗಳಿಗೆ ಸೇರಿದವುಗಳಾಗಿ ಆ ಪರ್ವತದ ಮೇಲ್ಗಡೆ ಇವೆ.

೭. ಅಯ್ಯಾ ವೀರನೇ ! ಲೋಕಾಲೋಕಪರ್ವತವು ಪೃಥ್ವಿಯಲ್ಲಿದೆ. ಅಲ್ಲಿಂದಾಚೆಗೆ ಇರುವುದೇ ಸರ್ವೋತ್ಕೃಷ್ಟವಾದ ಅಂಡಕಪಾಲವು.

೮. ಆಮೇಲೆ ಅಗ್ನಿ, ವಾಯು, ಆಕಾಶ, ಆಮೇಲೆ ಭೂತಾದಿ ಆಮೇಲೆ ಮಹತ್ತತ್ವ, ಅಹಂಕಾರತತ್ವ, ಆಮೇಲೆ ಪ್ರಕೃತಿ, ಆಮೇಲೆ ಪುರುಷನು ಈ ಪ್ರಕಾರ ಇದೆ.

೯. ಪುರುಷನಿಂದ ಈಶ್ವರನು, ಈ ಈಶ್ವರನಿಂದ ಜಗತ್ತು ಆವೃತವಾಗಿದೆ. ಎಂದರೆ ಸೂರ್ಯನು ಈ ಜಗತ್ತಿನಲ್ಲಿ ತುಂಬಿಕೊಂಡಿದ್ದಾನೆ. ಆದುದರಿಂದ ಸೂರ್ಯನೇ ಈಶ್ವರ ರೂಪನು.

ಸಹಸ್ರಾಂಶುರ್ಮಹಾತೇಜಾಃ ಚತುರ್ಬಾಹುರ್ಮಹಾಬಲಃ ।
ಊರ್ಧ್ವಮಸ್ಯಥ ಲೋಕಾಸ್ತು ಪ್ರಾಙ್ಮಯಾ ಯೇ ಪ್ರಕೀರ್ತಿತಾಃ ॥ ೧೦ ॥

ಭೂಯಸ್ತಾನ್ ಸಂಪ್ರವಕ್ಷ್ಯಾಮಿ ಅಂಡಾವರಣಕಾರಕಾನ್ ।
ಭೂರ್ಲೋಕೋಽಸ್ತು ಭುವರ್ಲೋಕ ಸ್ತೃತೀಯಃ ಪರಿಕೀರ್ತಿತಃ ॥ ೧೧ ॥

ಮಹರ್ಜನಸ್ತಪಃ ಸತ್ಯಃ ಸಪ್ತ ಲೋಕಾಃ ಪ್ರಕೀರ್ತಿತಾಃ ।
ತತಸ್ತ್ವಂಡ ಕಪಾಲಂ ಚ ತಸ್ಮಾಚ್ಚ ಪರತಸ್ತ್ವಪಃ ॥ ೧೨ ॥

ತತೋಽಗ್ನಿರ್ವಾಯುರಾಕಾಶಂ ತತೋ ಭೂತಾದಿರುಚ್ಯತೇ ।
ತತೋ ಮಹಾನ್ ಪ್ರಧಾನಶ್ಚ ಪ್ರಕೃತಿಃ ಪುರುಷಸ್ತತಃ ॥ ೧೩ ॥

ಪುರುಷಾದೀಶ್ವರೋ ಜ್ಞೇಯೋ ಈಶ್ವರೇಣಾವೃತಂ ಜಗತ್ ।
ಭೂಮೇರಧಸ್ತಾತ್ಸಪ್ತೈವ ಲೋಕಾನಭಿಮತಾನ್ ಶೃಣು ॥ ೧೪ ॥

---

೧೦. ಮಹಾತೇಜಸ್ವಿಯೂ, ಚತುರ್ಭುಜನೂ, ಮಹಾಬಲನೂ ಆದ ಆ ಸಹಸ್ರ ಕಿರಣನಿಗಿಂತ ಮೇಲೆಯೂ ನಾನು ಹಿಂದೆ ಹೇಳಿದ ಲೋಕಗಳಿವೆ.

೧೧. ಬ್ರಹ್ಮಾಂಡವನ್ನಾವರಿಸುವ ಲೋಕಗಳನ್ನು ಕುರಿತು ಮತ್ತೊಂದಾವರ್ತಿ ನಾನು ಹೇಳುತ್ತೇನೆ ಕೇಳು. ಭೂರ್ಲೋಕ. ಭುವಲೋಕ, ಮೂರನೆಯದು ಸುವಲೋಕ.

೧೨. ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ. ಎಂದು ಏಳು ಲೋಕಗಳಿವೆ. ಅನಂತರದಲ್ಲಿ ಬ್ರಹ್ಮಾಂಡದ ಹೊರ ಆವರಣ (ಕಟಾಹ) ಅಲ್ಲಿಂದಾಚೆಗೆ ಜಲ ಹೀಗೆ ಇವೆ.

೧೩. ಅಲ್ಲಿಂದಾಚೆಗೆ ಅಗ್ನಿ, ವಾಯು, ಆಕಾಶ, ಅನಂತರದಲ್ಲಿ ಸೂಕ್ಷ್ಮಭೂತಗಳು, ಅಮೇಲೆ ಮಹತ್ತತ್ವ, ಪ್ರಧಾನವೂ (ಪ್ರಕೃತಿ) ಅನಂತರದಲ್ಲಿ ಪುರುಷ.

೧೪. ಪುರುಷನಿಂದಾಚೆಗೆ ಈಶ್ವರನು ಇದ್ದಾನೆ ಎಂದು ತಿಳಿಯತಕ್ಕದ್ದು. ಆ ಈಶ್ವರನಿಂದ ಜಗತ್ತು ಆವರಿಸಲ್ಪಟ್ಟಿದೆ. ಭೂಮಿಯ ಕೆಳಗೆ ಇರುವ ಲೋಕಗಳನ್ನು ಹೇಳುವೆನು ಕೇಳು.

ತಲಂ ಸುತಲಪಾತಾಲೇ ತಲಾತಲಂ ತಥಾತಲಂ ।
ವಿತಲಂ ಚ ಕುರುಶ್ರೇಷ್ಠ ಸಪ್ತಮಂ ಚ ರಸಾತಲಂ ॥ ೧೫ ॥

ತತೋಽಗ್ನಿರ್ವಾಯುರಾಕಾಶಂ ತತೋ ಭೂತಾದಿರುಚ್ಯತೇ ।
ತತೋ ಮಹಾನ್ ಪ್ರಧಾನಶ್ಚ ಪ್ರಕೃತಿಃ ಪುರುಷಸ್ತತಃ ॥ ೧೬ ॥

ಪುರುಷಾದೀಶ್ವರೋ ಜ್ಞೇಯ ಈಶ್ವರೇಣಾವೃತಂ ಜಗತ್ ।
ಏವಂ ಮೇರೋಃ ಪ್ರಮಾಣಂ ತು ಸರ್ವಮೇತತ್ಪ್ರಕೀರ್ತಿತಂ ೧೭ ॥

ಚತುರಸ್ರಶ್ಚತುಃ ಶೃಂಗಃ ಸ ಮೇರುಃ ಕಾಂಚನಃ ಶುಭಃ ।
ಪೃಥಿವ್ಯಾಂ ಸಂಸ್ಥಿತೋ ಮಧ್ಯೇ ಸಿದ್ಧಗಂಧರ್ವಸೇವಿತಃ ॥ ೧೮ ॥

ಚತುರ್ಭಿಃ ಕಾಂಚನೈಃ ಶೃಂಗೈಃ ದಿವ್ಯೈರ್ದಿವಮಿವೋಲ್ಲಿಖನ್ ।
ಯೋಜನಾನಾಂ ಸಹಸ್ರಾಣಿ ಚತುರಾಶೀತಿರುಚ್ಛ್ರಿತಃ ॥ ೧೯ ॥

---

೧೫. ತಲ, ಸುತಲ, ಪಾತಾಲ, ತಲಾತಲ, ಅತಲ, ವಿತಲ, ಏಳನೆಯದಾಗಿ ರಸಾತಲ, ಎಂಬ ಏಳೂ ಭೂಮಿಯಕೆಳಗಡೆ ಇರುವ ಲೋಕಗಳು.

೧೬. ಅಲ್ಲಿಂದಾಚೆಗೆ ಅಗ್ನಿ, ವಾಯು, ಆಕಾಶ, ಅನಂತರದಲ್ಲಿ ಸೂಕ್ಷ್ಮಭೂತಗಳು ಆಮೇಲೆ ಮಹತ್ತತ್ವ ಪ್ರಧಾನವು (ಪ್ರಕೃತಿಯು) ಅನಂತರದಲ್ಲಿ ಪುರುಷನು ಇರುವನು.

೧೭. ಪುರುಷನಿಂದಾಚೆಗೆ ಈಶ್ವರನು ಇದಾನೆಂದು ತಿಳಿಯತಕ್ಕದ್ದು, ಈಶ್ವರನಿಂದ ಜಗತ್ತು ಆವರಿಸಲ್ಪಟ್ಟಿದೆ. ಈ ರೀತಿಯಾಗಿ ಇವೆಲ್ಲವೂ ಮೇರುವಿನ ಪ್ರಮಾಣವೆಂದು ಹೇಳಬೇಕು.

೧೮. ಆ ಮೇರುಪರ್ವತವು ಸುವರ್ಣಮಯವಾಗಿ ನಾಲ್ಕು ಮೂಲೆಗಳಲ್ಲೂ ನಾಲ್ಕು ಶಿಖರಗಳು ಉಳ್ಳದ್ದಾಗಿ ಮಂಗಳಕರವಾಗಿದೆ. ಇದು ಭೂಮಿಯ ಮಧ್ಯಭಾಗದಲ್ಲಿ ಸಿದ್ಧರು, ಗಂಧರ್ವರು. ಇವರಿಂದ ಸೇವಿತವಾಗಿದೆ.

೧೯–೨೦. ಅಂತರಿಕ್ಷವನ್ನು ಕೊರೆದುಕೊಂಡು ಹೋಗಿ ಇದು ಎಂಬತ್ತುಸಾವಿರ ಯೋಜನ ಎತ್ತರವುಳ್ಳದ್ದಾಗಿದೆ. ಇಲ್ಲಿಂದ ಹದಿನಾರುಸಾವಿರ ಯೋಜನಗಳು ಕೆಳಗೆ

ಪ್ರವಿಷ್ಟಃ ಷೋಡಶಾಧಸ್ತಾದಷ್ಟಾ ವಿಶಂತಿ ವಿಸ್ತೃತಃ ।
ವಿಸ್ತಾರಸ್ತ್ರಿಗುಣಶ್ಚಾಸ್ಯ ಪರಿಣಾಹಸ್ತತಃ ಸ್ಮೃತಃ ॥ ೨೦ ॥

ತಸ್ಯ ಸೌಮನಸಂ ನಾಮ ಶೃಂಗಮೇಕಂ ತು ಕಾಂಚನಂ ।
ದ್ವಿತೀಯಂ ಪದ್ಮರಾಗಾಭಂ ಜ್ಯೋತಿಷ್ಕಂ ನಾಮ ನಾಮತಃ ॥ ೨೧ ॥

ತೃತೀಯಂ ನಾಮತಶ್ಚಿತ್ರಂ ಸರ್ವದೇವಮಯಂ ಶುಭಂ ।
ಚತುರ್ಥಂ ರಾಜತಂ ಶುಕ್ಲಂ ಚಂದ್ರೌಜಸ್ಕಮಿತಿ ಸ್ಮೃತಂ ॥ ೨೨ ॥

ಯತ್ತು ಸೌಮನಸಂ ನಾಮ ಶೃಂಗಂ ಗಾಂಗೇಯಮುಚ್ಯತೇ ।
ತದೇವ ಚೋದಯೋ ನಾಮ್ನಾ ಯತ್ರೋದ್ಯನ್ ದೃಶ್ಯತೇ ರವಿಃ ॥ ೨೩ ॥

ಉತ್ತರೇಣ ಪರಿಕ್ರಮ್ಯ ಜಂಬೂದ್ವೀಪಂ ದಿವಾಕರಃ ।
ದೃಶ್ಯೋ ಭವತಿ ಭೂತಾನಾಂ ಶಿಖರಂ ಚ ಸಮಾಶ್ರಿತಃ ॥ ೨೪ ॥

---

ಹಾಯ್ದುಕೊಂಡಿದೆ (ಪ್ರವೇಶಿಸಿ ನಾಟಿ) ಇದೆಯಲ್ಲದೆ ಇಪ್ಪತ್ತೆಂಟುಸಾವಿರ ಯೋಜನಗಳ ಅಗಲವಾಗಿದೆ. ಇದರ ವಿಸ್ತಾರವು ಹಿಂದೆ ಹೇಳಿದುದರ ಮೂರರಷ್ಟು ಇದೆಯೆಂದು ತಿಳಿಯಬೇಕು.

೨೧. ಈಪರ್ವತದಲ್ಲಿ ಸುವರ್ಣಮಯವಾದ ಒಂದು ಶಿಖರಕ್ಕೆ ಸೌಮನಸವೆಂದು ಹೆಸರು. ಎರಡನೆಯ ಶಿಖರವು ಪದ್ಮರಾಗದಂತೆ ಕಾಂತಿಯುಳ್ಳದ್ದಾಗಿ ಜ್ಯೋತಿಷ್ಕವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ.

೨೨. ಸರ್ವದೇವಮಯವಾದ ಮೂರನೆಯ ಶಿಖರವು ಶುಭಕರವಾಗಿಯೂ ಚಿತ್ರವೆಂಬ ಹೆಸರಿನಿಂದ ಪ್ರಸಿದ್ಧವಾಗಿಯೂ ಇದೆ. ನಾಲ್ಕನೆಯದಾದ ರಜತ ಶಿಖರವು ಬಿಳಿಯ ಬಣ್ಣವುಳ್ಳದ್ದಾಗಿಯೂ ಚಂದ್ರೌಜಸ್ಕವೆಂದು ಪ್ರಸಿದ್ಧವಾಗಿಯೂ ಇದೆ.

೧೩. ಸುವರ್ಣಮಯವಾದ ಸೌಮನಸ ಶಿಖರವೇ ಉದಯಪರ್ವತವೆಂದು ಪ್ರಸಿದ್ಧವಾಗಿದೆ. ಅಲ್ಲಿಯೇ ಸೂರ್ಯನು ಉದಯಿಸುತ್ತಾ ಕಾಣಿಸುವನು.

೨೪. ಸೂರ್ಯನು ಅದರ ಶಿಖರವನ್ನೇರಿ ಜಂಬೂದ್ವೀಪದ ಉತ್ತರಭಾಗದ ಕಡೆಯಿಂದ ಸುತ್ತುವಂತೆ ಪ್ರಾಣಿಗಳಿಗೆ ಕಾಣಿಸುತ್ತಾನೆ.

ಕಾಂಚನಸ್ಯ ಚ ಶೈಲಸ್ಯ ತೇಜಸಾರ್ಕಸ್ಯ ಚಾಹೃತೇ ।
ಉಭೇ ಸಂಧ್ಯೇ ಪ್ರಕಾಶೇತೇ ಆತಾಮ್ರೇ ಪೂರ್ವಪಶ್ಚಿಮೇ ॥ ೨೫ ॥

ಶೃಂಗೇ ಸೌಮನಸೇ ಸೂರ್ಯಃ ಉತ್ತಿಷ್ಠತ್ಯುತ್ತರಾಯಣೇ ।
ಜ್ಯೋತಿಷ್ಕೇ ದಕ್ಷಿಣೇ ಚಾಪಿ ವಿಷುವೇ ಮಧ್ಯತಸ್ತಯೋಃ ॥ ೨೬ ॥

ಈಶೇಂದ್ರೋದ್ರಿಶ್ಚ ಐಶಾನ್ಯಾಂ ತತ್ರಾಗ್ನಿಃ ಪೂರ್ವದಕ್ಷಿಣೇ ।
ನೈಋತೇಽಪಿ ತತೋ ಜ್ಞೇಯೋ ವಾಯವ್ಯೇ ಮಾರುತಸ್ತಥಾ ॥ ೨೭ ॥

ಮಧ್ಯೇತು ಕಂಜಜಃ ಸಾಕ್ಷಾತ್ ಗ್ರಹಾ ಜ್ಯೋತೀಂಷಿ ಚೈವ ಹಿ ।
ಆದಿತ್ಯಸ್ತೇನ ರೂಪೇಣ ತಸ್ಮಿನ್ ವ್ಯೋಮ್ನಿ ಪ್ರತಿಷ್ಠಿತಃ ॥ ೨೮ ॥

---

೨೫. ಸುವರ್ಣಪರ್ವತದ ತೇಜಸ್ಸು ಮತ್ತು ಸೂರ್ಯನ ತೇಜಸ್ಸು ಇವು ಭೂಮಿಗೆ ಹರಡಲಾಗಿ ಪೂರ್ವಸಂಧ್ಯಾ (ಪ್ರಾತಃ ಸಂಧ್ಯಾ) ಪಶ್ಚಿಮ ಸಂಧ್ಯಾ (ಸಾಯಂ ಸಂಧ್ಯಾ) ಎಂಬ ಎರಡೂ ಪೂರ್ವ ದಿಕ್ಕಿನ, ಮತ್ತು ಪಶ್ಚಿಮ ದಿಕ್ಕಿನ ಪರಿಸರದಲ್ಲಿ ಕೆಂಪಾಗಿ ಕಾಣಿಸುತ್ತವೆ.

೨೬. ಉತ್ತರಾಯಣದಲ್ಲಿ ಸೂರ್ಯನು ಸೌಮನಸ ಶೃಂಗದಲ್ಲಿ ಉದಯಿಸುತ್ತಾನೆ. ದಕ್ಷಿಣಾಯನದಲ್ಲಿ ಜ್ಯೋತಿಷ್ಕವೆಂಬ ಶಿಖರದಲ್ಲಿಯೂ, ವಿಷುವಪುಣ್ಯಕಾಲದಲ್ಲಿ ಆ ಎರಡು ಶೃಂಗಗಳ ಮಧ್ಯದಲ್ಲಿಯೂ ಉದಯಿಸುತ್ತಾನೆ.

೨೭. ಉತ್ತರದಿಕ್ಕಿಗೂ ಪೂರ್ವದಿಕ್ಕಿಗೂ ಮಧ್ಯೆ ಇರುವ ಐಶಾನೀದಿಕ್ಕಿನಲ್ಲಿ ಈಶಾನನೂ, ಪೂರ್ವದಿಕ್ಕಿಗೂ ದಕ್ಷಿಣದಿಕ್ಕಿಗೂ ಮಧ್ಯೆ ಇರುವ ಅಗ್ನಿ ಸಂಬಂಧಿಯಾದ ಆಗ್ನೇಯದಲ್ಲಿ ಅಗ್ನಿಯೂ, ದಕ್ಷಿಣ ಪಶ್ಚಿಮಗಳ ಮಧ್ಯೆ ನೈರುತ್ಯದಲ್ಲಿ ನಿಋತಿಯೂ, ಪಶ್ಚಿಮ ಉತ್ತರಗಳ ಮಧ್ಯೆ ವಾಯವ್ಯದಲ್ಲಿ ಮಾರುತನೂ, ಇರುವರು.

೨೮. ಮಧ್ಯಭಾಗದಲ್ಲಿ ಸಾಕ್ಷಾತ್ ಬ್ರಹ್ಮನೂ, ಗ್ರಹಗಳೂ, ತೇಜೋಮಂಡಲಗಳೂ, ಇವೆ. ಸೂರ್ಯನು ಆ ತೇಜೋರೂಪದಿಂದ ಆಕಾಶದಲ್ಲಿ ಪ್ರತಿಷ್ಠಿತನಾಗಿದ್ದಾನೆ.

ಇದಂ ದೇವಮಯಂ ವ್ಯೋಮ ತಥಾ ಲೋಕಮಯಂ ಸ್ಮೃತಂ ।
ಪೂರ್ವಕೋಣಸ್ಥಿತೇ ಶೃಂಗೇ ಸ್ಥಿತಃ ಶುಕ್ರೋ ಮಹೀಪತೇ ॥ ೨೯ ॥

ಹೇಲಿಜಶ್ಚಾಪರೇ ಜ್ಞೇಯೋ ಧನುರ್ನಾಥಸ್ತಥೋತ್ತರೇ ।
ಸೋಮಶ್ಚಾಪಿ ಚತುರ್ಥೇ ತು ಸ್ಥಿತಃ ಶೃಂಗೇ ಜನಾಧಿಪ ॥ ೩೦ ॥

ಮಧ್ಯಕೋಶಸ್ಥಿತೋ ರಾಜನ್ ಹುಂಕಾರಶ್ಚ ಪಿನಾಕಿನಃ ।
ಶೃಂಗೇ ಪೂರ್ವೋತ್ತರೇ ರಾಜನ್ ಸ್ಥಿತೋ ದೇವೋ ವಿಧುಕ್ಷಯಃ ॥ ೩೧ ॥

ತತಃ ಸ್ಥಿತೋ ಮಹಾದೇವೋ ಗೋಪತಿರ್ಲೋಕಪೂಜಿತಃ ।
ಪೂರ್ವಾಗ್ನೇಯಿಾ ಸ್ಥಿತೇ ಶೃಂಗೇ ಸ್ಥಿತೋ ವೈ ಶಾಂಡಿಲ ಸ್ಸುತಃ ॥ ೩೨ ॥

ತತಃ ಸ್ಥಿತೋ ಮಹಾತೇಜಾ ಕೀನಾಶೋ ಹೇಲಿನಂದನಃ ।
ಸ್ಥಿತೋ ವೈ ನೈಋತೇ ಶೃಂಗೇ ನಿರೂಪಾಕ್ಷೋ ಮಹಾಬಲಃ ॥ ೩೩ ॥

---

೨೯-೩೦. ಇದನ್ನು ದೇವಮಯ ಮತ್ತು ಲೋಕಮಯವಾದ ವ್ಯೋಮಸ್ಥಾನವೆಂದೂ ತಿಳಿಯಬೇಕು. ಎಲೈರಾಜನೇ! ಪೂರ್ವಭಾಗದ ಮೂಲೆಯಲ್ಲಿರುವ ಶಿಖರದಲ್ಲಿ ಶುಕ್ರನು ಇದ್ದಾನೆ. ಹೀಗೆಯೇ ಪಶ್ಚಿಮ ಶಿಖರದಲ್ಲಿ ಶನಿಯೂ, ಉತ್ತರ ಕಡೆಯ ಶಿಖರದಲ್ಲಿ ಧನೂರಾಶ್ಯಧಿಪತಿಯಾದ ಗುರುವೂ ಇದ್ದಾರೆ. ಅಯ್ಯಾ ಜನಾಧಿಪನೇ!-ನಾಲ್ಕನೆಯದಾದ ಚಂದ್ರರಾಜಸ್ಸ ಶಿಖರದಲ್ಲಿ ಸೋಮನು ಇದ್ದಾನೆ,

೩೧. ಮಧ್ಯಕೋಶದಲ್ಲಿ ಮಹೇಶ್ವರನ ಹುಂಕಾರವೂ ಇದೆ. ಅಯ್ಯಾ ರಾಜನೇ! ಈಶಾನ್ಯ ಶೃಂಗದಲ್ಲಿ ಚಂದ್ರಪುತ್ರನಾದ ಬುಧನು ಇದ್ದಾನೆ.

೩೨. ಅಲ್ಲಿಯೇ ಲೋಕಪೂಜಿತನೂ ವೃಷಭಪತಿಯೂ ಆದ ಮಹಾದೇವನು ಇರುತ್ತಾನೆ. ಪೂರ್ವದಿಕ್ಕಿನ ಮುಂದೆ ಆಗ್ನೇಯ ದಿಕ್ಕಿನ ಶೃಂಗದಲ್ಲಿ ಶಾಂಡಿಲೀ ಪುತ್ರನಾದ ಅಗ್ನಿ ಇರುತ್ತಾನೆ.

೩೩. ಅಲ್ಲಿಂದ ಮುಂದೆ ದಕ್ಷಿಣದಲ್ಲಿ ಮಹಾತೇಜಸ್ವಿಯೂ, ಸೂರ್ಯಪುತ್ರನೂ ಆದ ಯಮನು ಇದಾನೆ. ನೈಋತ್ಯ ಮೂಲೆಯ ಶಿಖರವು ಮಹಾಬಲವಾದ ವಿರೂಪಾಕ್ಷಸ್ಥಾನ. ಅಲ್ಲಿಂದ ಮುಂದಕ್ಕೆ ಎಂದರೆ ಪಶ್ಚಿಮ ಶಿಖರದಲ್ಲಿ ವರುಣ ದೇವನಿದ್ದಾನೆ.

ತಸ್ಮಾದನಂತರೋ ದೇವಃ ಸ್ಥಿತೋ ವೈ ಯಾದಸಾಂ ಪತಿಃ ।
ತತಃ ಸ್ಥಿತೋ ಮಹಾತೇಜಾ ವೀರಮಿತ್ರೋ ಮಹಾಬಲಃ ॥ ೩೪ ॥

ವಾಯವ್ಯಂ ಶೃಂಗಮಾಶ್ರಿತ್ಯ ಸರ್ವದೇವನಮಸ್ಕೃತಃ ।
ತತಃ ಸ್ಥಿತೋ ದಶಬಲೋ ನರಮಾರುಹ್ಯ ಭಾರತ ॥ ೩೫ ॥

ಬ್ರಹ್ಮಾ ಮಧ್ಯೇ ಸ್ಥಿತೋ ದೇವೋ ಹ್ಯನಂತಶ್ಚಾಧ ಏವ ಚ ।
ಉಪೇಂದ್ರಶಂಕರೌ ದೇವೌ ಬ್ರಹ್ಮಣೋಂತೇ ಸಮಾಸ್ಥಿತೌ ॥ ೩೬ ॥

ಏಷ ಮೇರುಸ್ತಥಾ ವ್ಯೋಮ ಏಷ ಧರ್ಮಶ್ಚ ಪಠ್ಯತೇ ।
ಸರ್ವದೇವಮಯಶ್ಚಾಯಂ ಮೇರುರ್ವ್ಯೋಮ ಇತಿ ಸ್ಮೃತಃ ॥ ೩೭ ॥

---

೩೪. ಅಲ್ಲಿಂದ ಮುಂದೆ ವಾಯವ್ಯಭಾಗದ ಶೃಂಗದಲ್ಲಿ ಅಗ್ನಿಮಿತ್ರನೂ ಮಹಾಬಲನೂ ಸರ್ವದೇವನಮಸ್ಕೃತನೂ ಆದ ವಾಯುವು ಆಶ್ರಯಿಸಿಕೊಂಡಿದಾನೆ.

[ವಿ. ವಿ. ವೀರಹಾ ಏಷ ಭವತಿ ಯೋಽಗ್ನಿಮುದ್ವಾಸಯತೇ-(ಇದುಶ್ರುತಿವಾಕ್ಯ) ಸೇವ್ಯನಾದ ಅಗ್ನಿಯನ್ನು ಉದ್ವಾಸನೆ ಮಾಡಿದವನು ವೀರಹತ್ಯೆಯನ್ನು ಹೊಂದುತ್ತಾನೆ. (ಇದು ಅದರ ಅರ್ಥ) ಇದನ್ನು ಪರಿಶೀಲಿಸಿದರೆ ವೀರಶಬ್ದವು ಅಗ್ನ್ಯರ್ಥಬೋಧಕವು ಎಂದು ಸ್ಪಷ್ಟವು.]

೩೫. ಅಯ್ಯಾ ಭರತವಂಶಸಂಭೂತನೇ! ವಾಯವ್ಯದಿಂದ ಮುಂದಕ್ಕೆ ಉತ್ತರದಿಕ್ಕಿನ ಶಿಖರದಲ್ಲಿ ನರವಾಹನನಾದ ಕುಬೇರನೂ ದಶಬಲನೂ ಇದಾರೆ.

೩೬. ಮಧ್ಯದಲ್ಲಿ ಬ್ರಹ್ಮನೂ, ಕೆಳಭಾಗದಲ್ಲಿ ಅನಂತನೂ, ಇದ್ದಾರೆ. ಬ್ರಹ್ಮನ ಸಮೀಪದಲ್ಲಿ ವಿಷ್ಣು, ಶಿವ, ಇವರೂ ಇದ್ದಾರೆ.

೩೭. ಇದನ್ನು ಮೇರುವೆಂದೂ, ವ್ಯೋಮವೆಂದೂ ಧರ್ಮವೆಂದೂ ವ್ಯವಹರಿಸುತ್ತಾರೆ. ಸರ್ವದೇವಮಯವಾದ ಈ ಮೇರುವನ್ನೇ ವ್ಯೋಮವೆಂದು ತಿಳಿಯಬೇಕು.

**ತಥಾ ವೇದಮಯಶ್ಚಾಪಿ ಪಠ್ಯತೇ ನಾತ್ರ ಸಂಶಯಃ ।**
**ಶೃಂಗಾಣಿ ವೇದಾಶ್ಚತ್ವಾರಃ ಪೂರ್ವಶೃಂಗಾದಯೋ ವಿದುಃ ॥ ೩೮ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ವ್ಯೋಮ ಮಾಹಾತ್ಮ್ಯ ವರ್ಣನಂ ನಾಮ ಷಡ್ವಿಂಶತ್ಯುತ್ತರ ಶತತಮೋಽಧ್ಯಾಯಃ**



---

೩೮. ಇದನ್ನೇ ವೇದಮಯವಾದುದೆಂದೂ ಹೇಳಬೇಕು. ಇದರಲ್ಲಿ ಸಂಶಯ ವಿಲ್ಲ. ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರಗಳೆಂಬ ನಾಲ್ಕು ಶಿಖರಗಳೂ ನಾಲ್ಕು ವೇದಗಳೆಂದು ತಿಳಿದಿದ್ದಾರೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ ವ್ಯೋಮ ವರ್ಣನವೆಂಬ ನೂರಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಸಪ್ತವಿಂಶತ್ಯುತ್ತರಶತತಮೋಽಧ್ಯಾಯಃ

---

॥ ಶತಾನೀಕ ಉವಾಚ ॥

ಕಥಮಾರಾಧಿತಃ ಸೂರ್ಯಃ ಸಾಂಬೇನಾಮಿತತೇಜಸಾ ।
ವಿಮುಕ್ತಸ್ತು ಕಥಂ ರೋಗೈಃ ಬ್ರೂಹಿ ಮೇ ದ್ವಿಜಸತ್ತಮ ॥ ೧ ॥

॥ ಸುಮಂತುರುವಾಚ ॥

ಸಾಧು ಪೃಷ್ಟೋಽಸ್ಮಿ ರಾಜೇಂದ್ರ ಶೃಣು ಸಾಂಬಕಥಾಂ ಪುರಾ ।
ವಿಸ್ತರಾದ್ವಚ್ಮಿ ತೇ ಸರ್ವಾಂ ಕಥಾಂ ಪಾಪವಿಮೋಚಿನೀಂ ॥ ೨ ॥

ಪುರಾ ಸಂಶ್ರುತ್ಯ ಮಾಹಾತ್ಮ್ಯಂ ಭಾಸ್ಕರಸ್ಯ ಚ ನಾರದಾತ್ ।
ವಿನಯಾದುಪಸಂಗಮ್ಯ ವಚಃ ಪಿತರಮಬ್ರವೀತ್ ॥ ೩ ॥

---

### ನೂರಇಪ್ಪತ್ತೇಳನೆಯ ಅಧ್ಯಾಯ

೧. ಶತಾನೀಕ ರಾಜನು ಹೇಳುತ್ತಾನೆ—ಎಲೈ ಬ್ರಾಹ್ಮಣಶ್ರೇಷ್ಠನೇ! ಅತಿ ಪರಾಕ್ರಮಶಾಲಿಯಾದ ಸಾಂಬನು ಸೂರ್ಯನನ್ನು ಹೇಗೆ ಆರಾಧಿಸಿದನು? ಮತ್ತು ರೋಗ ವಿಮುಕ್ತನಾದ ಬಗೆ ಹೇಗೆ? ಅದನ್ನು ನನಗೆ ಹೇಳು ಎಂದನು.

೨. ಸುಮಂತು ಮುನಿವರ್ಯರು ಹೇಳುತ್ತಾರೆ—ಎಲೈ ರಾಜೇಂದ್ರನೇ! ನೀನು ಕೇಳಿದ್ದು ಚೆನ್ನಾಗಿದೆ. ಪೂರ್ವದಲ್ಲಿ ನಡೆದ ಸಾಂಬನ ವೃತ್ತಾಂತವನ್ನು ಹೇಳುವೆನು ಕೇಳು. ಪಾಪನಾಶಕರವಾದ ಆತನ ವೃತ್ತಾಂತವನ್ನೆಲ್ಲಾ ವಿಸ್ತಾರವಾಗಿ ಹೇಳುತ್ತೇನೆ.

೩. ಪೂರ್ವದಲ್ಲಿ ನಾರದರಿಂದ ಸೂರ್ಯಮಹಾತ್ಮೆಯನ್ನು ಕೇಳಿದ ಸಾಂಬನು ತಂದೆಯ ಸಮೀಪಕ್ಕೆ ಬಂದು ವಿನಯದಿಂದ ತಂದೆಯನ್ನು ಕುರಿತು ಒಂದು ಮಾತನ್ನು ಹೇಳಿದನು.

ಕಶ್ಮಲೇನಾಭಿಭೂತೋಽಸ್ಮಿ ಮಲೇನ ವ್ಯಾಧಿನಾಽಚ್ಯುತ ।
ವೈದ್ಯೈರೌಷಧಿಭಿಶ್ಚಾಪಿ ನ ಶಾಂತಿರ್ಮಮ ವಿದ್ಯತೇ ॥ ೪ ॥

ವನಂ ಗಚ್ಛಾಮಿ ಭಗವನ್ ಅನುಜ್ಞಾಂ ದಾತುಮರ್ಹಸಿ ।
ಶಿವೇನ ಪುಂಡರೀಕಾಕ್ಷ ಧ್ಯಾಯ ಮಾಂ ಪುರುಷೋತ್ತಮ ॥ ೫ ॥

ಅನುಜ್ಞಾತಃ ಸ ಕೃಷ್ಣೇನ ಸಿಂಧೋರುತ್ತರಕೂಲತಃ ।
ಗತ್ವಾ ಸಂತಾರಯಾಮಾಸ ಚಂದ್ರಭಾಗಾಂ ಮಹಾನದೀಂ ॥ ೬ ॥

ತತೋ ಮಿತ್ರವನಂ ಗತ್ವಾ ತೀರ್ಥಂ ತ್ರೈಲೋಕ್ಯವಿಶ್ರುತಂ ।
ಉಪವಾಸಪರಃ ಸಾಂಬಃ ಶುಷ್ಕೋ ಧಮನಿಸಂತತಃ ॥ ೭ ॥

ಆರಾಧನಾರ್ಥಂ ಸೂರ್ಯಸ್ಯ ಗುಹ್ಯಂ ಸ್ತೋತ್ರಂ ಜಜಾಪ ಹ ।
ವೇದೈಶ್ಚತುರ್ಭಿಃ ಸಮಿತಂ ಪುರಾಣಾಶ್ರಯಬೃಂಹಿತಂ ॥ ೮ ॥

---

೪. "ಎಲೈ ತಂದೆಯಾದ ಅಚ್ಯುತನೇ! ಅಸಹ್ಯಕರವಾದ ವ್ಯಾಧಿರೂಪವಾದ ಕಶ್ಮಲದಿಂದ ತೊಂದರೆಪಡುತ್ತಿದ್ದೇನೆ. ಯಾವ ವೈದ್ಯರಿಂದಲೂ, ಯಾವ ಔಷಧದಿಂದಲೂ ನನಗೆ ಇದು ಪರಿಹಾರವಾಗಲಿಲ್ಲ.

೫. ಆದ್ದರಿಂದ ಎಲೈ ಭಗವಂತನೇ! ನನಗೆ ವನಗಮನಕ್ಕೆ ಅಪ್ಪಣೆಯನ್ನು ಕೊಡು ಎಲೈ ಪುರುಷೋತ್ತಮನೇ! ಪುಂಡರೀಕಾಕ್ಷನೇ! ಅಲ್ಲಿ ನನಗೆ ಶುಭವಾಗುವ ಪ್ರಕಾರ ಆಲೋಚಿಸು.

೬. ಹೀಗೆಂದು ಹೇಳಿಕೊಂಡು ಅವನು ಕೃಷ್ಣನಿಂದ ಅಪ್ಪಣೆಪಡೆದು ಸಿಂಧುವಿನ ಉತ್ತರಕ್ಕೆ ಹೋಗಿ ಚಂದ್ರಭಾಗಾ ಎಂಬ ಮಹಾನದಿಯನ್ನು ದಾಟಿದನು.

೭. ಅನಂತರ ಮಿತ್ರವನಕ್ಕೆ ಹೋಗಿ ಮೂರು ಲೋಕಗಳಲ್ಲೂ ಪ್ರಸಿದ್ಧವಾದ ಆ ತೀರ್ಥವನ್ನು ಸೇವಿಸುತ್ತಾ ಉಪವಾಸಪರನಾಗಿ ಕೃಶನಾಗಿ ಒಣಕಲುನರಗಳಿಂದ ವ್ಯಾಪ್ತನಾಗಿದ್ದನು.

೮-೯. ಹೀಗಿರುತ್ತಾ ಸೂರ್ಯನ ಸುಪ್ರಸನ್ನತೆಯನ್ನು ಪಡೆಯುವುದಕ್ಕಾಗಿ ರವಿರಹಸ್ಯ ಸ್ತೋತ್ರವನ್ನು ಜಪಿಸಿದನು. ಚತುರ್ವೇದಗಳಿಂದ ಯುಕ್ತವೂ, ಜರಾರಹಿತವೂ, ನಾಶರಹಿತವೂ, ಪುರಾಣದ ಆಶ್ರಯದಿಂದ ವೃದ್ಧಿಹೊಂದಿದುದೂ, ಶುಕ್ಲ

ಯದೇತನ್ಮಂಡಲಂ ಶುಕ್ಲಂ ದಿವ್ಯಂ ಹ್ಯಜರಮವ್ಯಯಂ ।
ಯುಕ್ತಂ ಮನೋಜವೈರಶ್ವೈರ್ಹಾರೀ ತೈರ್ಬ್ರಹ್ಮವಾದಿಭಿಃ ॥ ೯ ॥

ಆದಿರೇಷ ಹಿ ಭೂತಾನಾಂ ಆದಿತ್ಯ ಇತಿ ಸಂಜ್ಞಕಃ ।
ತ್ರೈಲೋಕ್ಯಚಕ್ಷುರೇವಾತ್ರ ಪರಮಾತ್ಮಾ ಪ್ರಜಾಪತಿಃ ॥ ೧೦ ॥

ಏಷ ವೈ ಮಂಡಲೇ ಹ್ಯಸ್ಮಿನ್ ಪುರುಷೋ ದೀಪ್ಯತೇ ಮಹಾನ್ ।
ಏಷ ವಿಷ್ಣುರಚಿಂತ್ಯಾತ್ಮಾ ಬ್ರಹ್ಮಾ ಚೈಷ ಪಿತಾಮಹಃ ॥ ೧೧ ॥

ರುದ್ರೋ ಮಹೇಂದ್ರೋ ವರುಣ ಆಕಾಶಂ ಪೃಥಿವೀ ಜಲಂ ।
ವಾಯುಃ ಶಶಾಂಕಃ ಪರ್ಜನ್ಯೋ ಧನಾಧ್ಯಕ್ಷೋ ವಿಭಾವಸುಃ ॥ ೧೨ ॥

ಯ ಏಷ ಮಂಡಲೇ ಹ್ಯಸ್ಮಿನ್ ಪುರುಷೋ ದೀಪ್ಯತೇ ಮಹಾನ್ ।
ಏಕಃ ಸಾಕ್ಷಾನ್ಮಹಾದೇವೋ ವೃತ್ತಮಂಡನಿಭಂ ಸದಾ ॥ ೧೩ ॥

---

ವರ್ಣವೂ, ದಿವ್ಯವೂ ಆದ ಸೂರ್ಯಮಂಡಲವು ಮನೋವೇಗವುಳ್ಳವೂ ಹಾರೀತ ಕುಲೋತ್ಪನ್ನಗಳೂ, ವೇದಪಾಠ ಮಾಡುತ್ತಿರುವುವೂ ಆದ ಅಶ್ವಗಳಿಂದ ಕೂಡಿದುದಾಗಿದೆ.

೧೦. ಇವನು ಭೂತಗಳಿಗೆಲ್ಲಾ ಆದಿಯಾಗಿರುವುದರಿಂದ ಆದಿತ್ಯನೆಂದು ಹೆಸರುಳ್ಳವನಾಗಿ, ಮೂರುಲೋಕಕ್ಕೂ ಕಣ್ಣಾಗಿ, ಈ ಲೋಕದಲ್ಲಿ ಪರಮಾತ್ಮನೂ ಪ್ರಜೇಶ್ವರನೂ ಆಗಿರುವನು.

೧೧. ಪರಮಪುರುಷನು ಈ ಮಂಡಲದಲ್ಲಿ ಅದ್ಭುತವಾಗಿ ಪ್ರಕಾಶಿಸುತ್ತಾನೆ. ಇವನು ವ್ಯಾಪಕನೂ, ಅಚಿಂತ್ಯಸ್ವರೂಪನೂ, ಬ್ರಹ್ಮನೂ, ಪಿತಾಮಹನೂ ಆಗಿದ್ದಾನೆ.

೧೨. ಈ ಸೂರ್ಯನೇ; ರುದ್ರನೂ, ಮಹೇಂದ್ರನೂ, ವರುಣನೂ, ಆಕಾಶವೂ, ಪೃಥ್ವಿಯೂ, ಜಲವೂ, ವಾಯುವೂ, ಚಂದ್ರನೂ, ವೃಷ್ಟಿಯ ಅಭಿಮಾನದೇವತೆಯೂ, ಕುಬೇರನೂ ಎನಿಸುವನು.

೧೩. ಈ ಮಂಡಲದಲ್ಲಿ ಅದ್ಭುತವಾಗಿ ಪ್ರಕಾಶಿಸುವ ಪುರುಷನೇ ಪ್ರತ್ಯಕ್ಷನಾದ ಮಹಾದೇವನಾಗಿದ್ದಾನೆ. ಇವನ ವೃತ್ತವು ಅಂಡಾಕಾರವಾದುದು.

**ಕಾಲೋ ಹ್ಯೇಷ ಮಹಾಬಾಹುಃ ನಿಬೋಧೋತ್ಪತ್ತಿಲಕ್ಷಣಃ ।**
**ಯ ಏಷ ಮಂಡಲೇ ಹ್ಯಸ್ಮಿನ್ ತೇಜೋಭಿಃ ಪೂರಯನ್ಮಹೀಮ್ ॥ ೧೪ ॥**

**ಭ್ರಾಮ್ಯತೇ ಹ್ಯವ್ಯವಚ್ಛಿನ್ನೋ ವಾತೈರ್ಯೋಽಮೃತಲಕ್ಷಣಃ ।**
**ನಾತಃ ಪರತರಂ ಕಿಂಚಿತ್ ತೇಜಸಾ ವಿದ್ಯತೇ ಕ್ವಚಿತ್ ॥ ೧೫ ॥**

**ಪುಷ್ಣಾಣಿ ಸರ್ವಭೂತಾನಿ ಏಷ ಏವ ಸುಧಾಮೃತೈಃ ।**
**ಅಂತಸ್ಥಾನ್ ಮ್ಲೇಂಛಜಾತೀಯಾನ್ ತಿರ್ಯಗ್ಯೋನಿಗತಾನಪಿ ॥ ೧೬ ॥**

**ಕಾರುಣ್ಯಾತ್ಸರ್ವಭೂತಾನಿ ಪಾಸಿ ತ್ವಂ ಚ ವಿಭಾವಸೋ ।**
**ಶ್ವಿತ್ರಕುಷ್ಠ್ಯಂಧಬಧಿರಾನ್ ಪಂಗೂಂಶ್ಚಾಪಿ ತಥಾ ವಿಭೋ ॥ ೧೭ ॥**

**ಪ್ರಸನ್ನವತ್ಸಲೋ ದೇವಃ ಕುರುತೇ ನೀ ರುಜೋ ಭವಾನ್ ।**
**ಚಕ್ರಮಂಡಲಮಗ್ನಾಂಶ್ಚ ನಿರ್ಧನಾಲ್ಪಾಯುಷಸ್ತಥಾ ॥ ೧೮ ॥**

---

೧೪. ಈ ಮಹಾಬಾಹುವು ಉತ್ಪತ್ತಿಲಕ್ಷಣಜ್ಞಾಪಕವಾದ (ಎಂದರೆ ಹಿಂದೆ ನಡೆಯಿತು, ಈಗ ನಡೆಯುತ್ತದೆ, ಮುಂದೆ ನಡೆಯುವುದು ಈ ವ್ಯವಹಾರಗಳಿಗೆ ವಿಷಯವಾದ) ಕಾಲವಾಗಿದಾನೆ.

೧೫. ಈ ಸೂರ್ಯಮಂಡದಲ್ಲಿದ್ದು ಯಾವನು ತೇಜಸ್ಸುಗಳಿಂದ ಭೂಲೋಕವನ್ನೆಲ್ಲಾ ದಿಕ್ಕೃತ, ಕಾಲಕೃತ, ವಸ್ತುಕೃತಗಳಾದ ತ್ರಿವಿಧ ಪರಿಚ್ಛೇದರಹಿತನಾಗಿ ವಾತಸಂಬದ್ಧನೂ; ಅಮೃತಸ್ವರೂಪನೂ, ತೇಜೋಮಯನೂ ಆಗಿ ಸುತ್ತುತ್ತಾ ಇದ್ದಾನೆಯೋ ಅವನಿಗಿಂತ ಉತ್ಕೃಷ್ಟವಾದುದು ಬೇರೆ ಯಾವುದೂ ಇಲ್ಲ.

೧೬. ಎಲೈ ವಿಭಾವಸುವೇ! ನಿನ್ನ ಕೃಪಾಮೃತಗಳಿಂದ ಪೋಷಣೆ ಹೊಂದಿ ನಿನ್ನೊಳಗಿರುವ ಮ್ಲೇಂಛಜಾತಿಯ ಪ್ರಾಣಿಗಳನ್ನೂ, ತಿರ್ಯಗ್ಯೋನಿಗತವಾದ ಸರ್ವಪ್ರಾಣಿಗಳನ್ನೂ ಕೃಪೆಯಿಂದ ನೀನೇ ರಕ್ಷಿಸುತ್ತೀ.

೧೭. ಭಕ್ತರಲ್ಲಿ ಪ್ರೀತಿಯುಳ್ಳ ನೀನು ತೊನ್ನುಳ್ಳವರು, ಕುಷ್ಠವುಳ್ಳವರು, ಕುರುಡರು, ಕಿವುಡರು, ಕುಂಟರು ಈ ದೋಷಗಳಿರುವವರನ್ನು ರೋಗರಹಿತರನ್ನಾಗಿ ಮಾಡುತ್ತೀ.

೧೮. ಚಕ್ರಮಂಡಲದಲ್ಲಿ ಮುಳುಗಿದವರೂ, ನಿರ್ಧನರೂ, ಅಲ್ಪಾಯಸ್ಸಿನವರೂ, ಆದ ಭಕ್ತರನ್ನು ಪ್ರತ್ಯಕ್ಷದರ್ಶಿಯಾದ ನೀನು ಲೀಲೆಯಿಂದ ಉದ್ಧರಿಸುತ್ತೀ.

ಪ್ರತ್ಯಕ್ಷದರ್ಶೀ ತ್ವಂ ದೇವ ಸಮುದ್ಧರಸಿ ಲೀಲಯಾ ।
ಕಾ ಮೇ ಶಕ್ತಿಃ ಸ್ತವೈಃ ಸ್ತೋತುಮಾರ್ತೋಽಹಂ ರೋಗಪೀಡಿತಃ॥ ೧೯ ॥

ಸ್ತೂಯಸೇ ತ್ವಂ ಸದಾ ದೇವೈಃ ಬ್ರಹ್ಮವಿಷ್ಣುಶಿವಾದಿಭಿಃ ।
ಮಹೇಂದ್ರಸಿದ್ಧಗಂಧರ್ವೈರಪ್ಸರೋಭಿಃ ಸಗುಹ್ಯಕೈಃ ॥ ೨೦ ॥

ಸ್ತುತಿಭಿಃ ಕಿಂ ಪವಿತ್ರೈರ್ವಾ ತವ ದೇವ ಸಮೀರಿತೈಃ ।
ಯಸ್ಯ ತೇ ಋಗ್ಯಜುಃ ಸಾಮ್ನಾಂ ತ್ರಿತಯಂ ಮಂಡಲೇ ಸ್ಥಿತಂ ॥ ೨೧ ॥

ಧ್ಯಾನಿನಾಂ ತ್ವಂ ಪರಂ ಧ್ಯಾನಂ ಮೋಕ್ಷದ್ವಾರಂ ಚ ಮೋಕ್ಷಿಣಾಂ ।
ಅನಂತತೇಜಸಾಕ್ಷೋಭ್ಯೋ ಹ್ಯಚಿಂತ್ಯಾವ್ಯಕ್ತನಿಷ್ಕಲಃ ॥ ೨೨ ॥

ಯದಯಂ ವ್ಯಾಹೃತಃ ಕಿಂಚಿತ್ಸ್ತೋತ್ರೇಽಸ್ಮಿನ್ ಜಗತಃ ಪತಿಃ ।
ಆರ್ತಿಂ ಭಕ್ತಿಂ ಚ ವಿಜ್ಞಾಯ ತತ್ಸರ್ವಂ ಜ್ಞಾತುಮರ್ಹಸಿ ॥ ೨೩ ॥

---

ನಾನು ದುಃಖಿತನಾಗಿ ರೋಗಪೀಡಿತನಾಗಿರುವೆನು. ಸ್ತೋತ್ರಗಳಿಂದ ಹೊಗಳಲು ನನಗೆ ಶಕ್ತಿಸಾಲದು.

೨೦. ನಿನ್ನನ್ನು ಬ್ರಹ್ಮ ವಿಷ್ಣು, ಶಿವಾದಿ ದೇವತೆಗಳು, ಮಹೇಂದ್ರ, ಸಿದ್ಧರು, ಗಂಧರ್ವರು, ಅಪ್ಸರಸ್ತ್ರೀಯರು, ಗುಹ್ಯಕರು ಇವರೆಲ್ಲರೂ ಸರ್ವದಾ ಸ್ತುತಿಸುವರು.

೨೧. ಎಲೈ ದೇವನೇ! ಪರಿಶುದ್ಧಗಳಾದ ಸ್ತುತಿಪಾಠಗಳಿಂದ ನಿನಗೆ ಆಗ ಬೇಕಾದದ್ದೇನು ? ಋಗ್ಯಜುಃ ಸಾಮ ಈ ಮೂರು ವೇದಗಳೂ ನಿನ್ನ ಮಂಡಲ ವಲ್ಲಿಯೇ ಇವೆ.

೨೨. ಧ್ಯಾನಿಗಳಿಗೆ ನೀನೇ ಉತ್ತಮವಾದ ಧ್ಯಾನವಿಷಯನೂ, ಮೋಕ್ಷಾಪೇಕ್ಷಿ ಗಳಿಗೆ ನೀನೇ ಮೋಕ್ಷಪ್ರಾಪಕನೂ ಆಗಿದ್ದೀ. ಅನಂತವಾದ ತೇಜಸ್ಸಿನಿಂದ ಅಕ್ಷೋಭ್ಯ ನಾಗಿ ಅವ್ಯಕ್ತನೂ, ನಿಷ್ಕಲನೂ ಆಗಿದ್ದೀ.

೨೩. ನಾನು ಮಾಡಿದ ಈ ಅಲ್ಪ ಸ್ತೋತ್ರದಿಂದಲೇ ಜಗತ್ಪತಿಯಾದ ನೀನು ನನ್ನ ಮನದ ಭಕ್ತಿಯನ್ನೂ, ನನ್ನ ವ್ಯಥೆ ಮುಂತಾದ್ದೆಲ್ಲವನ್ನೂ ತಿಳಿಯಬಲ್ಲವನಾ ಗಿದ್ದೀ ಎಂದು ಬೇಡಿಕೊಂಡನು.

ತಮುವಾಚ ತತಃ ಸೂರ್ಯಃ ಪ್ರೀತ್ವಾ ಜಾಂಬವತೀಸುತಂ ।
ಪ್ರೀತೋಽಸ್ಮಿ ತಪಸಾ ವತ್ಸ ಬ್ರೂಹಿ ತನ್ಮಾಂ ಯದಿಚ್ಛಸಿ ॥ ೨೪ ॥

॥ ಸಾಂಬ ಉವಾಚ ॥

ಯದಿ ಪ್ರಸನ್ನೋ ಭಗವಾನ್ ಏಷ ಏವ ವರೋ ಮಮ ।
ಭಕ್ತಿರ್ಭವತು ಮೇಽತ್ಯರ್ಥಂ ತ್ವಯಿ ದೇವ ಸನಾತನ ॥ ೨೫ ॥

॥ ಶ್ರೀ ಸೂರ್ಯ ಉವಾಚ ॥

ಭೂಯಸ್ತುಷ್ಟೋಽಸ್ಮಿ ಭದ್ರಂ ತೇ ವರಂ ವರಯ ಸುವ್ರತ ।
ಸ ದ್ವಿತೀಯಂ ವರಂ ವವ್ರೇ ತದೈವ ವರದಂ ವಿಭುಂ ॥ ೨೬ ॥

ಮಲಃ ಶರೀರಸಂಸ್ಥೋ ಮೇ ತ್ವತ್ಪ್ರಸಾದಾತ್ಪ್ರಣಶ್ಯತು ।
ಯೇನ ಮೇ ಶುದ್ಧಮಖಿಲಂ ವಪುರ್ಭವತು ಗೋಪತೇ ॥ ೨೭ ॥

---

೨೪. ಇದನ್ನು ಕೇಳಿದ ಸೂರ್ಯನು ಪ್ರೀತಿಯಿಂದ ಜಾಂಬವತೀ ಪುತ್ರನನ್ನು ಕುರಿತು ಹೇಳಿದನು. ಮಗೂ! ನಿನ್ನ ತಪಸ್ಸಿನಿಂದ ನಾನು ಸುಪ್ರೀತನಾಗಿದ್ದೇನೆ. ನಿನಗೆ ಏನು ಬೇಕೋ ಅದನ್ನು ಕೇಳು ಎಂದನು.

೨೫. ಸಾಂಬನು ಹೇಳುತ್ತಾನೆ—"ಎಲೈ ಪುರಾಣ ಪುರುಷೋತ್ತಮನಾದ ದೇವನೇ! ಪೂಜ್ಯನಾದ ನೀನು ಪ್ರಸನ್ನನಾಗಿದ್ದರೆ ನಿನ್ನಲ್ಲಿ ಅತಿಶಯ ಭಕ್ತಿಯು ಹುಟ್ಟು ವಂತೆ ಮಾಡು. ಇದೇ ನನಗೆ ಬೇಕಾದ ವರ" ಎಂದನು.

೨೬. ಸೂರ್ಯನು ಹೇಳುತ್ತಾನೆ—ಎಲೈ ಸುವ್ರತನೇ! ನಾನು ನಿನ್ನಲ್ಲಿ ಸಂಪೂರ್ಣ ಸಂತುಷ್ಟನಾಗಿದ್ದೇನೆ. ನಿನಗೆ ಮಂಗಳವಾಗಲಿ ನಿನಗೆ ಬೇಕಾದ ವರಗಳನ್ನು ಕೇಳಿಕೋ ಎಂದನು. ಆಗ ಸಾಂಬನು ವರದನಾದ ಸೂರ್ಯನನ್ನು ಎರಡನೆಯ ವರವನ್ನು ಕೇಳಿ ಕೊಂಡನು.

೨೭. ನಿನ್ನ ಅನುಗ್ರಹದಿಂದ ನನ್ನ ಶರೀರದಲ್ಲಿರುವ ಅಸಹ್ಯಕರವಾದ ರೋಗವು ನಾಶವಾಗಲಿ. ಎಲೈ ಕಿರಣಾಧಿಪತಿಯೇ! ನನ್ನ ಶರೀರವೆಲ್ಲವೂ ಶುದ್ಧವಾಗಲಿ ಎಂದನು.

॥ ಸುಮಂತುರುವಾಚ ॥
ಸ ತಥಾಸ್ತ್ವಿತಿ ತೇನೋಕ್ತೋ ಭಾಸ್ಕರೇಣ ಮಹಾತ್ಮನಾ ।
ತಾಂ ಮುಮೋಚ ರುಜಂ ಸಾಂಬೋ ದೇಹಾತ್ತ್ವಚಮಿವೋರಗಃ ॥ ೨೮ ॥

ತತೋ ರೂಪೇಣ ದಿವ್ಯೇನ ರೂಪವಾನಭವತ್ಪುನಃ ।
ಪ್ರಣಮ್ಯ ಶಿರಸಾ ದೇವಂ ಪುರತೋಽವಸ್ಥಿತೋಽಭವತ್ ॥ ೨೯ ॥

॥ ಶ್ರೀ ಸೂರ್ಯ ಉವಾಚ ॥
ಭೂಯಶ್ಚ ಶೃಣು ಮೇ ಸಾಂಬ ತುಷ್ಟೋಽಹಂ ಯದ್ಬ್ರವೀಮಿ ತೇ ।
ಅದ್ಯ ಪ್ರಭೃತಿ ತ್ವನ್ನಾಮ್ನಾ ಮಮ ಸ್ಥಾನಾನಿ ಸುವ್ರತ ।
ಕ್ಷಿತೌ ಯೇ ಸ್ಥಾಪಯಿಷ್ಯಂತಿ ತೇಷಾಂ ಲೋಕಾಃ ಸನಾತನಾಃ ॥ ೩೦ ॥

ಸ್ಥಾಪಯಸ್ವೈವ ಮಾಮಸ್ಮಿಂಶ್ಚಂದ್ರಭಾಗಾತಟೇ ಶುಭೇ ।
ತವ ನಾಮ್ನಾ ಚ ಸಾಂಬೇದಂ ಪರಾಂಖ್ಯಾತಿಂ ಗಮಿಷ್ಯತಿ ॥ ೩೧ ॥

---

೨೮. ಸುಮಂತುಮುನಿವರ್ಯರು ಹೇಳುತ್ತಾರೆ—ಆಗ ಮಹಾತ್ಮನಾದ ಸೂರ್ಯನು "ಹಾಗೆಯೇ ಆಗಲಿ" ಎಂದು ಹೇಳಿದನು. ಆ ಕೂಡಲೇ ಹಾವು ದೇಹದಿಂದ ಪರೆಯನ್ನು ಬಿಟ್ಟಂತೆ ಅವನ ಶರೀರವು ಆ ರೋಗದಿಂದ ವಿಮುಕ್ತವಾಯಿತು.

೨೯. ಬಳಿಕ ಎಂದಿನಂತೆ ಪುನಃ ದಿವ್ಯರೂಪದಿಂದ ಕೂಡಿ ಸೌಂದರ್ಯವಂತನಾದನು. ಬಳಿಕ ಸೂರ್ಯದೇವನಿಗೆ ಸಾಷ್ಟಾಂಗ ಪ್ರಣಾಮಮಾಡಿ ಸ್ವಾಮಿಯ ಮುಂದೆ ನಿಂತನು.

೩೦. ಶ್ರೀ ಸೂರ್ಯನು ಹೇಳುತ್ತಾನೆ—ಎಲೈ ಸುವ್ರತನಾದ ಸಾಂಬನೇ! ನಾನು ಸಂತುಷ್ಟನಾದೆ. ಹೇಳುವುದನ್ನು ಕೇಳು. ಇಂದು ಮೊದಲುಗೊಂಡು ಭೂಮಿಯಲ್ಲಿ ನಿನ್ನ ಹೆಸರಿನಿಂದ ನನ್ನ ಆಲಯಗಳನ್ನು ಯಾರು ಸ್ಥಾಪಿಸುವರೋ ಅವರಿಗೆ ಶಾಶ್ವತವಾದ ಪುಣ್ಯಲೋಕಗಳು ಪ್ರಾಪ್ತವಾಗುವುವು.

೩೧. ಎಲೈ ಸಾಂಬನೇ! ನನ್ನನ್ನು ಶುಭಕರವಾದ ಈ ಚಂದ್ರಭಾಗಾ ತೀರದಲ್ಲಿ ಸ್ಥಾಪಿಸು. ನಿನ್ನ ಹೆಸರಿನಿಂದ ಈ ಸ್ಥಳವು ಉತ್ತಮವಾದ ಸಿದ್ಧಿಯನ್ನು ಹೊಂದುವುದು.

ಕೀರ್ತಿಸ್ತವಾಕ್ಷಯಾ ಲೋಕೇ ಖ್ಯಾತಿಂ ಯಾಸ್ಯತಿ ಸುವ್ರತ ।
ಭೂಯಶ್ಚ ತೇ ಪ್ರದಾಸ್ಯಾಮಿ ಪ್ರತ್ಯಹಂ ಸ್ವಪ್ನದರ್ಶನಂ ॥ ೩೨ ॥

॥ ಸುಮಂತುರುವಾಚ ॥

ಏವಂ ದತ್ವಾ ವರಂ ತಸ್ಮೈ ವೃಷ್ಣಿಸಿಂಹಾಯ ಚಾಪರಂ ।
ಪ್ರತ್ಯಕ್ಷಂ ದರ್ಶನಂ ದತ್ವಾ ತತ್ರೈವಾಂತರಧಾದ್ಧರಿಃ ॥ ೩೩ ॥

ಯ ಇದಂ ಪಠತೇ ಸ್ತೋತ್ರಂ ತ್ರಿಕಾಲಂ ಭಕ್ತಿಮಾನ್ನರಃ ।
ತ್ರಿಸಪ್ತಶತಮಾವರ್ತ್ಯ ಹೋಮಂ ವಾ ಸಪ್ತರಾತ್ರಕಂ ॥ ೩೪ ॥

ರಾಜ್ಯಕಾಮೋ ಲಭೇದ್ರಾಜ್ಯಂ ಧನಕಾಮೋ ಲಭೇದ್ಧನಂ ।
ರೋಗಾರ್ತೋ ಮುಚ್ಯತೇ ರೋಗಾದ್ಯಥಾ ಸಾಂಬಸ್ತಥೈವ ಸಃ ॥ ೩೫ ॥

---

೩೨. "ಎಲೈ ಸುವ್ರತನೇ! ನಿನ್ನ ಕೀರ್ತಿಯು ಅಕ್ಷಯವಾಗಿ ಲೋಕದಲ್ಲಿ ಪ್ರಸಿದ್ಧಿ ಹೊಂದುವುದು. ಮತ್ತು ಪ್ರತಿದಿನವೂ ಸ್ವಪ್ನದಲ್ಲಿ ನಿನಗೆ ದರ್ಶನವನ್ನು ಕೊಡುತ್ತೇನೆ" ಎಂದನು.

೩೩. ಸುಮಂತುಮುನಿವರ್ಯರು ಹೇಳುತ್ತಾರೆ—ಹೀಗೆ ಆ ಸೂರ್ಯನು ಆ ವೃಷ್ಣಿವಂಶಶ್ರೇಷ್ಠನಿಗೆ ವರವನ್ನು ಕೊಟ್ಟುದಲ್ಲದೆ ಆವನಿಗೆ ಪ್ರತ್ಯಕ್ಷ ದರ್ಶನವನ್ನು ಕೊಟ್ಟು ಆತನು ಅಲ್ಲೇ ಅಂತರ್ಧಾನನಾದನು.

೩೪-೩೫. ಯಾವ ಮನುಷ್ಯನು ಭಕ್ತಿಯುಕ್ತನಾಗಿ ಈಸ್ತೋತ್ರವನ್ನು ತ್ರಿಕಾಲದಲ್ಲೂ ಪಠಿಸುತ್ತಾನೋ ಹತ್ತುನೂರು ಸಾರಿ ಪಠನಮಾಡಿ, ಏಳುರಾತ್ರಿಗಳು ಹೋಮಗಳನ್ನು ಮಾಡುತ್ತಾನೋ, ಅವನು ರಾಜ್ಯಬೇಕಾದರೆ ರಾಜ್ಯವನ್ನೂ, ಧನಬೇಕಾದರೆ ಧನವನ್ನೂ, ಹೊಂದಿ ಸಾಂಬನಂತೆಯೇ ರೋಗವಿಮುಕ್ತನಾಗಿ ಸೂರ್ಯನನ್ನು ಭಕ್ತಿ

**ಸೂರ್ಯಲೋಕಂ ವ್ರಜೇಚ್ಚಾಪಿ ಭಕ್ತ್ಯಾಭ್ಯರ್ಚ್ಯ ದಿವಾಕರಂ ।**
**ರಮತೇ ಚ ಗಥಾ ತಸ್ಮಿನ್ ದೇವೈಶ್ಚ ಪರಿವಾರಿತಃ ॥ ೩೬ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಸಾಂಬೋಪಾಖ್ಯಾನೇ ಸೂರ್ಯ ಪ್ರಸಾದ ವರ್ಣನಂ ನಾಮ ಸಪ್ತವಿಂಶತ್ಯುತ್ತರ ಶತತಮೋಽಧ್ಯಾಯಃ**



ಯಿಂದ ಪೂಜಿಸಿ ಸೂರ್ಯಲೋಕಕ್ಕೆ ಹೋಗುತ್ತಾನೆ. ಆ ಸೂರ್ಯಲೋಕದಲ್ಲಿ ದೇವತೆಗಳಿಂದ ಪರಿವೃತನಾಗಿ ಕ್ರೀಡಿಸುವನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ ಸಾಂಬೋಪಾಖ್ಯಾನದಲ್ಲಿ ಸೂರ್ಯಪ್ರಸಾದ ವರ್ಣನವೆಂಬ ನೂರಿಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಅಷ್ಟಾವಿಂಶತ್ಯುತ್ತರಶತತಮೋಽಧ್ಯಾಯಃ

॥ ಸುಮಂತುರುವಾಚ ॥

ಅಸ್ತಾವೀಚ್ಚ ತತಃ ಸಾಂಬಃ ಕೃಶೋ ಧಮನಿಸಂತತಃ ।
ರಾಜನಾಮ್ನಾಃ ಸಹಸ್ರೇಣ ಸಹಸ್ರಾಂಶುಂ ದಿವಾಕರಂ ॥ ೧ ॥

ಖಿದ್ಯಮಾನಂ ತತೋ ದೃಷ್ಟ್ವಾ ಸೂರ್ಯಃ ಕೃಷ್ಣಾತ್ಮಜಂ ತದಾ ।
ಸ್ವಪ್ನೇಽಸ್ಮೈ ದರ್ಶನಂ ದತ್ವಾ ಪುನರ್ವಚನಮಬ್ರವೀತ್ ॥ ೨ ॥

॥ ಶ್ರೀ ಸೂರ್ಯಉವಾಚ ॥

ಸಾಂಬ ಸಾಂಬ ಮಹಾಬಾಹೋ ಶೃಣು ಜಾಂಬವತೀಸುತ ।
ಅಲಂ ನಾಮಸಹಸ್ರೇಣ ಪಠ ಚೇಮಂ ಶುಭಂ ಸ್ತವಂ ॥ ೩ ॥

---

## ನೂರಇಪ್ಪತ್ತೆಂಟನೆಯ ಅಧ್ಯಾಯ

೧. ಸುಮಂತುಮುನಿವರ್ಯರು ಹೇಳುತ್ತಾರೆ—ಎಲೈ ರಾಜನೇ ! ರೋಗ ಪರಿಹಾರವಾದರೂ ಕೃಶನಾಗಿ ನರಗಳಿಂದ ವ್ಯಾಪ್ತನಾಗಿ ಸಾಂಬನು ಕಂಗೆಟ್ಟು ಸಹಸ್ರಾಂಶುವಾದ ದಿವಾಕರನನ್ನು ಸಹಸ್ರ ನಾಮಗಳಿಂದ ಸ್ತುತಿಸಿದನು.

೨. ಹೀಗೆ ಕೃಷ್ಣಪುತ್ರನಾದ ಸಾಂಬನು ಖೇದಪಡುತ್ತಿರುವುದನ್ನು ಕಂಡು ಸೂರ್ಯನು ಅವನಿಗೆ ಕನಸಿನಲ್ಲಿ ಕಾಣಿಸಿಕೊಂಡು ಈ ಮಾತನ್ನು ಹೇಳಿದನು.

೩. ಶ್ರೀ ಸೂರ್ಯನು ಹೇಳುತ್ತಾನೆ—ಜಾಂಬವತೀ ಪುತ್ರನೂ, ಮಹಾ ಬಾಹುವೂ ಆದ ಎಲೈ ಸಾಂಬನೇ ! ಕೇಳು. ಸಹಸ್ರನಾಮ ಸ್ತೋತ್ರವು ಸಾಕು. ಈ ಶುಭಕರವಾದ ಸ್ತೋತ್ರವನ್ನು ಪಠಿಸು.

ಯಾನಿ ಗುಹ್ಯಾನಿ ನಾಮಾನಿ ಪವಿತ್ರಾಣಿ ಶುಭಾನಿ ಚ ।
ತಾನಿ ತೇ ಕೀರ್ತಯಿಷ್ಯಾಮಿ ಪ್ರಯತ್ನಾದವಧಾರಯ ॥ ೪ ॥

ವೈಕರ್ತನೋ ವಿವಸ್ವಾಂಶ್ಚ ಮಾರ್ತಂಡೋ ಭಾಸ್ಕರೋ ರವಿಃ ।
ಲೋಕಪ್ರಕಾಶಕಃ ಶ್ರೀಮಾನ್ ಲೋಕಚಕ್ಷುರ್ಗ್ರಹೇಶ್ವರಃ ॥ ೫ ॥

ಲೋಕಸಾಕ್ಷೀ ತ್ರಿಲೋಕೇಶಃ ಕರ್ತಾ ಹರ್ತಾ ತಮಿಸ್ರಹಾ ।
ತಪನಸ್ತಾಪನಶ್ಚೈವ ಶುಚಿಃ ಸಪ್ತಾಶ್ವವಾಹನಃ ॥ ೬ ॥

ಗಭಸ್ತಿಹಸ್ತೋ ಬ್ರಹ್ಮಾ ಚ ಸರ್ವದೇವನಮಸ್ಕೃತಃ ।
ಏಕವಿಂಶತಿರಿತ್ಯೇಷಃ ಸ್ತವ ಇಷ್ಟಃ ಸದಾ ಮಮ ॥ ೭ ॥

ಶರೀರಾರೋಗ್ಯದಶ್ಚೈವ ಧನವೃದ್ಧಿಯಶಸ್ಕರಃ ।
ಸ್ತವರಾಜ ಇತಿ ಖ್ಯಾತಃ ತ್ರಿಷು ಲೋಕೇಷು ವಿಶ್ರುತಃ ॥ ೮ ॥

---

೪. ಅಯ್ಯಾ ಸಾಂಬನೇ! ಗುಪ್ತಗಳೂ, ಪವಿತ್ರಗಳೂ, ಶುಭಕರಗಳೂ ಆದ ನನ್ನ ನಾಮಗಳನ್ನು ನಿನಗೆ ಹೇಳುತ್ತೇನೆ ಪ್ರಯತ್ನದಿಂದ ಲಾಲಿಸು.

೫. ವೈಕರ್ತನ, ವಿವಸ್ವಾನ್, ಮಾರ್ತಂಡ, ಭಾಸ್ಕರ, ರವಿ, ಲೋಕಪ್ರಕಾಶಕ, ಶ್ರೀಮಾನ್, ಲೋಕಚಕ್ಷು, ಗ್ರಹೇಶ್ವರ,

೬. ಲೋಕಸಾಕ್ಷಿ, ತ್ರಿಲೋಕೇಶ, ಹರ್ತಾ, ಕರ್ತಾ, ತಮಿಸ್ರಹಾ, ತಪನ, ತಾಪನ, ಶುಚಿ, ಸಪ್ತಾಶ್ವವಾಹನ,

೭. ಗಭಸ್ತಿಹಸ್ತ, ಬ್ರಹ್ಮ, ಸರ್ವದೇವನಮಸ್ಕೃತ, ಈ ಇಪ್ಪತ್ತೊಂದು ನಾಮಗಳಿಂದ ಕೂಡಿದ ಸ್ತೋತ್ರವು ಸದಾ ನನಗೆ ಇಷ್ಟವಾದುದು.

೮. ಈ ನಾಮಸ್ತೋತ್ರವು ಶರೀರಾರೋಗ್ಯವನ್ನು ಕೊಡುವುದು, ಧನವೃದ್ಧಿಯನ್ನೂ ಯಶಸ್ಸನ್ನೂ ಉಂಟುಮಾಡುವುದು. ಸ್ತವರಾಜವೆಂಬ ಈ ಸ್ತೋತ್ರವು ಮೂರುಲೋಕಗಳಲ್ಲೂ ಪ್ರಸಿದ್ಧವಾದುದು.

ಯ ಏತೇನ ಮಹಾಬಾಹೋ ದ್ವೇ ಸಂಧ್ಯೇಽಸ್ತಮನೋದಯೇ ।
ಸ್ತೌತಿ ಮಾಂ ಪ್ರಣತೋ ಭೂತ್ವಾ ಸರ್ವಪಾಪೈಃ ಪ್ರಮುಚ್ಯತೇ ॥ ೯ ॥

ಮಾನಸಂ ವಾಚಿಕಂ ವಾಪಿ ಕಾಯಿಕಂ ಯಚ್ಚ ದುಷ್ಕೃತಂ ।
ಏಕಜಾಪ್ಯೇನ ತತ್ಸರ್ವಂ ಪ್ರಣಶ್ಯತಿ ಮಮಾಗ್ರತಃ ॥ ೧೦ ॥

ಏಷ ಜಪ್ಯಶ್ಚ ಹೋಮಶ್ಚ ಸಂಧ್ಯೋಪಾಸನಮೇವ ಚ ।
ಬಲಿಮಂತ್ರೋಽರ್ಘ್ಯಮಂತ್ರೋಽಥ ಧೂಪಮಂತ್ರಸ್ತಥೈವ ಚ ॥ ೧೧ ॥

ಅನ್ನಪ್ರದಾನೇ ಸ್ನಾನೇ ಚ ಪ್ರಣಿಪಾತೇ ಪ್ರದಕ್ಷಿಣೇ ।
ಪೂಜಿತೋಽಯಂ ಮಹಾಮಂತ್ರಃ ಸರ್ವಪಾಪಹರಃ ಶುಭಃ ॥ ೧೨ ॥

ಏವಮುಕ್ತ್ವಾ ಸ ಭಗವಾನ್ಭಾಸ್ಕರೋ ಜಗತಾಂ ಪತಿಃ ।
ಆಮಂತ್ರ್ಯ ಕೃಷ್ಣತನಯಂ ತತ್ರೈವಾಂತರ್ಹಿತೋಽಭವತ್ ॥ ೧೩ ॥

---

೯. ಎಲೈ ಮಹಾಬಾಹುವೇ ! ಯಾವನು ಈ ಸ್ತೋತ್ರದಿಂದ ಉದಯಾಸ್ತ ಎರಡು ಸಂಧ್ಯೆಗಳಲ್ಲೂ ನಮಸ್ಕಾರಮಾಡಿ ನನ್ನನ್ನು ಸ್ತುತಿಸುತ್ತಾನೋ ಅವನು ಸರ್ವ ಪಾಪಗಳಿಂದ ವಿಮುಕ್ತನಾಗುತ್ತಾನೆ.

೧೦. ಮನಸ್ಸು, ವಾಕ್ಕು, ಕಾಯ ಇವುಗಳಿಂದ ಸಂಭವಿಸಿದ ಪಾಪವೆಲ್ಲವೂ ನನ್ನ ಎದುರಿನಲ್ಲಿ ಒಂದುಸಾರಿ ಜಪಿಸಿದ ಮಾತ್ರದಿಂದಲೇ ನಾಶಹೊಂದುವುದು.

೧೧. ಇದೇ ಜಪ್ಯಮಂತ್ರವೂ, ಹೋಮಮಂತ್ರವೂ, ಸಂಧ್ಯೋಪಾಸನ ಮಂತ್ರವೂ, ಬಲಿಮಂತ್ರವೂ, ಅರ್ಘ್ಯಮಂತ್ರವೂ, ಧೂಪಮಂತ್ರವೂ ಆಗಿದೆ.

೧೨. ಅನ್ನದಾನ ಮಾಡುವಾಗಲೂ, ಸ್ನಾನಮಾಡುವಾಗಲೂ, ನಮಸ್ಕಾರ ಮಾಡುವಾಗಲೂ, ಪ್ರದಕ್ಷಿಣೆಮಾಡುವಾಗಲೂ ಪೂಜ್ಯವಾದ ಈ ಮಹಾಮಂತ್ರನನ್ನು ಪಠಿಸಿದರೆ ಸರ್ವಪಾಪ ಪರಿಹಾರವಾಗುವುದು."

೧೩. ಷಡ್ಗುಣೈಶ್ವರ್ಯಸಂಪನ್ನನೂ, ಜಗತ್ಪತಿಯೂ ಆದ ಸೂರ್ಯನು ಕೃಷ್ಣಪುತ್ರನಾದ ಸಾಂಬನಿಗೆ ಹೀಗೆ ತಿಳಿಸಿ ಅಲ್ಲಿಯೇ ಅದೃಶ್ಯನಾದನು.

**ಸಾಂಬೋಽಪಿ ಸ್ತವರಾಜೇನ ಸ್ತುತ್ವಾ ಸಪ್ತಾಶ್ವವಾಹನಂ ।**
**ಪ್ರೀತಾತ್ಮಾ ನೀರುಜಃ ಶ್ರೀಮಾನ್ ತಸ್ಮಾದ್ರೋಗಾದ್ವ್ಯಮುಚ್ಯತ ॥ ೧೪ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ ಸಾಂಬಸ್ತವವರ್ಣನಂ ನಾಮ ಅಷ್ಟಾವಿಂಶತ್ಯುತ್ತರ ಶತತಮೋಽಧ್ಯಾಯಃ.**



---

೧೪. ಸಾಂಬನೂ ಪ್ರೀತಿಯುಕ್ತವಾದ ಮನಸ್ಸುಳ್ಳವನಾಗಿ ಸೂರ್ಯನನ್ನು ಸ್ತವರಾಜವೆಂಬ ಈ ಸ್ತೋತ್ರದಿಂದ ಹೊಗಳಿ ಶ್ರೀಮಂತನಾಗಿ ಆ ಕುಷ್ಠರೋಗ ದಿಂದ ಮುಕ್ತನಾದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಸಾಂಬಸ್ತವವರ್ಣನವೆಂಬ ನೂರಿಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಏಕೋನತ್ರಿಂಶದುತ್ತರಶತತಮೋಽಧ್ಯಾಯಃ

॥ ಸುಮಂತುರುವಾಚ ॥

ಅಥಲಬ್ಧವರಃ ಸಾಂಬೋ ವರಂ ಪ್ರಾಪ್ಯ ಪುರಾತನಂ ।
ಮನ್ಯಮಾನಸ್ತದಾಶ್ಚರ್ಯಂ ಪ್ರಹೃಷ್ಟೇನಾಂತರಾತ್ಮನಾ ॥ ೧ ॥

ಪೂರ್ವಾಭ್ಯಾಸೇನ ತೇನೈವ ಸಾರ್ಧಮನ್ಯೈಸ್ತಪಸ್ವಿಭಿಃ ।
ಸ್ನಾಪನಾರ್ಥಂ ನಾತಿದೂರಂ ಚಂದ್ರಭಾಗಾಂ ನದೀಂ ಯಯೌ ॥ ೨ ॥

ಕೃತ್ವಾತ್ಮಮಂಡಲಾಕಾರಂ ಶ್ರದ್ಧಧಾನೋ ದಿನೇದಿನೇ ।
ಸಸ್ನೌ ಸಂಚಿಂತಯಾಮಾಸ ಕಿಂರೂಪಂ ಸ್ಥಾಪಯಾಮ್ಯಹಂ ॥ ೩ ॥

---

## ನೂರಇಪ್ಪತ್ತೊಂಭತ್ತನೆಯ ಅಧ್ಯಾಯ

೧-೨. ಅನಂತರದಲ್ಲಿ ಆ ವರವನ್ನು ಪಡೆದ ಸಾಂಬನು ಆ ರೀತಿ ತಾನು ಸ್ವಪ್ನದಲ್ಲಿ ದರ್ಶನಹೊಂದಿದುದು ಪುರಾತನವಾದದ್ದು ಮತ್ತು ಆಶ್ಚರ್ಯಕರವಾದದ್ದು ಎಂದು ಭಾವಿಸಿ ಸಂತುಷ್ಟವಾದ ಮನಸ್ಸಿನಿಂದ ಹಿಂದಿನಿಂದಲೂ ಬಂದ ಅಭ್ಯಾಸದಂತೆ ಇತರ ಋಷಿಗಳೊಡನೆ ಕೂಡಿ ಸ್ನಾನಮಾಡುವುದಕ್ಕಾಗಿ ಸಮೀಪದಲ್ಲಿದ್ದ ಚಂದ್ರಭಾಗಾ ನದಿಗೆ ಹೋದನು.

೩. ತನ್ನ ಮನಸ್ಸನ್ನೇ ಮಂಡಲವನ್ನು ಮಾಡಿ, ಶ್ರದ್ಧಾಯುಕ್ತನಾಗಿ ನಿತ್ಯವೂ ಸ್ನಾನಮಾಡಿಸುತ್ತಿದ್ದನು. ಮತ್ತು ನಾನು ಸೂರ್ಯನ ಪೂಜಾರ್ಥವಾಗಿ ಯಾವ ರೂಪಿನ ಪ್ರತಿಮೆಯನ್ನು ಸ್ಥಾಪಿಸಲಿ ? ಎಂಬದಾಗಿ ಯೋಚಿಸುತ್ತಿದ್ದನು.

ಸ ಸ್ನಾತಃ ಸಹಸೈವಾಥ ಪ್ರಣಮ್ಯ ತು ಪ್ರಭಾವತೀಂ ।
ಉಹ್ಯಮಾನಾಂ ಜಲೌಘೇನ ಪ್ರತಿಮಾಂ ಸಂಮುಖೀಂ ರವೇಃ ॥ ೪ ॥

ತಾಂ ದೃಷ್ಟ್ವಾ ತಸ್ಯ ವೀರಸ್ಯ ಸಮುತ್ಪನ್ನಮಿದಂ ಯಥಾ ।
ದೇವೇನ ಯತ್ತದಾಜ್ಞಪ್ತಂ ತದಿದಂ ನಾತ್ರ ಸಂಶಯಃ ॥ ೫ ॥

ಸ ತಾಮುತ್ತಾರ್ಯ ಸಲಿಲಾತ್ ಆನೀಯ ಚ ಮಹೀಪತೇ ।
ತಸ್ಮಿನ್ಮಿತ್ರವನೋದ್ದೇಶೇ ಸ್ಥಾಪಯಾಮಾಸ ತಾಂ ತದಾ ॥ ೬ ॥

ನಿಧಾಯ ಪ್ರತಿಮಾಂ ಲೋಕೇ ಸಾಂಬಸ್ತಸ್ಯಮಹಾತ್ಮನಃ ।
ಮಿತ್ರಂ ಮಿತ್ರವನೇ ರಮ್ಯೇ ಸ್ಥಾಪಯಿತ್ವಾ ವಿಧಾನತಃ ॥ ೭ ॥

ತತಸ್ತಾಮೇವ ಪಪ್ರಚ್ಛ ಪ್ರಣಮ್ಯ ಪ್ರತಿಮಾಂ ರವೇಃ ।
ಕೇನೇಯಂ ನಿರ್ಮಿತಾ ನಾಥ ಭವತೋ ಹ್ಯಾಕೃತಿಃ ಶುಭಾ ॥ ೮ ॥

---

೪. ಒಂದು ದಿನ ಅವನು ಸ್ನಾನಮಾಡುತ್ತಿರುವಾಗ ಜಲಪ್ರವಾಹದಲ್ಲಿ ತನ್ನ ಇದಿರಿಗೆ ಕೊಚ್ಚಿಕೊಂಡು ಬರುತ್ತಿರುವ ಕಾಂತಿಯುಕ್ತವಾದ ಸೂರ್ಯಪ್ರತಿಮೆಯೊಂದನ್ನು ಕಂಡು ಥಟ್ಟನೆ ನಮಸ್ಕರಿಸಿದನು.

೫. ಆ ಪ್ರತಿಮೆಯನ್ನು ಕಂಡೊಡನೆ ಆ ವೀರನ ಮನಸ್ಸಿನಲ್ಲಿ "ಸ್ವಾಮಿಯಾದ ಸೂರ್ಯನು ಸ್ವಪ್ನದಲ್ಲಿ ಅಪ್ಪಣೆಕೊಡಿಸಿದ ಪದಾರ್ಥವು ಇದೇ ಆಗಿರಬೇಕು" ಎಂದು ವಿಚಾರವು ಹೊಳೆದು, ನಿಸ್ಸಂದೇಹವಾಗಿ ಇದೇ ಎಂಬದಾಗಿ ಅವನ ಮನಸ್ಸಿನಲ್ಲಿ ನಿಶ್ಚೈಸಿದನು.

೬. ಎಲೈ ರಾಜನೇ! ಅವನು ನೀರಿನಲ್ಲಿ ಕೊಚ್ಚಿಕೊಂಡು ಬಂದ ಆ ಪ್ರತಿಮೆಯನ್ನು ನೀರಿನಿಂದ ಮೇಲಕ್ಕೆ ತಂದು ಆ ಮಿತ್ರವನದಲ್ಲಿ ಒಂದು ಕಡೆ ಇಟ್ಟನು.

೭. ಸಾಂಬನು ಮಹಿಮಾವಿಶಿಷ್ಟವಾದ ಸೂರ್ಯನ ಪ್ರತಿಮೆಯನ್ನು ಲೋಕ ರಮ್ಯವಾದ ಆ ಮಿತ್ರವನದಲ್ಲಿಟ್ಟು ವಿಧಿಪ್ರಕಾರ ಪ್ರತಿಷ್ಠೆಮಾಡಿದನು.

೮. ಪ್ರತಿಷ್ಠೆಮಾಡಿ ಆದಮೇಲೆ ಆ ಪ್ರತಿಮೆಗೆ ನಮಸ್ಕರಿಸಿ, ಅದನ್ನು ಕುರಿತು ಸ್ವಾಮೀ! ಮಂಗಳಕರವಾದ ಈ ನಿನ್ನ ಪ್ರತಿಮೆಯನ್ನು ಯಾರು ನಿರ್ಮಿಸಿದರು? ಎಂದು ಕೇಳಿದನು.

ಪ್ರತಿಮಾ ತಮುವಾಚಾಥ ಶೃಣು ಸಾಂಬ ಬ್ರುವೇ ಸ್ವಯಂ ।
ನಿರ್ಮಿತಾ ಯೇನ ಚಾಪ್ಯೇಷಾ ಮದೀಯಾ ಪುರುಷಾಕೃತಿಃ ॥ ೯ ॥

ಮಮಾತಿತೇಜಸಾವಿಷ್ಟಂ ರೂಪಮಾಸೀತ್ಪುರಾತನಂ ।
ಅಸಹ್ಯಂ ಸರ್ವಭೂತಾನಾಂ ತತೋಽಸ್ಮ್ಯಭ್ಯರ್ಚಿತಃ ಸುರೈಃ ॥ ೧೦ ॥

ಸಹ್ಯಂ ಭವತು ತೇ ರೂಪಂ ಸರ್ವಪ್ರಾಣಭೃತಾಮಪಿ ।
ತತೋ ಮಯಾ ಸಮಾದಿಷ್ಟೋ ವಿಶ್ವಕರ್ಮಾ ಮಹಾತಪಾಃ ॥
ತೇಜಸಾಂ ಶಾತನಂ ಕುರ್ವನ್ ರೂಪಂ ನಿರ್ವರ್ತಯಸ್ವ ಮೇ ॥ ೧೧ ॥

ತತಸ್ತು ಮತ್ಸಮಾದೇಶಾತ್ತೇನೈವ ನಿಪುಣಂ ತದಾ ।
ಶಾಕದ್ವೀಪೇ ಭ್ರಮಿಂ ಕೃತ್ವಾ ರೂಪಂ ನಿರ್ವರ್ತಿತಂ ಮಮ ॥ ೧೨ ॥

---

೯. ಆಗ ಪ್ರತಿಮೆಯು ಅವನನ್ನು ಕುರಿತು ಎಲೈ ಸಾಂಬನೇ! " ಈ ನನ್ನ ಪುರುಷಾಕೃತಿಯನ್ನು ಯಾರು ಮಾಡಿದರೆಂಬುದನ್ನು ಹೇಳುವೆನು ಕೇಳು.

೧೦. ಪೂರ್ವದಲ್ಲಿ ಮಹಾತೇಜಸ್ಸಿನಿಂದ ವ್ಯಾಪ್ತವಾದ ಪುರಾತನರೂಪವೊಂದು ನನಗೆ ಇದ್ದಿತು. ಆ ರೂಪವು ಸರ್ವಭೂತಗಳಿಗೂ ಸಹಿಸಲು ಅಸಾಧ್ಯವಾಗಿದ್ದಿತು. ಆದಕ್ಕಾಗಿ ದೇವತೆಗಳೆಲ್ಲರೂ ನನ್ನಲ್ಲಿ ಬಂದು ನನ್ನ ರೂಪವು ಎಲ್ಲಾ ಪ್ರಾಣಿಗಳಿಗೂ ನೋಡುವುದಕ್ಕೆ ಸಹ್ಯವಾಗುವಂತೆ ಪರಿಣಮಿಸಲಿ ಎಂಬ ಉದ್ದೇಶದಿಂದ ನನ್ನನ್ನು ಪೂಜಿಸಿದರು.

೧೧. ಅನಂತರ ನಾನು ಮಹಾತಪನಾದ ವಿಶ್ವಕರ್ಮನನ್ನು ಕುರಿತು " ನನ್ನ ತೇಜಸ್ಸನ್ನೆಲ್ಲಾ ಶಾತನಮಾಡಿ ಕಡೆದು ನನಗೆ ಸೌಮ್ಯರೂಪವಾಗುವಂತೆ ಮಾಡು " ಎಂದು ಆಜ್ಞಾಪಿಸಿದೆನು.

೧೨. ಅನಂತರ ನನ್ನ ಅಪ್ಪಣೆಯ ಪ್ರಕಾರ ಆ ವಿಶ್ವಕರ್ಮನೇ ಶಾಕದ್ವೀಪದಲ್ಲಿ ಭ್ರಮಣಯಂತ್ರವನ್ನು ಏರ್ಪಡಿಸಿ, ನನ್ನ ಬಿಂಬವನ್ನು ನಿಪುಣತೆಯಿಂದ ಕಡೆದು ನನಗೆ ಈ ರೀತಿ ರೂಪವು ಏರ್ಪಡುವಂತೆ ಮಾಡಿದನು.

ಪ್ರೀತ್ಯಾ ತೇಷಾಂ ಪ್ರಪಂಚೋಽಯಂ ಸ ಮಯಾ ಕಾರಿತಃ ಪುನಃ ।
ತೇನೇಯಂ ಕಲ್ಪವೃಕ್ಷಾತ್ತು ನಿರ್ಮಿತಾ ವಿಶ್ವಕರ್ಮಣಾ ॥ ೧೩ ॥

ಕೃತ್ವಾ ಹಿಮವತಃ ಪೃಷ್ಠೇ ಪುರಾ ಸಿದ್ಧನಿಷೇವಿತೇ ।
ತ್ವದರ್ಥಂ ಚಂದ್ರಭಾಗಾಯಾಂ ತತಸ್ತೇನಾವತಾರಿತಾ ॥ ೧೪ ॥

ಭವತಸ್ತಾರಣಾರ್ಥಂ ಹಿ ತತಃ ಸ್ಥಾನಮಿದಂ ಶುಭಂ ।
ರುಚಿರಂ ಸರ್ವದಾ ಸಾಂಬ ಸಾನ್ನಿಧ್ಯಂ ಮೇತ್ರ ಯಾಸ್ಯತಿ ॥ ೧೫ ॥

ಸಾನ್ನಿಧ್ಯಂ ಮಮ ಪೂರ್ವಾಹ್ಣೇ ಸುತೀರೇ ದ್ರಕ್ಷ್ಯತೇ ಜನೈಃ ।
ಕಾಲಪ್ರಿಯೇ ಚ ಮಧ್ಯಾಹ್ನೇಽಪರಾಹ್ಣೇಚಾತ್ರ ನಿತ್ಯಶಃ ॥ ೧೬ ॥

ಪೂರ್ವಾಹ್ಣೇ ಪೂಜಯೇದ್ಬ್ರಹ್ಮಾ ಮಧ್ಯಾಹ್ನೇ ಚಕ್ರಧೃತ್ಸ್ವಯಂ ।
ಶಂಕರಶ್ಚಾಪರಾಹ್ಣೇ ತು ಮಾಂ ಪೂಜಯತಿ ಸರ್ವದಾ ॥ ೧೭ ॥

---

೧೩. ನನ್ನನ್ನು ವಿಶೇಷವಾಗಿ ಪ್ರಾರ್ಥಿಸಿದ ದೇವಾದಿಗಳ ಮೇಲಿನ ಪ್ರೀತಿಯಿಂದ ನಾನು ಈ ಪ್ರಕಾರ ಕಾರ್ಯವನ್ನು ನಡೆಯಿಸಿದೆನು. ಇದು ನನ್ನ ಪೂರ್ವದ ವಿಚಾರ.

೧೪. ಪೂರ್ವದಲ್ಲಿ ಸಿದ್ಧರಿಂದ ಸೇವಿಸಲ್ಪಟ್ಟ ಹಿಮವತ್ಪರ್ವತದ ತಪ್ಪಲಿನಲ್ಲಿ ಕಲ್ಪವೃಕ್ಷಗಳಿಂದ ವಿಶ್ವಕರ್ಮನು ಈ ಪ್ರತಿಮೆಯನ್ನು ನಿರ್ಮಿಸಿದನು. ನಿನಗೆ ವ್ಯಾಧಿಯಿಂ ಉತ್ತಾರಣವಾಗುವುದಕ್ಕಾಗಿ ಆ ವಿಶ್ವಕರ್ಮನೇ ಈ ಪ್ರತಿಮೆಯನ್ನು ಇಲ್ಲಿ ಚಂದ್ರಭಾಗಾ ನದಿಯಲ್ಲಿ ಹಾಕಿದನು.

೧೫ ಆದ್ದರಿಂದ ಈ ಸ್ಥಾನವು ಶುಭಕರವಾದುದು. ಎಲೈ ಸಾಂಬನೇ! ಇದು ಮನೋಹರವಾದ ಸ್ಥಳ. ಇಲ್ಲಿ ಸದಾ ನನ್ನ ಸಾನ್ನಿಧ್ಯವುಂಟಾಗುವುದು.

೧೬. ಪ್ರತಿನಿತ್ಯದ ಪೂರ್ವಾಹ್ಣದಲ್ಲಿ ಈ ನದಿಯ ತೀರದಲ್ಲಿ ನನ್ನ ಸಾನ್ನಿಧ್ಯವಿರುವುದನ್ನು ಜನರೆಲ್ಲರೂ ಕಾಣುವರು. ಮಧ್ಯಾಹ್ನ ವೇಳೆಯಲ್ಲಿ ಕಾಲಪ್ರಿಯಸ್ಥಾನದಲ್ಲಿಯೂ,ಅಪರಾಹ್ಣದಲ್ಲಿ ಪುನಃ ಇದೇ ಸ್ಥಾನದಲ್ಲಿಯೂ ಯಾವಾಗಲೂ ಇರುತ್ತದೆ.

೧೭. ಪೂರ್ವಾಹ್ಣದಲ್ಲಿ ಬ್ರಹ್ಮನೂ, ಮಧ್ಯಾಹ್ನದಲ್ಲಿ ವಿಷ್ಣುವೂ, ಅಪರಾಹ್ಣದಲ್ಲಿ ಶಂಕರನೂ ಯಾವಾಗಲೂ ನನ್ನನ್ನು ಪೂಜಿಸುತ್ತಾರೆ ಎಂದನು.

ಇತ್ಯುಕ್ತೋಽಸೌ ಭಗವತಾ ಭಾಸ್ಕರೇಣ ಸ ಯಾದವಃ ।
ಹರ್ಷಮಾಪ ಮಹಾಬಾಹೋ ಭಾಸ್ಕರೋಽಂತರ್ದಧೇ ತತಃ    ॥ ೧೮ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ
ಸಾಂಬಕೃತಾದಿತ್ಯಮೂರ್ತಿ ಸ್ಥಾಪನಂ ನಾಮ ಏಕೋನ
ತ್ರಿಂಶದುತ್ತರ ಶತತಮೋಽಧ್ಯಾಯಃ.



---

೧೮. ಈ ರೀತಿಯಾಗಿ ಭಗವಂತನಾದ ಸೂರ್ಯನು ಹೇಳಿದ ಮೇಲೆ ಯದು ನಂದನನಾದ ಸಾಂಬನು ಸಂತೋಷಹೊಂದಿದನು. ಆ ಪ್ರತಿಮೆಯಲ್ಲಿ ಮಾತನಾಡುವ ಶಕ್ತಿರೂಪದಲ್ಲಿ ಬಂದಿದ್ದ ಸೂರ್ಯನು ಅಂತರ್ಧಾನನಾದನು. ಎಂದರೆ ಪ್ರತಿಮೆಯು ಮೌನವಹಿಸಿ ನಿಂತಿತು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ
ಸಾಂಬನು ಆದಿತ್ಯಮೂರ್ತಿಯನ್ನು ಪ್ರತಿಷ್ಠೆಮಾಡಿದ ವಿಚಾರ ಎಂಬ
ನೂರಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ತ್ರಿಂಶದುತ್ತರಶತತಮೋಽಧ್ಯಾಯಃ

॥ ಶತಾನೀಕ ಉವಾಚ ॥

ಕಥಂ ಸಾಂಬೇನ ವಿಪ್ರೇಂದ್ರ ಪ್ರತಿಷ್ಠಾ ಕಾರಿತಾ ರವೇಃ ।
ಕಸ್ಯ ವಾ ವಚನಾತ್ತೇನ ಪ್ರಾಸಾದಃ ಕಾರಿತೋ ರವೇಃ ॥ ೧ ॥

॥ ಸುಮಂತುರುವಾಚ ॥

ಅತ್ರ ತೇ ವಚ್ಮಿ ರಾಜೇಂದ್ರ ಯಥಾ ಸಾಂಬೇನ ಧೀಮತಾ ।
ಪ್ರತಿಷ್ಠಾ ಕಾರಿತಾ ಭಾನೋಃ ಪ್ರಾಸಾದಶ್ಚ ಮಹೀಪತೇ ॥ ೨ ॥

---

### ನೂರಮೂವತ್ತನೆಯ ಅಧ್ಯಾಯ

೧. ಶತಾನೀಕರಾಜನು ಹೇಳುತ್ತಾನೆ—ಅಯ್ಯಾ ವಿಪ್ರೋತ್ತಮರಾದ ಸುಮಂತುಮುನಿವರ್ಯರೇ ! ಸಾಂಬನು ಸೂರ್ಯದೇವನ ಪ್ರತಿಷ್ಠೆಯನ್ನು ಹೇಗೆ ಮಾಡಿದನು ? ಯಾರ ಮಾತಿನಂತೆ ಅವನು ಸೂರ್ಯದೇವಾಲಯವನ್ನು ಕಟ್ಟಿಸಿದನು? ಎಂದು ಕೇಳಿದನು.

೨. ಸುಮಂತು ಮುನಿವರ್ಯರು ಹೇಳುತ್ತಾರೆ—ಅಯ್ಯಾ ರಾಜೇಂದ್ರನೇ ! ಬುದ್ಧಿಶಾಲಿಯಾದ ಸಾಂಬನು ಸೂರ್ಯಮೂರ್ತಿಯನ್ನು ಪ್ರತಿಷ್ಠೆ ಮಾಡಿಸಿದ ವಿಧಾನವನ್ನೂ ಸೂರ್ಯದೇವಾಲಯ (ಪ್ರಾಸಾದ) ವನ್ನು ನಿರ್ಮಿಸಿದ ರೀತಿಯನ್ನೂ ನಿನಗೆ ಹೇಳುತ್ತೇನೆ.

**ಸುಲಬ್ಧ್ವಾ ಪ್ರತಿಮಾಂ ಭಾನೋಃ ಚಿಂತಯಾಮಾಸ ನಾರದಂ ।**
**ಸ ಚಾಪಿ ಚಿಂತಿತಶ್ಚಾಗಾದ್ಯತ್ರ ಜಾಂಬವತೀಸುತಃ ॥ ೩ ॥**

**ತಮಾಗತಮಭಿಪ್ರೇಕ್ಷ್ಯ ನಾರದಂ ಮುನಿಸತ್ತಮಂ ।**
**ಸಂಪೂಜ್ಯ ವಿಧಿವತ್ಸಾಂಬೋ ನಾರದಂ ವಾಕ್ಯಮಬ್ರವೀತ್ ॥ ೪ ॥**

**ಪ್ರಾಸಾದಂ ಕಾರಯೇದ್ಯಸ್ತು ಭಾಸ್ಕರಸ್ಯ ನರೋ ದ್ವಿಜ ।**
**ಕಿಂ ಫಲಂ ತಸ್ಯ ದೇವರ್ಷೇ ಪ್ರತಿಷ್ಠಾಂ ಯಶ್ಚ ಕಾರಯೇತ್ ॥ ೫ ॥**

**॥ ನಾರದ ಉವಾಚ**

**ಪ್ರಾಸಾದಂ ಶೋಭನೇ ದೇಶೇ ಯಸ್ತು ಕಾರಯತೇ ರವೇಃ ।**
**ಸ ಯಾತಿ ನರಶಾರ್ದೂಲ ಸೂರ್ಯಲೋಕಂ ನ ಸಂಶಯಃ ॥ ೬ ॥**

---

೩. ಸಾಂಬನು ಹಿಂದೆ ಹೇಳಿದಂತೆ ಸೂರ್ಯನ ಪ್ರತಿಮೆಯು ದೊರೆಯುತ್ತಲೇ ಆ ಕೂಡಲೇ ನಾರದನನ್ನು ಧ್ಯಾನಿಸಿದನು. ಜಾಂಬವತಿಯ ಮಗನಾದ ಸಾಂಬನು ಧ್ಯಾನಮಾಡಿದ ಕೂಡಲೇ ಆ ನಾರದನು ಸಾಂಬನ ಬಳಿಗೆ ಬಂದನು.

೪. ಮುನಿಶ್ರೇಷ್ಠನಾದ ಆ ನಾರದನು ಬಂದುದನ್ನು ಕಂಡು ಸಾಂಬನು ಅವನನ್ನು ವಿಧಿಪ್ರಕಾರ ಪೂಜೆಮಾಡಿ, ಆ ನಾರದಮಹರ್ಷಿಯನ್ನು ಕುರಿತು ಈ ಮಾತನ್ನು ಹೇಳಿದನು.

೫. ಎಲೈ ದೇವರ್ಷಿಯಾದ ದ್ವಿಜನೇ ! ಸೂರ್ಯಪ್ರಾಸಾದವನ್ನು ನಿರ್ಮಿಸಿದವರಿಗೆ ಬರುವ ಫಲವಾವುದು? ಸೂರ್ಯಪ್ರತಿಮೆಯನ್ನು ಪ್ರತಿಷ್ಠೆಮಾಡಿದವರಿಗೆ ಏನು ಫಲವುಂಟಾಗುವುದು ? ಎಂದು ಪ್ರಶ್ನಿಸಿದನು.

೬. ಸಾಂಬನು ಈ ರೀತಿ ಪ್ರಶ್ನೆಮಾಡಲು ನಾರದನು ಅವನನ್ನು ಕುರಿತು ಹೇಳುತ್ತಾನೆ—ಅಯ್ಯಾ ಮಾನವಶ್ರೇಷ್ಠನೇ! ಯಾವ ಪುರುಷನು ಪರಿಶುದ್ಧವಾದ ಸ್ಥಳದಲ್ಲಿ ಸೂರ್ಯಪ್ರಾಸಾದವನ್ನು ಏರ್ಪಡಿಸುವನೋ ಅವನಿಗೆ ಸೂರ್ಯಲೋಕ ಪ್ರಾಪ್ತಿಯಾಗುವುದರಲ್ಲಿ ಸಂಶಯವಿಲ್ಲವೆಂದು ತಿಳಿ ಎಂದನು.

॥ ಸಾಂಬ ಉವಾಚ ॥

ಕಥಂ ಕುರ್ಯಾದಾಯತನಂ ಕಸ್ಮಿನ್ದೇಶೇ ದ್ವಿಜೋತ್ತಮ ।
ಕೀದೃಕ್ಚಸ್ತಂ ಚಾಯತನಂ ದೇವದೇವಸ್ಯ ವೈ ದ್ವಿಜ ॥ ೭ ॥

॥ ನಾರದ ಉವಾಚ ॥

ಯತ್ರ ಪ್ರಭೂತಂ ಸಲಿಲಮಾಗಮೋ ಚ ವಿನಾಶನೇ ।
ದೇವತಾಯತನಂ ಕುರ್ಯಾದ್ಯಶೋಧರ್ಮವಿವೃದ್ಧಯೇ ॥ ೮ ॥

ಇಷ್ಟಾಪೂರ್ತೇನ ಲಭತೇ ಲೋಕಾಂ ಸ್ತಾಂಶ್ಚ ವಿಭೂಷಿತಾನ್ ।
ದೇವಾನಾಮಾಲಯಂ ಕಾರ್ಯಂ ದ್ವಯಂ ಯತ್ರ ಚ ದೃಶ್ಯತೇ ॥ ೯ ॥

ಸಲಿಲಾದ್ಯಂ ಚ ಆರಾಮಃ ಕೃತೇಷ್ವಾಯತನೇಷು ಚ ।
ಸ್ಥಾನೇಷ್ವೇತೇಷು ಸಾನ್ನಿಧ್ಯಮುಪಗಚ್ಛಂತಿ ದೇವತಾಃ ॥ ೧೦ ॥

---

೭. ಆನಂತರ ಸಾಂಬನು ಪುನಃ ನಾರದರನ್ನು ಕುರಿತು ಕೇಳುತ್ತಾನೆ—ಎಲೈ ದ್ವಿಜಶ್ರೇಷ್ಠನೇ! ಸೂರ್ಯದೇವಾಲಯವನ್ನು ಎಂತಹ ಸ್ಥಳದಲ್ಲಿ ನಿರ್ಮಿಸಬೇಕು? ಮತ್ತು ಅದನ್ನು ನಿರ್ಮಿಸುವ ರೀತಿ ಹೇಗೆ ? ಆ ಸೂರ್ಯದೇವನಿಗೆ ಎಂತಹ ಆಯತನವು ಶ್ರೇಷ್ಠ ವೆನಿಸುವುದು? ಎಂದು ಪ್ರಶ್ನೆ ಮಾಡಿದನು.

೮. ಇವನ್ನು ಕೇಳಿ ನಾರದರು ಸಾಂಬನನ್ನು ಕುರಿತು ಹೇಳುತ್ತಾರೆ—ಸೃಷ್ಟಿ ಕಾಲ ಮತ್ತು ಪ್ರಳಯಕಾಲಗಳಲ್ಲಿ ಎಲ್ಲಿ ಹೆಚ್ಚಾದ ಜಲಸಮೃದ್ಧಿಯಿರುವುದೋ ಅಲ್ಲಿ ಸೂರ್ಯದೇವಾಲಯವನ್ನು ನಿರ್ಮಿಸಬೇಕು. ಈರೀತಿ ಮಾಡುವುದರಿಂದ ಕರ್ತೃ ವಿಗೆ ಕೀರ್ತಿಯೂ, ಧರ್ಮವೂ, ವೃದ್ಧಿಯಾಗುವುದು.

೯. ಇಷ್ಟ ಎಂದರೆ ಯಜ್ಞಮಾಡುವುದು, ಪೂರ್ತ ಎಂದರೆ ಜಲಾಶಯ ನಿರ್ಮಾಣವು ಎಂದು ತಿಳಿಯಬೇಕು. ಯಜಮಾನನು ಎಷ್ಟುಭಕ್ತಿಯಿಂದ ಜಲಾಶಯ, ಯಜ್ಞ, ಇವುಗಳನ್ನು ಮಾಡಿಸುತ್ತಾನೆಯೋ, ಅದಕ್ಕೆ ಅನುಗುಣವಾಗಿರುವ ಲೋಕ ಗಳನ್ನು ಪಡೆಯುತ್ತಾನೆ. ಯಾಗಮಾಡಲು ತಕ್ಕ ವಸತಿ ಮತ್ತು ಜಲಸಮೃದ್ಧಿ ಇವುಗಳಿರುವ ಕಡೆಯಲ್ಲಿ ದೇವಾಲಯವನ್ನು ನಿರ್ಮಿಸಬೇಕು.

೧೦. ನೀರು ಮೊದಲಾದುವುಗಳಿಗೆ ಅನುಕೂಲವಿರುವ ಸ್ಥಳಗಳಲ್ಲಿಯೂ, ಉದ್ಯಾನವನಗಳಲ್ಲಿಯೂ, ಕಟ್ಟಿದ ದೇವಾಲಗಳಲ್ಲಿಯೂ, ಸಹ ದೇವತೆಗಳು ಸನ್ನಿಹಿತ ರಾಗಿರುತ್ತಾರೆ.

ಸರಸ್ಸು ನಲಿನೀಚ್ಛನ್ನ ನಿರಸ್ತರವಿರಶ್ಮಿಷು ।
ಹಂಸಸಂಕ್ಷುಬ್ಧ ಕಲ್ಹಾರವೀಥೀ ವಿಮಲವಾರಿಷು ॥ ೧೧ ॥

ಹಂಸ ಕಾರಂಡವ ಕ್ರೌಂಚ ಚಕ್ರವಾಕ ವಿರಾವಿಷು ।
ಪರ್ಯಂತ ವಿಮಲಚ್ಛಾಯಾವಿಶ್ರಾಂತಜನವಾರಿಷು ॥ ೧೨ ॥

ಕ್ರೌಂಚಕಾಂಚೀಕಲಾಪಾಶ್ಚ ಕಲಹಂಸ ಕಲಸ್ವನಾಃ ।
ನದ್ಯಾಸ್ತ್ರೋಯಾಂಶುಕಾ ಯತ್ರಶಫರೀಕೃತಲೋಚನಾಃ ॥ ೧೩ ॥

ಫುಲ್ಲದ್ರುಮೋತ್ತಮಾವಾಸಾ ಸಂಗಮಶ್ರೋಣಿಮಂಡಲಾಃ ।
ಪುಲಿನಾದ್ಯುನ್ನತೋರಸ್ಕಾ ರಸಹಾಸಾಶ್ಚ ನಿಮ್ನಗಾಃ ॥ ೧೪ ॥

ವನೋಪಾಂತ ನದಿ ಶೈಲಸಂಸ್ಕಾರೋಪಾಂತಭೂಮಿಷು ।
ರಮಂತೇ ದೇವತಾ ನಿತ್ಯಂ ಪುರೇಷೂದ್ಯಾನವತ್ಸು ಚ ॥೧೫ ॥

---

೧೧-೧೨. ಸೂರ್ಯನ ರಶ್ಮಿಗಳು ನೀರಿಗೆ ಸೋಕದಂತೆ ತುಂಬಾ ತಾವರೆ ಹೂವುಗಳಿಂದ ಆವರಿಸಲ್ಪಟ್ಟು, ಮನೋಹರವಾಗಿರುವ ಸರೋವರಗಳಲ್ಲಿಯೂ, ಹಂಸಪಕ್ಷಿಗಳ ಸಂಚಾರದಿಂದ ಚೆಲ್ಲಾಪಿಲ್ಲಿಯಾಗಿರುವ ಕಲ್ಹಾರಪುಷ್ಪಗಳೂ, ನಿರ್ಮಲವಾದ ನೀರೂ ಉಳ್ಳ ಸರಸ್ಸುಗಳಲ್ಲಿಯೂ, ಹಂಸ, ಕಾರಂಡ, ಕ್ರೌಂಚ, ಚಕ್ರವಾಕ ಈ ಪಕ್ಷಿಗಳ ಧ್ವನಿಗಳಿಂದ ಕೂಡಿರುವ ಸ್ಥಳಗಳಲ್ಲಿಯೂ, ಮತ್ತು ಸಮೀಪದಲ್ಲಿ ಪ್ರಶಸ್ತವಾದ ನೆರಳುಳ್ಳದ್ದಾಗಿ ಜನರು ವಿಶ್ರಮಿಸಿಕೊಳ್ಳುವುದಕ್ಕೆ ಯೋಗ್ಯವಾದ ಸ್ಥಳಗಳಲ್ಲಿಯೂ ದೇವತೆಗಳು ಯಾವಾಗಲೂ ವಿಹರಿಸುವರೆಂದು ತಿಳಿಯಬೇಕು.

೧೩. ಕ್ರೌಂಚ ಪಕ್ಷಿಗಳೆಂಬ ಒಡ್ಯಾಣ, ಕಲಹಂಸಧ್ವನಿಯೆಂಬ ಮಧುರಶಬ್ದ, ಜಲವೆಂಬ ವಸ್ತ್ರ, ಮೀನುಗಳೆಂಬ ಕಣ್ಣು, ಅರಳಿದ ಹೂವುಗಳಿಂದ ಕೂಡಿದ ವೃಕ್ಷಗಳೆಂಬ ಆವಾಸಸ್ಥಳ.

೧೪. ನದೀಸಂಗಮಗಳೆಂಬ ದುಂಡಾದ ಶ್ರೋಣಿ, ಮರಳುದಿಣ್ಣೆಗಳೆಂಬ ಉನ್ನತವಾದ ಎದೆ, ರಸಗಳೆಂಬ ನಗುವಿಕೆ, ಇವುಗಳಿಂದ ಕೂಡಿದ ನದಿಗಳೆಂಬ ಸ್ತ್ರೀಯರು ವನಸಮೀಪಸ್ಥವಾದ ನದಿಗಳಲ್ಲೂ.

೧೫. ತಾವು ಶೃಂಗರಿಸಿಕೊಳ್ಳಲು ಅರ್ಹವಾದ ರಹಸ್ಯಸ್ಥಳವುಳ್ಳ ಬೆಟ್ಟಗಳಲ್ಲೂ, (ಉದ್ಯಾನವನಗಳುಳ್ಳ ನಗರ) ನಗರದ ಉದ್ಯಾನಪ್ರದೇಶಗಳಲ್ಲೂ, ಕ್ರೀಡಿಸುವಂತೆ ಇಂತಹ ರಮ್ಯವಾದ ನದಿಯ ತೀರದ ಪವಿತ್ರವೂ ಮನೋಹರವೂ ಆದ ವನಪ್ರದೇಶಗಳಲ್ಲಿ ಯಾವಾಗಲೂ ಕ್ರೀಡಿಸುತ್ತಾರೆ.

ಭೂಮಯೋ ಬ್ರಾಹ್ಮಣಾದೀನಾಂ ಯಾಃ ಪ್ರೋಕ್ತಾ ವಾಸ್ತುಕರ್ಮಣಿ ।
ತಾ ಏವ ತೇಷಾಂ ಶಸ್ಯಂತೇ ದೇವತಾಯತನೇಷ್ವಪಿ ॥ ೧೬ ॥

ಚತುಃಷಷ್ಟಿಪದಂ ಕುರ್ಯಾದ್ದೇವತಾಯತನಂ ಸದಾ ।
ದ್ವಾರಂ ಚ ಮಧ್ಯಮಂ ತಸ್ಮಿನ್ ಸಮದಿಕ್ಸಂಪ್ರಶಸ್ಯತೇ ॥ ೧೭ ॥

ಯೋ ವಿಸ್ತಾರೋ ಭವೇತ್ತಸ್ಯ ದ್ವಿಗುಣಾ ತ ತ್ಸಮುನ್ನತಿಃ ।
ಉಚ್ಛ್ರಾಯ ಸ್ತುತೃತಿಯೋಽಥ ತೇನ ತುಲ್ಯೋ ಕಟಿರ್ಭವೇತ್ ॥ ೧೮ ॥

ವಿಸ್ತಾರಾರ್ಧೋ ಭವೇದ್ಗರ್ಭೋ ಭಿನ್ನಯೋನ್ಯಾಸ್ಸಮಂತತಃ ।
ಗರ್ಭಪಾದೋನವಿಸ್ತೀರ್ಣಂ ದ್ವಾರಂ ದ್ವಿಗುಣಮುಚ್ಛ್ರಿತಂ ॥ ೧೯ ॥

---

೧೬. ಬ್ರಾಹ್ಮಣಾದಿಗಳು ವಾಸಿಸಬೇಕಾದ ಮನೆಗಳಿಗೆ ವಾಸ್ತುಕರ್ಮಾದಿಗಳು ಅವಶ್ಯವೆಂದು ಉಕ್ತವಾಗಿರುವಂತೆ ದೇವಾಲಯಗಳಿಗೂ, ವಾಸ್ತುಕರ್ಮಗಳು ಅಗತ್ಯವೆಂದು ತಿಳಿಯಬೇಕು.

೧೭. ದೇವಾಲಯದ ಜಾಗವನ್ನು ಅರವತ್ತನಾಲ್ಕು ಪದಕಗಳ ಅಳತೆಯುಳ್ಳವಾಗಿರುವಂತೆ ರಚಿಸಬೇಕು. ಒಂಭತ್ತು ರೇಖೆಗಳನ್ನು ಊರ್ಧ್ವವಾಗಿಯೂ ಒಂಭತ್ತು ರೇಖೆಗಳನ್ನು ತಿರ್ಯಕ್ಕಾಗಿಯೂ ವಿನ್ಯಾಸಮಾಡಿದರೆ ಅರವತ್ತನಾಲ್ಕು ಪದಕಗಳಾಗುವುವು. ಅದರಲ್ಲಿ ಮಧ್ಯದ ಬಾಗಿಲು ಎರಡು ಕಡೆಗಳಿಂದಲೂ ಸಮಾನವಾದ ದೂರದಲ್ಲಿರಬೇಕು. ಹಾಗಿದ್ದರೆ ಶ್ರೇಷ್ಠವೆನಿಸುವುದು.

೧೮. ಬಾಗಿಲಿನ ಎತ್ತರವು ಬಾಗಿಲಿನ ಅಗಲದ ಎರಡರಷ್ಟಿರಬೇಕು, ಬಾಗಿಲಿನ ಚೌಕಟ್ಟಿನ ಅಗಲದ ಮೂರನೆಯ ಒಂದು ಭಾಗದಷ್ಟು ದಪ್ಪವಿರಬೇಕು. ಇದಕ್ಕೆ ಸಮನಾಗಿ ಕಟಿ ಪ್ರಮಾಣವಿರುವುದು.

೧೯. ಗರ್ಭಾಂಕಣವು ದೇವಾಲಯದ ಅಗಲದ ಅರ್ಧದಷ್ಟಿರಬೇಕು, ಇದರ ಸುತ್ತಲೂ ಬೇರೆಬೇರೆ ಪ್ರಮಾಣದ ಸಣ್ಣ ಗವಾಕ್ಷಗಳನ್ನು ಮಾಡಿರಬೇಕು. ಇದರ ಬಾಗಿಲು, ಗರ್ಭಾಂಕಣದ ಪ್ರಮಾಣಕ್ಕಿಂತ ಕಾಲುಭಾಗ ಕಡಿಮೆಯಾಗಿರಬೇಕು, ಎತ್ತರವು ಅಗಲದ ಎರಡರಷ್ಟಿರಬೇಕು.

ಉಚ್ಛ್ರಾಯಾತ್ಪಾದವಿಸ್ತೀರ್ಣಾ ಶಾಖಾ ತದ್ವದುದಂಬರೀ ।
ವಿಸ್ತರಾತ್ಪಾದಪ್ರತಿಮಾತ್ ಬಾಹುಲ್ಯಂ ಶೇಷಯೋಃ ಸ್ಮೃತಂ ॥ ೨೦ ॥

ನೃಪಂ ಚ ಸಪ್ತನವಭಿಃ ಶಾಖಾಭಿಸ್ತತ್ಪ್ರಶಸ್ಯತೇ ।
ಅಥ ಶಾಖಾಚತುರ್ಭಾಗೇ ಪ್ರತಿಹಾರೌ ನಿವೇಶಯೇತ್ ॥ ೨೧ ॥

ಶೈಲಮಾಂಗಲ್ಯವಿಹಗೈಃ ಶ್ರೀವೃಕ್ಷೈಃ ಸ್ವಸ್ತಿಕೈರ್ಘಟೈಃ ।
ಮಾನಾಷ್ಟಮೇನ ಭಾಗೇನ ಪ್ರತಿಮಾ ಸ್ಯಾತ್ಸಪಿಂಡಿಕಾ ॥ ೨೨ ॥

ದ್ವಿಭಾಗಾ ಪ್ರತಿಮಾ ತತ್ರ ತೃತೀಯೋ ಭಾಗಪಿಂಡಿಕಾ ।
ಪೂರ್ವೇ ಮೇರುರ್ಮಂದರ ಶ್ಚ ಕೈಲಾಸಶ್ಚ ತಥಾsಪರೇ ॥ ೨೩ ॥

---

೨೦. ಬಾಗಿಲು, ನಿಲುವಿನ ಎತ್ತರದ ಪ್ರಮಾಣಕ್ಕಿಂತ ಕಾಲುಭಾಗದಷ್ಟು ಹೆಚ್ಚು ಪ್ರಮಾಣವುಳ್ಳದಾಗಿರಬೇಕು. ಈ ಬಾಗಿಲನ್ನು ಅತ್ತಿಯ ಮರದ ಹಲಗೆಯಿಂದ ಮಾಡಿರಬೇಕು. ಕದದ ಮೇಲ್ತುದಿ ಕೆಳತುದಿಗಳು ಹೊಸಲು ದಾರಂದ ಇವುಗಳಿಗಿಂತ ಕಾಲುಭಾಗ ಉದ್ದವಾಗಿರಬೇಕು.

೨೧. ಕದದಲ್ಲಿ ಒಂದು, ಐದು, ಏಳು, ಅಥವಾ ಒಂಭತ್ತು, ವಿಭಾಗಗಳಿದ್ದರೆ ಪ್ರಶಸ್ತವು. ಚೌಕಟ್ಟಿನ ನಾಲ್ಕನೆಯ ಒಂದುಭಾಗದಲ್ಲಿ ದ್ವಾರಪಾಲಕರಿಬ್ಬರನ್ನು ಕೆತ್ತಬೇಕು.

೨೨. ಪರ್ವತ, ಶುಭಕರವಾದ ಹಂಸಪಕ್ಷಿ, ಬಿಲ್ವವೃಕ್ಷ, ಸ್ವಸ್ತಿಕಚಿಹ್ನೆ, ಕಲಶಗಳು ಇವುಗಳನ್ನು ಕದಗಳ ಮೇಲೆ ರಚಿಸಬೇಕು. ಗರ್ಭಾಂಕಣದ ಒಟ್ಟು ಅಳತೆಯ ಪ್ರಮಾಣದಮೇಲೆ ಪ್ರತಿಮೆಯನ್ನು ನಿರ್ಮಿಸುವ ಶಿಲಾಸಪಿಂಡಿಕೆಯನ್ನು ರಚಿಸಿಕೊಳ್ಳಬೇಕು.

೨೩. ಆ ಸಪಿಂಡಿಕಾ ಶಿಲೆಯ ಪ್ರಮಾಣದ ಮೂರುಭಾಗದಲ್ಲಿ ಎರಡುಭಾಗದಿಂದ ಪ್ರತಿಮೆಯನ್ನು ನಿರ್ಮಿಸಬೇಕು.ಉಳಿದ ಮೂರನೆಯ ಭಾಗವನ್ನು ಹಾಗೆಯೇ ಪಿಂಡಿಕೆಯಾಗಿ (ಪೀಠ) ನಿಲ್ಲಿಸಬೇಕು.

ಭವಂತಿ ಚಾಪರೇ ವೀರ ವಿಮಾನಂ ನಂದನಂ ತಥಾ ।
ಸಮುದ್ಗ ಪದ್ಮ ಗರುಡ ನಂದಿವರ್ಧನ ಕುಂಜರಾಃ ॥ ೨೪ ॥

ಗೃಹರಾಜೋ ವೃಷೋ ಹಂಸಃ ಸರ್ವತೋಭದ್ರಕೋ ಘಟಃ ।
ಸಿಂಹೋ ಚತುರ್ದ್ವಾರದಶಶ್ಚ ಷೋಡಶಾಷ್ಟಾಶ್ರಯಸ್ತಥಾ ॥ ೨೫ ॥

ಇತ್ಯೇತೇ ವಿಂಶತಿಃ ಪ್ರೋಕ್ತಾಃ ಪ್ರಾಸಾದಾ ಯದುನಂದನ ।
ಯಥೋಕ್ತಾನುಕ್ರಮೇಣೈವ ಲಕ್ಷಣಾನಿ ನಿಬೋಧ ಮೇ ॥ ೨೬ ॥

ನವತ್ರಿಂಶದುಚ್ಛ್ರಿತ ಮೇರುಃ ದ್ವಾದಶಭೌಮೋ ವಿವಿಧಕಂಧರಶ್ಚ ।
ದ್ವಾರೈರ್ಯತಶ್ಚತುರ್ಭಿಃ ದ್ವಾತ್ರಿಂಶದ್ಧಸ್ತ ವಿಸ್ತೀರ್ಣಃ ॥ ೨೭ ॥

ತ್ರಿಂಶದ್ಧಸ್ತಾಯಾಮೋ ದಶಭೌಮಸ್ಸಪ್ತಮಂದಾರಃ ।
ಶಿಖರಯುತಃ ಕೈಲಾಸೋಽಪಿ ಶಿಖರವಾನಷ್ಟಾವಿಂಶೋಽಷ್ಟ ಭೌಮಶ್ಚ ॥ ೨೮ ॥

---

೨೪. ಅಯ್ಯಾ ವೀರನೇ! ದೇವಾಲಯದ ರಚನೆಯಲ್ಲಿ ಮೇರು, ಮಂದರ, ಕೈಲಾಸ, ವಿಮಾನ, ನಂಧನ, ಸಮುದ್ಗ, ಪದ್ಮ, ಗರುಡ, ನಂದಿವರ್ಧನ, ಕುಂಜರ (ಗಜಪೃಷ್ಠ)

೨೫. ಗೃಹರಾಜ, ವೃಷ, ಹಂಸ, ಸರ್ವತೋಭದ್ರ, ಘಟ, ಸಿಂಹ, ಚತುಷ್ಕೋಣಾಶ್ರಯ, ಅಷ್ಟಕೋಣಾಶ್ರಯ, ದ್ವಾದಶಕೋಣಾಶ್ರಯ, ಷೋಡಷಕೋಣಾಶ್ರಯ ಎಂಬದಾಗಿ ಪ್ರಾಸಾದಗಳು ಇಪ್ಪತ್ತುವಿಧ.

೨೬. ಈಗ ಹೇಳಿರುವ ಕ್ರಮವಲ್ಲಿಯೇ ಇವುಗಳ ಲಕ್ಷಣವನ್ನು ಕ್ರಮವಾಗಿ ಒಂದೊಂದಾಗಿ ಹೇಳುವೆನು ಕೇಳು; ಎಂದು ಮುಂದೆ ಹೇಳುವಂತೆ ಹೇಳಿದನು.

೨೭. ಮೂವತ್ತೊಂಭತ್ತು ಹಸ್ತ ಎತ್ತರ, ನೆಲದ ಅಳತೆಯು, ಹನ್ನೆರಡುಹಸ್ತ ಇದ್ದು ಬಗೆಬಗೆಯ ಗುಹೆಗಳು, ನಾಲ್ಕು ಬಾಗಿಲುಗಳು, ಉಳ್ಳ ದೇವಾಲಯುವನ್ನು ಮೇರು ಎನ್ನುವರು.

೨೮. ಮೂವತ್ತು ಹಸ್ತ ಉದ್ದ, ಹತ್ತುಹಸ್ತ ಅಗಲ ಇದ್ದು ಏಳು ಶಿಖರವುಳ್ಳದ್ದನ್ನು ಮಂದರ ಎನ್ನುವರು. ಇಪ್ಪತ್ತೆಂಟು ಹಸ್ತ ಉದ್ದ, ಎಂಟು ಹಸ್ತ ಅಗಲ, ಉಳ್ಳದ್ದನ್ನು ಕೈಲಾಸವೆಂದು ಕರೆಯುವರು.

ಜಾಲಗವಾಕ್ಷೈರ್ಯುಕ್ತೋ ವಿಮಾನಸಂಜ್ಞಸ್ತ್ರಿಸಪ್ತಕಾಯಾಮಃ ।
ನಂದನ ಇತಿ ವೈ ಭೌಮೋ ದ್ವಾತ್ರಿಂಶತ್ ಷೋಡಶಾಂಗಯುತಃ ॥ ೨೯ ॥

ವೃತ್ತಸ್ಸಮುದ್ಗನಾಮಾ ಪದ್ಮಾಕೃತಿರಯಂ ಚಾಷ್ಟೌ ।
ಶೃಂಗೇಣೈಕೇನ ಭವೇತ್ ಏಕೇನ ಚ ಭೂಮಿಕಾ ತಸ್ಯ ॥ ೩೦ ॥

ಗರುಡಾಕೃತಿ ಶ್ಚ ಗರುಡೋ ನಂದೀ ವೈ ಷಷ್ಟಿ ವಿಸ್ತೀರ್ಣಃ ।
ಕಾಯಶ್ಚ ಸಪ್ತಭೌಮೋ ವಿಭೂಷಿತೋಂಗೈಶ್ಚ ಸಪ್ತವಿಂಶತಿಭಿಃ ॥ ೩೧ ॥

ಕುಂಜರ ಇತಿ ಗಜಪೃಷ್ಠಃ ಷೋಡಶಹಸ್ತೋಚ್ಛ್ರಿತೋ ಮಧ್ಯೇ ।
ಗೃಹರಾಜಃ ಷೋಡಶಕಃ ತ್ರಿಚಕ್ರಶಾಲಾ ಭವೇದ್ವಲಭೀ ॥ ೩೨ ॥

ವೃಷ ಏವ ಭೂಮಿಶೃಂಗೋ ದ್ವಾದಶಹಸ್ತಃ ಸಮುನ್ನತೋ ವೃತ್ತಃ ।
ಹಂಸೋ ಹಂಸಾಕಾರೋ ಘಟೋಽಷ್ಟಸಹಸ್ರಕಲಶರೂಪಃ ॥ ೩೩ ॥

---

೨೯. ಜಾಲ ಗವಾಕ್ಷಗಳಿಂದ ಕೂಡಿ ಇಪ್ಪತ್ತೊಂದು ಹಸ್ತ ಉದ್ದವುಳ್ಳದ್ದನ್ನು ವಿಮಾನವೆಂದೂ, ಮೂವತ್ತೆರಡು ಹಸ್ತ ಉದ್ದ, ಹದಿನಾರು ಹಸ್ತ ಅಗಲ ವುಳ್ಳದ್ದನ್ನು ನಂದನವೆಂದೂ ಹೇಳುವರು.

೩೦. ದುಂಡಾಗಿರುವ ಗರ್ಭಾಂಕಣವುಳ್ಳದ್ದನ್ನು ಸಮುದ್ಗವೆಂದೂ, ಎಂಟು ಹಸ್ತ ಉದ್ದ ಅಷ್ಟೇ ಅಗಲವಿದ್ದು ತಾವರೆಯ ಎಸಳಿನಂತಿದ್ದರೆ ಪದ್ಮವೆಂದೂ, ಗರುಡನ ಆಕಾರವಾಗಿ ಒಂದೇ ಶೃಂಗ (ಗೋಪುರ) ಒಂದೇ ಭೂಮಿಕೆ ಇದ್ದರೆ ಗರುಡ ಎಂದೂ,

೩೧. ಅರವತ್ತು ಹಸ್ತ ವಿಸ್ತೀರ್ಣ (ಸುತ್ತಳತೆ) ಉಳ್ಳದ್ದಾಗಿದ್ದರೆ ನಂದಿ ಯೆಂತಲೂ, ಇಪ್ಪತ್ತೇಳು ಹಸ್ತ ಉದ್ದ, ಏಳು ಮೊಳ ಅಗಲವಿದ್ದರೆ ಕುಂಜರ ಅಥವಾ ಗಜಪೃಷ್ಠವೆಂದೂ,

೩೨. ಮಧ್ಯದಲ್ಲಿ ಹದಿನಾರು ಹಸ್ತ ಎತ್ತರವಿದ್ದು ತ್ರಿಚಕ್ರಶಾಲೆಯೂ ಸೂಗು ಪಟ್ಟಿಯೂ ಇದ್ದರೆ ಗೃಹರಾಜವೆಂದೂ, ತಿಳಿಯಬೇಕು.

೩೩. ಸಮುನ್ನತವಾಗಿ ವೃತ್ತಾಕಾರವೂ ಹನ್ನೆರಡು ಮೊಳ ವ್ಯಾಸವುಳ್ಳದ್ದೂ ಒಂದೇ ಗೋಪುರದಿಂದ ಕೂಡಿದುದೂ ಆಗಿದ್ದರೆ ವೃಷವೆಂದೂ ಕರೆಯಲ್ಪಡುವುದು. ಹಂಸದ ಆಕಾರವುಳ್ಳ ಆಲಯವು ಹಂಸವೆಂದೂ, ಎಂಟು ಸಹಸ್ರ ಕಲಶಗಳ ಸ್ವರೂಪ ವುಳ್ಳದ್ದು ಘಟವೆಂದೂ ಉಕ್ತವಾಗಿದೆ.

ದ್ವಾರೈರ್ಯುತಶ್ಚತುರ್ಭಿಃ ಬಹುಶಿಖರೋ ಭವತಿ ಸರ್ವತೋಭದ್ರಃ ।
ಬಹುರುಚಿರಚಂದ್ರಶಾಲಃ ಷಡ್ವಿಂಶದ್ಭಾಗಭೂಮಿಶ್ಚ ॥ ೩೪ ॥

ಸಿಂಹಃ ಸಿಂಹಾಕಾರೋ ದ್ವಾದಶಕೋಣೋऽಷ್ಟಹಸ್ತಶ್ಚ ॥ ೩೫ ॥

ಸಹಸ್ರತ್ರಿತಯಂ ಚೈವ ಕಥಿತಂ ವಿಶ್ವಕರ್ಮಣಾ ।
ಪ್ರಾಹುಃ ಸ್ಥಾಪಯ ತಶ್ಚಾತ್ರ ಮತಮೇಕಂ ವಿಪಶ್ಚಿತಃ ॥ ೩೬ ॥

ಕಪೋತಪಾಲಿನೀಯುಕ್ತಮತೋ ಗಚ್ಛತಿ ತುಲ್ಯತಾಂ ॥ ೩೭ ॥

॥ ಸಾಂಬ ಉವಾಚ ॥

ಯ ಏತೇ ಕಥಿತಾ ವಿಪ್ರ ಪ್ರಾಸಾದಾ ವಿಂಶತಿಸ್ತ್ವಯಾ ।
ತೇಷಾಂ ಸೂರ್ಯಸ್ಯ ಕಃ ಕಾರ್ಯಃ ಪ್ರಾಸಾದೋ ಭಾಸ್ಕರಸ್ಯ ತು ॥ ೩೮ ॥

---

೩೪. ನಾಲ್ಕುಕಡೆ ಬಾಗಿಲುಗಳೂ ಅನೇಕ ಶಿಖರಗಳೂ ಉಳ್ಳದ್ದು ಸರ್ವತೋಭದ್ರವೆಂದೂ, ಬಹುಪ್ರಕಾರವಾದ ಚಂದ್ರಶಾಲೆಯಿದ್ದು ಇಪ್ಪತ್ತಾರು ಹಸ್ತ ಉದ್ದವಿದ್ದರೆ ಸಿಂಹವೆಂದೂ ಹೇಳಲ್ಪಟ್ಟಿದೆ.

೩೫. ನಾಲ್ಕು ಮೂಲೆಗಳುಳ್ಳದ್ದು ಚತುಷ್ಕೋಣವೆಂದೂ, ಎಂಟು ಮೂಲೆಗಳುಳ್ಳದ್ದು ಅಷ್ಟಕೋಣವೆಂದೂ, ಹನ್ನೆರಡು ಮೂಲೆಗಳುಳ್ಳದ್ದು ದ್ವಾದಶಕೋಣವೆಂದೂ,

೩೬. ಹದಿನಾರು ಮೂಲೆಗಳುಳ್ಳದ್ದು ಷೋಡಶಕೋಣವೆಂತಲೂ ಹೇಳುವರು. ವಿಶ್ವಕರ್ಮನು ಇವೇ ಮುಂತಾದ ಮೂರುಸಹಸ್ರ ಪ್ರಭೇದಗಳಿವೆಯೆಂದು ಹೇಳಿರುವನು.

೩೭. ಇದೆಲ್ಲಾ ಆಲಯವನ್ನು ನಿರ್ಮಾಣಮಾಡುವ ವಿದ್ವಾಂಸನ ಮತವನ್ನು (ಅಭಿಪ್ರಾಯವನ್ನು) ಅನುಸರಿಸುವುದು. ಆಲಯವು ಪಾರಿವಾಳಗಳ ವಾಸಕ್ಕೆ ಅನುಕೂಲವಾದ ಸೂರುಪಟ್ಟಿಗಳಿಂದ(ವಲಭಿಗಳಿಂದ) ಕೂಡಿದ್ದರೆ, ಆ ಪುಣ್ಯವು ದೇವಾಲಯ ನಿರ್ಮಾಣದಿಂದ ಬರುವ ಪುಣ್ಯಕ್ಕೆ ಸಮವಾದುದೆಂದು ತಿಳಿಯಬೇಕು ಎಂದನು.

೩೮. ಸಾಂಬನು ನಾರದನನ್ನು ಕುರಿತು ಕೇಳುತ್ತಾನೆ. ಅಯ್ಯಾ ಬ್ರಾಹ್ಮಣೋತ್ತಮನೇ! ನೀನು ಹೇಳಿದ ಈ ಇಪ್ಪತ್ತು ಬಗೆಯ ಪ್ರಾಸಾದಗಳಲ್ಲಿ ಭಾಸ್ಕರನಾದ ಸೂರ್ಯನಿಗೆ ಯಾವುದನ್ನು ಕಟ್ಟಿಸಬೇಕು ?

ಸ್ಥಾನಾನಿ ಯಾನಿ ಚೋಕ್ತಾನಿ ಪ್ರಾಸಾದಸ್ಯ ದ್ವಿಜೋತ್ತಮ ।
ತೇಷಾಂ ತ್ವಯೋಕ್ತಂ ಹಿ ಪುರಂ ವ್ಯಯವದ್ಭಿರ್ನರೈರ್ಯುತಂ ॥ ೩೯ ॥

ಯಸ್ಮಿನ್ ಪ್ರದೇಶೇ ವೈ ಕಾರ್ಯಂ ಭಾನೋರ್ಮಂದಿರಮುತ್ತಮಂ ।
ದಿಶಾಂ ಭಾಗೇ ಚ ಕತಮೇ ಬ್ರೂಹಿ ಶೇಷಂ ದ್ವಿಜೋತ್ತಮ ॥ ೪೦ ॥

॥ ನಾರದ ಉವಾಚ ॥

ಪುರಮಧ್ಯಂ ಸಮಾಶ್ರಿತ್ಯ ಕುರ್ಯಾದಾಯತನಂ ರವೇಃ ।
ದಿಶಾಂ ಭಾಗೇಽಥವಾ ಪೂರ್ವೇ ಪೂರ್ವದ್ವಾರಸಮೀಪತಃ ॥ ೪೧ ॥

ಭೂಮಿಂ ಪರೀಕ್ಷ್ಯ ಪೂರ್ವಂ ತು ಕುರ್ಯಾದಾಯತನಂ ತತಃ ।
ಇಷ್ಟಗಂಧ ರಸೋಪೇತಾ ನಿಮ್ನಾ ಭೂಮಿಃ ಪ್ರಶಸ್ಯತೇ ॥ ೪೨ ॥

---

೩೯. ಪ್ರಾಸಾದಗಳನ್ನು ಕಟ್ಟುವುದಕ್ಕೆ ಅರ್ಹವಾದ ಸ್ಥಾನಗಳು ಯಾವುದೆಂಬುದನ್ನು ಹೇಳುವಾಗ, ಧಾರಾಳವಾಗಿ ಖರ್ಚುಮಾಡುವ ಸ್ವಭಾವವುಳ್ಳ ಜನರಿಂದ ಕೂಡಿದ ಪಟ್ಟಣವು ಒಂದೆಂದು ನೀನು ಹೇಳಿದೆಯಲ್ಲವೇ?

೪೦. ಆ ನಗರದಲ್ಲಿ ಯಾವಪ್ರದೇಶವು ಭಾನುವಿನ ಉತ್ತಮವಾದ ಮಂದಿರವನ್ನು ಕಟ್ಟುವುದಕ್ಕೆ ಯೋಗ್ಯವಾಗುವುದು? ಆಲಯದ ಯಾವ ದಿಗ್ಭಾಗದಲ್ಲಿ ಏನೇನು ಏರ್ಪಾಡುಮಾಡಬೇಕು? ಎಂಬುದನ್ನು ದಯವಿಟ್ಟು ತಿಳಿಸಬೇಕೆಂದು ಪ್ರಾರ್ಥಿಸಿದನು.

೪೧. ಇದನ್ನು ಕೇಳಿ ನಾರದರು ಸಾಂಬನನ್ನು ಕುರಿತು ಹೇಳುತ್ತಾರೆ ಸಾಮಾನ್ಯವಾಗಿ ಪಟ್ಟಣದ ಮಧ್ಯಭಾಗದಲ್ಲಿ ಸೂರ್ಯದೇವಾಲಯವನ್ನು ರಚಿಸಬೇಕು. ಊರಿನ ಪೂರ್ವದಿಕ್ಕಿನಲ್ಲಿಯಾಗಲಿ ಅಥವಾ ಪೂರ್ವ ದಿಗ್ದ್ವಾರಕ್ಕೆ ಹತ್ತಿರದಲ್ಲಿಯಾಗಲಿ. ಭೂಮಿಯನ್ನು ಶೋಧಿಸಿ ಚೆನ್ನಾಗಿ ಪರೀಕ್ಷೆಮಾಡಿ ಸೂರ್ಯಾಲಯವನ್ನು ನಿರ್ಮಾಣಮಾಡಬಹುದು ಎಂದರು.

೪೨. ಹಿತವಾದ ವಾಸನೆ ಮತ್ತು ರುಚಿ ಇವುಗಳಿಂದ ಕೂಡಿದ ಮಣ್ಣುಳ್ಳದೂ ಸ್ವಲ್ಪ ಇಳಿಜಾರಾದುದು ಆದ ಭೂಮಿಯು ದೇವಾಲಯವನ್ನು ಕಟ್ಟುವುದಕ್ಕೆ ಪ್ರಶಸ್ತವಾದುದು.

ಶರ್ಕರಾತುಷಕೇಶಾಸ್ಥಿ ಕ್ಷಾರಾಂಗಾರವಿವರ್ಜಿತಾ ।
ಮೇಘದುಂದುಭಿನಿರ್ಘೋಷಾ ಸರ್ವಬೀಜಪ್ರರೋಹಿಣೀ ॥ ೪೩ ॥

ಶುಕ್ಲಾ ರಕ್ತಾ ತಥಾ ಪೀತಾ ಕೃಷ್ಣಾ ಚ ಕಥಿತಾ ಕ್ಷಿತಿಃ ।
ದ್ವಿಜರಾಜನ್ಯವೈಶ್ಯಾನಾಂ ಶೂದ್ರಾಣಾಂ ಚ ಯಥಾಕ್ರಮಂ ॥ ೪೪ ॥

ಪರೀಕ್ಷಿತಾಯಾಂ ತಸ್ಯಾಂ ತು ಮಧ್ಯೇ ತಸ್ಯಾಃ ಪ್ರಮಾಣತಃ ।
ಉಪಲಿಪ್ಯ ಚತುರ್ಹಸ್ತಂ ಚತುರಸ್ರಂ ಸಮಂತತಃ ॥ ೪೫ ॥

ಹಸ್ತಮಾತ್ರಮಧಃ ಖಾತ್ವಾ ಮಧ್ಯೇ ತಸ್ಯ ದಶಾಂಗುಲಂ ।
ಗರ್ತಮುತ್ಕೀರ್ಯ ತೇನೈವ ಪಾಂಸುನಾ ಪ್ರತಿಪೂರಯೇತ್ ॥ ೪೬ ॥

---

೪೩. ನೊರಜು, ಕಲ್ಲು, ಹೊಟ್ಟು, ಕೂದಲು, ಮೂಳೆ, ಕರಲು ಅಥವಾ ಚೌಳು, ಇದ್ದಲು, ಈವು ಯಾವುವೂ ಇರದಂತೆ ಆ ಸ್ಥಳದ ಭೂಮಿಯನ್ನು ಚೆನ್ನಾಗಿ ಶೋಧಿಸಬೇಕು. ಮೇಘೋದಯವಾಗಿ ಗುಡುಗಿದ ಕೂಡಲೆ ಸಮಸ್ತ ಬೀಜಗಳಲ್ಲೂ ಮೊಳಕೆಯನ್ನುತ್ಪಾದನೆಮಾಡುವ ಸಾಮರ್ಥ್ಯವುಳ್ಳ ಫಲವತ್ತಾದ ಭೂಮಿಯಾಗಿರಬೇಕು.

೪೪. ಆ ದೇವಾಲಯವನ್ನು ಕಟ್ಟಿಸುವವನ ಜಾತಿಗೆ ತಕ್ಕಂತೆ ಎಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಈ ನಾಲ್ಕು ವರ್ಣಗಳಿಗೂ ಕ್ರಮವಾಗಿ ಬಿಳಿಯಮಣ್ಣು, ಕೆಮ್ಮಣ್ಣು, ಹಳದಿಯಮಣ್ಣು, ಕರಿಯಮಣ್ಣು ಉಳ್ಳ ಭೂಮಿಯು ಯೋಗ್ಯವಾದುದೆಂದು ತಿಳಿಯಬೇಕು.

೪೫. ಶೋಧಿಸಿದ ಆ ಭೂಮಿಯಲ್ಲಿ ಪ್ರಮಾಣಾನುಸಾರ ನಾಲ್ಕುಹಸ್ತ ಅಳತೆಯ ಚಚ್ಚೌಕವಾದ ಪ್ರದೇಶವನ್ನು ಸಾರಿಸಬೇಕು.

೪೬. ಅಲ್ಲಿ ಒಂದು ಹಸ್ತ ಆಳಕ್ಕೆ ನೆಲವನ್ನು ಅಗೆದು ಅದರ ಮಧ್ಯದಲ್ಲಿ ಹತ್ತು ಅಂಗುಲ ಆಳದ ಒಂದು ಗುಳಿಯನ್ನು ತೋಡಬೇಕು. ಹೀಗೆ ತೋಡಿ ಆ ಹಳ್ಳದಿಂದ ಬಂದ ಮಣ್ಣನ್ನು ಮೇಲಕ್ಕೆ ಹಾಕಿ ಪುನಃ ಆ ಹುಡಿಮಣ್ಣನ್ನು ಆ ಗುಳಿಗೇ ತುಂಬಬೇಕು.

ಸಮೇ ಸಮಗುಣಾ ಜ್ಞೇಯಾ ಹೀನೇ ಹೀನಗುಣಾ ಭವೇತ್ ।
ವರ್ಧಮಾನೇ ತು ವೈ ಪಾಂಸೌ ಭವೇದ್ವೃದ್ಧಿಕರೀ ಕ್ಷಿತಿಃ ॥ ೪೭ ॥

ನಿತ್ಯಂ ಸಮ್ಮುಖಮರ್ಕಸ್ಯ ಕದಾಚಿತ್ಪಶ್ಚಿಮಾಮುಖಂ ।
ಸ್ಥಾಪನೀಯಂ ಗೃಹಂ ಸಮ್ಯಕ್ಪ್ರಾಙ್ಮುಖಸ್ಥಾನಕಲ್ಪನಾತ್ ॥ ೪೮ ॥

ಭವನಾದ್ದಕ್ಷಿಣೇ ಪಾರ್ಶ್ವೇ ರವೇಃ ಸ್ನಾನಗೃಹಂ ಭವೇತ್ ।
ಅಗ್ನಿಹೋತ್ರಗೃಹಂ ಕಾರ್ಯಂ ರವೇರುತ್ತರತಃ ಶುಭಂ ॥ ೪೯ ॥

ಉದಙ್ಮುಖಂ ಭವೇಚ್ಛಂಭೋರ್ಮಾತೄಣಾಂ ಗೃಹಮೇವ ಚ ।
ಬ್ರಹ್ಮಾ ಪಶ್ಚಿಮತಃ ಸ್ಥಾಪ್ಯೋ ವಿಷ್ಣುರುತ್ತರತಸ್ತಥಾ ॥
ನಿಕ್ಷುಭಾ ದಕ್ಷಿಣೇ ಪಾರ್ಶ್ವೇ ವಾಮೇ ರಾಜ್ಞೀ ಪ್ರಕೀರ್ತಿತಾ ॥ ೫೦ ॥

---

೪೭. ಹೀಗೆ ಮುಚ್ಚುವಾಗ ತೋಡಿದ್ದ ಹುಡಿಮಣ್ಣು ಗುಳಿಯನ್ನು ತುಂಬುವಷ್ಟು ಮಾತ್ರಕ್ಕೆ ಸರಿಹೋಗಿ ಉಳಿಯದೇ ಹೋದರೆ ಆ ಸ್ಥಳವು ಸಮಗುಣವುಳ್ಳದೆಂದು ತಿಳಿಯಬೇಕು. ಮಣ್ಣು ಸಾಲದೇ ಕಡಿಮೆಯಾದರೆ ಆ ಭೂಮಿಯು ಹೀನ ಗುಣವುಳ್ಳದ್ದೆಂದು ನಿಶ್ಚಯಿಸಬೇಕು. ಮಣ್ಣು ಗುಳಿತುಂಬಿ ಇನ್ನೂ ಸ್ವಲ್ಪ ಉಳಿದರೆ ಆ ಭೂಮಿಯು ವೃದ್ಧಿಕರವಾದುದೆಂದು ತಿಳಿಯಬೇಕು.

೪೮. ಯಾವಾಗಲೂ ಸೂರ್ಯಪ್ರತಿಮೆಯನ್ನು ಪೂರ್ವಾಭಿಮುಖವಾಗಿ ಪ್ರತಿಷ್ಠೆ ಮಾಡಲು ಅನುಕೂಲವಾಗುವಂತೆ ದೇವಾಲಯವನ್ನು ರಚಿಸಬೇಕು. ಅಪೂರ್ವವಾಗಿ ಒಂದೊಂದುಕಡೆ ಹಾಗೆ ಸಾಧ್ಯವಾಗದೇ ಹೋದರೆ ಪಶ್ಚಿಮಾಭಿಮುಖವಾಗಿರಬಹುದು.

೪೯. ದೇವಾಲಯದ ದಕ್ಷಿಣದಿಕ್ಕಿನಲ್ಲಿ ಸೂರ್ಯನ ಅಭಿಷೇಕಗೃಹವನ್ನು ಏರ್ಪಡಿಸಬೇಕು. ದೇವಾಲಯದ ಉತ್ತರದಿಕ್ಕಿನಲ್ಲಿ ಸೂರ್ಯನಿಗೆ ಶುಭಕರವಾದ ಅಗ್ನಿಹೋತ್ರಗೃಹ ಎಂದರೆ ಯಾಗಶಾಲೆಯನ್ನೇರ್ಪಡಿಸಬೇಕು.

೫೦. ಶಂಭು, ಸಪ್ತಮಾತೃಕೆಯರು ಇವರನ್ನು ಪ್ರತಿಷ್ಠಿಸುವ ಕೋಣೆಗಳು ಉತ್ತರಾಭಿಮುಖವಾಗಿರಬೇಕು. ಬ್ರಹ್ಮನನ್ನು ಪಶ್ಚಿಮಾಭಿಮುಖವಾಗಿಯೂ, ವಿಷ್ಣುವನ್ನು ಉತ್ತರಾಭಿಮುಖವಾಗಿಯೂ, ಸ್ಥಾಪಿಸಬೇಕು. ಸೂರ್ಯಪ್ರತಿಮೆಯ ಬಲಭಾಗದಲ್ಲಿ ನಿಕ್ಷುಭಾದೇವಿಯೂ ಎಡಗಡೆ ರಾಜ್ಞೀದೇವಿಯೂ ಇರಬೇಕೆಂದು ಹೇಳಿದೆ.

ಪಿಂಗಲೋ ದಕ್ಷಿಣೇ ಭಾನೋರ್ವಾಮತೋ ದಂಡನಾಯಕಃ ।
ಶ್ರೀ ಮಹಾಶ್ವೇತಯೋಃ ಸ್ಥಾನಂ ಪುರತಸ್ತ್ವಂಶುಮಾಲಿನಃ ॥ ೫೧ ॥

ತತಃ ಸ್ಥಾಪ್ಯಾಶ್ವಿನೋಃ ಸ್ಥಾನಂ ಪೂರ್ವದೇವಗೃಹಾದ್ಬಹಿಃ ।
ದ್ವಿತೀಯಾಯಾಂ ತು ಕಕ್ಷಾಯಾಂ ರಾಜ್ಞಾಸ್ರೌಷೌ ವ್ಯವಸ್ಥಿತೌ ॥ ೫೨ ॥

ತೃತೀಯಾಯಾಂ ತು ಕಕ್ಷಾಯಾಂ ಸ್ಥಿತೌ ಕಲ್ಮಾಷಪಕ್ಷಿಣೌ ।
ಜಂಡಕಾಮುಚರೌ ಸ್ಥಾಪ್ಯೌ ದಕ್ಷಿಣಾಂ ದಿಶಮಾಸ್ಥಿತೌ ॥ ೫೩ ॥

ಉದೀಚ್ಯಾಂ ಸ್ಥಾಪನೀಯಸ್ತು ಕುಬೇರೋ ಲೋಕಪೂಜಿತಃ ।
ಉತ್ತರೇಣ ತತಸ್ತಸ್ಯ ರೇವತಃ ಸವಿನಾಯಕಃ ॥ ೫೪ ॥

ಯತ್ರ ವಾ ವಿದ್ಯತೇ ಸ್ಥಾನಂ ದಿಕ್ಷು ಸರ್ವಾ ಗುಹಾದಯಃ ।
ದ್ವೇ ಮಂಡಲೇಽರ್ಘ್ಯ ದಾನಾರ್ಥಂ ಕಾರ್ಯೇ ಸವ್ಯಾಪಸವ್ಯತಃ ॥ ೫೫ ॥

---

೫೧. ಹೀಗೆಯೇ ಸೂರ್ಯನ ಬಲಗಡೆ ಪಿಂಗಳ, ಎಡಗಡೆ ದಂಡನಾಯಕ, ಸೂರ್ಯನ ಎದುರಿಗೆ ಶ್ರೀ, ಮತ್ತು ಮಹಾಶ್ವೇತಾ, ಎಂಬ ಮಂತ್ರಾಭಿಮಾನ ದೇವತೆಗಳು ಇವರಿಗೆ ಸ್ಥಾನವನ್ನು ಕಲ್ಪಿಸಬೇಕು.

೫೨. ದೇವರಮನೆಯ (ಗರ್ಭಾಂಕಣ) ಹೊರಗೆ ಪೂರ್ವದಕಡೆ ಅಶ್ವಿನೀ ದೇವತೆಗಳಿಗೆ ಸ್ಥಾನವನ್ನು ಕಲ್ಪಿಸಬೇಕು.

೫೩. ಎರಡನೆಯ ಸುತ್ತಿನಲ್ಲಿ ರಾಜ್ಞ, ಸ್ರೌಷ ಇವರಿಬ್ಬರಿಗೂ ಅವಕಾಶ ಕಲ್ಪಿಸಬೇಕು. ಮೂರನೆಯ ಆವರಣದಲ್ಲಿ ಕಲ್ಮಾಷ, ಪಕ್ಷಿ (ಗರುಡ) ಇವರು ಇರಬೇಕು. ಜಂಡ, ಕಾಮುಚರ ಎಂಬಿಬ್ಬರನ್ನೂ ಗರ್ಭಗೃಹದ ದಕ್ಷಿಣದಿಕ್ಕಿನಲ್ಲಿ ಹೊರಗೆ ಸ್ಥಾಪಿಸಬೇಕು.

೫೪. ಗರ್ಭಗೃಹದ ಉತ್ತರದಿಕ್ಕಿನಕಡೆ ಹೊರಗೆ ಲೋಕಪೂಜ್ಯನಾದ ಕುಬೇರನನ್ನು ಪ್ರತಿಷ್ಠಿಸಬೇಕು. ಮತ್ತು ಅಲ್ಲಿಯೇ ವಿನಾಯಕ ರೇವತ ಇವರನ್ನೂ ಪ್ರತಿಷ್ಠೆ ಮಾಡಬೇಕು.

೫೫. ಕಾರ್ತಿಕೇಯ (ಗುಹ) ಮುಂತಾದ ಉಳಿದ ಎಲ್ಲರನ್ನೂ ಸ್ಥಳವಿರುವ ದಿಕ್ಕುಗಳಲ್ಲಿ ಸ್ಥಾಪಿಸಬೇಕು. ಅರ್ಘ್ಯಪ್ರದಾನ ಮಾಡುವುದಕೋಸ್ಕರ ವಿಗ್ರಹದ ಮುಂದೆ ಎಡಬಲಗಳಲ್ಲಿ ಎರಡು ಮಂಡಲಗಳನ್ನು ರಚಿಸಬೇಕು.

ದದ್ಯಾದುದಯವೇಲಾಯಾಂ ಅರ್ಘ್ಯಂ ಸೂರ್ಯಾಯ ದಕ್ಷಿಣೇ ।
ಉತ್ತರೇ ಮಂಡಲೇ ದದ್ಯಾದರ್ಘ್ಯಮಸ್ತಮನೇ ರವೇಃ ॥ ೫೬ ॥

ಚಕ್ರಾಕೃತಿಂ ತಥಾsನ್ಯಸ್ಮಿನ್ ದೇವಸ್ಯ ಪ್ರತಿಮಾಂ ರವೇಃ ।
ಸ್ಥಾಪಯೇದ್ವಿಧಿವದ್ವೀರ ಚತುರ್ಭಿಃ ಕಲಶೈಃ ಶುಭೈಃ ॥ ೫೭ ॥

ನಾನಾ ತೂರ್ಯನಿನಾದೈಶ್ಚ ಶಂಖಶಬ್ದೈಶ್ಚ ಪುಷ್ಕಲೈಃ ।
ತೃತೀಯೇ ಮಂಡಲೇ ಹ್ಯೇವಂ ಪೂಜನೀಯೋ ದಿವಾಕರಃ ॥ ೫೮ ॥

ಚತುರಸ್ರಂ ಚತುಃಶೃಂಗಂ ವ್ಯೋಮ ದೇವಗೃಹಾಗ್ರತಃ ।
ಪ್ರತಿಮಾಯಾಸ್ತು ಸೂತ್ರೇಣ ಕಾರ್ಯಂ ಮಧ್ಯೇsಸ್ಯ ಮಂಡಲಂ ॥ ೫೯ ॥

ದಿಂಡೀ ಸ್ಥಾಪ್ಯಃ ಪುರಸ್ತಸ್ಮಾದಾದಿತ್ಯಾಭಿಮುಖಃ ಸ್ಥಿತಃ ।
ಯದೇತತ್ಕಥಿತಂ ವ್ಯೋಮ ಸರ್ವದೇವಮಯಂ ಮಯಾ ॥ ೬೦ ॥

---

೫೬. ಉದಯಕಾಲದಲ್ಲಿ ಸೂರ್ಯನಿಗೆ (ದಕ್ಷಿಣ) ಬಲಭಾಗದಲ್ಲಿ ರಚಿಸಿರುವ ಮಂಡಲದಲ್ಲಿ ಅರ್ಘ್ಯ ಕೊಡಬೇಕು. ಅಸ್ತಮಯಕಾಲದಲ್ಲಿ ಸೂರ್ಯನಿಗೆ ಉತ್ತರಭಾಗದ ಮಂಡಲದಲ್ಲಿ ಅರ್ಘ್ಯ ಕೊಡಬೇಕು.

೫೭. ಅಯ್ಯಾ ವೀರನೆ! ಶುಭಕರಗಳಾದ ನಾಲ್ಕು ಕಲಶಗಳ ಮಧ್ಯೆ ಚಕ್ರಾಕಾರವಾಗಿರುವ ಇನ್ನೊಂದು ಮಂಡಲವನ್ನು ರಚಿಸಿ ಸೂರ್ಯಮಂಡಲಯಂತ್ರವನ್ನು ವಿಧಿಪ್ರಕಾರ ಆ ಮಂಡಲದಲ್ಲಿ ಇರಿಸಬೇಕು.

೫೮. ಅನೇಕ ವಾದ್ಯಧ್ವನಿಗಳೂ ಬಹಳವಾದ ಶಂಖಧ್ವನಿಗಳೂ ಆಗುತ್ತಿರುವಾಗ, ಮೂರನೆಯ ಮಂಡಲದಲ್ಲಿ ಸೂರ್ಯಯಂತ್ರವನ್ನು ನಾಲ್ಕುಕಲಶದ ಮಧ್ಯೆ ಇಟ್ಟು ಪೂಜಿಸಬೇಕು.

೫೯. ಗರ್ಭಗೃಹದ ಒಳಗೆ ಮೇಲುಭಾಗದಲ್ಲಿ ಚೌಕನಾಗಿಯೂ ನಾಲ್ಕು ಶಿಖರವುಳ್ಳದ್ದಾಗಿಯೂ ಇರುವ ಭುವನೇಶ್ವರಿಯನ್ನು ವಿರಚಿಸಬೇಕು. ಸೂರ್ಯ ಪ್ರತಿಮೆಯನ್ನೇ ಮಧ್ಯದಲ್ಲಿ ಉಳ್ಳಂತೆ ಎಂದರೆ ಪ್ರತಿಮೆಯಸುತ್ತಲೂ ಸೂತ್ರಗಳು ಪ್ರಸರಿಸಿ ಕಾಣುವಂತೆ ಮಂಡಲವನ್ನು ರಚಿಸಬೇಕು.

೬೦. ಸೂರ್ಯನಿಗೆ ಅಭಿಮುಖವಾಗಿರುವಂತೆ ದಿಂಡಿಯ ವಿಗ್ರಹವನ್ನು ಮುಂಭಾದಲ್ಲಿಯೇ ಸ್ಥಾಪಿಸಬೇಕು. ಅಯ್ಯಾ ಯದುಕುಮಾರನೇ! ಸರ್ವದೇವಮಯವೆಂದು ನಾನು ಹೇಳಿದ ವ್ಯೋಮಕ್ಕೆ ಮಾಧ್ಯಾಹ್ನಕಾಲದಲ್ಲಿ ಅರ್ಘ್ಯವನ್ನು ಕೊಡಬೇಕು

ಮಧ್ಯಾಹ್ನೇ ತಸ್ಯ ದಾತವ್ಯಂ ಅರ್ಘ್ಯಮತ್ರ ಯದೂತ್ತಮ ।
ಅಥ ವಾ ಮಂಡಲಂ ಚಾನ್ಯತ್ತೃತೀಯಂ ಚಕ್ರಸಂಮಿತಂ ॥ ೬೧ ॥

ಸ್ಥಾಪಯಿತ್ವಾ ತು ದೇವೇಶಂ ದಾತವ್ಯೋಽರ್ಘ್ಯಃ ಸುಪಂಡಿತೈಃ ।
ದೇವಸ್ಯ ಪುರತಃ ಕಾರ್ಯಂ ವ್ಯೋಮಸ್ಥಾನಂ ಸಮೀಪತಃ ॥
ಪುರಾಣವಾಚನಸ್ಥಾನಮಥ ವಾ ಯತ್ರ ರೋಚತೇ ॥ ೬೨ ॥

ಏಷಃ ಸ್ಥಾನವಿಧಿಃ ಪ್ರೋಕ್ತೋ ದೇವತಾನಾಂ ಯಥಾಕ್ರಮಂ ।
ಗುಹರಾಜ್ಞೋಽಥ ರುದ್ರಸ್ತು ದ್ವಾವೇತೌ ಭಾಸ್ಕರಪ್ರಿಯೌ ॥ ೬೩ ॥

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇ ಪರ್ವಣಿ ಸಪ್ತಮೀ ಕಲ್ಪೇ ಸಾಂಬೋಪಾಖ್ಯಾನೇ ಪ್ರಾಸಾದ ಲಕ್ಷಣವರ್ಣನಂ ನಾಮ ತ್ರಿಂಶದುತ್ತರಶತತಮೋಽಧ್ಯಾಯಃ.**

---

೬೧. ಅಥವಾ ಚಕ್ರಾಕಾರವಾದ ಇನ್ನೊಂದು ಮೂರನೆಯ ಮಂಡಲವನ್ನು ರಚಿಸಿ ಅದರಲ್ಲಿಯಾದರೂ ಅರ್ಘ್ಯವನ್ನು ಕ್ರಮವಾಗಿಕೊಡಬೇಕು.

೬೨ ವಿದ್ವಾಂಸರಾದವರು ದೇವೇಶನಾದ ಸೂರ್ಯನನ್ನು ಪ್ರತಿಸ್ಥಾಪನೆಮಾಡಿಯೇ ಅರ್ಘ್ಯಕೊಡಬೇಕು. ದೇವರ ಎದುರಿಗೆ ಸಮೀಪದಲ್ಲಿಯೇ ವ್ಯೋಮಕ್ಕೆ ಸ್ಥಾನವನ್ನು ಕಲ್ಪಿಸಬೇಕು.

೬೩. ಅಥವಾ ಪುರಾಣ ಹೇಳುವ ಸ್ಥಳದಲ್ಲಿಯಾಗಲಿ, ನಮಗೆ ಇಷ್ಟಬಂದ ಮತ್ತೆಲ್ಲಿಯಾದರೂ ವ್ಯೋಮಕ್ಕೆ ಸ್ಥಾನವನ್ನು ಕಲ್ಪಿಸಬಹುದು. ಅಯ್ಯಾ ಸಾಂಬನೇ ! ಈ ರೀತಿ ದೇವತೆಗಳ ಸ್ಥಾನಗಳನ್ನು ನಿರ್ದೇಶಮಾಡುವ ಕ್ರಮವನ್ನು ಹೇಳಿದುದಾಯಿತು. ಷಣ್ಮುಖನೂ ಮತ್ತು ರುದ್ರನೂ ಸೂರ್ಯನಿಗೆ ಅತ್ಯಂತ ಪ್ರಿಯರೆನಿಸುವರು. ಎಂದು ನಾರದರು ಸಾಂಬನಿಗೆ ಹೇಳಿದರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಸಾಂಬೋಪಾಖ್ಯಾನದಲ್ಲಿ ಪ್ರಾಸಾದ ಲಕ್ಷಣವನ್ನು ತಿಳಿಸುವ ನೂರಮೂವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಏಕತ್ರಿಂಶದುತ್ತರಶತತಮೋಽಧ್ಯಾಯಃ

॥ ನಾರದ ಉವಾಚ ॥

**ಅಥ ತೇ ಸಂಪ್ರವಕ್ಷ್ಯಾಮಿ ಪ್ರತಿಮಾವಿಧಿವಿಸ್ತರಂ ।**
**ಸರ್ವೇಷಾಮೇವ ದೇವಾನಾಂ ಆದಿತ್ಯಸ್ಯ ವಿಶೇಷತಃ ॥ ೧ ॥**

**ಅರ್ಚಾ ಸಪ್ತವಿಧಾ ಪ್ರೋಕ್ತಾ ಭಕ್ತಾನಾಂ ಶುಭವೃದ್ಧಯೇ ।**
**ಕಾಂಚನೀ ರಾಜತೀ ತಾಮ್ರೀ ಪಾರ್ಥಿವೀ ಶೈಲಜಾ ಸ್ಮೃತಾ ॥ ೨ ॥**

**ವಾರ್ಕ್ಷೀ ಚಾಲೇಖ್ಯಕಾ ಚೇತಿ ಮೂರ್ತಿಸ್ಥಾನಾನಿ ಸಪ್ತ ವೈ ।**
**ವಾರ್ಕ್ಷೀ ವಿಧಾನಂ ತೇ ವೀರ ವರ್ಣಯಿಷ್ಯಾಮ್ಯಶೇಷತಃ ॥ ೩ ॥**

---

### ನೂರಮೂವತ್ತೊಂದನೆಯ ಅಧ್ಯಾಯ

೧. ನಾರದಮುನಿವರ್ಯರು ಹೇಳುತ್ತಾರೆ— ಈಗ ಎಲ್ಲಾ ದೇವತೆಗಳ ಪ್ರತಿಮಾ ವಿಧಿಯನ್ನು, ವಿಶೇಷವಾಗಿ ಸೂರ್ಯನ ಪ್ರತಿಮಾವಿಧಿಯನ್ನೂ ನಿನಗೆ ಹೇಳುವೆನು.

೨. ಭಕ್ತರಿಗೆ ಶುಭವೃದ್ಧಿಯಾಗಲು ಏಳುಬಗೆಯಾದ ಪ್ರತೀಕಗಳು ಉಕ್ತವಾಗಿವೆ. ಸುವರ್ಣಪ್ರತಿಮಾ, ರಜತಪ್ರತಿಮಾ, ತಾಮ್ರಪ್ರತಿಮಾ, ಪಾರ್ಥಿವ (ಮಣ್ಣಿನ) ಪ್ರತಿಮಾ, ಶಿಲಾಪ್ರತಿಮಾ,

೩. ಮರದಿಂದಮಾಡಿದ ಪ್ರತಿಮೆ, ಚಿತ್ರಪ್ರತಿಮೆ ಹೀಗೆ ಏಳು ಬಗೆಯ ಮೂರ್ತಿಗಳುಂಟು. ಈಗ ನಿನಗೆ ಮರದ ಪ್ರತಿಮೆಯನ್ನು ಮಾಡುವ ವಿಧಾನವನ್ನು ಸಮಗ್ರವಾಗಿ ಹೇಳುವೆನು ಕೇಳು ಎಂದರು.

ಕರ್ತ್ರನುಕೂಲೇ ದಿವಸೇ ಸಂವತ್ಸರವಿಶೋಧಿತೇ ।
ಶುಭೈರ್ನಿಮಿತ್ತೈಃ ಶಕುನೈಃ ಪ್ರಸ್ಥಾನೈಶ್ಚ ವನಂ ವಿಶೇತ್ ॥ ೪ ॥

ಕ್ಷೀರಿಣೋ ವರ್ಜಿತಾಃ ಸರ್ವೇ ದುರ್ಬಲಾಸ್ತೇ ಸ್ವಭಾವತಃ ।
ಚತುಷ್ಪಥೇಷು ನ ಗ್ರಾಹ್ಯಾ ಯೇ ಚ ಪುತ್ರಕವೃಕ್ಷಕಾಃ ॥ ೫ ॥

ದೇವತಾಯತನಸ್ಥಾಶ್ಚ ತಥಾ ವಲ್ಮೀಕಸಂಭವಾಃ ।
ಉತ್ಕೀರ್ಣಾ ದೇವತಾ ಯೇಷು ಚೈತ್ಯವೃಕ್ಷಾಶ್ಚ ಯೇ ಸ್ಮೃತಾಃ ॥ ೬ ॥

ಸ್ಮಶಾನಭೂಮಿಜಾ ಯೇ ಚ ಪಕ್ಷಿಣಾಂ ನಿಲಯಾಶ್ಚ ಯೇ ।
ಸಕೋಟರಾಶ್ಚ ಯೇ ವೃಕ್ಷಾ ಶುಷ್ಕಾಗ್ರಾ ಯೇ ಚ ಪಾದಪಾಃ ॥ ೭ ॥

---

೪. ಸಂವತ್ಸರದಲ್ಲಿ ಕರ್ತೃವಿಗೆ ಚಂದ್ರತಾರಾಬಲಯುಕ್ತವಾಗಿ ದಿನಶುದ್ಧಿ ಅನುಕೂಲವಾದ ದಿವಸವನ್ನು ಹುಡುಕಿಕೊಂಡು ಶುಭಶಕುನಗಳು ನಿಮಿತ್ತಗಳು ಇವುಗಳನ್ನು ನೋಡಿಕೊಂಡು ವನವನ್ನು ಪ್ರವೇಶಮಾಡಬೇಕು.

೫. ಪ್ರತಿಮೆಮಾಡುವುದಕ್ಕೆ ಮರವನ್ನು ಆರಿಸುವಾಗ, ಹಾಲು ಬರುವ ಎಲ್ಲಾ ಮರಗಳನ್ನೂ ಬಿಡಬೇಕು. ಏಕೆಂದರೆ ಅವೆಲ್ಲವೂ ಬಲಹೀನಗಳು. ನಾಲ್ಕುದಾರಿ ಸೇರುವ ಚೌಕದಲ್ಲಿ ಬೆಳೆದಿರುವ ಮರಗಳನ್ನು ಪ್ರತಿಮೆಮಾಡುವುದಕ್ಕೆ ಗ್ರಹಿಸಬಾರದು. ಎಳೆಯ ಮರಗಳೂ ಸಹ ಪ್ರತಿಮಾನಿರ್ಮಾಣಕ್ಕೆ ಯೋಗ್ಯವಾದುವುಗಳಲ್ಲವೆಂದು ತಿಳಿಯಬೇಕು.

೬. ದೇವಾಲಯದ ಪ್ರಾಕಾರದಲ್ಲಿ ಬೆಳೆದಿರುವ ಮರಗಳೂ, ಹುತ್ತಗಳ ಮೇಲೆ ಬೆಳೆದಿರುವ ವೃಕ್ಷಗಳೂ, ದೇವತಾಪ್ರತಿಮೆಗಳನ್ನು ಕೆತ್ತಿರುವ ಮರಗಳೂ ಆಯತನಗಳನ್ನು ಕಟ್ಟಿರುವ ಮರಗಳೂ, ಪ್ರತಿಮಾನಿರ್ಮಾಣಕ್ಕೆ ಯೋಗ್ಯವಲ್ಲ.

೭. ಸ್ಮಶಾನಭೂಮಿಯಲ್ಲಿ ಹುಟ್ಟಿರುವ ಮರಗಳೂ, ಪಕ್ಷಿಗಳಿಗೆ ವಾಸಸ್ಥಾನಗಳಾಗಿರುವ ವೃಕ್ಷಗಳೂ, ಮತ್ತು ಪೊಟ್ಟರೆಗಳುಳ್ಳ ಮರಗಳೂ, ತುದಿ ಒಣಗಿರುವ ಮರಗಳೂ ಸಹ ಪ್ರತಿಮಾ ನಿರ್ಮಾಣಕ್ಕೆ ಯೋಗ್ಯವಲ್ಲ. ಆದುದರಿಂದ ಅವುಗಳನ್ನು ಉಪಯೋಗಿಸಿ ಪ್ರತಿಮೆಗಳನ್ನು ಮಾಡಬಾರದು.

ಶಸ್ತ್ರೇಣ ನಿಹತಾ ಯೇ ಚ ಕುಂಜರಾಶಾಸ್ತಥಾ ಕೃತಾಃ ।
ಸಾಮಾದ್ಯಾಃ ಸರುಜೋಽಥಶ್ಚ ವ್ಯಾಧಿನಶ್ಚ ತಥೈವ ಚ ॥ ೮ ॥

ಅಕಾಲೇ ಪುಷ್ಪಿತಾ ಯೇ ಚ ಕಾಲೇ ತೈಶ್ಚ ವಿವರ್ಜಿತಾಃ ।
ಶೀರ್ಣಪರ್ಣಾಶ್ಚ ತರವೋ ರಕ್ಷೋಧ್ವಾಂಕ್ಷ ನಿಷೇವಿತಾಃ ॥ ೯ ॥

ಏಕಶಾಖಾ ದ್ವಿಶಾಖಾಶ್ಚ ತ್ರಿಶಾಖಾಶ್ಚ ತಥಾಽಧಮಾಃ ।
ಮಧೂಕೋ ದೇವದಾರುಶ್ಚ ವೃಕ್ಷರಾಜಶ್ಚ ಚಂದನಃ ॥
ಬಿಲ್ವಶ್ಚಾಮ್ರಾತಕಶ್ಚೈವ ಖದಿರೋಽಥಾಽಂಜನಸ್ತಥಾ ॥ ೧೦ ॥

ನಿಂಬಃ ಶ್ರೀಪರ್ಣವೃಕ್ಷಶ್ಚ ಪನಸಃ ಸರಲೋಽರ್ಜುನಃ ।
ರಕ್ತಚಂದನಪರ್ಯಂತಾಃ ಶ್ರೇಷ್ಠಾಃ ಸ್ಯುಃ ಪ್ರತಿಮಾದ್ರುಮಾಃ ॥ ೧೧ ॥

ವರ್ಣಾನಾಮಾನುಪೂರ್ವ್ಯೇಣ ದ್ವೌ ದ್ವೌ ವೃಕ್ಷೌ ಪ್ರಕೀರ್ತಿತೌ ।
ನಿಂಬಾದ್ಯಾಃ ಸರ್ವವರ್ಣಾನಾಂ ವೃಕ್ಷಾಃ ಸಾಧಾರಣಾಃ ಸ್ಮೃತಾಃ ॥ ೧೨ ॥

---

೮. ಶಸ್ತ್ರದಿಂದ ಕಡಿಯಲ್ಪಟ್ಟವೂ, ಆನೆಗಳಿಗೆ ಆಹಾರವಾದ ಮರಗಳೂ, ಸಾಮ ಮೊದಲಾದ ರೋಗಹತ್ತಿದ ಮರಗಳೂ, ಇತರ ವ್ಯಾಧಿಯುಕ್ತವಾದ ಮರಗಳೂ, ಕೂಡದು.

೯. ಅಕಾಲದಲ್ಲಿ ಹೂಬಿಡುವ ಮರಗಳೂ, ಸಕಾಲದಲ್ಲಿ ಹೂಬಿಡದೇ ಇರುವ ಮರಗಳೂ, ಎಲೆ ಉದುರಿದ ವೃಕ್ಷಗಳೂ, ಬ್ರಹ್ಮರಾಕ್ಷಸರಿಗೆ ವಾಸಸ್ಥಾನವಾದ ಮರಗಳೂ, ಕಾಗೆಗಳು ಗೂಡು ಕಟ್ಟಿರುವ ವೃಕ್ಷಗಳೂ ಸಹ, ಪ್ರತಿಮೆಯ ನಿರ್ಮಾಣಕ್ಕೆ ಅಯೋಗ್ಯವೆನಿಸುವುವು.

೧೦. ಮತ್ತು ಕೇವಲ ಒಂದು ಕೊಂಬೆ, ಎರಡು ಅಥವಾ ಮೂರು- ಕೊಂಬೆಗಳಿಂದ ಕೂಡಿರುವ ಮರಗಳೂ ಸಹ ಅಧಮ ವೃಕ್ಷಗಳೆಂದು ತಿಳಿಯಬೇಕು. ಹಿಪ್ಪೆ, ದೇವದಾರು, ವೃಕ್ಷರಾಜವಾದ ಚಂದನ, ಬಿಲ್ವವೃಕ್ಷ ಅಮಟೆಯಮರ, ಕಗ್ಗಲಿ, ಅಂಜನ ವೃಕ್ಷ ಇವುಗಳು.

೧೧. ಬೇವಿನಮರ, ಬಿಲ್ವಪತ್ರೆಯ ಮರ, ಹಲಸು, ಸರಳ, ಮತ್ತಿ, ರಕ್ತ ಚಂದನ ಇವುಗಳು ಪ್ರತಿಮೆಯನ್ನು ಮಾಡಲು ಅರ್ಹವಾದ ಮರಗಳೆನಿಸುವುವು.

೧೨. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ವರ್ಣಗಳ ಆನುಪೂರ್ವಿಯಿಂದ ಒಂದೊಂದು ವರ್ಣದವರಿಗೆ ಎರಡೆರಡು ಮರಗಳೆಂದು ಗೊತ್ತಾಗಿದೆ.

ಕಥ್ಯಮಾನಾನ್ವಿಶೇಷೇಣ ಶೃಣು ವೀರ ತಥ್ಯಾಪರಾನ್ ।
ಸುರದಾರುಃ ಶಮೀ ಚೈವ ಮಧೂಕಶ್ಚಂದನಸ್ತಥಾ ॥
ಏತೇ ವೈ ತರವಸ್ತಾತ ಬ್ರಾಹ್ಮಣಾನಾಂ ಶುಭಾಃ ಸ್ಮೃತಾಃ । ॥ ೧೩ ॥

ಕ್ಷತ್ರಸ್ಯ ಚ ತಥಾರಿಷ್ಟಃ ಖದಿರಸ್ತಿಂದುಕಸ್ತಥಾ ।
ಅಶ್ವತ್ಥಶ್ಚ ತಥಾ ಸಾಂಬ ದ್ರುಮಃ ಕರಕತಃ ಶುಭಃ ॥ ೧೪ ॥

ವೈಶ್ಯಾನಾಂ ತದ್ವದೇವ ಸ್ಯುಃ ಖದಿರಶ್ಚಂದನ ಸ್ತಥಾ ।
ಪುಣ್ಯಾಶ್ಚ ತರವಶ್ಚೈವ ಶುಭದಾಸ್ತು ತಥೈವ ಚ ॥ ೧೫ ॥

ಕೇಸರಃ ಸರ್ಜಕಶ್ಚಾಮ್ರಃ ಶಾಲವೃಕ್ಷಸ್ತಥೇತರಃ ।
ಏತೇ ವೈ ತರವಃ ಪುಣ್ಯಾಃ ಶೂದ್ರಾಣಾಂ ಶುಭದಾಯಕಾಃ ॥ ೧೬ ॥

ಲಿಂಗಂ ಚ ಪ್ರತಿಮಾಂ ಚೈವಮುಪಸ್ಥಾಪ್ಯ ಯಥಾವಿಧಿ ।
ವೃಕ್ಷಂ ಚಾಭಿಮತಂ ಗತ್ವಾ ಪೂಜಯೇದ್ಬಲಿಪುಷ್ಪಕೈಃ ॥ ೧೭ ॥

---

೧೩. ಬೇವು ಮೊದಲಾದ ವೃಕ್ಷಗಳು ಎಲ್ಲಾ ಜಾತಿಯವರು ಪ್ರತಿಮಾ ರಚನೆಗೆ ಉಪಯೋಗಿಸಬಹುದಾದ ಸಾಮಾನ್ಯ ವೃಕ್ಷಗಳಾಗಿವೆ. ಅಯ್ಯಾ ವೀರನೇ! ಒಂದೊಂದು ವರ್ಣದವರಿಗೆ ವಿಶೇಷವಾದುದು ಎಂದರೆ ಶ್ರೇಷ್ಠವಾದುದನ್ನು ಈಗ ಪ್ರತ್ಯೇಕವಾಗಿ ಹೇಳುವೆನು ಕೇಳು.

೧೪. ದೇವದಾರು,ಬನ್ನಿ, ಹಿಪ್ಪೆ, ಕೆಂಪುಚಂದನ ಇವು ಬ್ರಾಹ್ಮಣರು ಪ್ರತಿಮೆ ಮಾಡಿಸುವುದಕ್ಕೆ ಯೋಗ್ಯವಾದ ಮರಗಳು. ಕ್ಷತ್ರಿಯರಿಗೆ ಅರಿಷ್ಟ (ಅರಟುವಾಳ) ಕಗ್ಗಲಿ, ತಿಂದುಕ, (ತೂಪರಮರ) ಅರಳಿ, ಕರಕತ ಈ ಮರಗಳು ಶ್ರೇಷ್ಠವಾದುವುಗಳು.

೧೫. ಹೀಗೆಯೇ ವೈಶ್ಯರಿಗೆ ಕಗ್ಗಲಿ, ಚಂದನ, ಮುಂತಾದ ಪುಣ್ಯವೃಕ್ಷಗಳು ಶುಭಕರವಾದುವು.

೧೬. ಶೂದ್ರರಿಗೆ ಕೇಸರ, ಸರ್ಜಕ, ಮಾವು, ಸಾಲವೃಕ್ಷ, ಮುಂತಾದ ಪುಣ್ಯಕರವಾದ ಮರಗಳು ಪ್ರತಿಮೆಗೆ ಶುಭಕರಗಳಾದುವು.

೧೭. ಲಿಂಗವನ್ನಾಗಲೀ ಪ್ರತಿಮೆಯನ್ನಾಗಲಿ ಹೀಗೆ ವಿಧಿಪ್ರಕಾರ ರಚಿಸುವುದಕ್ಕೋಸ್ಕರ ಮೊದಲು ಅಭಿಮತವಾದ ವೃಕ್ಷದಬಳಿಗೆ ಹೋಗಿ ಆ ವೃಕ್ಷಕ್ಕೆ ಧೂಪ ದೀಪ ನೈವೇದ್ಯಾದಿಗಳಿಂದ ಪೂಜೆಮಾಡಬೇಕು.

**ಶುಚೌ ದೇಶೇ ವಿವಿಕ್ತೇ ಚ ಕೇಶಾಂಗಾರವಿವರ್ಜಿತೇ ।**
**ಪ್ರಾಗುದಕ್ಪ್ರೊಚಿತೇ ದೇಶೇ ಲೋಕಕಷ್ಟವಿವರ್ಜಿತೇ ॥ ೧೮ ॥**

**ವಿಸ್ತೀರ್ಣಸ್ಕಂಧವಿಟಪಃ ಪತ್ರವಾನೃಜುವೃದ್ಧಿಗಃ ।**
**ಆತಂಕಹೀನೋ ವಿವಶಃ ಸತ್ವಕ್ಪರ್ಣಃ ಶುಭಸ್ತಥಾ ॥ ೧೯ ॥**

**ಸ್ವೇನೈವ ಪತಿತೌ ಯೇ ಚ ಹಸ್ತಿಭಿಃ ಪತಿತಾಸ್ತಥಾ ।**
**ಶುಷ್ಕಾಶ್ಚ ವಹ್ನಿದುಗ್ಧಾಶ್ಚ ಪಕ್ಷಿಭಿಶ್ಚಾಪಿ ವರ್ಜಿತಾಃ ॥ ೨೦ ॥**

**ತರವೋ ವರ್ಜನೀಯಾಶ್ಚ ಗೃಹಿತವ್ಯಾಃ ಶುಭಾ ದ್ರುಮಾಃ ।**
**ಸ್ನಿಗ್ಧರೂಪಾಃ ಸ ಪರ್ಣಾಶ್ಚ ಸಪುಷ್ಪಾಃ ಸಫಲಾಸ್ತಥಾ ॥ ೨೧ ॥**

---

೧೮. ಮರೆಯಾದ ಪ್ರದೇಶದಲ್ಲಿರತಕ್ಕದ್ದು, ಮರದ ಕೆಳಗೆ ಕೂದಲು ಇದ್ದಿಲು ಮುಂತಾದುವುಗಳಿಲ್ಲದೆ•ಇರುವಂತಹದೂ ಮರದ ಪೂರ್ವದಿಕ್ಕಿನಲ್ಲಿಯಾಗಲೀ ಉತ್ತರ ದಿಕ್ಕಿನಲ್ಲಿಯಾಗಲೀ ಪ್ರಸರಿಸಿ ಇರುವುದೂ, ಲೋಕಕ್ಕೆ ಸಂಭವಿಸಬಹುದಾದ ಯಾವ ತೊಂದರೆಯೂ ಇಲ್ಲದಿರುವ ಸ್ಥಳದಲ್ಲಿರುವುದೂ,

೧೯. ತಾಳೂ, ಕೊಂಬೆಗಳೂ ವಿಸ್ತಾರವಾಗಿ ಹರಡಿರುವುದೂ, ಪ್ರಶಸ್ತವಾದ ಎಲೆಗಳುಳ್ಳದ್ದೂ, ನೇರವಾಗಿ ಬೆಳೆದಿರುವುದೂ, ಯಾವ ತೊಂದರೆಯೂ ಭಯವೂ ಇಲ್ಲ ದುದೂ, ಪರಾಶ್ರಯವಿಲ್ಲದುದ್ದೂ,ತೊಗಟೆ ಮತ್ತು ಎಲೆ ಉದುರದೆ ಶುಭಕರವಾದುದೂ ಆಗಿರುವ ಮರಗಳು ಪ್ರತಿಮೆಗಳನ್ನು ಮಾಡಿಸಲು ಅರ್ಹವಾದುವುಗಳು.

೨೦. ತಾವಾಗಿ ಬಿದ್ದುಹೋದ ಮರಗಳು, ಆನೆಗಳು ಉರುಳಿಸಿದ ಮರಗಳು, ತಾನಾಗಿ ಒಣಗಿದ ಮರಗಳು, ಕಾಳ್ಕಿಚ್ಚಿನಿಂದ ಸುಟ್ಟಮರಗಳು, ಪಕ್ಷಿಗಳ ವಾಸವಿಲ್ಲದ ಮರಗಳು, ಇಂಥವನ್ನು ವರ್ಜ್ಯಮಾಡಿ ಉತ್ತಮವೂ ಶುಭಕರವೂ ಆದ ವೃಕ್ಷಗಳನ್ನೇ ಆರಿಸಿಕೊಳ್ಳಬೇಕು.

೨೧. ಮನೋಹರವಾಗಿ ಮಿಂಚುವ ಬಣ್ಣದ ಎಲೆಗಳುಳ್ಳ ಮರಗಳೂ, ಪುಷ್ಪ ಫಲಯುಕ್ತವಾದ ಮರಗಳೂ ಇವೆಲ್ಲವೂ ಪ್ರತಿಮಾ ರಚನೆಗೆ ಶುಭಕರಗಳು.

ತೇಷಾಂ ತು ಗ್ರಹಣಂ ಚಾಷ್ಟಮಾಸೇಷು ಕಾರ್ತಿಕಾದಿಷು ।
ಭೂತ್ವಾ ಶುಭೇ ದಿನೇ ಚೈವ ಸೋಪವಾಸೋಧಿವಾಸಯೇತ್ ॥ ೨೨ ॥

ಸಮಂತಾದುಪಲಿಪ್ಯಾಥ ತಸ್ಯಾಧಸ್ತಾದ್ವಸುಂಧರಾಂ ।
ಗಾಯತ್ರ್ಯಾ ಪರಿಪೂತೇನ ಪರಿತಃ ಪ್ರೋಕ್ಷ್ಯ ವಾರಿಣಾ ॥ ೨೩ ॥

ಶುಕ್ಲೇ ಚ ಪರಿಧೂತೇಂ ಚ ಪರಿಧಾಯ ಚ ವಾಸಸೀ ।
ಪೂಜಯೇದ್ಗಂಧಮಾಲ್ಯೈಶ್ಚ ಸಧೂಪಬಲಿಕರ್ಮಭಿಃ ॥ ೨೪ ॥

ತತಃ ಕುಶೈಃ ಪರಿಸ್ತೀರ್ಣೇ ಹುತ್ವಾಗ್ನೌ ತಸ್ಯ ಚಾಂತಿಕೇ ।
ದೇವದಾರುಸಮಿದ್ಭಿಶ್ಚ ಮಂತ್ರೇಣಾನೇನ ತತ್ವವಿತ್ ॥ ೨೫ ॥

ಓಂ ಭೂರ್ಭುವಸ್ಸುವರಿತಿ ತತೋ ವೃಕ್ಷಂ ಚ ಪೂಜಯೇತ್ ।
ಓಂ ಪ್ರಜಾಪತಯೇ ಸತ್ಯಸಂಧಾಯ ನಿತ್ಯಂ ॥
ಶ್ರೇಷ್ಠಾಂತರಾತ್ಮನ್ ಸಚರಾಚರಾತ್ಮನ್ ।

---

೨೨. ಇವುಗಳನ್ನು ಸಂಗ್ರಹಿಸಲು ಕಾರ್ತಿಕ ಮೊದಲುಗೊಂಡು ಎಂಟು ತಿಂಗಳು ಶ್ರೇಷ್ಠವು. ದಿನಶುದ್ಧಿ ಚೆನ್ನಾಗಿರುವ ಶುಭದಿನದಲ್ಲಿ ಉಪವಾಸಮಾಡಿ ಆ ಮರದ ಕೆಳಗೆ ವಾಸಿಸಬೇಕು.

೨೩. ಆಮರದ ಕೆಳಗೆ ಸುತ್ತಲೂ ನೆಲವನ್ನು ಸಾರಿಸಿ ಗಾಯತ್ರೀ ಮಂತ್ರದಿಂದ ಪರಿಶುದ್ಧವಾದ ನೀರನ್ನು ತೆಗೆದುಕೊಂಡು ಅಲ್ಲಿ ಪ್ರೋಕ್ಷಣೆ ಮಾಡಬೇಕು.

೨೪. ಬೆಳ್ಳಗಿರುವ ಎರಡು ಬಟ್ಟೆಗಳನ್ನು ಕೊಡವಿ ಉಟ್ಟುಕೊಂಡು ಗಂಧ ಪುಷ್ಪಾದಿಗಳನ್ನೂ ಧೂಪ ದೈವೇದ್ಯಗಳನ್ನೂ ಸಮರ್ಪಿಸಿ ಆ ಮರವನ್ನು ಪೂಜಿಸಬೇಕು.

೨೫. ಅನಂತರ ಆ ಮರದ ಸಮೀಪದಲ್ಲಿ ಅಗ್ನಿಯನ್ನು ಸ್ಥಾಪಿಸಿ ದರ್ಭೆಯಿಂದ ಅಗ್ನಿಯ ಸುತ್ತ ಪರಿಸ್ತರಣವನ್ನು ಏರ್ಪಡಿಸಿ ತತ್ವಜ್ಞನಾದವನು ದೇವದಾರುಸಮಿತ್ತಿನಿಂದ ಈ ಮುಂದಿನ ಮಂತ್ರಪೂರ್ವಕವಾಗಿ ಹೋಮಮಾಡಬೇಕು.

೨೬. "ಓಂ ಭೂರ್ಭುವಃ ಸುವಃ" ಎಂಬ ವ್ಯಾಹೃತಿ ಮಂತ್ರಪೂರ್ವಕವಾಗಿ ಹೋಮಮಾಡಬೇಕು. ಬಳಿಕ ಮರವನ್ನು ಪೂಜಿಸಬೇಕು. ಓಂ ಪ್ರಜಾಪತಿ,

ಸಾನ್ನಿಧ್ಯಮಸ್ಮಿನ್ ಕುರು ದೇವ ವೃಕ್ಷೇ ।
ಸೂರ್ಯಾವೃತಂ ಮಂಡಲಮಾವಿಶ ತ್ವಂ ॥ ೨೬ ॥

॥ ನಾರದ ಉವಾಚ ॥

ಏವಂ ಸಂಪೂಜಯಿತ್ವಾ ತು ವಾಕ್ಯೈಸ್ತಂ ಪರಿಸಾಂತ್ವಯೇತ್ ।
ವೃಕ್ಷಲೋಕಸ್ಯ ಶಾಂತ್ಯರ್ಥಂ ಗಚ್ಛ ದೇವಾಲಯಂ ಶುಭಂ ॥ ೨೭ ॥

ದೇವ ತ್ವಂ ಸ್ಥಾಸ್ಯಸೇ ತತ್ರ ಚ್ಛೇದದಾಹವಿವರ್ಜಿತಃ ।
ಕಾಲೇ ಧೂಪಪ್ರದಾನೇನ ಸಪುಷ್ಪೈರ್ಬಲಿಕರ್ಮಭಿಃ ॥ ೨೮ ॥

ಲೋಕಾಸ್ತ್ವಾಂ ಪೂಜಯಿಷ್ಯಂತಿ ತತೋ ಯಾಸ್ಯಸಿ ನಿರ್ವೃತಿಂ ।
ವೃಕ್ಷಮೂಲೇ ಕುಠಾರಂ ತು ಧೂಪಮಾಲ್ಯೈಃ ಪ್ರಪೂಜ್ಯ ಚ ॥ ೨೯ ॥

ಪೂರ್ವತಸ್ತು ಶಿರಃ ಕೃತ್ವಾ ಸ್ಥಾಪನೀಯಃ ಪ್ರಯತ್ನತಃ ।
ಪರಮಾನ್ನಮೋದಕೌದನ ಫಲ ಪೂಪಿಕಾದಿಭಿರ್ಭಕ್ಷ್ಯೈಃ ॥ ೩೦ ॥

---

ಸತ್ಯಸಂಧ, ಶ್ರೇಷ್ಠಾಂತರಾತ್ಮನಾದ ಚರಾಚರ ಸ್ವರೂಪನೆ! ಈ ವೃಕ್ಷದಲ್ಲಿ ಸಾನ್ನಿಧ್ಯವನ್ನು ಮಾಡು. ಸೂರ್ಯಾವೃತನಾಗಿ ಮಂಡಲವನ್ನು ಪ್ರವೇಶಿಸು ' ಎಂದು ಹೇಳಬೇಕು.

೨೭. ನಾರದರು ಹೇಳುತ್ತಾರೆ—ಈ ರೀತಿಯಾಗಿ ಆ ಮರವನ್ನು ಪೂಜಿಸಿ ವೃಕ್ಷಸಮೂಹಕ್ಕೆ ಶಾಂತಿಯುಂಟಾಗುವುದಕ್ಕಾಗಿ ಈ ಮುಂದಿನ ವಾಕ್ಯಗಳಿಂದ ಅದನ್ನು ಸಂತೈಸಿ ಬಳಿಕ ದೇವಾಲಯಕ್ಕೆ ಹೋಗಬೇಕು.

೨೮. ಎಲೈ ವೃಕ್ಷವೇ! ಛೇದ (ಕಡಿಯುವುದು) ದಾಹ (ಬೆಂಕಿಯ ಹೊಡೆತ) ಇವುಗಳಿಗೆ ಸಿಕ್ಕದೆ ಇರುವ ನಿನ್ನ ಸೇವಾರ್ಥಕ್ಕಾಗಿ ಜನಗಳು ನೀನಿರುವ ಕಡೆಗೆ ಧೂಪ ದೀಪ ಪುಷ್ಪಗಳನ್ನು ಒದಗಿಸಿ ತಂದು ನಿನ್ನನ್ನು ಪೂಜಿಸಿ ನಿನಗೆ ಬಲಿಸಮರ್ಪಣ ಮಾಡುತ್ತಾರೆ.

೨೯. ಆ ರೀತಿ ಪೂಜೆಮಾಡುವುದರಿಂದ ನಿನಗೆ ಸೌಖ್ಯವುಂಟಾಗುತ್ತದೆ. ಎಂದು ಹೇಳಿ ಮರದ ಬುಡದಲ್ಲಿ ಕೊಡಲಿಯನ್ನು ಇಡಬೇಕು.

೩೦–೩೨. ಯಾವ ಮರದ ಕೊಂಬೆಯನ್ನು ಕಡಿಯಬೇಕೋ ಆ ವೃಕ್ಷದ ಬುಡದಲ್ಲಿ ಪ್ರಯತ್ನಪೂರ್ವಕವಾಗಿ ಪೂರ್ವದಿಕ್ಕಿಗೆ ತಲೆಮಾಡಿ ಕೊಡಲಿಯನ್ನಿಟ್ಟು

ಮದ್ಯೈಃ ಕುಸುಮೈರ್ಧೂಪೈಃ ಗಂಧೈಶ್ಚ ತರುಂ ಸಮಭ್ಯರ್ಚ್ಯ ।
ಸುರಪಿತೃ ಪಿಶಾಚ ರಾಕ್ಷಸಭುಜಂಗಸುರಗಣವಿನಾಯಕಾದ್ಯಾನಾಂ ॥ ೩೧ ॥

ಕೃತ್ವಾ ಪೂಜಾಂ ರಾತ್ರೌ ವೃಕ್ಷಂ ಸಂಸ್ಪೃಶ್ಯ ಚ ಬ್ರೂಯಾತ್ ॥ ೩೨ ॥

ಅರ್ಚಾಸು ದೇವದೇವ ತ್ವಂ ದೇವೈಶ್ಚ ಪರಿಕಲ್ಪಿತಃ ।
ನಮಸ್ತೇ ವೃಕ್ಷ ಪೂಜೇಯಂ ವಿಧಿವತ್ಪರಿಗೃಹ್ಯತಾಂ ॥ ೩೩ ॥

ಯಾನೀಹ ಭೂತಾನಿ ವಸಂತಿ ತಾನಿ ಬಲಿಂ ಗೃಹೀತ್ವಾ ವಿಧಿವತ್ ಪ್ರಯುಕ್ತಂ ।
ಅನ್ಯತ್ರ ವಾಸಂ ಪರಿಕಲ್ಪಯಂತು ಕ್ಷಮಂತು ತೇ ಚಾದ್ಯ ನಮೋಽಸ್ತು ತೇಭ್ಯಃ
॥ ೩೪ ॥

ಪ್ರಭಾತಾಯಾಂ ತು ಶರ್ವರ್ಯಾಂ ಪುನಃ ಸಂಪೂಜ್ಯ ತಂ ನಗಂ ।
ಬ್ರಾಹ್ಮಣೇಭ್ಯಸ್ತತೋ ದತ್ವಾ ಭೋಜಕೇಭ್ಯಶ್ಚ ದಕ್ಷಿಣಾಂ ॥ ೩೫ ॥

---

ಹೂ ಗಂಧಗಳಿಂದ ಪೂಜಿಸಿ. ಪರಮಾನ್ನ, ಮೋದಕ, ಅನ್ನ, ಹಣ್ಣುಗಳು, ಅಪೂಪ ಭಕ್ಷ್ಯ, ಮದ್ಯ ಇವುಗಳ ಸಮರ್ಪಣೆಯಿಂದ ಮರವನ್ನು ಪೂಜಿಸಿ, ದೇವತೆ, ಪಿತೃ, ಪಿಶಾಚಿ, ರಾಕ್ಷಸ, ನಾಗ. ಸುರಗಣ, ವಿನಾಯಕ ಇವರನ್ನೆಲ್ಲಾ ಆ ರಾತ್ರಿ ಪೂಜಿಸಿ ವೃಕ್ಷವನ್ನು ಮುಟ್ಟಿಕೊಂಡು ಈ ಮಾತನ್ನು ಹೇಳಬೇಕು.

೩೩. "ಎಲೈ ದೇವದೇವನೇ! ನೀನು ಈ ಪ್ರತಿಮಾದಿಗಳಲ್ಲಿ ದೇವತೆಗಳಿಂದ ಕಲ್ಪಿಸಲ್ಪಟ್ಟಿದ್ದೀ. ಆ ಪ್ರತಿಮಾಶ್ರಯವಾದ ಎಲೈ ವೃಕ್ಷವೇ! ನಿನಗೆ ನಮಸ್ಕಾರ ; ಈ ಪೂಜೆಯನ್ನು ನೀನು ವಿಧಿವತ್ತಾಗಿ ಗ್ರಹಣಮಾಡು.

೩೪. ಈ ವೃಕ್ಷಗಳಲ್ಲಿ ಯಾವ ಭೂತಗಳು ವಾಸಿಸವುವೋ ಅವು ಈಗ ನಾನು ಸಮರ್ಪಿಸುವ ಬಲಿಯನ್ನು ಸ್ವೀಕರಿಸಿ ಈ ಸ್ಥಳವನ್ನು ಬಿಟ್ಟು ಬೇರೆ ಸ್ಥಾನವನ್ನು ಕಲ್ಪಿಸಿಕೊಳ್ಳಲಿ ನೀವೆಲ್ಲಾ ಕ್ಷಮಿಸಿ. ನಿಮಗೆ ನಮಸ್ಕಾರ."

೩೫. ರಾತ್ರಿಯು ಮುಗಿದು ಬೆಳಕು ಹರಿಯುತ್ತಲೇ ಆ ಮರವನ್ನು ಪುನಃ ಪೂಜಿಸಿ, ಬ್ರಾಹ್ಮಣರಿಗೂ ಭೋಜಕರಿಗೂ (ಅರ್ಚಕರಿಗೂ) ದಕ್ಷಿಣೆಯನ್ನು ಕೊಟ್ಟು, ತಿಳಿದವರಿಂದ ಸ್ವಸ್ತಿವಾಚನ ಮಾಡಿಸುತ್ತಾ ಆ ಮರವನ್ನು ಕಡಿಯಬೇಕು.

ಛಿಂದ್ಯಾದ್ವನಸ್ಪತಿಂ ತಜ್ಜ್ಞೈಸ್ತ್ಯೈಃ ಕೃತಸ್ವಸ್ತಿವಾಚನೈಃ ।
ಪೂರ್ವಸ್ಯಾಂ ದಿಶಿ ಪಾತೋಽಸ್ಯ ಐಶಾನ್ಯಾಂ ಚಾಪಿ ಯೋಽಭವೇತ್ ॥
ಅಥವಾ ಉತ್ತರಸ್ಯಾಂ ತು ತಥಾ ಛಿಂದ್ಯಾತ್ತು ನಾನ್ಯಥಾ　　　॥ ೩೬ ॥

ಐಂದ್ರ್ಯೈಶಾನ್ಯೋರುದೀಚ್ಯಾಂ ತು ಪಾತಸ್ತ್ರಿಷು ಶಸ್ಯತೇ ।
ನೈಋತ್ಯಾಗ್ನೇಯಯಾಮ್ಯಾಸು ದಿಕ್ಷು ಪಾತೋ ನ ಶೋಭನಃ ॥
ವಾಯವ್ಯಾಂ ಚೈವ ವಾರುಣ್ಯಾಂ ತಸ್ಯ ಪಾತಸ್ತು ಮಧ್ಯಮಃ　　　॥ ೩೭ ॥

ಯಸ್ಯ ಬಾಹ್ಯಸ್ಥಿತಾ ಶಾಖಾ ದಿಕ್ಷು ನಷ್ಟಾ ಚತಸೃಷು ।
ವಾಸ್ತುಪೂರ್ವಂ ತತಃ ಸ್ಥಿತ್ವಾ ತತಃ ಪಶ್ಚಾದವಸ್ಥಿತಾ　　　॥ ೩೮ ॥

ಅವಿಲಗ್ನಮಶಬ್ದಂ ತು ಪತನಂ ತು ಪ್ರಶಸ್ಯತೇ ।
ಉತ್ಪದ್ಯೇದ್ವಿದಲಂ ಯಸ್ಯ ದ್ರಾವಶ್ಚ ಮಧುರೋ ಭವೇತ್　　　॥ ೩೯ ॥

---

೩೬. ಕಡಿದ ಮರವು ಪೂರ್ವದಿಕ್ಕಿಗಾಗಲೀ ಈಶಾನ್ಯದಿಕ್ಕಿಗಾಗಲೀ ಬೀಳುವಂತೆ ಕಡಿಯಬೇಕು. ಇತರ ದಿಕ್ಕುಗಳಿಗೆ ಬೀಳಬಾರದು.

೩೭. ಕಡಿಯಲ್ಪಟ್ಟ ಮರವು ಪೂರ್ವ, ಈಶಾನ್ಯ, ಉತ್ತರ ಈ ದಿಕ್ಕುಗಳಲ್ಲಿ ಬಿದ್ದರೆ ಒಳ್ಳೆಯದು. ನೈಋತ್ಯ ಆಗ್ನೇಯ ದಕ್ಷಿಣ ಈ ದಿಕ್ಕುಗಳಲ್ಲಿ ಬೀಳುವುದು ಶುಭಕರವಲ್ಲ. ಪಶ್ಚಿಮ ವಾಯವ್ಯ ಈ ದಿಕ್ಕುಗಳಲ್ಲಿ ಬಿದ್ದರೆ ಮಧ್ಯಮ ಪಕ್ಷವೆಂದು ಹೇಳುವರು.

೩೮. ಯಾವ ವೃಕ್ಷದಲ್ಲಿ ನಾಲ್ಕುದಿಕ್ಕಿಗೂ ಕೊಂಬೆಯೇ ಇರುವುದಿಲ್ಲವೋ ಅಂಥಮರದಲ್ಲಿ ವಾಸ್ತುಪುರುಷನು ತಲೆಹಾಕಿರುವ ದಿಕ್ಕಿಗೆ ಪೂರ್ವಾಭಿಮುಖವಾಗಿ ನಿಂತು ಅದರ ಹಿಂಭಾಗದ ಕೊಂಬೆಯನ್ನು ತೆಗೆದುಕೊಳ್ಳಬೇಕು. ವಾಸ್ತುಪುರುಷನು ಇಂತಿಂತಹ ಮಾಸಗಳಲ್ಲಿ ಇಂತಿಂತಹ ದಿಕ್ಕಿಗೆ ತಲೆಹಾಕಿಕೊಂಡು ಮಲಗಿರುವನೆಂದು ಜ್ಯೋತಿಷಶಾಸ್ತ್ರದಲ್ಲಿ ಹೇಳಿದೆ.

೩೯. ಕಡಿದ ಮರವು ಪಕ್ಕದಲ್ಲಿರುವ ಇನ್ನೊಂದಕ್ಕೆ ತಗಲಿಕೊಳ್ಳದೆ ಸದ್ದಿಲ್ಲದೆ ಬೀಳುವುದು ಪ್ರಶಸ್ತ. ಪೂರ್ವದಲ್ಲಿ ಯಾರೋ ಕಡಿದ ಮರದಲ್ಲಿ ಎರಡು ಎಲೆಗಳು

ಸರ್ಪಿಸ್ತೈಲಂ ಕ್ಷರೇದ್ಯಸ್ತು ಪಾದಪಂ ತಂ ವಿಸರ್ಜಯೇತ್ ।
ಶುಭದಂ ಯದುಶಾರ್ದೂಲ ಶೃಣು ತ್ವಂ ಕಥಯೇ ಶುಚಿ ॥ ೪೦ ॥

ವೃಕ್ಷಂ ಪ್ರಭಾತೇ ಸಲಿಲೈರ್ನಿಷಿಕ್ತಂ ।
ಪೂರ್ವೋತ್ತರಸ್ಯಾಂ ದಿಶಿ ಸಂನಿಕೃತ್ಯ ॥
ಮಧ್ವಾಜ್ಯ ದಿಗ್ಧೇನ ಕುಠಾರಕೇಣ ।
ಪ್ರದಕ್ಷಿಣಂ ಶೋಷಮಭಿಪ್ರಹಣ್ಯಾತ್ ॥ ೪೧ ॥

ಪೂರ್ವೋತ್ತರೇಽಪ್ಯುತ್ತರ ದಿಗ್ವಿಭಾಗೇ ।
ಪಾತೋ ಯದಾ ವೃದ್ಧಿಕರಸ್ತದಾ ಸ್ಯಾತ್ ॥
ಆಗ್ನೇಯಕೋಣಕ್ರಮಶೋಗ್ನಿ ದಾಹ ।
ಉಗ್ರೋಗ್ರರೋಗಾ ಸುಧನಕ್ಷಯಾ ಶ್ಚ ॥ ೪೨ ॥

---

ಚಿಗುರಿರುವುದು, ಕಡಿದರೆ ಮಧುರದ್ರವ ಹರಿಯುವುದು, ಕಡಿದ ಕಡೆಯಿಂದ ತುಪ್ಪದಂತೆಯೂ ಎಣ್ಣೆಯಂತೆಯೂ ದ್ರವವು ಹರಿಯುವುದು ಹೀಗೆ ಆದರೆ ಅಂತಹ ಮರವನ್ನು ಕಡಿಯದೆ ಹಾಗೆಯೇ, ಬಿಟ್ಟುಬಿಡಬೇಕು. ಎಲೈ ಯದುನಂದನನೇ! ಶುಭಪ್ರದವೂ, ಶುಭಕರವೂ ಆದ ಇನ್ನೊಂದು ವಿಚಾರವನ್ನು ತಿಳಿಸುವೆನು ಕೇಳು.

೪೧. ಬೆಳಿಗ್ಗೆ ಗಿಡಕ್ಕೆ ಚೆನ್ನಾಗಿ ನೀರೆರೆದು, ಈಶಾನ್ಯದಿಕ್ಕಿನಲ್ಲಿ ಛೇದಿಸಲು ನಿಂತುಕೊಂಡು ಕೊಡಲಿಯ ಬಾಯಿಗೆ ತುಪ್ಪವನ್ನೂ,- ಜೇನುತುಪ್ಪವನ್ನೂ ಸವರಿ, ಪ್ರದಕ್ಷಿಣಾಕಾರವಾಗಿ ಮರಕ್ಕೆ ಏಟುಗಳನ್ನು ಹೊಡೆಯಬೇಕು.

೪೨. ಕಡಿದ ಮರವು ಈಶಾನ್ಯಕ್ಕೋ ಉತ್ತರಕ್ಕೋ ಬಿದ್ದರೆ ವೃದ್ಧಿಕರ. ಆಗ್ನೇಯಕ್ಕೆ ಬಿದ್ದರೆ ಅಗ್ನಿಪೀಡೆಯೂ, ಅತಿಭಯಂಕರ ರೋಗಗಳೂ, ಧನನಾಶವೂ ಸಂಭವಿಸುತ್ತದೆ.

ಗಾರುಡೇ ದಿಶಿ ಪಾಷಾಣಂ ಕಪೋತೋ ಗೃಹಗೋಧಿಕಾ ।
ಸಿತವರ್ಣಂ ಜಲಂ ಜ್ಞೇಯಂ ಅಂಗುಷ್ಠಾಭಂ ಭವೇತ್ಕ್ರಿಮಿಃ ।
ದೋಷೈರೇತೈರ್ವಿನಿರ್ಮುಕ್ತಂ ಮುದಾ ಕಾಲಂ ಸಮುದ್ಧರೇತ್ ॥ ೪೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ
ಸಪ್ತಮೀಕಲ್ಪೇ ದಾರುಪರೀಕ್ಷಾವರ್ಣನಂ ನಾಮ
ಏಕತ್ರಿಂಶದುತ್ತರ ಶತತಮೋಽಧ್ಯಾಯಃ



---

೪೩. ಗರುಡಪಕ್ಷಿಯು ವಾಸಿಸುವ ಕೊನೆ, ಕಪೋತವು ವಾಸಿಸುವ ಕೊಂಬೆ, ಹಲ್ಲಿ, ಹೆಂಟೇಗೊದ್ದ ಇವು ವಾಸಮಾಡುವ ಕೊಂಬೆ, ಕೆತ್ತಿದರೆ ಬಿಳಿಯದ್ರವ ಬರುವ ಕೊಂಬೆ, ಅಂಗುಷ್ಟದಗಾತ್ರ ಹುಳುಗಳು ಹರಿಯುವ ಕೊಂಬೆ, ಇವೆಲ್ಲಾ ವೃಕ್ಷದೋಷಗಳು. ಇವುಗಳಿಲ್ಲದೆ ಇರುವ ಮರವನ್ನು ತೆಗೆದುಕೊಂಡು ಪ್ರತಿಮೆಯನ್ನು ರಚಿಸಬೇಕು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದಲ್ಲಿ ಸಪ್ತಮೀ ಕಲ್ಪದಲ್ಲಿ ಪ್ರತಿಮೆಯ ಮರದ
ಪರೀಕ್ಷೆಯೆಂಬ ನೂರಮೂವತ್ತೊಂದನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ದ್ವಾತ್ರಿಂಶದುತ್ತರಶತತಮೋಽಧ್ಯಾಯಃ

---

॥ ನಾರದ ಉವಾಚ ॥

ಹಂತ ತೇ ಸರ್ವದೇವನಾಂ ಪ್ರತಿಮಾಲಕ್ಷಣಂ ಪರಂ ।
ವಚ್ಮಿ ತೇ ಯದುಶಾರ್ದೂಲ ಆದಿತ್ಯಸ್ಯ ವಿಶೇಷತಃ ॥ ೧ ॥

ಏಕಹಸ್ತಾ ದ್ವಿಹಸ್ತಾ ವಾ ತ್ರಿಹಸ್ತಾ ವಾ ಪ್ರಮಾಣತಃ ।
ತಥಾ ಸಾರ್ಧತ್ರಿಹಸ್ತಾ ಚ ಸವಿತುಃ ಪ್ರತಿಮಾ ಶುಭಾ ॥ ೨ ॥

ಪ್ರಾಸಾದಾದ್ದ್ವಾರತೋ ವಾಪಿ ಪ್ರಮಾಣಂ ಚ ಪ್ರಕಲ್ಪಿತಂ ।
ತದ್ವತ್ಪ್ರಮಾಣಂ ಕರ್ತವ್ಯಂ ಸತತಂ ಶುಭಮಿಚ್ಛತಾ ॥ ೩ ॥

---

### ನೂರಮೂವತ್ತೆರಡನೆಯ ಅಧ್ಯಾಯ

೧. ನಾರದರು ಹೇಳುತ್ತಾರೆ—ಅಯ್ಯಾ ಯದುಶ್ರೇಷ್ಠನೇ ! ಈಗ ನಾನು ಎಲ್ಲಾ ದೇವತೆಗಳ ಪ್ರತಿಮಾಲಕ್ಷಣವನ್ನು ಸಾಮಾನ್ಯವಾಗಿಯೂ, ಸೂರ್ಯಪ್ರತಿಮಾ ಲಕ್ಷಣವನ್ನು ವಿಶೇಷವಾಗಿಯೂ ಹೇಳುವೆನು ಕೇಳು.

೨. ಸೂರ್ಯಪ್ರತಿಮೆಯು ಒಂದುಹಸ್ತ ಅಥವಾ ಎರಡುಹಸ್ತ ಇಲ್ಲದಿದ್ದರೆ ಮೂರುಹಸ್ತ ಉದ್ದವೂ, ಅಥವಾ ಪ್ರಾಸಾದದ ಪ್ರಮಾಣಾನುಸಾರ ಮೂರೂವರೆಹಸ್ತ ಉದ್ದವೂ ಇರುವುದು ಶುಭಕರ.

೩. ಪ್ರಾಸಾದದ ಅಳತೆಯ ಮೇಲಿಂದಲಾಗಲೀ ಬಾಗಿಲಿನ ಅಳತೆಯ ಮೇಲಿಂದಾಗಲೀ ಈ ಪ್ರತಿಮಾ ಪ್ರಮಾಣವನ್ನು ನಿರ್ಣಯಿಸಬೇಕು. ಯಾವಾಗಲೂ ಶುಭಾಕಾಂಕ್ಷಿಯಾದ ಮನುಷ್ಯನು ಆ ರೀತಿಯಲ್ಲಿ ಅಳತೆಯನ್ನು ಇಟ್ಟುಕೊಂಡೇ ಪ್ರತಿಮೆಯನ್ನು ನಿರ್ಮಿಸಬೇಕು.

ಏಕಹಸ್ತಾ ಭವೇತ್ಸೌಮ್ಯಾ ದ್ವಿಹಸ್ತಾ ಧನಧಾನ್ಯದಾ ।
ತ್ರಿಹಸ್ತಪ್ರತಿಮಾ ಭಾನೋಃ ಸರ್ವಕಾಮಪ್ರದಾ ಸ್ಮೃತಾ ॥ ೪ ॥

ಸಾರ್ಧತ್ರಿಹಸ್ತಾ ಪ್ರತಿಮಾ ಸುಭಿಕ್ಷಕ್ಷೇಮಕಾರಿಣೀ ।
ಅಗ್ರೇ ಮಧ್ಯೇ ಚ ಮೂಲೇ ಚ ಪ್ರತಿಮಾ ಸರ್ವತಃ ಸಮಾ ॥ ೫ ॥

ಗಾಂಧರ್ವೀ ಸಾ ತು ವಿಜ್ಞೇಯಾ ಧನಧಾನ್ಯಾವಹಾ ಸ್ಮೃತಾ ।
ದೇವಾಗಾರಸ್ಯ ಯದ್ದ್ವಾರಂ ತಸ್ಮಾದಷ್ಟಾಂಶಮುದ್ಧೃತಾ ॥
ತ್ರಿಭಾಗೈಃ ಪಿಂಡಿಕಾ ಕಾರ್ಯಾ ದ್ವೌ ಭಾಗೌ ಪ್ರತಿಮಾ ಭವೇತ್ ॥ ೬ ॥

ಅಂಗುಲೈ ಶ್ಚ ತಥಾ ಮೂರ್ತಿಶ್ಚತುರಶೀತಿ ಸಂಮಿತೈಃ ।
ವಿಸ್ತಾರಾಯಾಮತಃ ಕಾರ್ಯಾ ವದನಂ ದ್ವಾದಶಾಂಗುಲಂ ॥ ೭ ॥

---

೪. ಒಂದುಹಸ್ತ ಪ್ರಮಾಣವುಳ್ಳ ಪ್ರತಿಮೆಯು ಸೌಮ್ಯವಾದುದು. ಎರಡು ಹಸ್ತ ಪ್ರಮಾಣವುಳ್ಳದ್ದು ಧನವನ್ನೂ ಧಾನ್ಯವನ್ನೂ ಕೊಡುವುದು. ಮೂರುಹಸ್ತ ಪ್ರಮಾಣವುಳ್ಳ ಪ್ರತಿಮೆಯನ್ನು ಸರ್ವ ಇಷ್ಟಾರ್ಥಗಳನ್ನೂ ಕೊಡತಕ್ಕದೆಂದು ಹೇಳಿದೆ.

೫. ಮೂರೂವರೆಹಸ್ತ ಪ್ರಮಾಣದ ಪ್ರತಿಮೆಯು ಸುಭಿಕ್ಷವನ್ನೂ ಕ್ಷೇಮವನ್ನೂ ಉಂಟುಮಾಡುವುದು. ಪ್ರತಿಮೆಯ ತುದಿ ಮಧ್ಯ ಬುಡ ಈ ಭಾಗಗಳೆಲ್ಲಾ ಸರ್ವತಃ ಸಮಪ್ರಮಾಣವುಳ್ಳದಾಗಿದ್ದರೆ ಗಾಂಧರ್ವೀ ಪ್ರತಿಮೆ ಎನಿಸಿಕೊಳ್ಳುವುದು. ಇದು ಧನಧಾನ್ಯಗಳನ್ನು ವೃದ್ಧಿಮಾಡುವುದು.

೬. ದೇವಾಲಯದ ಬಾಗಿಲಿನ ಪ್ರಮಾಣವನ್ನು ಎಂಟುಭಾಗ ಮಾಡಿ, ಅದರಲ್ಲಿ ಮೂರುಭಾಗವು (ಸಪಿಂಡಿಕೆಯು) ವಿಗ್ರಹ ನಿರ್ಮಾಣಮಾಡುವ ಶಿಲೆಯ ಒಟ್ಟು ಅಳತೆಯಾಗಿರಬೇಕು. (ಅಭಿಧಾನ ರತ್ನಮಾಲಾ ಎಂಬ ಕೋಶದಲ್ಲಿ ಚಕ್ರಮಧ್ಯಸ್ಥಿತೋ ಭಾಗಃ ಪಿಂಡಿಕೇತ್ಯಭಿಧೀಯತೇ ಎಂದು ಹೇಳಿದೆ. ಇಲ್ಲಿ ಮೇಲಿನ ಅರ್ಥವನ್ನಿಟ್ಟಿದೆ) ಆ ಪಿಂಡಿಕೆಯನ್ನು ಮೂರುಭಾಗ ಮಾಡಿಕೊಂಡು ಎರಡು ಭಾಗದಲ್ಲಿ ಪ್ರತಿಮೆಯನ್ನು ನಿರ್ಮಿಸಬೇಕು.

೭. ಪ್ರತಿಮೆ ಪ್ರಮಾಣವು ಎಂಭತ್ತುನಾಲ್ಕು ಅಂಗುಲವಿರಬೇಕೆಂದು ಹೇಳಿದ ಪ್ರತಿಮೆಯ ವಿಸ್ತಾರಕ್ಕನುಗುಣವಾಗಿ ಪ್ರತಿಮೆಯ ಮುಖವನ್ನು ರಚಿಸಬೇಕು. ಎಂಭತ್ತುನಾಲ್ಕು ಅಂಗುಲದ ಮೂರ್ತಿಗೆ ಹನ್ನೆರಡು ಅಂಗುಲ ಮುಖದ ಅಳತೆಯಿರುವಂತೆ ನಿರ್ಮಿಸಬೇಕು.

ಮುಖಾತ್ ತ್ರಿಭಾಗೈಶ್ಚಿಬುಕಂ ಲಲಾಟಂ ನಾಸಿಕಾ ತಥಾ ।
ಕರ್ಣೌ ನಾಸಿಕಯಾ ತುಲ್ಯೌ ಪಾದೌ ಚಾನಿಯತೌ ತಯೋಃ ॥ ೮ ॥

ನಯನೇ ದ್ವ್ಯಂಗುಲೇ ಸ್ಯಾತಾಂ ತ್ರಿಭಾಗಾ ತಾರಕಾ ಭವೇತ್ ।
ತೃತೀಯತಾರಕಾಭಾಗತ್ಕುರ್ಯಾದ್ದೃಷ್ಟಿಂ ವಿಚಕ್ಷಣಃ ॥ ೯ ॥

ಲಲಾಟಮಸ್ತಕೋತ್ಸೇಧಂ ಕುರ್ಯಾತ್ತತ್ಸಮಮೇವ ಚ ।
ಪರಿಣಾಹಸ್ತು ಶಿರಸೋ ಭವೇದ್ದ್ವಾವಿಂಶದಂಗುಲಃ ॥ ೧೦ ॥

ತುಲ್ಯಾ ನಾಸಿಕಯಾ ಗ್ರೀವಾ ಮುಖೇನ ಹೃದಯಾಂತರಂ ।
ಮುಖಮಾತ್ರಾ ಭವೇನ್ನಾಭಿಃ ತತೋ ಮೇಢ್ರಮನಂತರಂ ॥ ೧೧ ॥

---

೮. ಮುಖದ ಮೂರನೆಯ ಒಂದುಭಾಗದಷ್ಟರಲ್ಲಿ ಗಲ್ಲವನ್ನೂ, ಇನ್ನು ಮೂರನೆಯ ಒಂದುಭಾಗದಲ್ಲಿ ಹಣೆಯನ್ನೂ, ಇನ್ನು ಮೂರನೇ ಒಂದುಭಾಗದಲ್ಲಿ ಮೂಗನ್ನೂ ನಿರ್ಮಿಸಬೇಕು. ಕಿವಿಗಳು ಮೂಗಿನ ಅಳತೆಯಷ್ಟೇ ಪ್ರಮಾಣವಿರಬೇಕು. ಪಾದಪ್ರಮಾಣವು ಅನಿಯತವಾದುದು.

೯. ಮೂರ್ತಿಯ ಕಣ್ಣುಗಳು ಎರಡಂಗುಲ ನೀಳವಿರಬೇಕು. ಕಣ್ಣುಗುಡ್ಡೆಯು ಅದರ ಮೂರನೇ ಒಂದುಭಾಗವಾಗಿರಬೇಕು. ಆತಾರಕೆಯನ್ನು ಮಾಡಿ ಬುದ್ಧಿವಂತನಾದ ಶಿಲ್ಪಿಯು ಅದರ ಮೂರನೇಭಾಗದಲ್ಲಿ ದೃಷ್ಟಿಯನ್ನಿಡಬೇಕು.

೧೦. ಹಣೆ ಮತ್ತು ತಲೆ ಇವುಗಳ ಎತ್ತರವು ಸಮನಾಗಿರಬೇಕು. ಶಿರಸ್ಸಿನ ಸುತ್ತಳತೆಯು ಇಪ್ಪತ್ತೆರಡು ಅಂಗುಲವಿರಬೇಕು.

೧೧. ಕುತ್ತಿಗೆಯ ಎತ್ತರದ ಪ್ರಮಾಣವು ಮೂಗಿನ ಪ್ರಮಾಣದಷ್ಟೇ ಇರಬೇಕು. ಹೃದಯದ ಪ್ರಮಾಣವು ಮುಖದ ಎತ್ತರದಷ್ಟಿರಬೇಕು. ನಾಭಿಯ (ಹೊರಭಾಗ) ಮಾತ್ರ ಕಾಣುವಂತಿರಬೇಕು. ಅನಂತರ ಶಿಶ್ನವನ್ನು ರಚಿಸಬೇಕು.

ಮುಖ ವಿಸ್ತಾರಣಮುರಸ್ತತೋಽರ್ಧಂ ತು ಕಟಿಃ ಸ್ಮೃತಾ ।
ಬಾಹೂ ಪ್ರವಾಹತುಲ್ಯೌ ಚ ಊರೂ ಜಂಘೇ ಚ ತತ್ಸಮೇ ॥
ಗುಲ್ಫಾಧಸ್ತಾತ್ತು ಪಾದಃ ಸ್ಯಾದುಚ್ಛ್ರಿತಶ್ಚತುರಂಗುಲಃ ॥ ೧೨ ॥

ಷಡಂಗುಲಸುವಿಸ್ತಾರಸ್ತಸ್ಯಾಂಗುಷ್ಠಾಂಗುಲತ್ರಯಂ ।
ಪ್ರದೇಶಿನೀ ಚ ತತ್ತುಲ್ಯಾ ಹೀನಾ ಶೇಷಾ ನಖೈರ್ಯುತಾಃ ॥ ೧೩ ॥

ಚತುರ್ದಶಾಂಗುಲಃ ಪಾದ ಆಯಾಮಾತ್ಪರಿಕೀರ್ತಿತಃ ।
ಏವಂ ಲಕ್ಷಣಸಂಯುಕ್ತಾ ಪ್ರತಿಮಾಽರ್ಚ್ಯಾ ಭವೇತ್ಸದಾ ॥ ೧೪ ॥

ಅಂಸೋ ಹರೇಸ್ತಥೈವೋರೂ ಲಲಾಟಂ ಚ ಸನಾಸಿಕಂ ।
ನಿಯತೇ ನಯನೇ ಗಂಡೌ ಮೂರ್ತೇಃ ಕುರ್ಯಾತ್ಸಮುನ್ನತೇ ॥ ೧೫ ॥

---

೧೨. ಎದೆಯನ್ನು ಮುಖವಿಸ್ತಾರಕ್ಕನುಗುಣವಾಗಿ ರಚಿಸಬೇಕು. ಸೊಂಟದ ಳತೆಯು ಎದೆಯ ಸುತ್ತಳತೆಯ ಅರ್ಧದಷ್ಟಿರಬೇಕು. ತೊಡೆಗಳು ತೋಳಿನ ಪ್ರಮಾಣಕ್ಕೆ ಸಮವಾಗಿರಬೇಕು. ಮೊಳಕಾಲುಗಳು ತೊಡೆಯ ಪ್ರಮಾಣಕ್ಕೆ ಅನುಗುಣವಾಗಿರಬೇಕು.

೧೩. ಹರಡಿನ ಕೆಳಭಾಗವು ಪಾದವೆನಿಸುವುದು. ಅದು ನಾಲ್ಕುಅಂಗುಲ ದಪ್ಪವೂ, ಆರುಅಂಗುಲ ಅಗಲವೂ ಆಗಿರಬೇಕು. ಪಾದದ ಅಂಗುಷ್ಠವು ಮೂರು ಅಂಗುಲ ಪ್ರಮಾಣವಿರಬೇಕು.

೧೪. ಕಾಲುಂಗುಷ್ಠದ ಪಕ್ಕದ ಬೆರಳು ಅಂಗುಷ್ಠದಷ್ಟೇ ಉದ್ದವಾಗಿರಬೇಕು. ಮಿಕ್ಕ ಬೆರಳುಗಳು ಒಂದಕ್ಕಿಂತಒಂದು ಸ್ವಲ್ಪ ಸ್ವಲ್ಪ ಕಿರಿದಾಗಿರಬೇಕಲ್ಲದೆ ಎಲ್ಲಾ ಬೆರಳುಗಳಲ್ಲಿಯೂ ಉಗುರುಗಳನ್ನು ಸ್ಪಷ್ಟವಾಗಿ ಬಿಡಿಸಿ ಕೆತ್ತಿರಬೇಕು. ಪಾದಪ್ರಮಾಣವು ವಿಸ್ತಾರಕ್ಕನುಗುಣವಾಗಿ ಎಂದರೆ ಎಂಭತ್ತುನಾಲ್ಕು ಅಂಗುಲದ ಪ್ರತಿಮೆಗೆ ಹದಿನಾಲ್ಕು ಅಂಗುಲದಷ್ಟು ಉದ್ದವಿರಬೇಕು. ಎಂದರೆ ಅದರ ಆರನೆಯ ಒಂದುಭಾಗದಷ್ಟಿರಬೇಕು. ಈ ರೀತಿಯಾಗಿ ಪ್ರತಿಲಕ್ಷಣವುಳ್ಳ ಪ್ರತಿಮೆಯು ಸರ್ವದಾ ಪೂಜಾಯೋಗ್ಯವಾಗಿರುವುದು.

೧೫. ಸೂರ್ಯಪ್ರತಿಮೆಯಲ್ಲಿ ಹೆಗಲು, ತೊಡೆಗಳು, ಮೂಗು, ಹಣೆ, ಪ್ರಮಾಣಕ್ಕೆ ತಕ್ಕಹಾಗಿರುವ ಕಣ್ಣು, ಕಪೋಲ ಇವುಗಳನ್ನು ಎತ್ತರವಾಗಿರುವಂತೆ ಮಾಡಬೇಕು.

ವಿಶಾಲಧವಲಾವಾಮುಪಕ್ಷ್ಮಲಾಯತಲೋಚನೇ ।
ಸಸ್ಮಿತಾನನಪದ್ಮಸ್ಯ ಚಾರುಬಿಂಬಾಧರಸ್ಯ ಚ ॥ ೧೬ ॥

ರತ್ನಪ್ರೋದ್ಭಾಸಿಮುಕುಟಕಟಕಾಂಗದಹಾರಯುಕ್ ।
ಅವ್ಯಂಗಪದಮುಧ್ಯಾದಿಸಮಾಯೋಗೋಽಪಿ ಶೋಭಿತಃ ॥ ೧೭ ॥

ಸುಪ್ರಭೋ ಮಂಡಲಶ್ಚಾರುರ್ವಿಚಿತ್ರಮಣಿಕುಂಡಲಃ ।
ಕರಾಭ್ಯಾಂ ಕಾಂಚನೀಂ ಮಾಲಾಂ ಪ್ರೋದ್ವಹನ್ ಸಸರೋರುಹಾಂ॥ ೧೮ ॥

ಏವಂ ಲಕ್ಷಣಸಂಯುಕ್ತಾಂ ಕಾರಯೇದೀಹಿತಪ್ರದಾಂ ।
ಪ್ರಜಾಭ್ಯಶ್ಚ ಸದಾ ಭಾನುಃ ಶಿವಾರೋಗ್ಯಾಭಯಪ್ರದಃ ॥ ೧೯ ॥

---

೧೬. ಅಗಲವಾಗಿಯೂ, ಬೆಳ್ಳಗೂ, ಸುಂದರವಾಗಿಯೂ ಎವೆಯುಳ್ಳದ್ದಾಗಿಯೂ ಇರುವ ವಿಸ್ತಾರವಾದ ಕಣ್ಣುಗಳು, ಮಂದಹಾಸಯುಕ್ತವಾದ ಮನೋಹರವಾದ ಮುಖದಲ್ಲಿ ತೊಂಡೆಹಣ್ಣಿನಂತಿರುವ ತುಟಿ.

೧೭. ರತ್ನಗಳಿಂದ ಥಳಥಳಿಸುವ ಕಿರೀಟ ಕಡಗಗಳು ಬಾಹುಪೂರಗಳು (ಭುಜಕೀರ್ತಿ) ಹಾರ ಇವುಗಳಿಂದ ಕೂಡಿದ್ದೂ, ಅವ್ಯಂಗಾಭರಣಯುಕ್ತವಾದ ಸೊಂಟ, ಇವುಗಳ ಪರಸ್ಪರ ಸಂಬಂಧವು ಕೂಡ ಪ್ರಕಾಶಮಾನವಾಗಿ (ಒಪ್ಪುವಂತೆ ಹೊಂದಿಕೆಯಾಗಿರಬೇಕು.) ಇರಬೇಕು. ಎಂದು ತಿಳಿದವರು ಹೇಳುವರು.

೧೮. ಕಾಂತಿಯುಕ್ತವಾಗಿಯೂ ಸುಂದರವಾಗಿಯೂ ದುಂಡಾಗಿಯೂ ಇರುವ ಪ್ರಭಾವಳಿಯೂ, ಮನೋಹರವಾದ ಚಿತ್ರಕೆಲಸದಿಂದ ಪ್ರಕಾಶಿಸುವ ರತ್ನಕುಂಡಲವೂ, ಕಂಠದಲ್ಲಿ ಸುವರ್ಣಮಾಲಿಕೆಯೂ ಎರಡುಕೈಗಳಲ್ಲಿಯೂ ಕಮಲಗಳೂ ಉಳ್ಳಹಾಗೆ ಈ ಲಕ್ಷಣಗಳಿಂದ ಕೂಡಿದ ಪ್ರತಿಮೆಯನ್ನು ಮಾಡಿಸಬೇಕು.

೧೯. ಈ ಪ್ರತಿಮೆಯು ಇಷ್ಟಾರ್ಥವನ್ನು ಉಂಟುಮಾಡುತ್ತದೆ. ಇಂಥ ಪ್ರತಿಮಾವಿಷ್ಟನಾದ ಸೂರ್ಯದೇವನು ಪ್ರಜೆಗಳೆಲ್ಲರಿಗೂ ಯಾವಾಗಲೂ ಮಂಗಳವನ್ನೂ, ಆರೋಗ್ಯ ಮತ್ತು ಅಭಯ ಇವುಗಳನ್ನೂ ಕೊಡುವನು.

ಅಲ್ಪಾಂಗಾ ಯಾಂ ನೃಪಭಯಂ ಹೀನಾಂಗಾಯಾಮಾಕಲ್ಪತಾ ।
ಖಾತೋದರ್ಯಾಂ ಚ ಕ್ಷುತ್ಪೀಡಾ ಕೃಶಾಯಾಂ ತು ದರಿದ್ರತಾ ॥ ೨೦ ॥

ಸಕ್ಷತಾಯಾಂ ಭಯಂ ಶಸ್ತ್ರಾತ್ ಸ್ಫುಟಿತಾ ಮೃತ್ಯುಕಾರಿಣೀ ।
ದಕ್ಷಿಣಾವನತಾಯಾಂ ತು ಶಶ್ವದಾಯುಃಕ್ಷಯೋ ಭವೇತ್ ॥ ೨೧ ॥

ಉತ್ತರಾವನತಾಯಾಂ ತು ವಿಯೋಗೋ ಭವತಿ ಧ್ರುವಂ ।
ನ ಲೋಕ್ಯಾ ನಾಪ್ಯನಾಲೋಕ್ಯಾ ರಕ್ಷ್ಯಾ ಮೂರ್ತಿಃ ಪ್ರಶಸ್ಯತೇ ॥ ೨೨ ॥

ತಸ್ಮಾದ್ಭಾಸ್ಕರಭಕ್ತೇನ ಲೋಕದ್ವಯಹಿತೈಷಿಣಾ ।
ತನ್ಮೂರ್ತೇಃಶ್ಚಾದರಃ ಕಾರ್ಯಸ್ತದಧೀನಾಸ್ತು ಸಂಪದಃ ॥ ೨೩ ॥

---

೨೦. ರಚಿತವಾದ ಮೂರ್ತಿಯು ಪ್ರಮಾಣಾನುಗುಣವಾಗಿರದೆ ಕುರೂಪವಾಗಿದ್ದರೆ ರಾಜಭಯವುಂಟಾಗುವುದು. ಪ್ರಮಾಣಹೀನವಾದ ಅಂಗಗಳಿದ್ದರೆ ಕರ್ತೃವಿಗೆ ಅಸಾಮರ್ಥ್ಯವನ್ನು ಕೊಡುವುದು. ಹೊಟ್ಟೆಯು ಹಳ್ಳವಾಗಿದ್ದರೆ ಹಸಿವಿನ ಭಯವು. ಉದರವು ಕೃಶವಾಗಿದ್ದರೆ ದಾರಿದ್ರ್ಯ.

೨೧. ಪ್ರತಿಮೆಗೆ ಘಾಯಗಳಿದ್ದರೆ ಕರ್ತನಿಗೆ ಶಸ್ತ್ರಭಯಪ್ರಾಪ್ತಿ. ಪ್ರತಿಮೆ ಭಿನ್ನವಾಗಿದ್ದರೆ ಮೃತ್ಯುಪ್ರದವು. ಪ್ರತಿಮೆಯ (ದಕ್ಷಿಣ) ಬಲಭಾಗ ತಗ್ಗಾಗಿದ್ದರೆ ಯಾವಾಗಲೂ ಕರ್ತನಿಗೆ ಆಯುಸ್ಸು ಕ್ಷೀಣ.

೨೨. ಉತ್ತರದ ಕಡೆಗೆ ತಗ್ಗಾಗಿದ್ದರೆ ಸ್ವಜನ ವಿರಹಬಾಧೆಯುಂಟಾಗುವುದು ಖಂಡಿತ. ದೃಷ್ಟಿಯು ಸ್ಫುಟವಾಗಿಲ್ಲದೆ, ದೃಷ್ಟಿ ಶೂನ್ಯವಾಗಿಲ್ಲದೆ ಸಮದೃಷ್ಟಿಯುಳ್ಳ ಪ್ರತಿಮೆಗಳು ಪೂಜಾರ್ಹವಾಗಿ ರಕ್ಷಿಸುವುದಕ್ಕೆ ಯೋಗ್ಯವಾದುವು.

೨೩. ಇಹಪರ ಲೋಕಗಳೆರಡರಲ್ಲಿಯೂ ಹಿತವಾಗಬೇಕೆಂದಿಚ್ಛಿಸುವ ಸೂರ್ಯ ಭಕ್ತನು ಈ ರಚನಾವಿಗ್ರಹ ವಿಷಯದಲ್ಲಿ ಇಷ್ಟು ಆದರ ತೋರಿಸಬೇಕು. ಏಕೆಂದರೆ ಸಂಪತ್ತುಗಳೆಲ್ಲಾ ಆ ಮೂರ್ತಿಯ ಅಧೀನವಾದುವು.

ಶಿರೋರುಗಂಡವದನೈಃ ಸರ್ವಾಂಗಾವಯವೈಸ್ತಥಾ ।
ಏವಂ ಲಕ್ಷಣ ಸಂಪೂರ್ಣಪ್ರತಿಮಾ ಶುಭದಾ ಭವೇತ್ ॥ ೨೪ ॥

ನಾಸಾಲಲಾಟಜಂಘೋರು ದಂಡವಕ್ಷೋಭಿರನ್ವಿತಾ ।
ಕುರ್ಯಾದಾದಿತ್ಯವೇಷಂ ತು ಗೂಢಪಾದೋದರಂ ತಥಾ ॥ ೩೫ ॥

ಕಮಲೋದರಕಾಂತಿನಿಭಃ ಕಂಚುಕಗುಪ್ತಃ ಪ್ರಸನ್ನಮುಖಃ ।
ರಕ್ತೋತ್ಪಲಪ್ರಭಾಮಂಡಲಶ್ಚ ಕರ್ತುಃ ಶುಭಂ ಕರೋತ್ಯರ್ಕಃ ॥ ೨೬ ॥

ಕುಂಡಲಭೂಷಿತವದನಃ ಪ್ರಲಂಬಹಾರೋಽಪಿ ಗ್ರಹವೃತ್ತಃ ।
ನೃಪತಿ ಭಯಂ ವ್ಯಂಗಾಯಾಂ ಹೀನಾಂಗಾಯಾಮಕಲ್ಪತಾ ಕರ್ತುಃ ॥೨೭॥

---

೨೪. ತಲೆ, ತೊಡೆ, ಕಪೋಲ, ಮುಖ ಮುಂತಾದ ಸಮಸ್ತ ಅವಯುವಗಳಲ್ಲಿಯೂ, ಮೇಲೆ ಹೇಳಿದಂತೆ ಲಕ್ಷಣಯುಕ್ತವಾದ ಪ್ರತಿಮೆಯು ಶುಭಪ್ರದವಾಗುವುದು.

೨೫ ಸೂರ್ಯಪ್ರತಿಮೆಯ ಮೂಗು, ಹಣೆ, ಮೊಣಕಾಲು, ತೊಡೆಗಳೂ, ಎದೆ ಇವುಗಳು ಸ್ಫುಟವಾಗಿ ಕಾಣಿಸಬೇಕು.ಪಾದ ಮತ್ತು ಹೊಟ್ಟೆ ಇವು ಮಾತ್ರ ಗೋಪ್ಯವಾಗಿರುವಂತೆ ರಚಿಸಬೇಕು.

೨೬. ಮತ್ತು ಆ ಪ್ರತಿಮೆಯು ಕಮಲದ ಒಳಭಾಗದ ಬಣ್ಣಕ್ಕೆ ಸಮನಾದ ಕಾಂತಿಯುಳ್ಳದ್ದೂ, ಕವಚದಿಂದ ಚಿತ್ರಿತವಾದುದೂ, ಪ್ರಸನ್ನಮುಖವುಳ್ಳದ್ದೂ, ರಕ್ತೋತ್ಪಲದಂತೆ ಪ್ರಭಾ ಮಂಡಲವುಳ್ಳದ್ದೂ ಆಗಿರಬೇಕು.

೨೭. ಕುಂಡಲದಿಂದ ಅಲಂಕರಿಸಿದ ಮುಖವುಳ್ಳದ್ದೂ, ಜೋಲುತ್ತಿರುವ ಹಾರವುಳ್ಳದ್ದೂ ಆಗಿದ್ದರೆ ಕರ್ತೃವಿಗೆ ಶುಭವನ್ನುಂಟುಮಾಡುವುದು. ಗ್ರಹಾಧಿಪನಾದ ಸೂರ್ಯನ ಪ್ರತಿಮೆಯು ಅಧಿಕ ಪ್ರಮಾಣದ ಅಂಗವುಳ್ಳದ್ದಾಗಿದ್ದರೆ ರಾಜಭಯವು. ಅಲ್ಪಪ್ರಮಾಣದ ಅಂಗವುಳ್ಳದ್ದಾಗಿದ್ದರೆ ಕರ್ತೃವಿಗೆ ಅಸಾಮರ್ಥ್ಯ ಪ್ರಾಪ್ತಿಯೆಂದು ತಿಳಿಯಬೇಕು.

ಖಾತೋದರ್ಯಾಂ ಕ್ಷುದ್ಭಯಮರ್ಥವಿನಾಶಃ ಕೃಶಾಂಗಾಯಾಂ ।
ಮರಣಂ ತು ಸಕ್ಷತಾಯಾಂ ಶಸ್ತ್ರನಿಪಾತೇನ ನಿರ್ದಿಶೇತ್ಕರ್ತುಃ ॥ ೨೮ ॥

ವಾಮೋನ್ನತಾ ತು ಪತ್ನೀಂ ದಕ್ಷಿಣಾವನತಾ ಹಿನಸ್ತ್ಯಾಯುಃ ।
ಅಂಧತ್ವಮೂರ್ಧ್ವದೃಷ್ಟಿಃ ಕರೋತಿ ಚಿಂತಾಮಧೋಮುಖೀದೃಷ್ಟಿಃ ॥ ೨೯ ॥

ಸರ್ವಪ್ರತಿಮಾಸ್ವೇವಂ ಶುಭಾsಶುಭಂ ಭಾಸ್ಕರೇಣೋಕ್ತಂ ।
ಬ್ರಹ್ಮಾ ಕಮಂಡಲುಕರಶ್ಚತುರ್ಮುಖಃ ಪಂಕಜಸ್ಥಶ್ಚ ॥ ೩೦ ॥

ಸ್ಕಂದಃ ಕುಮಾರರೂಪಃ ಶಕ್ತಿಧರೋ ಬರ್ಹಿಕೇತುಶ್ಚ ।
ಶುಕ್ಲಶ್ಚತುರ್ವಿಷಾಣೋ ದ್ವಿಪೋ ಮಹೇಂದ್ರಸ್ಯ ವಜ್ರಪಾಣಿತ್ವಂ ॥ ೩೧ ॥

---

೨೮. ಪ್ರತಿಮೆಯ ಹೊಟ್ಟೆ ಆಳವಾಗಿದ್ದರೆ ಕರ್ತನಿಗೆ ಹಸಿವಿನ ಬಾಧೆ, ಪ್ರತಿಮೆಯು ಕೃಶವಾದ ಅಂಗವುಳ್ಳದ್ದಾಗಿದ್ದರೆ ಕರ್ತೃವಿಗೆ ದ್ರವ್ಯನಾಶವುಂಟಾಗುವುದು. ಶಸ್ತ್ರವು ಬಿದ್ದು ಪ್ರತಿಮೆಗೆ ಗಾಯವಾಗಿದ್ದರೆ ಕರ್ತನಿಗೆ ಮರಣಪ್ರಾಪ್ತಿಯೆಂದೇ ಹೇಳಬೇಕು.

೨೯. ಪ್ರತಿಮೆಯ ಎಡಭಾಗ ಎತ್ತರವಾಗಿದ್ದರೆ ಯಜಮಾನನ ಪತ್ನಿಗೆ ಹಾನಿ. ಬಲಭಾಗವು ತಗ್ಗಾಗಿದ್ದರೆ ಕರ್ತೃವಿಗೆ ಆಯುಸ್ಸು ಹಾನಿ. ಆದ್ದರಿಂದ ಪ್ರತಿಮೆಯು ಸಮವಾಗಿರಬೇಕು. ಪ್ರತಿಮೆಗೆ ಮೇಲ್ನೋಟವಿದ್ದರೆ ಕರ್ತೃವಿಗೆ ಕಣ್ಣು ಕುರುಡಾಗುವುದು. ಅಧೋ ದೃಷ್ಟಿಯಿದ್ದರೆ ಕರ್ತೃವಿಗೆ ಚಿಂತೆ ಪ್ರಾಪ್ತಿಯಾಗುವುದು.

೩೦. ಎಲ್ಲಾ ಪ್ರತಿಮೆಗಳಿಂದಲೂ ಹೀಗೆ ಶುಭಾಶುಭ ಫಲವುಂಟಾಗುವುದೆಂದು ಸೂರ್ಯನೇ ಹೇಳಿದ್ದಾನೆ. ಬ್ರಹ್ಮಪ್ರತಿಮೆಗೆ ನಾಲ್ಕುಮುಖ, ಕೈಯಲ್ಲಿ ಕಮಂಡಲು, ಕಮಲಪೀಠ ಇವುಗಳಿರುವಂತೆ ರಚಿಸಬೇಕು.

೩೧-೩೨. ಷಣ್ಮುಖ ಪ್ರತಿಮೆಯು ಬಾಲಕಸ್ವರೂಪವಾಗಿ, ಶಕ್ತ್ಯಾಯುಧ ಮಯೂರಧ್ವಜ ಇವುಗಳನ್ನು ಧರಿಸಿರಬೇಕು. ಇಂದ್ರನ ಪ್ರತಿಮೆಯನ್ನು ರಚಿಸುವಾಗ ಅವನ ಆನೆಗೆ ನಾಲ್ಕುದಂತಗಳೂ ಅವನ ಕೈಯಲ್ಲಿ ವಜ್ರಾಯುಧವೂ ಇರುವಂತೆ

**ತಿರ್ಯಗೂರ್ಧ್ವಲಲಾಟಸಂಸ್ಥಂ ತೃತೀಯಮಪಿಲೋಚನಂ ಚಿಹ್ನಂ ॥೩೨॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಸೂರ್ಯಪ್ರತಿಮಾಲಕ್ಷಣ ವರ್ಣನಂ ನಾಮ ದ್ವಾತ್ರಿಂಶದುತ್ತರ ಶತತಮೋಽಧ್ಯಾಯಃ**



---

ರಚಿಸಬೇಕು. ಶಿವಪ್ರತಿಮೆಯ ಲಲಾಟ ಪ್ರದೇಶದಲ್ಲಿ ಊರ್ಧ್ವವಾಗಿರುವಂತೆ ಮೂರನೆಯಕಣ್ಣು ಇರಬೇಕು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮಿಾ ಕಲ್ಪದಲ್ಲಿ ಸೂರ್ಯಪ್ರತಿಮಾಲಕ್ಷಣ ವರ್ಣನೆಯೆಂಬ ನೂರಮೂವತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ತ್ರಯಸ್ತ್ರಿಂಶದುತ್ತರಶತತಮೋಽಧ್ಯಾಯಃ

॥ ನಾರದ ಉವಾಚ ॥

ತತೋಽಧಿವಾಸನಂ ಕುರ್ಯಾದ್ವಿಧಿದೃಷ್ಟೇನ ಕರ್ಮಣಾ ।
ಐಶಾನ್ಯಾಂ ದಿಶಿ ವೈ ಕುರ್ಯಾದಧಿವಾಸನಮಂಡಪಮ್ ॥ ೧ ॥

ಚತುಸ್ತೋರಣಸಂಪನ್ನಂ ಸರ್ವಾಲಂಕಾರಸಂಯುತಂ ।
ದಿಶಾಸು ವಿದಿಶಾಸ್ವೇವ ಪತಾಕಾಭಿಸ್ತು ಭೂಷಿತಂ ॥ ೨ ॥

ಆಗ್ನೇಯ್ಯಾಂ ದಿಶಿ ರಕ್ತಾ ಸ್ಯುಃ ಕೃಷ್ಣಾಃ ಸ್ಯುರ್ಯಾಮ್ಯನೈಋತೇ ।
ಶ್ವೇತಾದಿಕ್ಯಪರಸ್ಯಾಂ ತು ವಾಯವ್ಯಾಮೇವ ಪಾಂಡುರಾಃ ॥ ೩ ॥

---

### ನೂರಮೂವತ್ತಮೂರನೆಯ ಅಧ್ಯಾಯ

೧. ನಾರದರು ಹೇಳುತ್ತಾರೆ—ಹೀಗೆ ಪ್ರತಿಮೆಯನ್ನು ಮಾಡಿದಮೇಲೆ ಶಾಸ್ತ್ರದಲ್ಲಿ ಕಂಡ ವಿಧಾನದಂತೆ ಆ ಪ್ರತಿಮೆಗೆ ಅಧಿವಾಸಗಳನ್ನು ಮಾಡಬೇಕು.

೨. ಈಶಾನ್ಯದಿಕ್ಕಿನಲ್ಲಿ ಅಧಿವಾಸನಮಂಟಪವನ್ನು ರಚಿಸಬೇಕು. ಅದರ ನಾಲ್ಕು ಕಡೆಯೂ ತೋರಣಗಳಿಂದಲೂ ಸಮಸ್ತ ಅಲಂಕಾರಗಳಿಂದಲೂ ಕೂಡಿ ಇರಬೇಕು.

೩ ದಿಕ್ಕುಗಳಲ್ಲಿಯೂ, ವಿದಿಕ್ಕುಗಳಲ್ಲಿಯೂ ಎಂದರೆ ಆಗ್ನೇಯ ದಿಕ್ಕಿನಲ್ಲಿ ಕೆಂಪುಬಣ್ಣದ್ದು, ದಕ್ಷಿಣ ನೈಋತ್ಯಗಳಲ್ಲಿ ಕಪ್ಪುಬಣ್ಣದ್ದು, ಪಶ್ಚಿಮದಿಕ್ಕಿನಲ್ಲಿ ಬಿಳಿಯ ಬಣ್ಣದ್ದು, ವಾಯುವ್ಯದಿಕ್ಕಿನಲ್ಲಿ ಬಿಳಿಯದು, ಆದ ಸಣ್ಣ ಧ್ವಜಗಳನ್ನು ಕಟ್ಟಿ ಅಲಂಕರಿಸಬೇಕು.

ಚಿತ್ರಾ ಚೋತ್ತರಪಾರ್ಶ್ವೇ ತು ಪೀತಾ ಪೂರ್ವೋತ್ತರೇ ತಥಾ ।
ಶ್ರಿಯಮಾಯುರ್ಜಯಂ ಚೈವ ಬಲಂ ಯಶೋ ಯದೂತ್ತಮ ॥ ೪ ॥

ದದಾತಿ ಸಾ ವೀರ ಕೃತಾ ಸಂಪದರ್ಥೌ ನ ಸಂಶಯಃ ।
ಹಿತಾಯ ಸರ್ವಲೋಕಾನಾಂ ಮೃಣ್ಮಯೀ ಪ್ರತಿಮಾ ಭವೇತ್ ॥ ೫ ॥

ಸುಭಿಕ್ಷಕ್ಷೇಮದಾ ನಿತ್ಯಂ ಸರ್ವಾ ಮಣಿಮಯೀ ಕೃತಾ ।
ಗಾಂಗೇಯೀ ಪುಷ್ಟಿದಾ ಸ್ಯಾದ್ವೈ ರೌಪ್ಯಾ ಕೀರ್ತಿಪ್ರವರ್ತಿನೀ ॥ ೬ ॥

ಪ್ರಜಾವೃದ್ಧಿಂ ತಾಮ್ರಮಯೀ ಕುರ್ಯಾನ್ನಿತ್ಯಮಸಂಶಯಃ ।
ಭೂಮೇರ್ಲಾಭಂ ತು ವಿಪುಲಂ ಕುರ್ಯಾದಶ್ಮಮಯೀ ಸದಾ ॥ ೭ ॥

ಪ್ರಧಾನಪುರುಷಂ ಹಂತಿ ತ್ರಪುಲೋಹಮಯೀ ಸದಾ ।
ಸರ್ವದೇವಮಯಸ್ಯೈವಮರ್ಚಾಂ ಕುರ್ಯಾತ್ಪ್ರಯತ್ನತಃ ॥ ೮ ॥

---

೪. ಉತ್ತರದಿಕ್ಕಿನಲ್ಲಿ ಚಿತ್ರವರ್ಣದ ಧ್ವಜ, ಈಶಾನ್ಯದಲ್ಲಿ ಹಳದಿಯಬಣ್ಣದ ಧ್ವಜ ಈ ರೀತಿ ಕಟ್ಟಬೇಕು.

೫. ಅಯ್ಯಾ ಯದೂತ್ತಮನಾದ ವೀರನೇ ! ಧ್ವಜಗಳನ್ನು ಹೀಗೆ ಏರ್ಪಡಿಸಿದರೆ ಶ್ರೀಃ, ಜಯ, ಬಲ, ಯಶಸ್ಸು, ಸಂಪತ್ತು (ಹಣ) ಇವನ್ನು ಕೊಡುವುದು ಇದರಲ್ಲಿ ಸಂಶಯವಿಲ್ಲ.

೬-೭. ಮಣ್ಣಿನ ಪ್ರತಿಮೆಯು ಸರ್ವಲೋಕಗಳಿಗೂ ಹಿತವುಂಟುಮಾಡುವುದು. ಮಣಿಮಯ ಪ್ರತಿಮೆಯು ಸುಭಿಕ್ಷವನ್ನೂ ನಿತ್ಯಕ್ಷೇಮವನ್ನೂ ಉಂಟುಮಾಡುವುದು. ಚಿನ್ನದ ಪ್ರತಿಮೆಯು ಪುಷ್ಟಿಯನ್ನುಂಟುಮಾಡುವುದು. ಬೆಳ್ಳಿಯ ಪ್ರತಿಮೆಯು ಕೀರ್ತಿಕರವಾದುದೆನ್ನುವರು. ತಾಮ್ರಪ್ರತಿಮೆಯು ಯಾವಾಗಲೂ ಪ್ರಜಾವೃದ್ಧಿಯನ್ನುಂಟುಮಾಡುವುದರಲ್ಲಿ ಸಂಶಯವಿಲ್ಲ. ಶಿಲಾಪ್ರತಿಮೆಯು ಸದಾ ಅಧಿಕವಾದ ಭೂಲಾಭವನ್ನು ಉಂಟುಮಾಡುವುದು.

೮. ಸೀಸದ ಪ್ರತಿಮೆಯನ್ನು ಮಾಡಿಸಿದರೆ ಪ್ರಧಾನ ಪುರುಷನನ್ನು ಸಂಹರಿಸುವುದು. ಇದನ್ನೆಲ್ಲಾ ತಿಳಿದು ಸರ್ವದೇವಮಯನಾದ ಸೂರ್ಯನ ಪ್ರತಿಮೆಯನ್ನು ಪ್ರಯತ್ನಪಟ್ಟು ಸರಿಯಾಗಿ ಮಾಡಬೇಕು.

॥ ಸಾಂಬ ಉವಾಚ ॥

ಸರ್ವದೇವಮಯತ್ವಂ ಹಿ ಬ್ರೂಹಿ ಮೇ ಭಾಸ್ಕರಸ್ಯ ತು ।
ಸರ್ವದೇವಮಯೋಹ್ಯೇಷ ಕಥಂ ನಾರದ ಕಥ್ಯತೇ ॥ ೯ ॥

॥ ನಾರದ ಉವಾಚ ॥

ಸಾಧು ಸಾಂಬ ಮಹಾಬಾಹೋ ಶೃಣು ಮೇ ಪರಮಂ ವಚಃ ।
ಬುಧಸೋಮೌ ಸ್ಮೃತೌ ನೇತ್ರೇ ಲಲಾಟೇಚೇಶ್ವರಃ ಸ್ಥಿತಃ ॥ ೧೦ ॥

ಸುರಜ್ಯೇಷ್ಠಃ ಶಿರಸ್ತಸ್ಯ ಕಪೋಲೇsಸ್ಯ ಬೃಹಸ್ಪತಿಃ ।
ಏಕಾದಶ ತಥಾ ರುದ್ರಾಃ ಕಂಠಮಸ್ಯ ಸಮಾಶ್ರಿತಾಃ ॥ ೧೧ ॥

ನಕ್ಷತ್ರಾಣಿ ಗ್ರಹಾಶ್ಚೈವ ದಶನೇಷು ಸಮಾಶ್ರಿತಾಃ ।
ಧರ್ಮಾಧರ್ಮೌ ಚ ದೇವಸ್ಯ ಓಷ್ಠಸಂಪುಟಕೇ ಸ್ಥಿತೌ ॥ ೧೨ ॥

ಸರ್ವಶಾಸ್ತ್ರಮಯೀ ದೇವೀ ಜಿಹ್ವಾಯಾಂ ಚ ಸರಸ್ವತೀ ।
ದಿಶಶ್ಚ ವಿದಿಶಶ್ಚೈವ ಸರ್ವಾ ಶ್ರೋತ್ರೇಷು ಸಂಸ್ಥಿತಾಃ ॥ ೧೩ ॥

---

೯. ಸಾಂಬನು ಹೇಳುತ್ತಾನೆ—ಎಲೈ ನಾರದನೇ, ಸೂರ್ಯನು ಸರ್ವದೇವಮಯನು ಹೇಗೆ ಎಂಬುದನ್ನು ಹೇಳು ಎಂದನು.

೧೦-೧೧. ನಾರದರು ಹೇಳುತ್ತಾರೆ—ಮಹಾಬಾಹುವಾದ ಸಾಂಬನೇ! ನೀನು ಕೇಳಿದ್ದು ಸಾಧು. ನಾನು ಹೇಳಿದ್ದನ್ನು ಕೇಳು. ಬುಧ ಚಂದ್ರರಿಬ್ಬರೂ ಸೂರ್ಯನ ಎರಡು ಕಣ್ಣುಗಳು. ಸೂರ್ಯನ ಹಣೆಯಲ್ಲಿ ರುದ್ರನು ಇದ್ದಾನೆ. ತಲೆಯಲ್ಲಿ ಬ್ರಹ್ಮನೂ, ಕಪೋಲದಲ್ಲಿ ಬೃಹಸ್ಪತಿಯೂ, ಕುತ್ತಿಗೆಯ ಪ್ರದೇಶದಲ್ಲಿ ಏಕಾದಶರುದ್ರರೂ ಇದ್ದಾರೆ.

೧೨. ಸೂರ್ಯಪ್ರತಿಮೆಯ ಹಲ್ಲುಗಳಲ್ಲಿ ನಕ್ಷತ್ರಗಳೂ, ಗ್ರಹಗಳೂ, ಆಶ್ರಯ ಹೊಂದಿವೆ. ಧರ್ಮ, ಅಧರ್ಮ ಇವು ಸ್ವಾಮಿಯ ತುಟಿಗಳಲ್ಲಿರುವುವು.

೧೩. ಸರ್ವಶಾಸ್ತ್ರಸ್ವರೂಪಿಣಿಯಾದ ಸರಸ್ವತೀದೇವಿಯು ಅವನ ನಾಲಿಗೆಯಲ್ಲಿರುವಳು. ದಿಕ್ಕುಗಳೂ, ವಿದಿಕ್ಕುಗಳೂ ಇವೆಲ್ಲವೂ ಕಿವಿಗಳಲ್ಲಿ ನೆಲಸಿರುವುವು.

ಬ್ರಹ್ಮೇಂದ್ರೌ ತಾಲುದೇಶೇ ತು ಸ್ಥಿತೌ ದೇವೈಶ್ಚ ಪೂಜಿತೌ ।
ಆದಿತ್ಯಾ ದ್ವಾದಶ ವಿಭೋರ್ಭ್ರುವೋರ್ಮಧ್ಯೇ ಸಮಾಶ್ರಿತಾಃ ॥ ೧೪ ॥

ಋಷಯೋ ರೋಮಕೂಪೇಷು ಸಮುದ್ರಾ ಜಠರೇ ಸ್ಥಿತಾಃ ।
ಯಕ್ಷಕಿನ್ನರಗಂಧರ್ವಾಃ ಪಿಶಾಚಾ ದಾನವಾಸ್ತಥಾ ॥ ೧೫ ॥

ರಾಕ್ಷಸಾಶ್ಚ ಗಣಾಸ್ಸರ್ವೇ ಹೃದಯೇ ಸ್ಯುಃ ಸ್ಥಿತಾ ರವೇಃ ।
ನದ್ಯೋ ಬಾಹುಗತಾಶ್ಚೈವ ನಗಾಃ ಕಕ್ಷಾಂತರೇ ಸ್ಥಿತಾಃ ॥ ೧೬ ॥

ಪೃಷ್ಠ ಮಧ್ಯೇ ಸ್ಥಿತೋ ಮೇರುಸ್ತನಯೋರಂತರೇ ಕುಜಃ ।
ತಸ್ಯ ಪುತ್ರೋ ಧರ್ಮರಾಜಃ ಸ್ಥಿತೋ ವೈ ನಾಭಿಮಂಡಲೇ ॥ ೧೭ ॥

ಕಟಿದೇಶೇ ಪೃಥಿವ್ಯಾದ್ಯಾ ಲಿಂಗೇ ಸೃಷ್ಟಿಃ ಸಮಾಶ್ರಿತಾಃ ।
ಜಾನುನೀ ಚಾಶ್ವಿನೀದೇವಾ ವೂರೂ ತಸ್ಯಾಚಲಾ ಸ್ಮೃತಾಃ ॥ ೧೮ ॥

---

೧೪. ದೇವತೆಗಳಿಂದ ಪೂಜಿತರಾದ ಬ್ರಹ್ಮ, ವಿಷ್ಣು, ಇಂದ್ರ ಇವರು ದವಡೆಯಲ್ಲಿರುವವರು. ದ್ವಾದಶಾದಿತ್ಯರು ಸ್ವಾಮಿಯ ಹುಬ್ಬುಗಳ ಮಧ್ಯದಲ್ಲಿ ಆಶ್ರಯ ಹೊಂದಿರುವರು.

೧೫. ಋಷಿಗಳು ರೋಮಕೂಪಗಳಲ್ಲಿ ನೆಲಸಿರುವರು. ಸಮುದ್ರಗಳು ಜಠರದಲ್ಲಿ ಆಶ್ರಯಹೊಂದಿವೆ. ಯಕ್ಷರೂ, ಕಿನ್ನರರೂ, ಗಂಧರ್ವರೂ, ಪಿಶಾಚರೂ, ದಾನವರೂ, ಮತ್ತು ರಾಕ್ಷಸರೂ, ಸರ್ವಗಣಗಳೂ, ಸೂರ್ಯಪ್ರತಿಮೆಯ ಹೃದಯದಲ್ಲಿ ಆಶ್ರಯ ಹೊಂದಿದಾರೆ.

೧೬. ನದಿಗಳು ತೋಳುಗಳಲ್ಲಿ ಆಶ್ರಯ ಹೊಂದಿರುವುವು. ಪರ್ವತಗಳು ಕಂಕುಳ ಸಂದಿಯಲ್ಲಿರುವುವು.

೧೭. ಬೆನ್ನಿನ ಮಧ್ಯದಲ್ಲಿ ಮೇರುಪರ್ವತವಿರುವುದು ಸ್ತನಗಳ ಮಧ್ಯಭಾಗದಲ್ಲಿ ಕುಜನಿರುವನು. ಸೂರ್ಯನ ಮಗನಾದ ಧರ್ಮರಾಜನು (ಯಮನು) ಸೂರ್ಯನ ಹೊಕ್ಕಳಿನಲ್ಲಿರುವನು.

೧೮. ಪೃಥಿವೀ ಮೊದಲಾದುವು ಸೊಂಟದಲ್ಲಿ ಆಶ್ರಯ ಹೊಂದಿರುವುವು. ಸೃಷ್ಟಿಯು ಲಿಂಗಪ್ರದೇಶದಲ್ಲಿ ಆಶ್ರಯ ಹೊಂದಿರುವುದು. ಅಶ್ವಿನೀ ದೇವತೆಗಳು ಎರಡು ಮಂಡಿಗಳಲ್ಲಿದಾರೆ ಅವನ ತೊಡೆಗಳಲ್ಲಿ ಬೆಟ್ಟಗಳು ಆಶ್ರಯಹೊಂದಿರುವುವು.

ಸಪ್ತಪಾತಾಲಲೋಕಾಸ್ತು ನಖಮಧ್ಯೇ ಸಮಾಶ್ರಿತಾಃ ।
ಸಸಾಗರವನಾಪೃಥ್ವೀ ಪಾದಮಧ್ಯೇಽಸ್ಯ ವರ್ತತೇ ॥ ೧೯ ॥

ದೇವಃ ಕಾಲಾಗ್ನಿರುದ್ರೋ ಯೋ ದಂತಾಂತೇಷು ಸಮಾಶ್ರಿತಃ ।
ಸರ್ವದೇವಮಯೋ ಭಾನುಃ ಸರ್ವದೇವಾತ್ಮಕಸ್ತಥಾ ॥ ೨೦ ॥

ವ್ಯಂಗೇಷು ವಾಯವಶ್ಚೈವ ಲೋಕಾಲೋಕಂ ಚರಾಚರಂ ।
ವ್ಯಾಪ್ತಂ ಕರ್ಮಶರೀರೇಷು ವಾಯುನಾ ತಸ್ಯ ವೈ ವಿಭೋಃ ॥ ೨೧ ॥

ಸ ಏಷ ಭಗವಾನರ್ಕೋ ಭೂತಾನುಗ್ರಹಣೇ ಸ್ಥಿತಃ ।
ಏತತ್ತೇ ಪರಮಂ ಜ್ಞಾನಮೇತತ್ತೇಽಪರಮಂ ಪದಂ ॥ ೨೨ ॥

---

೧೯. ಏಳು ಪಾತಾಳಲೋಕಗಳೂ ಉಗುರುಗಳ ಮಧ್ಯವನ್ನು ಆಶ್ರಯಿಸಿವೆ. ಸಾಗರಗಳು, ವನಗಳು ಇವುಗಳಿಂದ ಕೂಡಿದ ಪೃಥಿವಿಯು ಪಾದಗಳ ಮಧ್ಯದಲ್ಲಿದೆ.

೨೦. ಕಾಲಾಗ್ನಿ ರುದ್ರದೇವನು ಸೂರ್ಯನ ಹಲ್ಲುಗಳ ಸಂದಿಗಳಲ್ಲಿರುವನು. ಈ ಪ್ರಕಾರ ಸೂರ್ಯನು ಸರ್ವದೇವಪೂರ್ಣನೂ ಸರ್ವದೇವಸ್ವರೂಪನೂ ಆಗಿದ್ದಾನೆ.

೨೧. ಅವನ ವ್ಯಂಗಗಳಲ್ಲಿ ವಾಯುವೂ ಆ ಸ್ವಾಮಿಯ ಕರ್ಮಶರೀರಗಳಲ್ಲಿ ವಾಯುವಿನ ಚಲನಾದಿಕರ್ಮಗಳೂ, ನಡಗೆಯಲ್ಲಿ ಲೋಕಾಲೋಕಪರ್ವತವೂ (ಚರಾಚರ) ಸ್ಥಾವರ ಜಂಗಮಾತ್ಮಕ ಪ್ರಪಂಚವೂ ವಾಸಿಸಿವೆ.

೨೨. ಈ ರೀತಿ ಭಗವಂತನಾದ ಸೂರ್ಯನು ಪ್ರಾಣಿಗಳಿಗೆ ಅನುಗ್ರಹಮಾಡುವ ಕೆಲಸದಲ್ಲಿ ನಿರತನಾಗಿದ್ದಾನೆ. ಇದರ ಶ್ರವಣವು ನಿನಗೆ ಪರಮಜ್ಞಾನವು ಇದೇ ನಿನಗೆ ಪರಮಪದವು. (ಸ್ಥಾನವು.)

ತಸ್ಯ ಸ್ಥಾನವಿಭಾಗೇನ ಪ್ರತಿಮಾಸ್ಥಾಪನಂ ಯಥಾ ।
ತತ್ತೇ ಸರ್ವಂ ಪ್ರವಕ್ಷ್ಯಾಮಿ ಯಥೋಕ್ತಂ ಬ್ರಹ್ಮಣಾ ಪುರಾ ॥ ೨೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿಸಪ್ತಮೀ ಕಲ್ಪೇ ಸಾಂಬೋಪಾಖ್ಯಾನೇ ಪ್ರತಿಮಾ ಪ್ರತಿಷ್ಠಾಕಲ್ಪೇ ವಿಶ್ವರೂಪ ವರ್ಣನಂ ನಾಮ ತ್ರಯಸ್ತ್ರಿಂಶದುತ್ತರ ಶತತಮೋಽಧ್ಯಾಯಃ



---

೨೩. ಅದರ ಸ್ಥಾನ ವಿಭಾಗಮಾಡಿಕೊಂಡು ಪ್ರತಿಮಾನಿರ್ಮಾಣವನ್ನು ಹೇಗೆ ಮಾಡಬೇಕೆಂಬುದನ್ನು ಪೂರ್ವದಲ್ಲಿ ಬ್ರಹ್ಮನು ಹೇಳಿದ ಪ್ರಕಾರವೇ ಎಲ್ಲವನ್ನೂ ಸ್ಪಷ್ಟವಾಗಿ ಹೇಳುವೆನು ಎಂದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ನೂರಮೂವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಚತುಸ್ತ್ರಿಂಶದುತ್ತರಶತತಮೋಽಧ್ಯಾಯಃ

॥ ನಾರದ ಉವಾಚ ॥

ಪ್ರತಿಪಚ್ಚ ದ್ವಿತೀಯಾ ಚ ಚತುರ್ಥೀ ಪಂಚಮೀ ತಥಾ ।
ತ್ರಯೋದಶೀ ಚ ದಶಮೀ ಪೌರ್ಣಮಾಸೀ ತು ಕೀರ್ತಿತಾಃ ॥ ೧ ॥

ಸೋಮೋ ಬೃಹಸ್ಪತಿಶ್ಚೈವ ಶುಕ್ರಶ್ಚೈವ ಬುಧಸ್ತಥಾ ।
ಏತೇ ಸೌಮ್ಯಾ ಗ್ರಹಾಃ ಪ್ರೋಕ್ತಾಃ ಪ್ರತಿಷ್ಠಾಯಜ್ಞಕರ್ಮಣಿ ॥ ೨ ॥

ತ್ರಿಷೂತ್ತರಾಸು ರೇವತ್ಯಾಮಶ್ವಿನ್ಯಾಂ ಬ್ರಾಹ್ಮಭೇ ತಥಾ ।
ಪುನರ್ವಸ್ವೋಸ್ತಥಾ ಹಸ್ತೇ ವಾಸವೇ ಶ್ರವಣೇಥ ವಾ
ಭರಣ್ಯಾಂ ಚೈವ ನಕ್ಷತ್ರೇ ಭಾನೋಃ ಸ್ಥಾಪನಮುತ್ತಮಂ ॥ ೩ ॥

---

### ನೂರಮೂವತ್ತನಾಲ್ಕನೆಯ ಅಧ್ಯಾಯ

೧. ನಾರದರು ಹೇಳುತ್ತಾರೆ—ಪಾಡ್ಯ, ಬಿದಿಗೆ, ಚತುರ್ಥಿ, ಪಂಚಮಿ, ತ್ರಯೋದಶೀ, ದಶಮಿ, ಪೂರ್ಣಿಮೆ ಈ ತಿಥಿಗಳು ಪ್ರತಿಮಾಸ್ಥಾಪನೆಗೆ ಶ್ರೇಷ್ಠವಾದುವುಗಳೆಂದು ಹೇಳಿದೆ.

೨. ಚಂದ್ರ, ಬೃಹಸ್ಪತಿ, ಶುಕ್ರ, ಬುಧ ಈ ಗ್ರಹಗಳು ಪ್ರತಿಮಾಪ್ರತಿಷ್ಠಾಯಜ್ಞಕಾರ್ಯ ಮಾಡುವಾಗ ಸೌಮ್ಯಗಳಾಗಿರಬೇಕು.

೩. ಉತ್ತರೆ, ಉತ್ತರಾಷಾಢ, ಉತ್ತರಾಭಾದ್ರೆ, ರೇವತೀ, ಅಶ್ವಿನೀ, ರೋಹಿಣೀ, ಪುನರ್ವಸು, ಹಸ್ತ, ಜ್ಯೇಷ್ಠ, ಶ್ರವಣ, ಅಥವಾ ಭರಣೀ ಈ ನಕ್ಷತ್ರಗಳಲ್ಲಿ ಸೂರ್ಯಸ್ಥಾಪನೆಯು ಶ್ರೇಷ್ಠವು. (ಸೂರ್ಯದೇವನ ಪ್ರತಿಷ್ಠೆಮಾಡಲು ಮೇಲೆ ಹೇಳಿರುವ ನಕ್ಷತ್ರಗಳೇ ಉತ್ತಮವೆಂದು ಭಾವವು.)

ಶೋಧಯಿತ್ವಾ ತು ವೈ ಭೂಮಿಂ ತುಷಕೇಶವಿವರ್ಜಿತಾಂ ।
ವಾಲುಕಾಂಗಾರಪಾಷಾಣಾಸ್ಥಿವಿಹೀನಾಂ ವಿಶೋಧ್ಯ ತಂ ॥ ೪ ॥

ಚತುರ್ಹಸ್ತ್ರಸಮಾಯುಕ್ತಾ ವೇದೀ ವಿಸ್ತರತೋ ರವೇಃ ॥ ೫ ॥

ಮಂಡಪಸ್ತು ಪ್ರಮಾಣೇನ ದಶಹಸ್ತೈಃ ಸಮಂತತಃ ।
ಮಂಡಲಂ ವೃಕ್ಷಶಾಖಾಭಿಃ ಕಾರಯೇದ್ವಿಧಿಪೂರ್ವಕಂ ॥ ೬ ॥

ನದೀ ಸಂಗಮತೀರೋತ್ಥಾಂ ಮೃತ್ತಿಕಾಂ ಚ ಸಮಾನಯೇತ್ ।
ಉಪಲಿಪ್ಯ ತತೋ ಭೂಮಿಂ ಕಾರಯೇತ್ಕುಂಡಮುತ್ತಮಂ ॥ ೭ ॥

ಚತುರಸ್ರಂ ಶ್ರಿಯಾ ಯುಕ್ತಂ ಪೂರ್ವ ಕುಂಡಂ ತು ಕಾರಯೇತ್ ।
ದಕ್ಷಿಣೇಚಾರ್ಧಚಂದ್ರಂ ಸ್ಯಾದ್ವಾರುಣ್ಯಾಂ ದಿಶಿ ವರ್ತುಲಂ ॥ ೮ ॥

---

೪. ಪ್ರತಿಷ್ಠಾಪನ ಸ್ಥಳದಲ್ಲಿ ನೆಲವನ್ನು ಅಗೆದು ಹೊಟ್ಟು ಕೂದಲು ಮುಂತಾದ್ದು ಇಲ್ಲದಂತೆಯೂ, ಕಲ್ಲು, ಮೂಳೆ ಇಲ್ಲದಂತೆಯೂ ಭೂಮಿಯನ್ನು ಶೋಧಿಸಿ

೫. ಸೂರ್ಯನ ವೇದಿಕೆಯನ್ನು ನಾಲ್ಕುಹಸ್ತ ಅಳತೆಯ ವಿಸ್ತಾರವಾಗಿ ಮಾಡಿ ಅದರ ಸುತ್ತಲೂ ಹತ್ತುಹಸ್ತ ಅಳತೆಯ ಮಂಡಲವನ್ನು ಮಾಡಬೇಕು.

೬. ವಿಧಿಪ್ರಕಾರ ಕಡಿದ ಮರದ ಕೊಂಬೆಗಳಿಂದ ಮಂಡಲವನ್ನು ಮಾಡಿಸಬೇಕು. ನದೀಸಂಗಮಸ್ಥಳದ ಅಥವಾ ನದೀತೀರದ ಮಣ್ಣನ್ನು ತರಬೇಕು.

೭. ಆನಂತರ ನೆಲವನ್ನು ಸಾರಿಸಿ ಶ್ರೇಷ್ಠವಾದ ಅಗ್ನಿಕುಂಡವನ್ನು ಮಾಡಬೇಕು. ಪೂರ್ವಭಾಗದಲ್ಲಿ ಚೌಕವಾಗಿ ಅಂದವಾಗಿರುವಂತೆ ಒಂದು ಕುಂಡವನ್ನು ರಚಿಸಬೇಕು.

೮. ದಕ್ಷಿಣದಿಕ್ಕಿನಲ್ಲಿ ಅರ್ಧಚಂದ್ರಾಕೃತಿಯಾಗಿ ಒಂದು ಕುಂಡವನ್ನೂ ಪಶ್ಚಿಮದಿಕ್ಕಿನಲ್ಲಿ ವರ್ತುಲಾಕಾರವಾಗಿ ಇರುವ ಒಂದು ಕುಂಡವನ್ನೂ ಮಾಡಿಸಬೇಕು.

ಪದ್ಮಾಕಾರಂ ತು ವೈ ಕುರ್ಯಾದುತ್ತರೇ ಚ ವಿಚಕ್ಷಣಃ ।
ತೋರಣಾನಿ ತತಃ ಕುರ್ಯಾತ್ಪಂಚಹಸ್ತಾನಿ ಸುವ್ರತ ॥ ೯ ॥

ನ್ಯಗ್ರೋಧೋದುಂಬರೌ ಚೈವ ಬಿಲ್ವಪಾಲಾಶಮೇವ ಚ ।
ಅಶ್ವತ್ಥಶ್ಚ ಶಮೀ ಚೈವ ಚಂದನಶ್ಚೇತಿ ಕೀರ್ತಿತಾಃ ॥ ೧೦ ॥

ಶುಕ್ಲವಸ್ತ್ರಸಮಾಯುಕ್ತಶ್ಚಿತ್ರ ಪಟ್ಟಸಮನ್ವಿತಃ ।
ಜಪಮಾಲಾನ್ವಿತಃ ಕುರ್ಯಾತ್ತೋರಣಾನಿ ವಿಚಕ್ಷಣಃ ॥ ೧೧ ॥

ಅಗ್ನಿಮೀಳೇತಿ ಮಂತ್ರೇಣ ಯಜೇದ್ವೈ ಪೂರ್ವತೋರಣಂ ।
ಇಷೇತ್ವೋರ್ಜೇತಿ ಮಂತ್ರೇಣ ಯಜೇದ್ದಕ್ಷಿಣತೋರಣಂ ॥ ೧೨ ॥

ಅಗ್ನ ಆಯಾಹಿ ಮಂತ್ರೇಣ ಪಶ್ಚಿಮಂ ತು ಸಮರ್ಚಯೇತ್ ।
ಶನ್ನೋದೇವೀತಿ ಮಂತ್ರೇಣ ಯಜೇದುತ್ತರ ತೋರಣಂ ॥ ೧೩ ॥

---

೯. ಬುದ್ಧಿವಂತನಾದವನು ಉತ್ತರದಿಕ್ಕಿನಲ್ಲಿ ಪದ್ಮದ ಆಕಾರದ ಕುಂಡವನ್ನು ರಚಿಸಬೇಕು. ಅಯ್ಯಾ ಸುವ್ರತನೇ! ಅನಂತರ ಐದು ಹಸ್ತಪ್ರಮಾಣದ ತೋರಣಗಳನ್ನು ರಚಿಸಬೇಕು.

೧೦. ಆಲ, ಅತ್ತಿ, ಬಿಲ್ವ, ಮುತ್ತುಗ, ಅರಳಿ, ಬನ್ನಿ, ಚಂದನ ಇವುಗಳು (ಪತ್ರಗಳು) ಅವಕ್ಕೆ (ತೋರಣಕ್ಕೆ) ಅರ್ಹಗಳು.

೧೧. ಅಯ್ಯಾ ಬುದ್ಧಿಶಾಲಿಯೇ! ಬಿಳಿಯ ಬಟ್ಟೆಯನ್ನುಟ್ಟು ಚಿತ್ರವರ್ಣದ ಪಟ್ಟೆಯ ವಸ್ತ್ರದಿಂದಲೂ, ಜಪಮಾಲೆಯಿಂದಲೂ ಯುಕ್ತನಾಗಿ ತೋರಣಗಳ ಧ್ವಜಾದಿಗಳನ್ನು ರಚಿಸಬೇಕು.

೧೨. ".ಅಗ್ನಿಮೀಳೆ" ಎಂಬ ಮಂತ್ರದಿಂದ ಪೂರ್ವದಿಕ್ಕಿನ ತೋರಣವನ್ನು ಪೂಜಿಸಬೇಕು. "ಇಷೇತ್ವೋರ್ಜೇತ್ವಾ" ಎಂಬ ಮಂತ್ರದಿಂದ ದಕ್ಷಿಣದ ಕಡೆಯ ತೋರಣವನ್ನು ಪೂಜಿಸಬೇಕು.

೧೩. "ಅಗ್ನ ಆಯಾಹಿ" ಎಂಬ ಮಂತ್ರದಿಂದ ಪಶ್ಚಿಮದಕಡೆಯ ತೋರಣವನ್ನು ಪೂಜಿಸಬೇಕು. ಶನ್ನೋದೇವೀ ಎಂಬ ಮಂತ್ರದಿಂದ ಉತ್ತರದ ತೋರಣವನ್ನು ಪೂಜಿಸಬೇಕು.

ಕಲಶಾಂಸ್ತು ಸಮಾದಾಯ ಗರ್ಭೇ ಹೇಮಸಮನ್ವಿತಾನ್ ।
ಶ್ವೇತಚಂದನಪಂಕೇನ ಕಂಠೇ ಸ್ವಸ್ತಿಕಭೂಷಣಾನ್ ॥ ೧೪ ॥

ಯವಶಾಲಿಶರಾವಾನ್ನವಸ್ತ್ರಾಲಂಕಾರ ವಿಗ್ರಹಾನ್ ।
ಆಜಿಘ್ರೇತಿ ಚ ಮಂತ್ರೇಣ ಕಲಶೇಷು ನಿವೇಶಯೇತ್ ॥ ೧೫ ॥

ದುಕೂಲೈಶ್ಚಿತ್ರಪಟ್ಟೈಶ್ಚ ವೇಷ್ಟಯೇತ್ಸ್ತಂಭ ಮಾಲಿಕಾಂ ।
ಧ್ವಜಾದರ್ಶ ಪತಾಕಾಭಿಃ ಚಾಮರೈಸ್ತು ವಿತಾನಕೈಃ ॥ ೧೬ ॥

ಶಂಖಘಂಟಾನಿನಾದೈಶ್ಚ ಗೇಯಮಂಗಲವಾಚನೈಃ ।
ತೂರ್ಯಭೇರೀ ನಿನಾದೈಶ್ಚ ವೇದಧ್ವನಿಸಮನ್ವಿತೈಃ ॥ ೧೭ ॥

ಪುಣ್ಯೈಶ್ಚ ಜಯಶಬ್ದೈಶ್ಚ ಕಾರಯೇತ ಮಹೋತ್ಸವಂ ।
ಪತಾಕಾಭಿರ್ವಿಚಿತ್ರಾಭಿಃ ಪೂಜಾಮಾಲ್ಯೋಪಶೋಭಿತಂ ॥ ೧೮ ॥

---

೧೪-೧೫. ಕಲಶದೊಳಗೆ ಸುವರ್ಣವನ್ನು ಹಾಕಿ ಅವುಗಳ ಕಂಠಗಳಲ್ಲಿ ಸ್ವಸ್ತಿಕದ ಆಕಾರಗಳನ್ನು ಬಿಳಿಯಗಂಧದಿಂದ ಚಿತ್ರಿಸಿ ಕಲಶಗಳನ್ನು ಸಿದ್ಧಮಾಡಿಕೊಂಡು ಅಕ್ಕಿ, ಬತ್ತ, ಶರಾವ, ಅನ್ನ, ವಸ್ತ್ರ, ಭೂಷಣ ಇವುಗಳಿಂದ ಯುಕ್ತವಾಗಿಮಾಡಿ, ಪ್ರತಿಮೆಗಳನ್ನು ಆಜಿಘ್ರ ಎಂಬ ಮಂತ್ರಪೂರ್ವಕವಾಗಿ ಕಲಶಗಳಲ್ಲಿಡಬೇಕು.

೧೬. ಸಾಲಾಗಿ ನೆಟ್ಟಿರುವ ಕಂಬಗಳಿಗೆ ರೇಷ್ಮೆಯ ಬಟ್ಟೆಗಳನ್ನು ಬಗೆಬಗೆಯ ಬಣ್ಣದ ಪಟ್ಟೆಯ ಬಟ್ಟೆಗಳನ್ನು ಸುತ್ತಬೇಕು. ಧ್ವಜಪಟಗಳು, ಕನ್ನಡಿ, ಸಣ್ಣಬಾವುಟಗಳು, ಚಾಮರಗಳು, ಮೇಲ್ಕಟ್ಟು ಇವುಗಳನ್ನು ಕಟ್ಟಬೇಕು. (ಬಿಸಿಲಿನ ತಾಪವನ್ನು ಹೋಗಲಾಡಿಸುವುದಕ್ಕೆ ಮೇಲ್ಕಟ್ಟು ಕಟ್ಟುವುದು ರೂಢಿ.)

೧೭. ಶಂಖಧ್ವನಿ, ಘಂಟಾನಾದ, ಗಾನ, ಮಂಗಳವಾಚನ, ವಾದ್ಯ, ನಗಾರಿ, ಇವುಗಳ ಶಬ್ದಗಳು ವೇದಘೋಷ, ಪುಣ್ಯಕರವಾದ ಜಯಶಬ್ದ, ಇವುಗಳನ್ನು ಮಾಡುತ್ತಾ ದೊಡ್ಡ ಉತ್ಸವವನ್ನು ನಡೆಯಿಸಬೇಕು.

೧೮-೧೯. ವಿಚಿತ್ರವಾದ ಪುಷ್ಪಮಾಲಿಕೆಗಳನ್ನೂ ಪತಾಕೆಗಳನ್ನೂ ಕಟ್ಟಿ ಶೋಭಿಸುತ್ತಿರುವುದೂ, ಆಶ್ಚರ್ಯಕರವಾದ ಹೂವಿನಸರದ ಮೇಲ್ಕಟ್ಟುಳ್ಳದ್ದೂ, ಬಿಡಿ

ವಿಚಿತ್ರಸ್ರಗ್ವಿತಾನಾಢ್ಯಂ ಪ್ರಕೀರ್ಣಕುಸುಮಾಂಕುರಂ ।
ತನ್ಮಧ್ಯೇ ತು ಕುಶಾಸ್ತೀರ್ಣೇ ದೇವಾರ್ಚಾಂ ಸ್ಥಾಪಯೇದ್ಬುಧಃ ॥ ೧೯ ॥

ಪತಾಕಾಂ ಪೀತವರ್ಣಾಂ ತು ಪೂರ್ವೇ ಶಕ್ರಾಯ ದಾಪಯೇತ್ ।
ಆಗ್ನೇಯ್ಯಾಂ ರಕ್ತವರ್ಣಾಭಾಂ ಯಮಾಶಾಯಾಂ ಯಮೋಪಮಂ॥೨೦॥

ನೀಲಾಂಜನ ಸಮಪ್ರಖ್ಯಾಂ ನೈಋತ್ಯಾಂ ಚ ಪ್ರದಾಪಯೇತ್ ।
ವಾರುಣ್ಯಾಂ ಸಿತವರ್ಣಾಂ ಚ ಕೃಷ್ಣಾಂ ವಾಯವ್ಯಗೋಚರೇ ॥ ೨೧ ॥

ಹರಿತಾಂ ಯಕ್ಷರಾಜಾಯ ಐಶಾನ್ಯಾಂ ಸರ್ವವರ್ಣಿಕಾಂ ।
ಶ್ವೇತರಕ್ತಕಚೂರ್ಣೇನ ಪದ್ಮಮಾಲೇಖಯೇತ್ತತಃ ॥ ೨೨ ॥

ವೈದ್ಯಾವೇದೀತಿ ಮಂತ್ರೇಣ ವೇದ್ಯಾ ಆಲಭನಂ ಭವೇತ್ ।
ಪೂರ್ವಾಗ್ರಾನುತ್ತರಾಗ್ರಾಂಶ್ಚ ಕುಶಾನಾಸ್ತೀರ್ಯ ಯತ್ನತಃ ॥ ೨೩ ॥

---

ಹೂಗಳನ್ನು ಹಾಸಿರತಕ್ಕದ್ದೂ, ಆದ ವೇದಿಕಾಪ್ರದೇಶದ ಮಧ್ಯೆ ಪ್ರಾಜ್ಞನು ದರ್ಭೆಯನ್ನು ಹಾಸಿ ದೇವನ ಅರ್ಚನಾಮೂರ್ತಿಯನ್ನು ಅಲ್ಲಿರಿಸಬೇಕು.

೨೦. ಇಂದ್ರನ ಹೆಸರಿನಲ್ಲಿ ಪೂರ್ವದಿಕ್ಕಿನಲ್ಲಿ ಹಳದಿಯ ಬಾವುಟವನ್ನು ನೆಡಬೇಕು. ಆಗ್ನೇಯ ದಿಕ್ಕಿನಲ್ಲಿ ಅಗ್ನಿಯ ಹೆಸರಿನಲ್ಲಿ ಕೆಂಪುಬಾವುಟವನ್ನೂ ದಕ್ಷಿಣ ದಿಕ್ಕಿನಲ್ಲಿ ಯಮನ ಹೆಸರಿನಲ್ಲಿ ಕರಿಯಬಾವುಟವನ್ನೂ

೨೧. ನೈಋತ್ಯ ದಿಕ್ಕಿನಲ್ಲಿ ನಿಋಋತಿಯ ಅಂಕಿತದಲ್ಲಿ ಕಾಡಿಗೆಯಂತೆ ಬಣ್ಣವುಳ್ಳ ಬಾವುಟವನ್ನೂ, ಪಶ್ಚಿಮದಲ್ಲಿ ವರುಣನ ಹೆಸರಿನಲ್ಲಿ ಬಿಳಿಯ ಬಣ್ಣದ ಬಾವುಟವನ್ನೂ

೨೨. ವಾಯವ್ಯದಲ್ಲಿ ವಾಯುದೇವನ ಹೆಸರಿನಲ್ಲಿ ನೀಲವರ್ಣದ ಬಾವುಟವನ್ನೂ, ಉತ್ತರದಿಕ್ಕಿನಲ್ಲಿ ಕುಬೇರನ ಹೆಸರಿನಲ್ಲಿ ಹಸುರು ಬಾವುಟವನ್ನೂ ಈಶಾನ್ಯ ದಿಕ್ಕಿನಲ್ಲಿ ಈಶಾನನ ಅಂಕಿತದಲ್ಲಿ ಚಿತ್ರವರ್ಣದ ಬಾವುಟವನ್ನೂ ರಚಿಸಬೇಕು. (ಕಟ್ಟಬೇಕು.) ಬಿಳಿಯಬಣ್ಣದ ಮತ್ತು ಕೆಂಪುಬಣ್ಣದ ರಂಗೋಲಿಗಳಿಂದ ಮಧ್ಯೆ ಪದ್ಮದ ಆಕಾರವನ್ನು ಚಿತ್ರಿಸಬೇಕು.

೨೩-೨೪. "ವೇದ್ಯಾವೇದಿ" ಎಂಬ ಮಂತ್ರದಿಂದ ಆ ಜಗಲಿಯನ್ನು ಸುತ್ತಲೂ ಕೈಯಿಂದ ಸವರಬೇಕು. ದರ್ಭೆಗಳನ್ನು ಪೂರ್ವಾಗ್ರಗಳಾಗಿಯೂ ಉತ್ತರಾಗ್ರಗಳಾ

ಯೋಗೇಯೋಗೇತಿ ಮಂತ್ರೇಣ ಕುಶೈಶ್ಚಾಸ್ತರಣಂ ಭವೇತ್ ।
ಶಯ್ಯಾ ತತ್ರೈವ ಕರ್ತವ್ಯಾ ದಿವ್ಯಾಸ್ತರಣಸಂಯುತಾ ॥ ೨೪ ॥

ಗಡುಕೇ ದ್ವೇ ವಿಚಿತ್ರೇ ತು ತನ್ಮಧ್ಯೇ ಸ್ಥಾಪಯೇದ್ಬುಧಃ ।
ವಿಚಿತ್ರದೀಪಮಾಲಾಭಿ ರ್ಭಕ್ಷ್ಯಭೋಜ್ಯಾನ್ನಪಾನಕೈಃ ॥ ೨೫ ॥

ಪೂಪಕಾನ್ಸುವಿಚಿತ್ರಾನ್ವೈ ಮೋದಕಾಂಶ್ಚ ಪ್ರದಾಪಯೇತ್ ।
ಪಾಯಸಂ ಕೃಶರಂ ಚೈವ ದಧ್ಯೋದನಸಮನ್ವಿತಂ ॥ ೨೬ ॥

ದಧಿಚಂದ್ರಸಮಪ್ರಖ್ಯಂ ಶುಭಚ್ಛತ್ರಂ ಚ ವಿನ್ಯಸೇತ್ ॥ ೨೭ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ
ಸಾಂಬೋಪಾಖ್ಯಾನೇ ಸೂರ್ಯಪ್ರತಿಷ್ಠಾಯಾಂ ಮಂಡಲ ವಿಧಿ
ವರ್ಣನಂ ನಾಮ ಚತುಸ್ತ್ರಿಂಶದುತ್ತರ ಶತತಮೋಽಧ್ಯಾಯಃ

---

ಗಿಯೂ ಇರಿಸಿ "ಯೋಗೇ ಯೋಗೇ" ಎಂಬ ಮಂತ್ರದಿಂದ ಆ ದರ್ಭೆಗಳನ್ನು ಹರಡಬೇಕು. ಅದರ ಮೇಲೆ ಒಳ್ಳೆಯ ಬಟ್ಟೆಯನ್ನು ಹಾಸಿ ಹಾಸಿಗೆಯನ್ನು ಏರ್ಪಡಿಸಬೇಕು.

೨೫. ತೀಡಿದವನು ಬಣ್ಣಬಣ್ಣದ ಎರಡು ಸೊಗಸಾದ ದಿಂಬುಗಳನ್ನು ಹಾಸಿಗೆಯ ಮಧ್ಯೆ ಇಡಬೇಕು. ವಿಚಿತ್ರಗಳಾದ ಸಾಲುದೀಪಗಳನ್ನಿಟ್ಟು ಭಕ್ಷ್ಯಗಳು, ಅನ್ನಪಾನ, ಪಾನೀಯದ್ರವ್ಯ

೨೬. ನಾನಾಬಗೆಯಾದ ಹಿಟ್ಟಿನ ಭಕ್ಷ್ಯಗಳು, ಕಡುಬು, ಪಾಯಸ, ಮೊಸರನ್ನ, ಚಿಗುಳಿ ಇವುಗಳನ್ನು ನೈವೇದ್ಯ ಮಾಡಬೇಕು.

೨೭. ಅನಂತರ ಶುಭ್ರವೂ, ಶುಭಕರವೂ ಆದ ಶ್ವೇತಚ್ಛತ್ರವನ್ನು ಇಡಬೇಕು,

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ
ಸಾಂಬನ ಕಥಾಮಧ್ಯೆ ಸೂರ್ಯಪ್ರತಿಷ್ಠೆಯಲ್ಲಿ ಮಂಡಲವಿಧಿವರ್ಣನವೆಂಬ
ನೂರಮೂವತ್ನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಪಂಚತ್ರಿಂಶದುತ್ತರಶತತಮೋಽಧ್ಯಾಯಃ

॥ ನಾರದ ಉವಾಚ ॥

**ಅತಃ ಪರಂ ಪ್ರವಕ್ಷ್ಯಾಮಿ ಸ್ನಾನ ಕರ್ಮವಿಧಿಂ ತವ ।**
**ಸ್ನಾಪಕಸ್ತು ಮಹಾಪ್ರಾಜ್ಞೋ ಬ್ರಾಹ್ಮಣೋ ವೇದಪಾರಗಃ ॥ ೧ ॥**

**ಅಭಿಜ್ಞಃ ಸೌರಶಾಸ್ತ್ರಾಣಾಮರುಣೋ ಯದುಸತ್ತಮ ।**
**ಭೋಜಕೋ ಭೋಜಕೈಶ್ಚಾನ್ಯೈ ಬ್ರಾಽಹ್ಮಣೈಶ್ಚ ತಥಾವೃತಃ ॥ ೨ ॥**

**ದಿಶಾಭಾಗೇ ಮಂಡಲಸ್ಯ ಈಶಾನೇ ವೈ ಯಥಾಕ್ರಮಂ ।**
**ಹಸ್ತಮಾತ್ರಪ್ರಮಾಣಂ ತು ಭದ್ರಪೀಠಂ ತು ವಿನ್ಯಸೇತ್ ॥ ೩ ॥**

---

### ನೂರಮೂವತ್ತೈದನೆಯ ಅಧ್ಯಾಯ

೧-೨. ನಾರದನು ಹೇಳುತ್ತಾನೆ—ಇಲ್ಲಿಂದ ಮುಂದಕ್ಕೆ ಸ್ವಾಮಿಗೆ ಸ್ನಾನಮಾಡಿಸುವ ವಿಧಾನವನ್ನು ನಿನಗೆ ಹೇಳುತ್ತೇನೆ. ಅಯ್ಯಾ ಯದುಶ್ರೇಷ್ಠನೇ! ಹೀಗೆ ಸ್ನಾನ ಮಾಡಿಸುವ ಬ್ರಾಹ್ಮಣನು ವೇದಗಳಲ್ಲಿ ಪಾರಂಗತನೂ, ಸೌರಮಂತ್ರಗಳು ಅರುಣ ಮಂತ್ರ ಮುಂತಾದ್ದರಲ್ಲಿ ಮಹಾಪ್ರಾಜ್ಞನೂ ಆಗಿರಬೇಕು.

೩. ಸೂರ್ಯಾರ್ಚಕನು ಇತರ ಭೋಜಕರೊಡನೆ ಕೂಡಿ ಮಂಡಲದ ಈಶಾನ್ಯ ದಿಗ್ಭಾಗದಲ್ಲಿ ಯಥಾಕ್ರಮದಲ್ಲಿ ಒಂದು ಹಸ್ತಪ್ರಮಾಣವಾದ ಭದ್ರಪೀಠವನ್ನಿಡಬೇಕು.

ಹಸ್ತಿನಾ ಶಕಟೇನಾಪಿ ಭಕ್ತ್ಯಾ ಬ್ರಹ್ಮರಥೇನ ಚ ।
ಮಂಗಲ್ಯೈರ್ಬ್ರಹ್ಮಘೋಷೈಶ್ಚ ದೇವಂ ಪ್ರಾಸಾದಮಾನಯೇತ್ ॥ ೪ ॥

ಭದ್ರಪೀಠಂ ಸಮಾದಾಯ ಭದ್ರಂ ಕರ್ಣೇತಿ ಮಂತ್ರತಃ ।
ಸೂತ್ರಧಾರಸ್ತಥಾ ಪ್ರೋಕ್ತಃ ಶುಕ್ಲಾಂಬರಧರಃ ಶುಚಿಃ ॥ ೫ ॥

ಸ್ನಾಪಯೇತ್ಕಲಶಂ ಗೃಹ್ಯ ದೇವದೇವಂ ವಿಭಾವಸುಂ ।
ಸಾಮುದ್ರಂ ತೋಯಮಾಹೃತ್ಯ ಜಾಹ್ನವಂ ಯಾಮುನಂ ತಥಾ ॥ ೬ ॥

ಸಾರಸ್ವತಂ ಪುಣ್ಯಂ ಜಲಂ ಚಂದ್ರಭಾಗಂ ಸಸೈಂಧವಂ ।
ಪುಷ್ಕರಸ್ಯ ಜಲಂ ಶ್ರೇಷ್ಠಂ ಗಿರಿಪ್ರಸ್ರವಣೋದಕಂ ॥ ೭ ॥

ಅನ್ಯದ್ವಾಪಿ ಶುಭಂ ತೋಯಂ ನದೀನದತಡಾಗಜಂ ।
ಉಪಾವೃತ್ಯ ಯಥಾಶಕ್ತಿ ಕಲಶೈಃ ಕಾಂಚನಾದಿಭಿಃ ॥ ೮ ॥

ಭೋಜಕಾಶ್ಚಾಷ್ಟಭಿಃ ಸೂರ್ಯಂ ಕಲಶೈಃ ಸ್ನಾಪಯಂತಿ ವೈ ।
ತತಸ್ತು ಮಣಿರತ್ನಾನಿ ಸರ್ವಬೀಜೌಷಧೀಸ್ತಥಾ ॥ ೯ ॥

---

೪. ನೂತನವಾಗಿ ರಚಿಸಿದ ಪ್ರತಿಮೆಯನ್ನು ಆನೆಯ ಮೇಲೋ, ಬಂಡಿಯ ಮೇಲೋ ಅಥವಾ ಬ್ರಹ್ಮರಥದ ಮೇಲೋ ಇರಿಸಿ, ಶುಭಕರವಾದ ವೇದಘೋಷದೊಡನೆ ದೇವಾಲಯಕ್ಕೆ ತರಬೇಕು.

೫. ಹಾಗೆ ತಂದ ಮೂರ್ತಿಯನ್ನು ಬಿಳಿಯಬಟ್ಟೆಯನ್ನುಟ್ಟು ಶುಚಿರ್ಭೂತನಾಗಿ ಕಂಕಣ ಸೂತ್ರವನ್ನು ಧರಿಸಿದ ಭೋಜಕನ "ಭದ್ರಂ ಕರ್ಣೇಭಿಃ" ಎಂಬ ಮಂತ್ರದಿಂದ ದೇವಮೂರ್ತಿಯನ್ನು ತಂದು ಭದ್ರಪೀಠದಲ್ಲಿ ಸ್ಥಾಪಿಸಬೇಕು.

೬-೭. ಅನಂತರ ಕಲಶಗಳಲ್ಲಿ ಸಮುದ್ರಜಲ, ಗಂಗಾಜಲ, ಯಮುನಾಜಲ, ಸರಸ್ವತೀಜಲ, ಚಂದ್ರಭಾಗಾಜಲ, ಸಿಂಧೂಜಲ, ಪುಷ್ಕರತೀರ್ಥಜಲ, ಬೆಟ್ಟದಜಲಪಾತದಜಲ, ಇತರ ನದಿಗಳು ಮತ್ತು ನದಗಳಜಲ, ಕೆರೆಯಜಲ.

೮. ಇವನ್ನು ಸಾಧ್ಯವಾದಷ್ಟನ್ನು ಚಿನ್ನ ಮುಂತಾದುವುಗಳಿಂದ ಮಾಡಿದ ಎಂಟು ಕಲಶಗಳಲ್ಲಿ ತಂದಿರಬೇಕು. ಕಲಶಗಳಿಂದ ದೇವದೇವನೂ ವಿಭಾವಸುವೂ ಆದ ಸೂರ್ಯಪ್ರತಿಮೆಗೆ ಭೋಜಕರೆಲ್ಲರೂ ಅಭಿಷೇಕಮಾಡಬೇಕು.

**ಸುಗಂಧೀನಿ ಚ ಮಾಲ್ಯಾನಿ ಸ್ಥಲಜಾನ್ಯಂಬುಜಾನಿ ಚ ।**
**ಚಂದನಾನಿ ಚ ಮುಖ್ಯಾನಿ ಗಂಧಾಶ್ಚ ವಿವಿಧಾಸ್ತಥಾ ॥ ೧೦ ॥**

**ಬ್ರಾಹ್ಮೀ ಸವರ್ಚಲಾ ಮುಸ್ತಾವಿಷ್ಣುಕ್ರಾಂತಾ ಶತಾವರೀ ।**
**ದೂರ್ವಾ ಚ ಶಿಖಿಪುಷ್ಪೀ ಚ ಪ್ರಿಯಂಗೂ ರಜನೀ ವಚಾ ॥ ೧೧ ॥**

**ಸಂಭೃತ್ಯೈತಾಂಸ್ತು ಸಂಭಾರಾನ್ ಸ್ನಾನಕರ್ಮವಿಭಾಗವಿತ್ ।**
**ಬಲಾಶ್ವತ್ಥಶಿರೀಷಾಣಾಂ ಪಲ್ಲವೈಃ ಕುಶಸಂಯುತೈಃ ॥ ೧೨ ॥**

**ಕಲಶೋಪರಿ ವಿನ್ಯಸ್ಯ ದದ್ಯಾದರ್ಘ್ಯಂ ರವೇಃ ಸದಾ ।**
**ಕಾಂಚನೈರಾಜತೈಸ್ತಾಮ್ರೈರ್ವ್ರಣ್ಮಯೈಃ ಕಲಶೈಸ್ತಥಾ ॥ ೧೩ ॥**

**ಸಾಕ್ಷತೈಃ ಸಹಿರಣ್ಯೈಶ್ಚ ಸರ್ವೌಷಧಿಸಮನ್ವಿತೈಃ ।**
**ಗಾಯತ್ರ್ಯಾ ಪರಿಪೂತೈಸ್ತು ಷೋಡಶೈಃ ಸ್ನಾಪಯೇದ್ರವಿಂ ॥ ೧೪ ॥**

---

೧೦-೧೧. ಸ್ನಾನಕರ್ಮದ ವಿಭಾಗಗಳನ್ನು ಬಲ್ಲವನು, ಅಭಿಷೇಕಕ್ಕಾಗಿ ಶ್ರೇಷ್ಠ ಗಳಾದ ಮಣಿ, ಸಮಸ್ತ ಬೀಜಗಳು, ಮೂಲಿಕೆಗಳು ಇವನ್ನು ಹಾಕಿದ ಜಲವನ್ನು ಅಭಿಷೇಕಮಾಡಬೇಕು. ಮತ್ತು ಸುವಾಸನಾಯುಕ್ತವಾದ ಪುಷ್ಪಗಳು, ನೆಲದಾವರೆ ನೀರ್ದಾವರೆ, ಹರಿಚಂದನ ಗಳು ಮತ್ತು ಇತರ ಸುಗಂಧದ್ರವ್ಯಗಳು ಇವುಗಳ ಜಲ ದಿಂದಲೂ, ವಂದೆಲಗ, ಸೂರ್ಯಕಾಂತಿ, ಕೊನ್ನಾರಿಗೆಡ್ಡೆ, ವಿಷ್ಣುಕ್ರಾಂತಿ, ಆಷಾಢೀಬೇರು ದೂರ್ವಾ, ಶಮೀಪುಷ್ಪ ಪ್ರಿಯಂಗುಪುಷ್ಪ, ಅರಿಶಿನ, ಬಜೆ (ಈ ಮೂಲಿಕೆಗಳನ್ನೂ)

೧೨. ಮತ್ತು ಕಳ್ಳಂಗಡಲೆ, ಅರಳಿ, ಬಾಗೆ ಇವುಗಳ ಚಿಗುರು ಇವನ್ನೂ ಹಾಕಿ ದರ್ಭೆಗಳನ್ನು ಕಲಶದಮೇಲಿಟ್ಟು, ಸೂರ್ಯನಿಗೆ ಅರ್ಘ್ಯಪ್ರದಾನ ಮಾಡಬೇಕು.

೧೩-೧೪. ಚಿನ್ನದ್ದೋ, ಬೆಳ್ಳಿಯದೋ, ತಾಮ್ರದ್ದೋ, ಮಣ್ಣಿನದೋ ಆದ ಕಲಶಗಳಲ್ಲಿ ಮಂತ್ರಾಕ್ಷತೆ, ಸುವರ್ಣ ಇವುಗಳ ಜೊತೆ ಮೇಲೆ ಹೇಳಿದ ಸಮಸ್ತ ಔಷಧಿ (ಮೂಲಿಕೆ) ಗಳನ್ನೂ ಸೇರಿಸಿ ಗಾಯತ್ರಿಯಿಂದ ಅಭಿಮಂತ್ರಿಸಿ ಮಂತ್ರಪೂತ ವಾದ ಹದಿನಾರು ಕಲಶಗಳಿಂದ ಅಭಿಷೇಕ ಮಾಡಬೇಕು.

ಕುಶೋತ್ತರಾಂ ತತಃ ಕೃತ್ವಾ ವೇದಿಂ ಪಕ್ವೇಷ್ಟಕಾಮಯೀಂ ।
ತಸ್ಯಾಂ ವೇದ್ಯಾಂ ಸಮಾರೋಪ್ಯ ಪರಿಧಾಪ್ಯ ಚ ವಾಸಸೀ ॥ ೧೫ ॥

ಪ್ರತಿಮಾಮಭಿಷಿಂಚೇಚ್ಚ ಸೋಪವಾಸಃ ಪ್ರಯತ್ನತಃ ।
ಮೂರ್ಧ್ನಿ ಸರ್ವೌಷಧೀಃ ಕೃತ್ವಾ ತಥೈವಾಮಲಕಾನಿ ಚ ॥ ೧೬ ॥

ಮಂತ್ರೇಣ ಮೃತ್ತಿಕಾಂ ಚಾಪಿ ಮಂತ್ರತಶ್ಚ ಜಲಂ ತಥಾ ।
ತ್ವಂ ದೇವೀ ವಂದಿತಾ ದೇವೈಃ ಸಕಲೈರ್ದೈತ್ಯದಾನವೈಃ ॥ ೧೭ ॥

ತೇನ ಸಂಸ್ಥಾಪಿತಾ ಮೂರ್ಧ್ನಿ ಮಯಾ ದೇವಸ್ಯ ಶುದ್ಧಯೇ ।
ಆದಿಸ್ತ್ವಂ ಸರ್ವಭೂತಾನಾಂ ದೇವತಾನಾಂ ಚ ಸರ್ವದಾ ॥ ೧೮ ॥

---

೧೫. ಆಮೇಲೆ ಸುಟ್ಟ ಇಟ್ಟಿಗೆಗಳಿಂದ ನಿರ್ಮಿಸಿದ ಜಗಲಿಯ ಹತ್ತಿರಕ್ಕೆ ದೇವರ ಪ್ರತಿಮೆಯನ್ನು ತಂದು ದರ್ಭೆಯನ್ನು ಹಾಸಿದ ಆ ಜಗಲಿಯ ಮೇಲೆ ಏರಿಸಿ ಬಟ್ಟೆಗಳನ್ನು ಹೊದ್ದಿಸಬೇಕು.

೧೬. ಪ್ರಯತ್ನದಿಂದ ಉಪವಾಸವಿದ್ದೇ ಪ್ರತಿಮೆಗೆ ಅಭಿಷೇಕ ಮಾಡಬೇಕು. ಶಿರಸ್ಸಿನಲ್ಲಿ ಸರ್ವಮೂಲಿಕೆಗಳನ್ನೂ ನೆಲ್ಲಿಕಾಯಚೂರನ್ನೂ ಇಟ್ಟು

೧೭. ಹಿಂದೆಹೇಳಿದ ಉದ್ಧೃತಾಸೀತ್ಯಾದಿ ಮಂತ್ರದಿಂದ ಮೃತ್ತಿಕೆಯನ್ನು ದೇವರಶಿರಸ್ಸಿನಲ್ಲಿಡಬೇಕು. ಅಪೋಹಿಷ್ಠಾ ಇತ್ಯಾದಿ ಮಂತ್ರಗಳಿಂದ ಜಲವನ್ನು ದೇವರ ಶಿರಸ್ಸಿನಲ್ಲಿ ಪ್ರೋಕ್ಷಿಸಿ "ತ್ವಂದೇವೀವಂದಿತಾ ದೇವೈಃ ಸಕಲೈರ್ದೈತ್ಯದಾನವೈಃ ತೇನ ಸಂಸ್ಥಾಪಿತಾಮೂರ್ಧ್ನಿ ಮಯಾ ದೇವಸ್ಯ ಶುದ್ಧಯೇ" ಎಂಬ ಮಂತ್ರವನ್ನು ಹೇಳಬೇಕು. (ಎಲೌ ದೇವಿಯೇ ನೀನು ದೈತ್ಯರಿಂದಲೂ ದಾನವರಿಂದಲೂ ದೇವತೆಗಳಿಂದಲೂ ನಮಸ್ಕೃತಳಾಗಿದ್ದೀ. ಅದುಕಾರಣ ಪ್ರತಿಮಾಶುದ್ಧಿಗಾಗಿ ನಿನ್ನನ್ನು ದೇವನ ಶಿರಸ್ಸಿನಲ್ಲಿ ಇಡುತ್ತೇನೆ. ಇದು ಮಂತ್ರಾರ್ಥ.)

೧೮. ಜಲವನ್ನು ಕುರಿತು ನೀನು ಸರ್ವಭೂತಗಳಿಗೂ ಆದಿಯು. ಬ್ರಹ್ಮನ ದೈನಂದಿನ ಸೃಷ್ಟಿಯಲ್ಲಿ ಜಲವೇ ಪ್ರಥಮ ಸೃಷ್ಟಿಯ ವಸ್ತುವು. (ಅಪಏವ ಸಸರ್ಜಾದೌ ತಾಸು ಬೀಜಮವಾಪಯತ್ ಎಂದು ಹೇಳಿದೆ) ನೀನು ದೇವತೆಗಳಿಗೂ ಆದಿಯು.

ರಸಾನಾಂ ಪತಯೇ ತುಭ್ಯಮಾಹ್ವಾನಂ ಚ ಕೃತಂ ಮಯಾ ।
ಇತ್ಥಂ ಪೌರಾಣಿಕೈರ್ಮಂತ್ರೈರ್ವೈದಿಕೈಶ್ಚ ವಿಶೇಷತಃ ॥ ೧೯ ॥

ಕಾರ್ಯಂ ಹಿ ವಾರುಣಂ ಸ್ನಾನಂ ದೇವಸ್ಯ ಯದುನಂದನ ।
ಇತ್ಥಮುಚ್ಚಾರಯೇದ್ವಾಚಂ ಕುರ್ಯಾತ್ಸ್ನಾನಂ ವಿಚಕ್ಷಣಃ ॥ ೨೦ ॥

ದೇವಾಸ್ತ್ವಾಮಭಿಷಿಂಚಂತು ಬ್ರಹ್ಮವಿಷ್ಣು ಶಿವಾದಯಃ ।
ವ್ಯೋಮಗಂಗಾ ಚ ಪೂರ್ಣೇನ ದ್ವಿತೀಯಕಲಶೇನ ತು ॥ ೨೧ ॥

ಸಾರಸ್ವತಸ್ಯ ಪೂರ್ಣೇನ ಕಲಶೇನ ಸುರೋತ್ತಮ ।
ಶಕ್ರಾದಯೋಽಭಿಷಿಂಚಂತು ಲೋಕಾಪಾಲಾಃ ಸುರೋತ್ತಮಾಃ ॥ ೨೨ ॥

ಸಾಗರೋದಕಪೂರ್ಣೇನ ಚತುರ್ಥಕಲಶೇನ ತು ।
ವಾರಿಣಾಪರಿಪೂರ್ಣೇನ ಪದ್ಮಪತ್ರಸುಗಂಧಿನಾ ॥ ೨೩ ॥

---

೧೯. ದ್ರವವಸ್ತುಗಳಿಗೆ ಪತಿಯಾದ ನಿನ್ನನ್ನು ಪುರಾಣಮಂತ್ರಗಳಿಂದಲೂ ವಿಶೇಷವಾಗಿ ವೇದಮಂತ್ರಗಳಿಂದಲೂ ನಾನು ಆಹ್ವಾನಮಾಡಿದ್ದೇನೆ.

೨೦. ಎಲೈ ಯದುನಂದನನೇ ! ವಿಚಕ್ಷಣನಾದವನು ಅನಂತರ ದೇವರಿಗೆ ವರುಣ ಕಲಶ ಜಲದಿಂದ ಸ್ನಾನವನ್ನು ಮಾಡಿಸಬೇಕು. ಆಗ ಈ ಮಂತ್ರವನ್ನು ಉಚ್ಚರಿಸಬೇಕು.

೨೧. "ದೇವಾಸ್ತ್ವಾಮಭಿಷಿಂಚಂತು ಬ್ರಹ್ಮ ವಿಷ್ಣು ಶಿವಾದಯಃ" ಬ್ರಹ್ಮವಿಷ್ಣು ಮಹೇಶ್ವರ ಮುಂತಾದ ದೇವರು ನಿನಗೆ ಅಭಿಷೇಕ ಮಾಡಲಿ. (ಈ ಮಂತ್ರಾರ್ಥ.) ಎಲೈ ಸುರೋತ್ತಮನೇ! ಬಳಿಕ ಆಕಾಶಗಂಗಾಜಲಪೂರಿತವಾದ ದ್ವಿತೀಯ ಕಲಶ ದಿಂದ ಅಭಿಷೇಕ ಮಾಡಬೇಕು.

೨೨. ಬಳಿಕ ಸರಸ್ವತೀಜಲ, ಪೂರ್ಣವಾದ ತೃತೀಯ ಕಲಶದಿಂದ "ಶಕ್ರಾದಯೋಭಿಷಿಂಚಂತು ಲೋಕಪಾಲಾಃ ಸುರೋತ್ತಮಾಃ" ಎಂಬ ಮಂತ್ರದಿಂದ ಅಭಿಷೇಕಮಾಡಬೇಕು. (ಇಂದ್ರಾದಿ ಲೋಕಪಾಲಕರೂ ದೇವತಾಶ್ರೇಷ್ಠರೂ ನಿನಗೆ ಅಭಿಷೇಕಮಾಡಲಿ ಇದು ಮಂತ್ರಾರ್ಥ)

೨೩. ಬಳಿಕ ಸಾಗರೋದಕ ಪೂರ್ಣವಾದ ಚತುರ್ಥ ಕಲಶದಿಂದ ಸ್ನಾನ ಮಾಡಿಸಬೇಕು. ಬಳಿಕ ಸುಗಂಧವುಳ್ಳ ಕಮಲದಳಗಳಿಂದ ಯುಕ್ತವಾದ

ಪಂಚಮೇನಾಭಿಷಿಂಚಂತು ನಾಗಾಶ್ಚ ಕಲಶೇನ ತು ।
ಹಿಮವದ್ಧೇಮಕೂಟಾದ್ಯಾಶ್ಚಾಭಿ ಷಿಂಚಂತು ವಾರಿಣಾ ॥ ೨೪ ॥

ನೈಋತೋದಕಪೂರ್ಣೇನ ಷಷ್ಠೇನ ಕಲಶೇನ ತು ।
ಸರ್ವತೀರ್ಥಾಂಬುಪೂರ್ಣೇನ ಪದ್ಮರೇಣುಸುವಾಸಿನಾ ॥ ೨೫ ॥

ಸಪ್ತಮೇನಾಭಿಷಿಂಚಂತು ಋಷಯಃ ಸಪ್ತ ಯೇ ವರಾಃ ।
ವಸವಶ್ಚಾಭಿಷಿಂಚಂತು ಕಲಶೇನಾಷ್ಟಮೇನ ವೈ ॥ ೨೬ ॥

ಅಷ್ಟಮಂಗಲಯುಕ್ತೇನ ದೇವದೇವ ನಮೋಽಸ್ತುತೇ ।
ತತೋ ವೈ ಕಲಶೈರ್ದಿವ್ಯೈಃ ಸ್ನಾನಕರ್ಮ ಸಮಾರಭೇತ್ ॥ ೨೭ ॥

ಸಮುದ್ರಂ ಗಚ್ಛ ಯಃ ಪ್ರೋಕ್ತೋ ಮಂತ್ರಮೇತದುದೀರಯೇತ್ ।
ಹಿರಣ್ಯಗರ್ಭೇತಿ ಚ ಯೋ ಮಂತ್ರಸ್ತಂ ಸಮುದೀರಯೇತ್ ॥ ೨೮ ॥

---

೨೪. ಐದನೆಯ ಕಲಶದಿಂದ ಅಭಿಷೇಕಮಾಡಬೇಕು. ಆಗ ನಾಗಾಧಿಪರು ನಿನಗೆ ಅಭಿಷೇಕಮಾಡಲಿ ಎಂಬ ಮಂತ್ರ ಹೇಳಬೇಕು. ಹಿಮವಂತ, ಹೇಮಕೂಟ, ಮೊದಲಾದ ಪರ್ವತಾಭಿಮಾನಿಗಳು ನೈಋತೋದಕಪೂರ್ಣವಾದ ಷಷ್ಠಕಲಶದಿಂದ ಅಭಿಷೇಕಮಾಡಲಿ ಎಂದು ಹೇಳಬೇಕು.

೨೫. ಸಪ್ತಋಷಿಗಳು, ಸರ್ವತೀರ್ಥೋದಕಪೂರ್ಣವೂ ಕಮಲಧೂಳಿಯ ಸುವಾಸನೆಯುಳ್ಳದೂ ಆದ ಸಪ್ತಮಕಲಶೋದಕದಿಂದ ನಿನಗೆ ಅಭಿಷೇಕಮಾಡಲಿ, ಎಂದು ಹೇಳಬೇಕು.

೨೬. ಅಷ್ಟಮಂಗಳಯುಕ್ತವಾದ ಎಂಟನೆಯ ಕಲಶದಿಂದ ಅಷ್ಟವಸುಗಳು ನಿನಗೆ ಅಭಿಷೇಕಮಾಡಲಿ ಎಂದು ಹೇಳಬೇಕು.

೨೭. ಬಳಿಕ ಎಲೈ ದೇವದೇವನೇ! ನಿನಗೆ ನಮಸ್ಕಾರ ಎನ್ನಬೇಕು. ಆ ಮೇಲೆ ದಿವ್ಯಕಲಶಗಳಿಂದ ಸ್ನಾನಕರ್ಮವನ್ನು ಪ್ರಾರಂಭಿಸಬೇಕು.

೨೮. ಮೊದಲು "ಸಮುದ್ರಂಗಚ್ಛ" ಎಂಬ ಮಂತ್ರವನ್ನುಚ್ಚರಿಸಬೇಕು. "ಹಿರಣ್ಯಗರ್ಭಸ್ಸಮವರ್ತತಾಗ್ರೇ" ಇತ್ಯಾದಿ ಮಂತ್ರವನ್ನು ಆ ಮೇಲೆ ಹೇಳಬೇಕು.

**ಸಮುದ್ರಜ್ಯೇಷ್ಠೇತಿ ಮಂತ್ರೇಣ ಕ್ಷಾಲಯೇನ್ಮೃತ್ತಿಕಾನ್ವಿತಂ ।**
**ಸಿನೀವಾಲೀತಿ ಮಂತ್ರೇಣ ದದ್ಯಾದ್ವಲ್ಮೀಕಮೃತ್ತಿಕಾಂ ॥ ೨೯ ॥**

**ಶಮ್ಯುದುಂಬುರಮಶ್ವತ್ಥಂ ನ್ಯಗ್ರೋಧಂ ಚ ಪಲಾಶಕಂ ।**
**ಯಜ್ಞಂ ಯಜ್ಞೇತಿ ಮಂತ್ರೇಣ ದದ್ಯಾತ್ಪಂಚಕಷಾಯಕಂ ॥ ೩೦ ॥**

**ಪಂಚಗವ್ಯಂ ಪವಿತ್ರಂ ಚ ಆಹರೇತ್ತಾಮ್ರಭಾಜನೇ ।**
**ಗಾಯತ್ರ್ಯಾ ಚೈವ ಗೋಮೂತ್ರಂ ಗಂಧದ್ವಾರೇತಿ ಗೋಮಯಂ ॥ ೩೧ ॥**

**ಆಪ್ಯಾಯಸ್ವೇತಿ ಚ ಕ್ಷೀರಂ ದಕ್ರಾವ್ಣೇತಿ ವೈ ದಧಿ ।**
**ತೇಜೋಽಸೀತಿ ಘೃತ ತದ್ವದ್ದೇವಸ್ಯತ್ವಾ ಕುಶೋದಕಂ ॥ ೩೨ ॥**

**ಏವಮಾದಿ ವಿಧಿಯುತಂ ಪಂಚಗವ್ಯಂ ಪ್ರಕೀರ್ತಿತಂ ।**
**ಯಾ ಓಷಧೀತಿ ಮಂತ್ರೇಣ ಸ್ನಾನಮೋಷದಿಭಿಃ ಕ್ರಮಾತ್ ॥ ೩೩ ॥**

---

೨೯. "ಸಮುದ್ರಜ್ಯೇಷ್ಠಾಃ" ಇತ್ಯಾದಿ ಮಂತ್ರದಿಂದ ಮೃತ್ತಿಕಾಯುಕ್ತವಾದ ಪ್ರತಿಮೆಯನ್ನು ತೊಳೆಯಬೇಕು. ಸಿನೀವಾಲೀ' ಎಂಬ ಮಂತ್ರವನ್ನು ಹೇಳುತ್ತಾ ಹುತ್ತದ ಮಣ್ಣಿನಿಂದ ಉಜ್ಜಿ ತೊಳೆಯಬೇಕು.

೩೦. ಬನ್ನಿ, ಅತ್ತಿ, ಅರಳಿ, ಆಲ, ಮುತ್ತುಗ ಎಂಬ ಪಂಚ ಕಷಾಯ ದ್ರವ್ಯಗಳನ್ನು ಹಾಕಿದ ಜಲವನ್ನು "ಯಜ್ಞಂಯಜ್ಞೇತ್ಯಾದಿ" ಮಂತ್ರದಿಂದ ಅಭಿಷೇಕ ಮಾಡಬೇಕು.

೩೧. ಬಳಿಕ ಪರಿಶುದ್ಧವಾದ ಪಂಚಗವ್ಯವನ್ನು ತಾಮ್ರಪಾತ್ರೆಯಲ್ಲಿ ತರಬೇಕು. ಗಾಯಿತ್ರಿಯಿಂದ ಗೋಮೂತ್ರವನ್ನೂ, 'ಗಂಧದ್ವಾರಾಂ' ಎಂಬ ಮಂತ್ರದಿಂದ ಗೋಮಯವನ್ನೂ

೩೨-೩೩ 'ಆಪ್ಯಾಯಸ್ವ' ಎಂಬ ಮಂತ್ರದಿಂದ ಕ್ಷೀರವನ್ನೂ 'ದಧಿಕ್ರಾವ್ಣೋ' ಎಂಬ ಮಂತ್ರದಿಂದ ಮೊಸರನ್ನೂ, "ಶುಕ್ರಮಸಿ ತೇಜೋಽಸಿ" -ಎಂಬ ಮಂತ್ರದಿಂದ ತುಪ್ಪವನ್ನೂ ದೇವಸ್ಯತ್ವಾ ಎಂಬ ಮಂತ್ರದಿಂದ ಕುಶೋದಕವನ್ನೂ, ವಿಧಿಯನ್ನು ಅನುಸರಿಸಿ ಮಿಶ್ರಮಾಡುವುದು ಪಂಚಗವ್ಯವೆನಿಸುವುದು.

ದ್ರುಪದಾಭಿಃಪುನಸ್ತಸ್ಯ ಕುರ್ಯಾಚ್ಚೋದ್ವರ್ತನಂ ಬುಧಃ ।
ಶಿರಃ ಸ್ನಾನಂ ತತೋ ದದ್ಯಾನ್ಮಾನಸ್ತೋಕಾಭಿಮಂತ್ರಿತಂ ॥ ೩೪ ॥

ವಿಷ್ಣೋರರಾಟಮಂತ್ರೇಣ ದದ್ಯಾದ್ಗಂಧೋಕಂ ಶುಭಂ ।
ತತೋ ನದ್ಯುದ್ಭವೇನ್ನೈವ ಕ್ಷಾಲಯೇಚ್ಛುದ್ಧವಾರಿಣಾ ॥ ೩೫ ॥

ಜಾತವೇದಸಮುಚ್ಚಾರ್ಯ ವಸ್ತ್ರಪೂತೇನ ವಾರಿಣಾ ।
ತತ ಆವಾಹಯೇದ್ದೇವಂ ರಕ್ತಮಾಲ್ಯಾಂಬರಂ ಶುಭಂ ॥ ೩೬ ॥

ಏಹ್ಯೇಹಿ ಭಗವನ್ ಭಾನೋ ಲೋಕಾನುಗ್ರಹಕಾರಕ ।
ಯಜ್ಞಭಾಗಂ ಗೃಹಾಣಾರ್ಘ್ಯಮರ್ಕದೇವ ನಮೋಽಸ್ತುತೇ ॥ ೩೭ ॥

ಹಿರಣ್ಮಯೇನ ತು ಪಾತ್ರೇಣ ದೇವಾಯಾರ್ಘ್ಯಂ ಪ್ರದಾಪಯೇತ್ ।
ಇದಂ ವಿಷ್ಣುರ್ವಿಚಕ್ರಮೇ ಮಂತ್ರೇಣಾರ್ಘ್ಯಂ ಸಮರ್ಪಯೇತ್ ॥ ೩೮ ॥

---

೩೪. ಸ್ನಾನಮಾಡಿಸುತ್ತಾ ವಿದ್ವಾಂಸನು "ಯಾ ಓಷಧೀ" ಎಂಬ ಮಂತ್ರದಿಂದ ಮೂಲಿಕಾಯುಕ್ತವಾದ ಜಲದಿಂದ ಸ್ನಾನಮಾಡಿಸುತ್ತಾ 'ದ್ರುಪದಾದಿವ' ಎಂಬ ಮಂತ್ರದಿಂದ ಪ್ರತಿಮೆಯನ್ನು ಉಜ್ಜಬೇಕು. "ಮಾನಸ್ತೋಕೇ" ।ಎಂಬ ಮಂತ್ರದಿಂದ ಅಭಿಮಂತ್ರಿಸಿದ ಜಲದಿಂದ ಶಿರಸ್ಸಿಗೆ ಸ್ನಾನಮಾಡಿಸಬೇಕು.

೩೫. 'ವಿಷ್ಣೋರರಾಟಮಸಿ' ಎಂಬ ಮಂತ್ರದಿಂದ ಅಭಿಮಂತ್ರಿಸಿ ಶುಭಕರವಾದ ಗಂಧಮಿಶ್ರವಾದ ನೀರನ್ನು ಅಭಿಷೇಕ ಮಾಡಬೇಕು. ಅನಂತರ ಹೊಳೆಯಿಂದ ತಂದ ಶುದ್ಧೋದಕವನ್ನು ಅಭಿಷೇಕಮಾಡಬೇಕು.

೩೬. 'ಜಾತವೇದಸೇ' ಎಂಬ ಮಂತ್ರದಿಂದ ಬಟ್ಟೆಯಲ್ಲಿ ಶೋಧಿಸಿದ ನೀರನ್ನು ಅಭಿಷೇಕಮಾಡಬೇಕು. ಆಮೇಲೆ ಶುಭಕರವಾದ ಕೆಂಪುವಸ್ತ್ರಗಳಿಂದಲೂ ಕೆಂಪು ಹೂವಿನ ಮಾಲಿಕೆಗಳಿಂದಲೂ ಅಲಂಕರಿಸಿ ಸ್ವಾಮಿಯನ್ನು ಆವಾಹನ ಮಾಡಬೇಕು.

೩೭–೩೮. ಭಗವಂತನೂ, ಲೋಕಗಳಿಗೆ ಅನುಗ್ರಹಮಾಡುವವನೂ ಆದ ಸೂರ್ಯದೇವನೇ! ಬಾ, ಓ ಅರ್ಕದೇವನೇ! ಪೂಜೆ ಎಂಬ ಯಜ್ಞದ ಭಾಗವಾಗಿರುವ ಈ ಅರ್ಘ್ಯವನ್ನು ಸ್ವೀಕರಿಸು. ನಿನಗೆ ನಮಸ್ಕಾರ ಎಂದು ಅರ್ಥವುಳ್ಳ ಮಂತ್ರವನ್ನು ಹೇಳಿ ಅನಂತರ 'ಇದಂ ವಿಷ್ಣುರ್ವಿಚಕ್ರಮೇ' ಎಂಬ ಮಂತ್ರಪೂರ್ವಕವಾಗಿ ಚಿನ್ನದ ಗಿಂಡಿಯಿಂದ ಸೂರ್ಯದೇವನಿಗೆ ಅರ್ಘ್ಯ ಕೊಡಬೇಕು.

**ಪಾರ್ಥಿವೈಃ ಪ್ರಥಮಂ ಕಲಶೈಃ ಸ್ನಾಪಯೇದ್ಭಾಸ್ಕರಂ ಬುಧಃ ।**
**ತತ ಸ್ತ್ವೌದುಂಬರೈರ್ವೀರ ರಾಜತೈಸ್ತದನಂತರಂ** ॥ ೩೯ ॥

**ತತಸ್ತು ಕಾಂಚನೈರ್ದೇವಂ ಸ್ನಾಪಯೇದ್ಯದುನಂದನ ।**
**ಸರ್ವತೀರ್ಥಜಲೈರ್ಯುಕ್ತಂ ಸರ್ವೌಷಧಿಸಮನ್ವಿತಂ** ॥ ೪೦ ॥

**ಶಂಖಮಾದಾಯ ದೇವಸ್ಯ ತತೋ ಮೂರ್ಧನಿ ಶಂಕರ ।**
**ದತ್ವಾ ಪುಷ್ಪಾಣಿ ದೇವಸ್ಯ ಮೂರ್ಧ್ನಿ ಯತ್ನಾದ್ವಿಚಕ್ಷಣಃ** ॥ ೪೧ ॥

**ತೋಯ ಮುತ್ಕ್ಷಿಪ್ಯ ಯತ್ನೇನ ತತಃ ಸ್ನಪನಮಾಚರೇತ್ ।**
**ಪ್ರಥಮಂ ಸ್ನಾಪಯೇದ್ದೇವಂ ವಾರಿಣಾ ಯದುನಂದನ** ॥ ೪೨ ॥

**ತತಸ್ತು ಪಯಸಾ ರಾಜನ್ ದಧಿನಾ ಚ ತತಸ್ತು ವೈ ।**
**ಘೃತೇನ ಮಧುನಾ ವಾಪಿ ತಥಾ ಇಕ್ಷುರಸೇನ ಚ** ॥ ೪೩ ॥

---

೩೯. ಕ್ರಮತಿಳಿದವನು ಮೊದಲು ಮೃಣ್ಮಯ ಕಲಶದಿಂದ ಸೂರ್ಯಪ್ರತಿಮೆಗೆ ಅಭಿಷೇಕಮಾಡಬೇಕು. ಅಯ್ಯಾ ವೀರನೇ! ಆಮೇಲೆ ಅತ್ತಿಯ ಮರದಿಂದ ಮಾಡಿದ ಕಲಶದಿಂದಲೂ, ಆ ಮೇಲೆ ಬೆಳ್ಳಿಯ ಕಲಶದಿಂದಲೂ ಅಭಿಷೇಕಮಾಡಬೇಕು.

೪೦-೪೨. ಅಯ್ಯಾ ಯದುನಂದನನೇ! ಆ ಮೇಲೆ ಚಿನ್ನದ ಕಲಶದ ಜಲದಿಂದ ಸ್ವಾಮಿಗೆ ಅಭಿಷೇಕಮಾಡಬೇಕು. ಅಯ್ಯಾ ವೀರನೇ! ವಿಚಕ್ಷಣನಾದವನು ಸಮಸ್ತ ಮೂಲಿಕಾಸಹಿತವಾದ ಸರ್ವತೀರ್ಥ ಜಲಗಳನ್ನೂ ಶಂಖದಲ್ಲಿ ತೆಗೆದುಕೊಂಡು ಪುಷ್ಪಸಮೇತ ಸ್ವಾಮಿಯ ಶಿರಸ್ಸಿನಲ್ಲಿ ಪ್ರಯತ್ನದಿಂದ ಅಭಿಷೇಕಮಾಡಬೇಕು.

೪೩. ಅಯ್ಯಾ ಯದುನಂದನನೇ! ಮೊದಲು ಸ್ವಾಮಿಗೆ ನೀರಿನಿಂದ ಸ್ನಾನಮಾಡಿಸಬೇಕು. ವಿಭುವೂ ಸುವ್ರತನೂ ಆದ ರಾಜನೇ! ಅನಂತರ ಕ್ಷೀರದಿಂದಲೂ ಆ ಮೇಲೆ ಮೊಸರು, ತುಪ್ಪ, ಜೇನುತುಪ್ಪ, ಕಬ್ಬಿನಹಾಲು, ಇವುಗಳಿಂದಲೂ ಅಭಿಷೇಕಮಾಡಬೇಕು.

ಅಗ್ನಿಷ್ಟೋಮಸ್ಯ ಯಜ್ಞಸ್ಯ ಗೋಮೇಧಸ್ಯ ಚ ಸುವ್ರತ ।
ಜ್ಯೋತಿಷ್ಟೋಮಸ್ಯ ರಾಜೇಂದ್ರ ವಾಜಪೇಯಸ್ಯ ವೈ ವಿಭೋ ॥ ೪೪ ॥

ರಾಜಸೂಯಾಶ್ವಮೇಧಾಭ್ಯಾಂ ಘೃತಾದ್ಯೈರ್ಲಭತೇ ಫಲಂ ।
ಯಸ್ತು ಕಾರಯತೇ ಸ್ನಾನಂ ಯಸ್ತು ಭಕ್ತ್ಯಾ ಪ್ರಪಶ್ಯತಿ ।
ಕ್ರಿಯಮಾಣಂ ತು ದೇವಸ್ಯ ಸ್ನಾನಂ ಯದುಕುಲೋದ್ವಹ ॥ ೪೫ ॥

ಯ ಏತೇ ಕಥಿತಾ ಯಜ್ಞಾ ಏತೇಷಾಂ ಕ್ರಮಶಃ ಫಲಂ ।
ಅರ್ಚಾಂ ಚ ಕುರುಶಾರ್ದೂಲ ದೃಷ್ಟ್ವಾ ವೈ ಲಭ್ಯತೇ ಫಲಂ ॥ ೪೬ ॥

ಸ್ನಾನಂ ತು ಯತ್ನತಃ ಕಾರ್ಯಂ ದೇವದೇವಸ್ಯ ಸುವ್ರತ ।
ಯಥಾ ನ ಲಂಘಯೇತ್ಕಶ್ಚಿದ್ದೇವಸ್ಯ ಸ್ನಪನಂ ವಿಭೋಃ ॥ ೪೭ ॥

---

೪೪. ಅಯ್ಯಾ ಸುವ್ರತನೇ! ಹೀಗೆ ಅಭಿಷೇಕಮಾಡಿದರೆ ಅಗ್ನಿಷ್ಟೋಮ, ಗವಾಲಂಭ, ಜ್ಯೋತಿಷ್ಟೋಮ, ವಾಜಪೇಯ, ಮುಂತಾದ ಯಜ್ಞಗಳ ಫಲಗಳು ಲಭಿಸುವುವು.

೪೫. ಸೂರ್ಯನಿಗೆ ಘೃತಸ್ನಾನ ಮಾಡಿಸಿದರೆ ರಾಜಸೂಯ, ಅಶ್ವಮೇಧ ಈ ಎರಡು ಯಾಗಗಳನ್ನೂ ಮಾಡಿದ ಫಲ ಲಭಿಸುವುದು. ಅಯ್ಯಾ ಯದುಕುಲೋದ್ವಹನೇ! ಯಾವನು ಸೂರ್ಯನಿಗೆ ಅಭಿಷೇಕಮಾಡುವನೋ ಅಥವಾ ಸೂರ್ಯನಿಗೆ ಅಭಿಷೇಕಮಾಡುತ್ತಿರುವುದನ್ನು ಭಕ್ತಿಯಿಂದ ನೋಡುವನೋ ಅವನಿಗೆ ಕ್ರಮವಾಗಿ ಈ ಮೇಲೆ ಹೇಳಿದ ಯಜ್ಞಗಳ ಫಲಗಳೆಲ್ಲಾ ಲಭಿಸುವುವು.

೪೬. ಅಯ್ಯಾ ಕುರುಶಾರ್ದೂಲನೇ! ಪೂಜೆ ನಡೆಯುತ್ತಿರುವುದನ್ನು ನೋಡಿದರೂ ಅವನಿಗೆ ಇದೇ ಫಲವು ಲಭಿಸುವುದು. ದೇವರಿಗೆ ಸ್ನಾನ (ಅಭಿಷೇಕ) ಮಾಡಿಸಿದ ತೀರ್ಥವನ್ನು ಯಾರೂ ದಾಟದಂತೆ ನೋಡಿಕೊಳ್ಳುತ್ತಾ ಪ್ರಯತ್ನದಿಂದ ಸ್ವಾಮಿಗೆ ಅಭಿಷೇಕಮಾಡಬೇಕು.

೪೭-೪೯. ಲೋಕದಲ್ಲಿ ನಿಂದಿತಗಳಾದ ಕಾಗೆ ಮುಂತಾದ ನಿಷಿದ್ಧ ಪ್ರಾಣಿಗಳು ದೇವನಿಗೆ ಸ್ನಾನಮಾಡಿಸಿದ ಜಲವನ್ನು ಕುಡಿಯದ ಹಾಗೆ ನೋಡಿಕೊಳ್ಳಬೇಕು. ಒಂದು ವೇಳೆ ಪ್ರಮಾದವಶದಿಂದ ಅಭಿಷೇಕ ಮಾಡಿದ ನೀರು ಹರಿಯುವಾಗ ಕಾಗೆ,

ನ ಪ್ರಾಶ್ನಂತಿ ಯಥಾ ಕಾಕಾಸ್ತೀರ್ಥಂ ಲೋಕವಿಗರ್ಹಿತಾಃ ।
ಸ್ನಾನೋದಕಂ ತು ದೇವಸ್ಯ ಅಥ ವಾ ಪಯ ಏವ ಹಿ ॥ ೪೮ ॥

ಭೂಮೌ ಗತಂ ಯದಾಚ್ಚೈವ ಪ್ರಾಶ್ನಾತಿ ಯಮನಂದನ ।
ರೋಗಂ ಪ್ರಾಪ್ನೋತಿ ಕರ್ತಾ ವೈ ದುಃಖಂ ಕಾರಯಿತಾ ತಥಾ ॥ ೪೯ ॥

ತಸ್ಮಾದ್ಯತ್ನೇನ ಕರ್ತವ್ಯಂ ದೇವಸ್ಯ ಸ್ನಪನಂ ವಿಭೋಃ ॥ ೫೦ ॥

ಸ್ನಾಪಯಿತ್ವಾ ಕ್ರಮೇಣೇತ್ಥಂ ಸ್ನಾನಕರ್ಮ ವಿಧಾನವಿತ್ ।
ತತೋ ವರ್ಧನಿಕಾಂ ಗೃಹ್ಯ ವಾರಿಧಾರಾಂ ಸಮುತ್ಸೃಜೇತ್ ॥ ೫೧ ॥

ತ್ರಿವಾರಾನ್ಪುರತೋಽರ್ಕಸ್ಯ ಆವಹಸ್ವೇತಿ ಚ ಬ್ರುವನ್ ।
ವೇದೋಸೀತಿ ಚ ಮಂತ್ರೇಣ ಉಪವೀತಂ ಪ್ರದಾಪಯೇತ್ ॥ ೫೨ ॥

ಬೃಹಸ್ಪತೇತಿ ಮಂತ್ರೇಣ ವಸ್ತ್ರಯುಗ್ಮಂ ಪ್ರದಾಪಯೇತ್ ।
ಯತ್ನಕ್ರಮಂ ಪ್ರಕುರ್ವಾಣಃ ಪುಷ್ಪಮಾಲಾಂ ಪ್ರದಾಪಯೇತ್ ॥ ೫೩ ॥

---

ನಾಯಿ ಮುಂತಾದ ನಿಷಿದ್ಧ ಪ್ರಾಣಿಗಳು ಕುಡಿಯುವುದಕ್ಕೆ ಆಸ್ಪದವಾದರೆ ಅಭಿಷೇಕ ಕರ್ತನು ವ್ಯಾಧಿಪೀಡಿತನಾಗುವನು. ಮತ್ತು ಅಭಿಷೇಕ ಮಾಡಿಸಿದವನೂ ದುಃಖ ಭಾಜನನಾಗುವನು.

೫೦. ಆದ್ದರಿಂದ ಇವು ಯಾವುಗಳಿಗೂ ಅವಕಾಶವಿಲ್ಲದ ಹಾಗೆ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಾ ಸ್ವಾಮಿಯ ಸ್ನಪನ ಮಾಡಿಸಬೇಕು. ಸ್ನಾನಕರ್ಮದ ವಿಧಾನವನ್ನು ತಿಳಿದವನು, ಕ್ರಮವಾಗಿ ಹೀಗೆ ಅಭಿಷೇಕಮಾಡಿ ಅನಂತರ ವರ್ಧನಿಕಾ ಎಂಬ ಸಣ್ಣ ಪಾತ್ರೆಯಲ್ಲಿ ಜಲವನ್ನು ಹಿಡಿದುಕೊಂಡು

೫೧. 'ಆವಹಂತೀವಿತನ್ವಾ' ಎಂಬ ಮಂತ್ರವನ್ನು ಹೇಳಿ ಆಚಮನಾರ್ಥವಾಗಿ ಮೂರುಸಾರಿ ಸೂರ್ಯನ ಮುಂದುಗಡೆ ನೀರನ್ನು ಧಾರೆಯಾಗಿ ಹನಿಸಬೇಕು.

೫೨. ಬಳಿಕ 'ಬೃಹಸ್ಪತೇ' ಎಂಬ ಮಂತ್ರದಿಂದ ಎರಡು ವಸ್ತ್ರಗಳನ್ನು ಸಮರ್ಪಿಸಬೇಕು. ಅನಂತರ 'ವೇದೋಸಿ' ಎಂಬ ಮಂತ್ರದಿಂದ ಉಪವೀತವನ್ನು ಅರ್ಪಿಸಬೇಕು.

೫೩. ಹೀಗೆ ಪೂಜಾ ಸಾಮಗ್ರಿಗಳನ್ನು ಯತ್ನಮಾಡಿ ಸಂಪಾದಿಸಿ ಕ್ರಮವಾಗಿ ಪುಷ್ಪಮಾಲಿಕೆಯನ್ನು ಧರಿಸಬೇಕು.

ಧೂರಸೀತಿ ಚ ಮಂತ್ರೇಣ ಧೂಪಂ ದದ್ಯಾತ್ಸಗುಗ್ಗುಲಂ ।
ಸಮಿದ್ಧೋಽಂಜನ ಮಂತ್ರೇಣ ಅಂಜನಂ ತು ಪ್ರದಾಪಯೇತ್ ॥ ೫೪ ॥

ಯುಂಜಾನೀತಿ ಚ ಮಂತ್ರೇಣ ರೋಚನಾಂ ತಸ್ಯ ದಾಪಯೇತ್ ।
ಆರಾತ್ರಿಕಂ ಚ ವೈ ಕುರ್ಯಾದ್ದೀರ್ಘಾಯುಷ್ಟ್ವಾಯ ವರ್ಚಸೇ ॥ ೫೫ ॥

ಸ್ನಾನ ಕರ್ಮತ್ವಿದಂ ಪ್ರೋಕ್ತಂ ಭಾಸ್ಕರಸ್ಯ ಮಹಾತ್ಮನಃ ।
ಭೋಜಕಾ ಬ್ರಾಹ್ಮಣಾಶ್ಚೈವ ಕ್ರಿಯಾಂ ಕುರ್ಯುಃ ಪ್ರಯತ್ನತಃ ॥ ೫೬ ॥

ಬಹ್ವೃಚೋಽಥರ್ವಣಶ್ಚೈವ ಛಂದೋಗೋಽಧ್ವರ್ಯುರೇವ ಚ ।
ಸ್ನಾಪಕಸ್ಯ ಚ ಚಿಹ್ನಾನಿ ಯೇ ಚ ಮೂರ್ತಿಧರಾಸ್ತಥಾ ॥ ೫೭ ॥

ತೇಷಾಂ ಪ್ರವಕ್ಷ್ಯಾಮಿ ವಿಭೋ ಶೃಣುಚೈಕಮನಾಃ ಕಿಲ ।
ಸಂಪೂರ್ಣಗಾತ್ರೋ ಮತಿಮಾ ಞ್ಛಾಸ್ತ್ರಜ್ಞಃ ಪ್ರಿಯದರ್ಶನಃ ॥ ೫೮ ॥

---

೫೪. 'ಧೂರಸಿ' ಎಂಬ ಮಂತ್ರದಿಂದ ಗುಗ್ಗುಳಸಹಿತವಾದ ಧೂಪವನ್ನು ಹಾಕಬೇಕು. 'ಸಮಿದ್ಧೋಽಂಜನ' ಎಂಬ ಮಂತ್ರದಿಂದ ಕಾಡಿಗೆಯನ್ನು ಅರ್ಪಿಸಬೇಕು,

೫೫. 'ಯುಂಜಾನೀ' ಎಂಬ ಮಂತ್ರದಿಂದ ಗೋರೋಚನವನ್ನು ಹಚ್ಚಬೇಕು 'ದೀರ್ಘಾಯುಸ್ತ್ವಾಯವರ್ಚಸೇ' ಎಂಬ ಮಂತ್ರದಿಂದ ಆರತಿಯನ್ನು ಬೆಳಗಬೇಕು.

೫೬. ಮಹಾತ್ಮನಾದ ಸೂರ್ಯದೇವನ ಅಭಿಷೇಕ ವಿಧಾನವನ್ನು ಈರೀತಿ ಹೇಳಿ ಆಯಿತು. ಭೋಜಕ ಬ್ರಾಹ್ಮಣರೂ ಅವರ ಜೊತೆಗೆ.

೫೭. (ಬಹ್ವೃಚರು) ಋಗ್ವೇದದವರೂ, ಅಥರ್ವಣವೇದದವರೂ (ಛಂದೋಗ) ಸಾಮಕರೂ, (ಅಧ್ವರ್ಯು) ಯಜುರ್ವೇದಿಗಳೂ, ಕೂಡಿ ಪ್ರಯತ್ನದಿಂದ ಈ ಕೆಲಸ ಮಾಡಬೇಕು.

೫೮. ಸ್ನಾನಮಾಡಿಸತಕ್ಕವರ ಲಕ್ಷಣವನ್ನೂ ಮೂರ್ತಿಯನ್ನು ಹೊರತಕ್ಕವರ ಲಕ್ಷಣವನ್ನೂ ಹೇಳುವೆನು. ಏಕಾಗ್ರಚಿತ್ತದಿಂದ ಕೇಳು. ಮೈಕೈ ತುಂಬಿಕೊಂಡಿರುವವನು, ಪ್ರಶಸ್ತವಾದ ಬುದ್ಧಿಶಾಲಿಯಾದವನು, ಶಾಸ್ತ್ರಗಳನ್ನು ತಿಳಿದವನು, ನೋಡುವುದಕ್ಕೆ ಚೆನ್ನಾಗಿರುವವನು.

**ಕುಲೀನಃ ಶ್ರದ್ಧಧಾನಶ್ಚ ಆರ್ಯದೇಶಸಮುದ್ಭವಃ ।**
**ನ ಸ್ಥೂಲೋ ನ ಕೃಶೋ ದೀರ್ಘಃ ಸೌರಶಾಸ್ತ್ರವಿಶಾರದಃ ॥ ೫೯ ॥**

**ಯಶ್ಚಯುಕ್ತೋ ಜಿತಾತ್ಮಾ ಚ ಗುರುಭಕ್ತೋ ಜಿತೇಂದ್ರಿಯಃ ।**
**ಪಂಚವಿಂಶತಿತತ್ವಜ್ಞಃ ಸ್ನಾಪಕಃ ಸಮುದಾಹೃತಃ ॥ ೬೦ ॥**

**ವರ್ಜನೀಯಾಂಶ್ಚ ವಕ್ಷ್ಯಾಮಿ ಯೈಸ್ತು ಕರ್ಮ ನ ಕಾರಯೇತ್ ।**
**ಹೀನಾಂಗಶ್ಚಾಧಿಕಾಂಗಶ್ಚ ವಾಮನೋ ವಿಕಟಸ್ತಥಾ ॥ ೬೧ ॥**

**ನಾತಿಗೌರೋ ನ ಕೃಷ್ಣಶ್ಚ ಸ್ನಾಪನಾಯ ಪ್ರಯೋಜಯೇತ್ ।**
**ಚಾರ್ವಾಕೋ ಯಾಜಕಶ್ಚೈವ ನಿತ್ಯಂ ಗೋಮುಖದಂಭಕಃ ॥ ೬೨ ॥**

**ಅಶುಚಿವ್ರತಸಂಯುಕ್ತಃ ಶ್ಯಾಮದಂತೋಽಥ ಮತ್ಸರೀ ।**
**ಕೋಪನೋ ದುಷ್ಟಶೀಲಶ್ಚ ಯುವಾ ವಾ ವೃದ್ಧ ಏವ ಚ ॥ ೬೩ ॥**

---

೫೯. ಸತ್ಕುಲದಲ್ಲಿ ಹುಟ್ಟಿದವನು, (ಫಲಪ್ರಾಪ್ತಿಯಲ್ಲಿ ನಂಬಿಕೆಯುಳ್ಳವನು) ಆಸ್ತಿಕ್ಯ ಬುದ್ಧಿಯುಳ್ಳವನು, ಆರ್ಯದೇಶದಲ್ಲಿ ಜನ್ಮವೆತ್ತಿದವನು, ಬೊಜ್ಜು ಬೆಳೆಯದೇ ಇರುವವನು, ಬಹುಕೃಶನಲ್ಲದವನು, ಒಳ್ಳೆಯ ಎತ್ತರವಾಗಿರುವವನು, ಮಹಾಸೌರ ಮಂತ್ರಗಳಲ್ಲಿ ವಿಶಾರದನು

೬೦. ಜಿತಮನಸ್ಕನು, ಗುರುವಿನಲ್ಲಿ ಭಕ್ತಿಯುಳ್ಳವನು, ಇಂದ್ರಿಯ ನಿಗ್ರಹ ಮಾಡಿದವನು, ಇಪ್ಪತ್ತೈದು ತತ್ವಗಳನ್ನು ಬಲ್ಲವನು, ಇಂಥವನು ಸ್ನಾಪಕನಾಗಲು ಅರ್ಹನು.

೬೧-೬೪. ಈಕೆಲಸ ಮಾಡಿಸುವುದರಲ್ಲಿ ಯಾವ ಪುರುಷರನ್ನು ವರ್ಜನಮಾಡ ಬೇಕು ಎಂಬುದನ್ನು ಹೇಳುತ್ತೇನೆ. ಅಂಗಹೀನರು, ಅತಿಕುಳ್ಳರು, ಆರುಬೆರಳು ಮುಂತಾದ ಅಧಿಕ ಅವಯುವವುಳ್ಳವರು, ತಲೆ ಪಟ್ಟುಹಿಡಿದು ಕೂದಲು ಬೆಳೆಯುದ ವರು, ವಕ್ರಾಕೃತಿಯುಳ್ಳವರು, ಅತಿ ಬೆಳ್ಳಗಿರುವವರು, ಅತಿ ಕಪ್ಪಗಿರುವವರು, ಇಂಥ ವರು ಸ್ವಾಮಿಯ ಅಭಿಷೇಕಕ್ಕೆ ಅರ್ಹರಲ್ಲ. ನಾಸ್ತಿಕನು, ನಿತ್ಯವೂ ಯಜ್ಞದಲ್ಲಿ ಋತ್ವಿಕ್ಕು ಆಗಿರತಕ್ಕವನು, ಹಸುವು ಮೇಯದಂತೆ ತಡೆದು ಬಾಯಿಕಟ್ಟತಕ್ಕವನು, ಅಶುದ್ಧವಾದ ನಿಯಮವುಳ್ಳವನು, ಕಪಿಶವರ್ಣದ ಹಲ್ಲುಗಳುಳ್ಳವನು, ಮತ್ಸರಪಡುವ ಸ್ವಭಾವದವನು, (ಎಂದರೆ ಅನ್ಯಶುಭದ್ವೇಷಿಯು) ಕೋಪಸ್ವಭಾವದವನು, ದುಸ್ವಭಾ

ಶ್ವಿತ್ರೀ ಕುಷ್ಠೀ ಚ ರೋಗೀ ಚ ಕಾಣೋ ದುರ್ಮತಿರೇವ ಚ ।
ಸಂಕೀರ್ಣೋ ಜಾತಿಹೀನಶ್ಚ ತಥಾ ಚ ವೃಷಲೀಪತಿಃ ॥ ೬೪ ॥

ಕುಬ್ಜಂಶ್ಚಾಂಧಸ್ತಥಾ ವ್ಯಂಗಃ ಖಲ್ವಾಟೋ ವಿಕಲೇಂದ್ರಿಯಃ ।
ಅವಿನೀತೋ ದುರಾತ್ಮಾ ಚ ವಿಕಲಃ ಪಂಗುರೇವ ಚ ॥ ೬೫ ॥

ತಿಥಿನಕ್ಷತ್ರಯೋಗಾನಾಂ ವಾರಾಣಾಂ ಚ ತಥಾ ವಿಭೋ ।
ಸೂಚಕೋ ಜೀವಿಕಾರ್ಥಂ ಹಿ ಯಶ್ಚ ಮೂಲ್ಯೇನ ಪಾಠಯೇತ್ ॥ ೬೬ ॥

ಈದೃಶಾನ್ ಸ್ಥಾಪಕಾನ್ ಸರ್ವಾನ್ ವರ್ಜಯೇತ ಪ್ರಯತ್ನತಃ ।
ತಸ್ಮಾತ್ಸರ್ವಪ್ರಯತ್ನೇನ ಪರೀಕ್ಷ್ಯಾಃ ಸ್ಥಾಪಕಾ ಬುಧೈಃ ॥ ೬೭ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇ ಪರ್ವಣಿ ಸಪ್ತಮೀ ಕಲ್ಪೇ
ಸಾಂಬೋಪಾಖ್ಯಾನೇ ಸೂರ್ಯಪ್ರತಿಷ್ಠಾ ಸ್ಥಾನವಿಧಿವರ್ಣನಂ ನಾಮ
ಪಂಚತ್ರಿಂಶದುತ್ತರಶತತಮೋಽಧ್ಯಾಯಃ

---

ವದವನು, ಯೌವನಶಾಲಿಯು, ಅತಿವೃದ್ಧನು, ಬಿಳಿಯತೊನ್ನು ಹಿಡಿದವನು, ಕಪ್ಪು ಕುಷ್ಠರೋಗಿಯು, ಇತರ ರೋಗಪೀಡಿತನು, ಮೂಲುಗಣ್ಣುಳ್ಳವನು, ದುರ್ಬುದ್ಧಿಯುಳ್ಳವನು, ಮಿಶ್ರ (ಬೆರಕೆ) ಜಾತಿಯವನು, ಹೀನಜಾತಿಯವನು, ವೃಷಲೀಪತಿ ಇವರನ್ನೂ

೬೫-೬೭. ಗೂನನು, ಕುರುಡನು, ವ್ಯಂಗನು, ತಲೆಪಟ್ಟುಹಿಡಿದವನು ಇಂದ್ರಿಯಗಳಲ್ಲಿ ನ್ಯೂನತೆಯುಳ್ಳವನು, ವಿನಯಹೀನನು, ದುಷ್ಟಸ್ವಭಾವದನು, ಅಂಗವೈಕಲ್ಯವುಳ್ಳವನು, ಕುಂಟನು, ಜೀವನಾರ್ಥವಾಗಿ ತಿಥಿವಾರ ನಕ್ಷತ್ರಗಳನ್ನು ಹೇಳತಕ್ಕವನು ಇಂಥವರನ್ನೂ ಸ್ಥಾಪಕತ್ವಕ್ಕೆ ಆರಿಸದೆ ಪ್ರಯತ್ನಪೂರ್ವಕವಾಗಿ ಬಿಡಬೇಕು. ಆದ್ದರಿಂದ ವಿದ್ವಾಂಸರು ಸ್ಥಾಪಕರ ಗುಣಶೀಲಾದಿಗಳನ್ನು ಪರಿಶೀಲಿಸಿ ಇಟ್ಟುಕೊಳ್ಳಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ
ಸೂರ್ಯಪ್ರತಿಷ್ಠೆ ಮತ್ತು ಅಭಿಷೇಕದ ವಿಧಾನವನ್ನು ವರ್ಣಿಸುವ
ನೂರಮೂವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಷಟ್‌ತ್ರಿಂಶದುತ್ತರಶತತಮೋಽಧ್ಯಾಯಃ

॥ ನಾರದ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ಅಧಿವಾಸನಮುತ್ತಮಂ ।
ಸಹಸ್ರಶೀರ್ಷಾಪುರುಷೋ ಮಂಡಪಂ ಯತ್ನತೋ ವಿಶೇತ್ ॥ ೧ ॥

ತತೋಽನ್ಯಸ್ಮಿನ್ ಶುಚೌ ದೇಶೇ ಅಸಂಸ್ಪೃಷ್ಟೋಪಲೇಪನೇ ।
ಮಂಡಲಂ ಪಂಚವರ್ಣೈಸ್ತು ಆಲಿಖೇಚ್ಚತುರಸ್ರಕಂ ॥ ೨ ॥

ಪತಾಕಾತೋರಣಚ್ಛತ್ರಧ್ವಜಮಾಲ್ಯಾದ್ಯಲಂಕೃತಂ ।
ವಿಚಿತ್ರಸುವಿತಾನಾಢ್ಯಂ ಪ್ರಕೀರ್ಣಕುಸುಮೋತ್ಕರೈಃ ॥ ೩ ॥

---

## ನೂರಮೂವತ್ತಾರನೆಯ ಅಧ್ಯಾಯ

೧. ನಾರದರು ಹೇಳುತ್ತಾರೆ—ಇಲ್ಲಿಂದ ಮುಂದೆ ಉತ್ತಮವಾದ ಅಧಿವಾಸನ ವಿಧಾನವನ್ನು ಹೇಳುವೆನು. ಕೇಳು 'ಸಹಸ್ರಶೀರ್ಷಾ' ಎಂಬ ಮಂತ್ರವನ್ನು ಹೇಳುತ್ತಾ ಅಧಿವಾಸ ಮಂಡಪವನ್ನು ಯತ್ನದಿಂದ ಪ್ರವೇಶಿಸಬೇಕು.

೨. ಅಲ್ಲಿ ಸಾರಿಸಿ ಶುಚಿಯಾದ ಮತ್ತೊಂದು ಸ್ಥಳದಲ್ಲಿ ಅದನ್ನು ತುಳಿಯದಂತೆ ಐದು ಬಣ್ಣಗಳಿಂದ ಚಚ್ಚೌಕವಾದ ಮಂಡಲವನ್ನು ಬರೆಯಬೇಕು.

೩. ಸಣ್ಣಧ್ವಜಗಳು, ತೋರಣಗಳು, ಛತ್ರಿಗಳು, ದೊಡ್ಡಧ್ವಜಗಳು, ಹೂವಿನ ಹಾರಗಳು, ಮೊದಲಾದುವುಗಳಿಂದ ಅಲ್ಲಿ ಅಲಂಕರಿಸಿ ನಾನಾ ಬಣ್ಣಗಳ ಮೇಲ್ಕಟ್ಟುಗಳನ್ನೂ ಕಟ್ಟಿ ಪುಷ್ಪಗಳನ್ನು ಎರಚಬೇಕು.

ತಸ್ಯ ಮಧ್ಯೇ ಕುಶಾಸ್ತೀರ್ಣೇ ಮೂರ್ತಿಃ ಸ್ಥಾಪ್ಯಾ ವಿವಸ್ವತಃ ।
ತತ್ರಾಸ್ಯಾವಾಹನಂ ಕೃತ್ವಾ ದದ್ಯಾದರ್ಘ್ಯಂ ವಿವಸ್ವತೇ ॥ ೪ ॥

ಸುವರ್ಣಮಧುಪರ್ಕಾದಿ ಕೃತ್ವಾ ತತ್ರ ವಿಧಾನತಃ ।
ದೇವಸ್ಯ ದರ್ಶಯೇದ್ಗಾಂ ಚ ಸವತ್ಸಾಂ ರೋಹಿಣೀಂ ಶುಭಾಂ ॥ ೫ ॥

ನಮೋ ಗೋಪತಯೇ ತುಭ್ಯಂ ಸಹಸ್ರಾಂಶೋ ಪ್ರಸೀದ ಮೇ ।
ಏವಮರ್ಘ್ಯೇಣ ಸಂಪೂಜ್ಯ ಪರಿಧಾಯ ಚ ವಾಸಸೀ ॥ ೬ ॥

ಯಜ್ಞೋಪವೀತಮಾತಿಥ್ಯಂ ತಥಾಭ್ಯಂಗಂ ತಥೈವ ಚ ।
ವತ್ಸರೇ ವತ್ಸರೇ ತಸ್ಯ ನವಮವ್ಯಂಗಮಾಹರೇತ್ ॥ ೭ ॥

ಶ್ರಾವಣೇ ಮಾಸಿ ರಾಜೇಂದ್ರ ಪವಿತ್ರಂ ತಸ್ಯ ತದ್ಧಿ ವೈ ॥ ೮ ॥

---

೪. ಅದರ ಮಧ್ಯದಲ್ಲಿ ದರ್ಭೆಯನ್ನು ಹರಡಿ ಸೂರ್ಯಪ್ರತಿಮೆಯನ್ನು ಅದರ ಮೇಲಿಡಬೇಕು. ಆ ಮೂರ್ತಿಯಲ್ಲಿ ಸೂರ್ಯನನ್ನಾವಾಹನಮಾಡಿ ಸೂರ್ಯನಿಗೆ ವಿಧಿಯಂತೆ ಅರ್ಘ್ಯವನ್ನು ಕೊಡಬೇಕು.

೫. ಸಹಿರಣ್ಯವಾಗಿ ಮಧುಪರ್ಕ ಮೊದಲಾದುವನ್ನು ಸಮರ್ಪಿಸಿ, ಬಳಿಕ ರೋಹಿಣೀ ಸಂಜ್ಞೆಯುಳ್ಳ ಎಳಗರುಸಮೇತವಾದ ಹಸುವನ್ನು ಸ್ವಾಮಿಗೆ ತೋರಿಸಬೇಕು.

೬. ಎಲೈ ಸಹಸ್ರಕಿರಣನೇ! ಗೋಪತಿಯಾದ ನಿನಗೆ ನಮಸ್ಕಾರ. ನನಗೆ ಪ್ರಸನ್ನನಾಗು. ಎಂದು ಪ್ರಾರ್ಥಿಸಬೇಕು. ಹೀಗೆ ಪೂಜಾದ್ರವ್ಯದಿಂದ ಪೂಜಿಸ ತೊಡಗಿ ವಸ್ತ್ರಗಳೆರಡನ್ನು ಧರಿಸಬೇಕು.

೭. ಅನಂತರ ಯಜ್ಞೋಪವೀತಾದಿಗಳನ್ನೂ ಸಮರ್ಪಣೆಮಾಡಬೇಕು. ಅತಿಥ್ಯ. ಅಭ್ಯಂಗ ಇವುಗಳನ್ನು ಚೆನ್ನಾಗಿ ಮಾಡಬೇಕು. ಪ್ರತಿವರ್ಷವೂ ಆ ಪ್ರತಿಮೆಗೆ ಹೊಸದಾದ ಅವ್ಯಂಗ (ಅಹಿಕಂಚುಕರೂಪವಾದ ಆಭರಣ) ವನ್ನು ತರಬೇಕು.

೮. ಎಲೈ ರಾಜಶ್ರೇಷ್ಠನೇ! ಶ್ರಾವಣಮಾಸದಲ್ಲಿ ಆ ಹೊಸ ಅವ್ಯಂಗವನ್ನು ಸ್ವಾಮಿಗೆ ಧರಿಸಬೇಕು. ಅವನಿಗೆ ಅದೇ ಶುದ್ಧಿಕರವಾದುದು. ಪ್ರತಿವರ್ಷವೂ ಹಾಗೆ ಧರಿಸುವ ದಿನ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು.

ಬ್ರಾಹ್ಮಣಾನ್ ಭೋಜಯಿತ್ವಾ ತು ವರ್ಷೇ ವರ್ಷೇ ಪ್ರಯೋಜಯೇತ್ ।
ಅವ್ಯಂಗಂ ಯದುಶೂದ್ರೂಲ ಶ್ರಾವಣೇ ಮಾಸಿ ಭಾಸ್ಕರಂ ।
ಸರ್ವಗಂಧೈಃ ಸಮಾಲಭ್ಯ ಚಂದನಾಗುರುಕುಂಕುಮೈಃ ॥ ೯ ॥

ಅಲಂಕಾರೈರಲಂಕೃತ್ಯ ಕುಸುಮೈಶ್ಚ ಸುಗಂಧಿಭಿಃ ।
ಮಾಲಾಭಿಶ್ಚ ವಿಚಿತ್ರಾಭಿರಾಬದ್ಧಾಭಿರನೇಕಶಃ ॥ ೧೦ ॥

ತತೋ ಧೂಪಂ ನಿವೇದ್ಯಾಶು ಪ್ರತಿಮಾಗ್ರೇ ಪ್ರಯತ್ನತಃ ।
ಸಹಸ್ರಶೀರ್ಷಾಪುರುಷೋ ಮಂಡಪಂ ಚ ಪ್ರವೇಶಯೇತ್ ॥ ೧೧ ॥

ನಮಃ ಶಂಭವೇತಿ ಮಂತ್ರೇಣ ಶಯ್ಯಾಯಾಂ ವಿನಿವೇಶಯೇತ್ ।
ವಿಶ್ವತಶ್ಚಕ್ಷುರಿತ್ಯೇವ ಕುರ್ಯಾತ್ಕಮಲನಿಷ್ಕಲಂ ॥ ೧೨ ॥

ಪುನರೇವ ಚ ವಕ್ಷ್ಯಾಮಿ ಸಂಕಲೀಕರಣಂ ಶುಭಂ ।
ಸ್ನಾಪನೇ ತು ಯಥಾ ಕಾರ್ಯಃ ಸ್ವದೇಹೇ ನ್ಯಾಸ ಉತ್ತಮಃ ॥ ೧೩ ॥

---

೯ ಅಯ್ಯಾ ಶ್ರೇಷ್ಠನೇ! ಶ್ರಾವಣಮಾಸದಲ್ಲಿ ಅವ್ಯಂಗ ಭೂಷಣವನ್ನು ಶ್ರೀಗಂಧ, ಅಗಿಲು, ಕುಂಕುಮ ಕೇಸರಿ ಇವುಗಳನ್ನು ಸವರಿ ಸೂರ್ಯನಿಗೆ ತೊಡಿಸಿ, ಆಭರಣಗಳಿಂದಲೂ ಒಳ್ಳೆಯ ವಾಸನೆಯುಳ್ಳ ಹೂವುಗಳಿಂದಲೂ ದೇವನನ್ನು ಅಲಂಕರಿಸಬೇಕು.

೧೦. ಮಂಟಪದ ಮೇಲ್ಗಡೆ ಎಲ್ಲಾ ಕಡೆಯಲ್ಲೂ ನಾನಾಬಗೆಯಾದ ಸುಗಂಧವುಳ್ಳ ವಿಚಿತ್ರವಾಗಿ ಕಟ್ಟಿದ ಪುಷ್ಪಮಾಲಿಕೆಗಳನ್ನು ತೂಗಹಾಕಿ ಶೃಂಗರಿಸಬೇಕು.

೧೧. ಆ ಮೇಲೆ ಪ್ರತಿಮೆಯ ಮುಂದೆ ಪ್ರಯತ್ನದಿಂದ ಧೂಪವನ್ನು ಸಮರ್ಪಿಸಿ ಸಹಸ್ರ "ಶೀರ್ಷಾಪುರುಷಃ" ಎಂಬ ಮಂತ್ರಪೂರ್ವಕವಾಗಿ ಮಂಡಲಕ್ಕೆ ದೇವಮೂರ್ತಿಯನ್ನು ಪ್ರವೇಶಮಾಡಿಸಬೇಕು.

೧೨. 'ನಮಃ ಶಂಭವೇ' ಎಂಬ ಮಂತ್ರದಿಂದ ಮೂರ್ತಿಯನ್ನು ಹಾಸಿಗೆಯಲ್ಲಿರಿಸಬೇಕು. 'ವಿಶ್ವತಶ್ಚಕ್ಷುಃ' ಎಂಬ ಮಂತ್ರದಿಂದ ಕಮಲನಿಷ್ಕಲವನ್ನು ಮಾಡತಕ್ಕದು.

೧೩. ಈಗ ಮಂಗಳಕರವಾದ ಸಂಕಲೀಕರಣವನ್ನು ಹೇಳುವೆನು. ಸ್ಥಾಪನ ಮಾಡುವಾಗ ತನ್ನ ದೇಹದಲ್ಲಿ ಅಂಗನ್ಯಾಸಾದಿಗಳನ್ನು ಮಾಡುವಂತೆಯೇ ಪ್ರತಿಮೆಯ ಅಂಗದಲ್ಲಿಯೂ ನ್ಯಾಸಮಾಡಬೇಕು.

**ಪ್ರತಿಮಾಯಾಂ ತಥಾ ಕಾರ್ಯೋ ಯಥಾ ಚಾಲಂಭನಂ ಬುಧಃ ।**
**ಓಂ ಹುಂ ಖಷೋಲ್ಕಾಯ ನಮೋ ಮೂಲಮಂತ್ರಃ ಪ್ರಕೀರ್ತಿತಃ ॥ ೧೪ ॥**

**ಆದಿತ್ಯೋಽಯಂ ಸ್ವಯಂ ದೇವೋ ಹ್ಯಕ್ಷರೇಣೋಪಬೃಂಹಿತಃ ।**
**ಓಂಕಾರಂ ವಿನ್ಯಸೇನ್ಮೂರ್ಧ್ನಿ ಹುಂಕಾರಂ ನಾಸಿಕೋಪರಿ ॥ ೧೫ ॥**

**ಖಕಾರಂ ಚ ಲಲಾಟೇ ತು ಷಕಾರಂ ವದನೇ ನ್ಯಸೇತ್ ।**
**ಲಕಾರಂ ಚೈವ ಕಂಠೇ ತು ಕಕಾರಂ ಹೃದಯೇ ನ್ಯಸೇತ್ ॥ ೧೬ ॥**

**ಯಕಾರಂ ತು ಭುಜೇ ವಾಮೇ ನಕಾರಂ ದಕ್ಷಿಣೇ ಭುಜೇ ।**
**ಮಕಾರಂ ವಾಮಕುಕ್ಷೌ ಚ ವಿಸರ್ಗಂ ದಕ್ಷಿಣೇ ನ್ಯಸೇತ್ ॥ ೧೭ ॥**

**ಓಂಕಾರಂ ತು ಸದಾ ಧ್ಯಾಯೇಜ್ಜ್ವಾಲಾಮಾಲಾಸಮಾಕುಲಂ ।**
**ಹುಂಕಾರಂ ಶುದ್ಧವರ್ಣಾಭಂ ಪ್ರಸುವಂತಮಲಂ ಶುಭಂ ॥ ೧೮ ॥**

---

೧೪. 'ಓಂ ಹು ಖಷೋಲ್ಕಾಯನಮಃ' ಎಂಬ ಮೂಲಮಂತ್ರವನ್ನು ಹೇಳಿ ಪ್ರತಿಮೆಯ ಅಂಗವನ್ನು ಆಲಂಭನ ಮಾಡಬೇಕು.(ಸವರಬೇಕು.)

೧೫. ಈ ಸೂರ್ಯದೇವನು ತಾನೇ ಅಕ್ಷರದಿಂದ ಉಪಬೃಹ್ಮಿತನಾದದ್ದರಿಂದ ಓಂಕಾರವನ್ನು ಶಿರಸ್ಸಿನಲ್ಲೂ, ಹುಂಕಾರವನ್ನು ನಾಸಿಕದಲ್ಲೂ ನ್ಯಾಸಮಾಡಬೇಕು.

೧೬. ಖಕಾರವನ್ನು ಲಲಾಟದಲ್ಲೂ, ಷಕಾರವನ್ನು ಮುಖದಲ್ಲೂ, ಲಕಾರವನ್ನು ಕಂಠದಲ್ಲೂ. ಕಕಾರವನ್ನು ಹೃದಯದಲ್ಲೂ ನ್ಯಾಸಮಾಡಬೇಕು.

೧೭. ಯಕಾರವನ್ನು ವಾಮಭುಜದಲ್ಲೂ, ನಕಾರವನ್ನು ದಕ್ಷಿಣಭುಜದಲ್ಲೂ, ಮಕಾರವನ್ನು ಕುಕ್ಷಿಯ ಎಡಭಾಗದಲ್ಲೂ, ವಿಸರ್ಗವನ್ನು ಬಲಭಾಗದಲ್ಲೂ ನ್ಯಾಸ ಮಾಡತಕ್ಕದ್ದು.

೧೮, ಓಂಕಾರವನ್ನು ಸದಾ ಜ್ವಾಲಾಮಾಲೆಗಳಿಂದ ವ್ಯಾಪ್ತವಾಗಿರುವಂತೆ ಧ್ಯಾನಿಸಬೇಕು. ಹುಂಕಾರವನ್ನು ಶುಭ್ರವರ್ಣವುಳ್ಳದ್ದಾಗಿ ಅತ್ಯಂತ ಶುಭವನ್ನುಂಟು ಮಾಡುವುದೆಂದು ಭಾವಿಸಬೇಕು.

ಖಕಾರಂ ಚಿಂತಯೇತ್ಪ್ರಾಜ್ಞೋ ಭಿನ್ನಾಂಜನಸಮಪ್ರಭಂ ।
ತರುಣಾದಿತ್ಯವರ್ಣಾಭಂ ಖಕಾರಂ ಚಿಂತಯೇದ್ಬುಧಃ ॥ ೧೯ ॥

ಷೋಕಾರಂ ತು ಮಹಾಬಾಹೋ ಹೇಮವರ್ಣಂ ವಿಚಿಂತಯೇತ್ ।
ಶುಕ್ಲಪದ್ಮನಿಭಾಕಾರಮಕಾರಂ ಚಿಂತಯೇದ್ಬುಧಃ ॥ ೨೦ ॥

ಜಾತೀಕುಸುಮಸಂಕಾಶಂ ಹ್ರೀಂಕಾರಂ ಸರ್ವವರ್ಣಕಂ ।
ಕ್ಷೀರವರ್ಣಂ ಸಕಾರಂ ತು ಚಿಂತಯೇತ್ಸತತಂ ಬುಧಃ ॥ ೨೧ ॥

ನಕಾರಂ ಹಿಮಕುಂದಾಭಂ ಮಕಾರಮಮೃತಾಕ್ಷರಂ ।
ಹ್ರೀಂಕಾರಂ ವಿದ್ಯುತ್ಸಂಕಾಶಂ ಹ್ರೀಂಕಾರಂ ಸರ್ವವರ್ಣಕಂ ॥ ೨೨ ॥

ಕ್ಷೀರವರ್ಣಂ ಸಕಾರಂ ತು ಚಿಂತಯೇತ್ಸತತಂ ಬುಧಃ ।
ನಕಾರಂ ಸ್ವರ್ಣವರ್ಣಾಭಂ ಮಕಾರಂ ಕನಕಪ್ರಭಂ ॥ ೨೩ ॥

---

೧೯. ವಿದ್ವಾಂಸರು ಖಕಾರವು ಅರೆದ ಕಾಡಿಗೆಯಂತೆ ಬಣ್ಣವುಳ್ಳದ್ದೆನ್ನುವರು. ಇನ್ನು ಕೆಲವರು ಖಕಾರವು ಬಾಲಸೂರ್ಯನಂತೆ ಕಾಂತಿಯುಳ್ಳದೆಂದು ಧ್ಯಾನಿಸುವರು.

೨೦. ಅಯ್ಯಾ ಮಹಾಬಾಹುವೇ! ಷೋಕಾರವನ್ನು ಚಿನ್ನದ ಬಣ್ಣವುಳ್ಳದ್ದೆಂದು ಭಾವಿಸಬೇಕು. ಜ್ಞಾನಿಯಾದವನು ಅಕಾರವನ್ನು ಬಿಳಿಯ ಕಮಲದ ಬಣ್ಣವುಳ್ಳದ್ದೆಂದು ಭಾವಿಸಬೇಕು.

೨೧. ಪ್ರಾಜ್ಞನು ಹ್ರೀಂಕಾರವನ್ನು ಜಾಜಿಯ ಹೂವಿನ ಬಣ್ಣವುಳ್ಳದ್ದೆಂದೂ, ಸಕಾರವನ್ನು ಯಾವಾಗಲೂ ಹಾಲಿನ ಬಣ್ಣವುಳ್ಳದ್ದೆಂದೂ ಭಾವಿಸಬೇಕು.

೨೨. ನಕಾರವನ್ನು ಮಂಜುಗಡ್ಡೆಯ ಅಥವಾ ಮಲ್ಲಿಗೆಯಹೂವಿನ ಬಣ್ಣವುಳ್ಳದ್ದೆಂದೂ, ಮಕಾರವನ್ನು ಅಮೃತದ ವರ್ಣದಂತೆ ಬಣ್ಣವುಳ್ಳ ಅಕ್ಷರವೆಂಬದಾಗಿಯೂ, ಹ್ರೀಂಕಾರವನ್ನು ಮಿಂಚಿನಂತೆ ಕಾಂತಿಯುಳ್ಳದ್ದೆಂದೂ ಸರ್ವವರ್ಣಾತ್ಮಕವೆಂಬದಾಗಿಯೂ ಭಾವಿಸಬೇಕು.

೨೩. ಸಕಾರವನ್ನು ಹಾಲಿನಬಣ್ಣವುಳ್ಳದ್ದೆಂದು ವಿದ್ವಾಂಸನು ಸರ್ವದಾ ತಿಳಿಯಬೇಕು. ನಕಾರವನ್ನು ಸುವರ್ಣದ ಬಣ್ಣವುಳ್ಳದ್ದೆಂದೂ ಮಕಾರವನ್ನು ಚಿನ್ನದಂತೆ ಕಾಂತಿಯುಳ್ಳದ್ದೆಂದೂ ಭಾವಿಸಬೇಕು.

ತತೋ ದೇವಂ ಮಹಾತ್ಮಾನಂ ಸಹಸ್ರಕಿರಣಂ ರವಿಂ ।
ಪ್ರಾಸಾದಾಭಿಮುಖಂ ದೇವಂ ಶಯನೀಯೇ ನಿವೇಶಯೇತ್ ॥ ೨೪ ॥

ಅಗ್ನಿಕಾರ್ಯಂ ತತಃ ಕುರ್ಯುರಗ್ನಿಕುಂಡೇಷು ವೈ ದ್ವಿಜಾಃ ।
ತತೋಽರಣ್ಯಾಂ ಸಮುತ್ಥಾಪ್ಯ ಅಗ್ನಿಂ ಲೌಕಿಕಮೇವ ವಾ ॥ ೨೫ ॥

ಪ್ರಜ್ವಾಲ್ಯಾಗ್ನಿಂ ವಿಧಾನೇನ ಕುರ್ಯಾದ್ಧೋಮಂ ವಿಚಕ್ಷಣಃ ।
ಬಹ್ವೃಚಃ ಪೂರ್ವಕುಂಡೇ ತು ಯಾಮ್ಯಾಂ ಮಧ್ಯಂದಿನಸ್ತಥಾ ॥ ೨೬ ॥

ಪಶ್ಚಿಮೇ ಚೈವಚ್ಛಂದೋಗ ಉತ್ತರೇಽಥರ್ವಣೋ ಮತಃ ।
ಮಧ್ಯೇ ಚ ಭೋಜಕಃ ಕುರ್ಯಾದ್ಧೋಮಂ ಯಜ್ಞೇ ಯದೂತ್ತಮ ॥ ೨೭ ॥

ಶಮೀಪಾಲಾಶೋದುಂಬರಾಣಿ ಹ್ಯಪಾಮಾರ್ಗಸ್ತಥೈವ ಚ ।
ದ್ವಾದಶ ತು ಸಹಸ್ರಾಣಿ ಅಷ್ಟೌ ಚತ್ವಾರಿ ಏವ ಚ ॥ ೨೮ ॥

---

೨೪. ಅನಂತರ ಮಹಾತ್ಮನೂ ಸಹಸ್ರಕಿರಣನೂ ಆದ ರವಿಪ್ರತಿಮೆಯನ್ನು ಪ್ರಾಸಾದದ ಬಾಗಿಲಿನ ಎದುರಿಗೆ ಹಾಸಿಗೆ ಹಾಕಿದ ಪೀಠದಲ್ಲಿ ಇರಿಸಬೇಕು.

೨೫. ಅನಂತರ ಬ್ರಾಹ್ಮಣರು ಅಗ್ನಿಕುಂಡದಲ್ಲಿ ಹೋಮಮಾಡಲು ತೊಡಗಬೇಕು. ಅರಣಿಯಿಂದ ಕಡೆದು ಮಾಡಿದ ಅಗ್ನಿಯನ್ನಾಗಲೀ, ಅಥವಾ ಲೌಕಿಕಾಗ್ನಿಯನ್ನಾಗಲೀ ಪ್ರಜ್ವಲಿಸಿ, ವಿಚಕ್ಷಣನಾದವನು ವಿಧಿಪ್ರಕಾರ ಅದರಲ್ಲಿ ಹೋಮಾರಂಭ ಮಾಡಬೇಕು.

೨೬. ಋಗ್ವೇದಿಗಳು ಪೂರ್ವದಿಕ್ಕಿನ ಕುಂಡದಲ್ಲಿಯೂ, ಮಾಧ್ಯಂದಿನರು (ಶುಕ್ಲಯಜುರ್ವೇದಿಗಳು) ದಕ್ಷಿಣಕುಂಡದಲ್ಲಿಯೂ, ಛಂದೋಗ್ಯರು (ಸಾಮಕರು) ಪಶ್ಚಿಮದಿಕ್ಕಿನ ಕುಂಡದಲ್ಲಿಯೂ ಹೋಮಮಾಡಬೇಕು.

೨೭. ಅಯ್ಯಾ ಯದುವಂಶೀಯರಲ್ಲಿ ಉತ್ತಮನೇ! ಈ ಹೋಮದಲ್ಲಿ ಮಧ್ಯಭಾಗದ ಕುಂಡದಲ್ಲಿ ಭೋಜಕನು ಹೋಮಮಾಡಬೇಕು.

೨೮. ಬನ್ನಿ, ಮುತ್ತಗ, ಅತ್ತಿ, ಉತ್ತರಣೆ ಇವುಗಳ ಸಮಿತ್ತುಗಳಿಂದ ಕ್ರಮವಾಗಿ ಹನ್ನೆರಡುಸಾವಿರವ ಹನ್ನೆರಡು ಅಥವಾ ಆರುಸಾವಿರ.

ದ್ವೇ ತ್ರೀಣಿ ಚ ಸಹಸ್ರಾಣಿ ಅಥವಾ ಏಕಮೇವ ಹಿ ।
ಅಗ್ನಿಮೂರ್ಧೇತಿ ಮಂತ್ರೇಣ ಕುಂಡಸ್ಯಾಲಂಭನಂ ಭವೇತ್ ॥ ೨೯ ॥

ಉಲ್ಲಿಖ್ಯಾಭ್ಯುಕ್ಷ್ಯ ತೇನೈವ ಅಗ್ನಿಂದೂತಮಿತಿ ಸ್ಮೃತಃ ।
ಸಂಬುಧ್ಯಸ್ವಾಗ್ನೇತಿ ಮಂತ್ರೇಣ ಗರ್ಭಾಧಾನಂ ತು ಕಾರಯೇತ್ ॥ ೩೦ ॥

ಸೀಮಂತೇತಿ ಪುನಸ್ತತ್ರ ಮಹಾಮಂತ್ರೇಣ ಹೋಮಯೇತ್ ।
ಜಾತಕರ್ಮ ತಥಾ ಪ್ರೋಕ್ತಂ ಪ್ರಾಣಾಯಾಮಂ ವಿದುರ್ಬುಧಾಃ ॥ ೩೧ ॥

ನಮಸ್ವಾಹೇತಿ ಮಂತ್ರೇಣ ನಾಮ ಕರಣಮೇವ ಚ ।
ಅಗ್ನಿಪ್ರಾಶನ ಮಂತ್ರೇಣ ಅನ್ನಪ್ರಾಶನಮಾದಿಶೇತ್ ॥ ೩೨ ॥

ಜ್ಯೇಷ್ಠಮಗ್ರೇತಿ ಮಂತ್ರೇಣ ತೇನ ಚೂಡೋಪಕರ್ಮಣಿ ।
ವ್ರತಬಂಧಸ್ಯ ಮಂತ್ರೇಣ ವ್ರತಬಂಧಂ ಸಮಾದಿಶೇತ್ ॥ ೩೩ ॥

---

೨೯. ಅಥವಾ ಒಂದೇ ಸಾವಿರ ಸಾರಿಯಾಗಲಿ, ಹೋಮಮಾಡಬಹುದು. ಪ್ರಾರಂಭದಲ್ಲಿ 'ಅಗ್ನಿಮೂರ್ಧಾ' ಎಂಬ ಮಂತ್ರದಿಂದ ಕುಂಡದ ಸುತ್ತಲೂ ಸವರ ಬೇಕು. 'ಅಗ್ನಿಂದೂತಂ' ಎಂಬ ಮಂತ್ರದಿಂದ ಕಾಷ್ಟದಿಂದ ಅಗ್ನಿಯನ್ನು ಕೆದಕಿ ಅದನ್ನೇ ಕೈಯಲ್ಲಿ ಹಿಡಿದು

೩೦. ಸುತ್ತ ನೀರು ಚುಮುಕಿಸಿ ಅಗ್ನಿಯಲ್ಲಿ ಹಾಕಿ ಹತ್ತಿಸಿ 'ಸಂಬುಧ್ಯಸ್ವಾಗ್ನೇ' ಎಂಬ ಮಂತ್ರದಿಂದ (ಪ್ರತಿಮೆಗೆ) ಗರ್ಭಾದಾನ ಕರ್ಮವನ್ನು ಮಾಡಬೇಕು.

೩೧. ಬಳಿಕ 'ಸೀಮಂತ' ಎಂಬ ಮಹಾಮಂತ್ರದಿಂದ ಹೋಮಮಾಡಿ ಸೀಮಂತೋನ್ನಯನವೆಂಬ ಕರ್ಮವನ್ನು ಮಾಡಬೇಕು. ವಿದ್ವಾಂಸರು ಪ್ರಾಣಾಯಾಮವನ್ನೇ ಜಾತಕರ್ಮವೆಂಬ ಸಂಸ್ಕಾರವೆಂದು ಹೇಳುತ್ತಾರೆ.

೩೨. ಸೂರ್ಯನಾಮದೊಡನೆ ಸ್ವಾಹಾ ಮತ್ತು ನಮಃ ಎಂಬುದನ್ನು ಸೇರಿಸಿ ಉಚ್ಚರಿಸಿ ಹೋಮಮಾಡಿ, ನಾಮಕರಣ ಕರ್ಮವನ್ನೂ, ಅನ್ನಪ್ರಾಶನದಲ್ಲಿ ಉಪಯೋಗಿಸುವ ಮಂತ್ರದಿಂದ ಹೋಮಮಾಡಿ ಅನ್ನಪ್ರಾಶನ ಕರ್ಮವನ್ನೂ ಮಾಡಬೇಕು.

೩೩. "ಜ್ಯೇಷ್ಠಮಗ್ರೇ" ಎಂಬ ಮಂತ್ರದಿಂದ ಹೋಮಮಾಡಿ ಚೂಡಾಕರ್ಮವನ್ನೂ, ವ್ರತಬಂಧನಕ್ಕಾಗಿ ಹೇಳುವ ಮಂತ್ರದಿಂದ ಹೋಮಮಾಡಿ ಪ್ರತಿಮೆಗೆ ವ್ರತಬಂಧನ (ಉಪನಯನ) ಕರ್ಮವನ್ನೂ ಮಾಡಬೇಕು.

ಸಮಾವರ್ತನಮಿತ್ಯೇವ ಆಕೃಷ್ಣೇತಿ ಚ ಹೋಮಯೇತ್ ।
ಪತ್ನೀಸಂಯೋಜನಂ ಚೈವ ಸ್ವಯಮೇವ ಪ್ರಕಲ್ಪಯೇತ್ ॥ ೩೪ ॥

ಅಗ್ನಿಹೋತ್ರಾದಿಕಂ ಚೈವ ಯಜ್ಞಕರ್ಮಾಣಿ ಯಾನಿ ಚ ।
ಮಹಾವ್ಯಾಹೃತಿಮಂತ್ರೇಣ ಹೋತವ್ಯಾನಿ ಸಮಂತತಃ ॥ ೩೫ ॥

ಮಾತೃಣಾಂ ಯಜ್ಞಭೂತಾನಾಂ ಬಲಿಕರ್ಮ ಪ್ರದಾಪಯೇತ್ ।
ಸರ್ವಕಾಮಸಮೃದ್ಧ್ಯರ್ಥಂ ಕಾರಯೇದಧಿವಾಸನಂ ॥ ೩೬ ॥

ತ್ರಿರಾತ್ರಂ ಪಂಚರಾತ್ರಂ ಚ ಅಹೋರಾತ್ರಮಥಾಪಿವಾ ।
ತತಃ ಸ್ವಲಂಕೃತಾಂ ಸ್ನಾತಾಂ ಮಣಿರತ್ನೈರ್ವಿಭೂಷಿತಾಂ ॥ ೩೭ ॥

ಕೃತರಕ್ಷಾಂ ಪ್ರಯತ್ನೇನ ಪ್ರತಿಮಾಮಧಿವಾಸಯೇತ್ ।
ದೇವಾಗಾರಾದಥೈಶಾನೇ ದಿಗ್ಭಾಗೇ ದಿವ್ಯಮಂದಿರಂ ॥ ೩೮ ॥

---

೩೪. 'ಆ ಕೃಷ್ಣೇನ' ಎಂಬ ಮಂತ್ರಪೂರ್ವಕವಾಗಿ ಹೋಮಮಾಡಿ ವ್ರತ ಸಮಾವರ್ತನ ಕರ್ಮವನ್ನೂ, ಪತ್ನೀಸಂಯೋಜನ (ವಿವಾಹ) ಕರ್ಮವನ್ನೂ ಸ್ವಯಂ ನೆರವೇರಿಸಬೇಕು.

೩೫. ಅಗ್ನಿಹೋತ್ರ ಮುಂತಾದ ಹೋಮಕರ್ಮಗಳೆಲ್ಲವನ್ನೂ ಸಮಗ್ರವಾಗಿ ಮಹಾವ್ಯಾಹೃತಿ ಮಂತ್ರಗಳಿಂದ ಮಾಡಬೇಕು.

೩೬. ನಾಂದೀ ಷೋಡಶಮಾತೃಗಳನ್ನು ಪೂಜಿಸಿ ಪೂಜಾಂಗವಾಗಿ ಬಲಿಪ್ರದಾನ ಮಾಡಬೇಕು. 'ನನ್ನ ಸಕಲ ಇಷ್ಟಗಳೂ ಸಿದ್ಧಿಸುವುದಕ್ಕಾಗಿ ಪ್ರತಿಮಾ ಅಧಿವಾಸನ ಮಾಡುತ್ತೇನೆ' ಎಂದು ಸಂಕಲ್ಪಿಸಬೇಕು.

೩೭. ಅನಂತರ ಪ್ರತಿಮೆಗೆ ಚೆನ್ನಾಗಿ ಸ್ನಾನಮಾಡಿಸಿ ಮಣಿ, ರತ್ನ ಮುಂತಾದ್ದರಿಂದ ಅಲಂಕರಿಸಿ (ರಕ್ಷಾಬಂಧನ ಮಾಡಿದ) ಪ್ರತಿಮೆಯನ್ನು ಪ್ರಯತ್ನದಿಂದ ಮೂರುರಾತ್ರಿ ಕಾಲವೋ, ಐದುರಾತ್ರಿ ಕಾಲವೋ ಕಡೆಗೆ ಒಂದು ಅಹೋರಾತ್ರಿಯೋ ಅಧಿವಾಸಮಾಡಿಸಬೇಕು.

೩೮–೩೯. ದೇವಾಗಾರಕ್ಕೆ ಈಶಾನ್ಯ ದಿಗ್ಭಾಗದಲ್ಲಿ ದಿವ್ಯವಾದ ಶಯ್ಯಾಮಂದಿರವನ್ನು ರಚಿಸಿ ದರ್ಭೆಗಳನ್ನು ಹಾಸಿ ಅದರಮೇಲೆ ದಿವ್ಯವಾದ (ಮಂದಲಿಗೆ)

ಕೃತ್ವಾ ಕುಶಪರಿಸ್ತೀರ್ಣೇ ವರಾಸ್ತರಣಸಂವೃತೇ ।
ಪೂರ್ವಶೀರ್ಷಾಂ ತಥಾ ಶಯ್ಯಾಂ ಶುಕ್ಲಾಂ ಶುಕ್ಲಾಂಬರೋತ್ತರಾಂ ॥ ೩೯ ॥

ತಸ್ಯಾಮಾವೇಶಯೇತ್ಸಮ್ಯಙ್ಮಹಾಶ್ವೇತಾಮುದಾಹರೇತ್ ।
ನಿಕ್ಷುಭಾಂ ದಕ್ಷಿಣೇ ಪಾರ್ಶ್ವೇ ವಾಮೇ ರಾಜ್ಞೀ ಚ ಕೀರ್ತಿತಾ ॥ ೪೦ ॥

ದಂಡಪಿಂಗಲಕೌ ಚಾಸ್ಯ ಸ್ಥಿತೌ ಪಾದಪ್ರವೇಶಿತೌ ।
ತಸ್ಯಾಂ ಸಂವೇಶಿತಾಯಾಂ ತು ಪ್ರತಿಮಾಯಾಂ ನಿಶೀಥಕೇ ॥ ೪೧ ॥

ವಸೇತ್ತಾಂ ರಜನೀಂ ತತ್ರ ಸ್ತೂಯಮಾನಶ್ಚತುರ್ದಿಶಂ ।
ಬ್ರಾಹ್ಮಣೈರ್ಬಂಧಿಭಿಶ್ಚಾಪಿ ಗೀತಜ್ಞೈಶ್ಚಾರಣೈಸ್ತಥಾ ॥ ೪೨ ॥

ಕುರ್ಯಾಜ್ಜಾಗರಣಂ ತತ್ರ ಸೂರ್ಯಭಕ್ತಿಸಮನ್ವಿತೈಃ ।
ಪ್ರಭಾತಾಯಾಂ ತು ಶರ್ವರ್ಯಾಂ ಚೋದಯೇದ್ವಗ್ವಿಧಾನತಃ ॥ ೪೩ ॥

---

ಹಾಸಿಗೆಯನ್ನು ಹಾಸಿ ಅದಕ್ಕೆ ಬಿಳಿಯ ಮಗ್ಗಲು ಹಾಸಿಗೆಯನ್ನು ಹಾಸಿ ಅದರ ಮೇಲೆ ಆ ಪ್ರತಿಮೆಯನ್ನು ಪೂರ್ವದಿಕ್ಕಿಗೆ ಶಿರಸ್ಸುಮಾಡಿ ಇರಿಸಿ ತ್ರಿಚಮಂತ್ರವನ್ನು ಹೇಳಬೇಕು.

೪೦. ಆ ವಿಗ್ರಹದ ಬಲಗಡೆ ನಿಕ್ಷುಭಾ ಎಂಬ ಪತ್ನೀ ಪ್ರತಿಮೆಯನ್ನೂ ಎಡಗಡೆ ರಾಜ್ಞೀ ಎಂಬ ಎರಡನೇ ಪತ್ನೀಪ್ರತಿಮೆಯನ್ನೂ ಇಡಬೇಕೆಂದು ಹೇಳಿದೆ.

೪೧. ಅವುಗಳ ಪಾದದ ಬಳಿ ದಂಡನಾಯಕ ಮತ್ತು ಪಿಂಗಳ ಎಂಬುವರನ್ನು ಇರಿಸಬೇಕು. ಹೀಗೆ ಪ್ರತಿಮೆಯನ್ನು ಮಲಗಿಸಿ ಆ ರಾತ್ರಿ ಶಯ್ಯಾಗೃಹದ ಹೊರಗೆ

೪೨. ನಾಲ್ಕು ದಿಕ್ಕಿನಲ್ಲೂ ದೇವರಸ್ತೋತ್ರ ಮಾಡುತ್ತಾ, ಬ್ರಾಹ್ಮಣರು ವಂದಿಗಳು, ಗಾನವನ್ನು ಬಲ್ಲ ಚಾರಣರು, ಮತ್ತು ಭಕ್ತರೊಡಗೂಡಿ ಜಾಗರಣೆಮಾಡಬೇಕು.

೪೩. ರಾತ್ರಿ ಮುಗಿದು ಬೆಳಗಾಗುತ್ತಲೇ ಪ್ರಬೋಧನ ಮಾಡಲು (ಎಚ್ಚರಗೊಳಿಸಲು) ಅರ್ಹವಾದ ಸುಪ್ರಭಾತದ ಋಕ್ಕುಗಳನ್ನು ಹೇಳಿ ಎಬ್ಬಿಸಬೇಕು.

ಹವಿಷ್ಯಂ ಭೋಕ್ತ್ರುಕಾಮಾಂಸ್ತು ಬ್ರಾಹ್ಮಣಾನ್ ಭೋಜಕಾಂಸ್ತಥಾ ।
ದಕ್ಷಿಣಾಭಿಶ್ಚ ಸಂಪೂಜ್ಯ ತೈಃ ಕೃತಸ್ವಸ್ತಿವಾಚನಃ ॥ ೪೪ ॥

ತತೋ ಗರ್ಭಗೃಹಸ್ಯಾಥ ಮಧ್ಯೇ ಕೃತ್ವಾ ತು ಪಿಂಡಿಕಾಂ ।
ವಿಧಿವತ್ತತ್ರ ಸೌವರ್ಣಂ ನ್ಯಸೇತ್ಸಪ್ತಹಯಂ ರಥಂ ॥ ೪೫ ॥

ಸರ್ವಬೀಜೌಷಧ್ಯೈಶ್ಚೈವ ತತ್ರ ಧೃತ್ವಾ ವಿಧಾನವಿತ್ ।
ದತ್ವಾರ್ಘ್ಯಂ ಸ್ಥಾಪಯೇತ್ತತ್ರ ಯಜಮಾನಃ ಸಹಾಯವಾನ್ ॥ ೪೬ ॥

ಶಂಖದುಂದುಭಿನಿರ್ಘೋಷೈರ್ಜಲಧಾರಾಸಹಾಕ್ಷತೈಃ ।
ಕೃತ್ವಾ ಪುಣ್ಯಾಹಶಬ್ದಂ ತು ಆಲಯಸ್ಯ ಪ್ರದಕ್ಷಿಣಾಂ ॥ ೪೭ ॥

ಶುಭಲಗ್ನೇ ದಿನೇ ಋಕ್ಷೇ ಪೂರ್ವಾಹ್ಣೇ ಭಾನುವೀಕ್ಷಣೇ ।
ಮುಹೂರ್ತೇ ಚ ಶುಭೇ ಭಾನೋಃ ಪ್ರತಿಮಾಂ ಸ್ಥಾಪಯೇದ್ಬುಧಃ ॥ ೪೮ ॥

---

೪೪. ಈರೀತಿ ಉಪವಾಸ ಜಾಗರಣಾದಿಗಳನ್ನಾಚರಿಸಿ, ಹಸಿದವರಾಗಿ ಭೋಜನ ಮಾಡಲಪೇಕ್ಷೆಪಡುವ ಬ್ರಾಹ್ಮಣರನ್ನೂ ಭೋಜಕರನ್ನೂ ಹವಿಷ್ಯಾನ್ನದಿಂದ ತೃಪ್ತಿಪಡಿಸಿ, ದಕ್ಷಿಣೆ ಮುಂತಾದುವುಗಳನ್ನು ಕೊಟ್ಟು, ಅರ್ಚಿಸಿ ಅವರಿಂದ ಸ್ವಸ್ತಿವಾಚನ ಮಾಡಿಸಬೇಕು.

೪೫. ಅನಂತರ ಪಿಂಡಿಕೆಯಲ್ಲಿ ದೇವಮೂರ್ತಿಯನ್ನು ಸರಿಯಾಗಿ ನಿಲ್ಲಿಸಿ ಏಳು ಕುದುರೆಗಳನ್ನು ಕಟ್ಟಿದ ರಥವನ್ನು ಗರ್ಭಗೃಹದ ಮಧ್ಯದಲ್ಲಿ ವಿಧಿವತ್ತಾಗಿ ನಿಲ್ಲಿಸಬೇಕು.

೪೬-೪೭. ವಿಧಾನವನ್ನು ತಿಳಿದ ಯಜಮಾನನು ಸಮಸ್ತ ಬೀಜಗಳನ್ನು ಮೂಲಿಕೆಗಳನ್ನೂ ಕೈಯಲ್ಲಿ ಹಿಡಿದುಕೊಂಡು ಅರ್ಘ್ಯವನ್ನು ಕೊಟ್ಟು, ಅರ್ಹರಾದವರ ಸಹಾಯದೊಡನೆ ಮೂರ್ತಿಯನ್ನು ಸ್ಥಾಪಿಸುವ ಮುನ್ನ, ಶಂಖ, ನಗಾರಿ ಇವುಗಳ ಧ್ವನಿಯೊಡನೆಯೂ ಅಕ್ಷತೆಯೊಡಗೂಡಿದ ಜಲಾಧಾರೆಗಳನ್ನು ಸೋರಿಸುತ್ತಲೂ, ಪುಣ್ಯಾಹವಾಚನಮಂತ್ರವನ್ನು ಹೇಳುತ್ತಲೂ, ದೇವಾಲಯವನ್ನು ಪ್ರದಕ್ಷಿಣೆಮಾಡಬೇಕು.

೪೮. ಶುಭನಕ್ಷತ್ರವುಳ್ಳ ಶುಭದಿನದ ಪೂರ್ವಾಹ್ನದಲ್ಲಿ ಒದಗುವ ಶುಭಲಗ್ನದಲ್ಲಿ ಎಂದರೆ ಸೂರ್ಯವೀಕ್ಷಣೆಯುಳ್ಳ ಶುಭಲಗ್ನದಲ್ಲಿ ತಿಳಿದವನು ಸೂರ್ಯಪ್ರತಿಮೆಯನ್ನು ಪ್ರತಿಷ್ಠಿಸಬೇಕು.

ನಾಧೋಮುಖೀಂ ನೋರ್ಧ್ವಮುಖೀಂ ನ ಪಾರ್ಶ್ವಾವನತಾಂ ತಥಾ ।
ಸಮಾಮಭಿಮುಖೀಂ ಚೇಮಾಂ ಪ್ರತಿಮಾಂ ತು ನಿವೇಶಯೇತ್ ॥ ೪೯ ॥

ಪತ್ನ್ಯೌ ಚಾಸ್ಯ ತತಃ ಸಮ್ಯಕ್ಪಾರ್ಶ್ವಯೋರ್ವಿನಿವೇಶಯೇತ್ ।
ನಿಕ್ಷುಭಾ ದಕ್ಷಿಣೇ ಪಾರ್ಶ್ವೇ ರವೇ ರಾಜ್ಞೀ ತು ವಾಮತಃ ॥ ೫೦ ॥

ತತಸ್ತದುಪಹಾರಾರ್ಥಂ ಸಂಭಾರೈಃ ಪ್ರಾಕ್ಸಮಾಹೃತೈಃ ।
ಮೋದಕಾಯೂಪಿಕಾಪೂಪಶಷ್ಕುಲೀಭೂತಶೀರ್ಷಕೈಃ ॥ ೫೧ ॥

ಕೃಶರೈಃ ಪಾಯಸೋನ್ಮಿಶ್ರೈಃ ಸರ್ವದಿಕ್ಷು ಕ್ಷಿಪೇದ್ಬಲಿಂ ।
ಇಂದ್ರಾಯ ದೇವಪತಯೇ ಬಲಿನೇ ವಜ್ರಪಾಣಯೇ ॥ ೫೨ ॥

ಶತಯಜ್ಞಾಧಿಪತಯೇ ತಸ್ಮೈ ಇಂದ್ರಾಯ ತೇ ನಮಃ ।
ತ್ರಾತಾರಮಿಂದ್ರಮಂತ್ರೇಣ ಇಂದ್ರಸ್ಯಾವಾಹನಂ ಭವೇತ್ ॥ ೫೩ ॥

---

೪೯. ಪ್ರತಿಮೆಯು ಅಧೋಮುಖವಾಗದ ಹಾಗೂ, ಊರ್ಧ್ವಮುಖವಾಗದ ಹಾಗೂ, ಮಗ್ಗಲುಗಳಿಗೆ ಬಾಗದೇ ಇರುವ ಹಾಗೂ, ಎದುರಿಗೆ ನೆಟ್ಟಗೆ ನಿಂತಿರುವ ಹಾಗೆಯೂ ಪ್ರತಿಷ್ಠೆಮಾಡಬೇಕು.

೫೦. ಆ ಸೂರ್ಯನ ಇಬ್ಬರ ಹೆಂಡಿರು ಪ್ರತಿಮೆಗಳನ್ನೂ ಪಕ್ಕಗಳಲ್ಲಿ ಎಂದರೆ ಸೂರ್ಯನ ಬಲಪಾರ್ಶ್ವದಲ್ಲಿ ನಿಕ್ಷುಭೆಯನ್ನೂ, ಎಡಪಕ್ಕದಲ್ಲಿ ರಾಜ್ಞೀ ಪ್ರತಿಮೆಯನ್ನೂ, ಧೃಢವಾಗಿ ಸ್ಥಾಪಿಸಬೇಕು.

೫೧. ಅನಂತರ ಅವರ ನಿವೇದನಕ್ಕಾಗಿ ಮೊದಲೇ ತಂದಿದ್ದ ಸಾಮಗ್ರಿಗಳು ಎಂದರೆ ಕಡುಬು, ಹಿಟ್ಟಿನಿಂದ ಮಾಡಿದ ಭಕ್ಷ್ಯ (ಎರೆಯಪ್ಪ) ಚಕ್ಕುಲಿ, (ಭೂತ ಶೀರ್ಷ) ಚಿಗುಳಿ, ಪಾಯಸ ಇವುಗಳಿಂದ ಕೂಡಿದ ಬಲಿಯನ್ನು ಎಲ್ಲಾ ದಿಕ್ಕುಗಳಲ್ಲಿಯೂ ಸಮರ್ಪಿಸಬೇಕು.

೫೨. ಇಂದ್ರದಿಕ್ಕಿನಲ್ಲಿ ಬಲಿಪ್ರದಾನ ಮಾಡುವಾಗ 'ತ್ರಾತಾರಮಿಂದ್ರಂ' ಎಂಬ ಮಂತ್ರದಿಂದ ಇಂದ್ರನನ್ನು ಆವಾಹನಮಾಡಬೇಕು.

೫೩. ಬಳಿಕ 'ಇಂದ್ರಾಯ ದೇವಪತಯೇ ಬಲಿನೇ ವಜ್ರಪಾಣಯೇ ! ಶತಯಜ್ಞಾಧಿಪತಯೇ ತಸ್ಮೈ ಇಂದ್ರಾಯ ತೇ ನಮಃ' ಎಂಬ ಈ ಮಂತ್ರದಿಂದ ಬಲಿಪ್ರದಾನ ಮಾಡಬೇಕು. (ದೇವಾಧೀಶನೂ, ಬಲಶಾಲಿಯೂ, ವಜ್ರಾಯುಧಪತಿಯೂ, ನೂರು ಯಜ್ಞ ಮಾಡಿದವನೂ ಆದ ಇಂದ್ರನಿಗೆ ನಮಸ್ಕಾರ ಇದು ಮಂತ್ರಾರ್ಥ.)

ಅಗ್ನಯೇ ರಕ್ತನೇತ್ರಾಯ ಜ್ವಾಲಾಮಾಲಾರ್ಚಿತಾಯ ವೈ ।
ಶಕ್ತಿಹಸ್ತಾಯ ತೀವ್ರಾಯ ತಥಾ ಚೈವಾಜವಾಹಿನೇ ।
ಆಗ್ನೇಯ್ಯಾಮಗ್ನಿಮಂತ್ರೇಣ ವಹ್ನೇರಾವಾಹನಂ ಸ್ಮೃತಂ ॥ ೫೪ ॥

ದಂಡಹಸ್ತಾಯ ಕೃಷ್ಣಾಯ ಮಹಿಷೋತ್ತಮವಾಹಿನೇ ।
ಸೂರ್ಯಪುತ್ರಾಯ ದೇವಾಯ ಧರ್ಮರಾಜಾಯ ವೈ ನಮಃ ॥ ೫೫ ॥

ಯಮಾಯತ್ವೇತಿ ಮಂತ್ರೇಣ ಮುದ್ರಾಸ್ತಸ್ಯೈವ ಕೀರ್ತಿತಾಃ ।
ನೈಋತೇ ಖಡ್ಗಹಸ್ತಾಯ ನೀಲಲೋಹಿತಕಾಯ ಚ ॥ ೫೬ ॥

---

೫೪. ಆಗ್ನೇಯ ದಿಕ್ಕಿನಲ್ಲಿ ‘ ಅಗ್ನಿರ್ಮೂರ್ಧಾ ’ ಎಂಬ ಮಂತ್ರದಿಂದಲೂ, ಉಕ್ತವಾದ ಮುದ್ರೆಗಳಿಂದಲೂ, ಅಗ್ನಿಯನ್ನು ಆವಾಹನಮಾಡಬೇಕು. ಬಲಿಪ್ರದಾನ ಮಾಡುವಾಗ ‘ ಅಗ್ನಯೇ ರಕ್ತನೇತ್ರಾಯ ಜ್ವಾಲಾಮಾಲಾರ್ಚಿತಾಯವೈ ॥ ಶಕ್ತಿ ಹಸ್ತಾಯ ತೀವ್ರಾಯ ತಥಾ ಚೈವಾಜವಾಹಿನೇ’ ಎಂಬ ಮಂತ್ರವನ್ನು ಹೇಳಬೇಕು. (ಕೆಂಪಾದ ಕಣ್ಣು, ಮಾಲಾಕಾರವಾದ ಜ್ವಾಲೆ ಇವು ಉಳ್ಳವನೂ ಶಕ್ತ್ಯಾಯುಧ ಧರಿಸಿದವನೂ ತೀವ್ರಗಾಮಿಯೂ ಅಜವಾಹನನೂ ಆದ ಅಗ್ನಿಗೆ ನಮಸ್ಕಾರ ಇದು ಮಂತ್ರಾರ್ಥ)

೫೫. ದಕ್ಷಿಣದಿಕ್ಕಿನಲ್ಲಿ ‘ ಯಮಾಯ ಸೋಮಂ ’ ಎಂಬ ಮಂತ್ರದಿಂದಲೂ ಉಕ್ತವಾದ ಮುದ್ರೆಗಳಿಂದಲೂ ಯಮನನ್ನು ಆವಾಹನ ಮಾಡಬೇಕು. ಅವನಿಗೆ ಬಲಿಯನ್ನು ಸಮರ್ಪಿಸುವಾಗ ‘ದಂಡಹಸ್ತಾಯ ಕೃಷ್ಣಾಯ ಮಹಿಷೋತ್ತಮ ವಾಹಿನೇ! ಸೂರ್ಯಪುತ್ರಾಯ ದೇವಾಯ-ಧರ್ಮರಾಜಾಯ ವೈ ನಮಃ’ ಎಂಬ ಮಂತ್ರ ದಿಂದ ಬಲಿಪ್ರದಾನ ಮಾಡಬೇಕು. ದಂಡಾಯುಧ ಧರಿಸಿರುವವನೂ, ಮಹಿಷವಾಹ ನನೂ, ಸೂರ್ಯಪುತ್ರನೂ, ಧರ್ಮರಾಜನೆಂಬ ಹೆಸರುಳ್ಳವನೂ ಆದ ಯಮನಿಗೆ ನಮಸ್ಕಾರ. (ಇದು ಮಂತ್ರಾರ್ಥ.)

೫೬-೫೭. ನೈಋತ್ಯದಿಕ್ಕಿನಲ್ಲಿ ‘ಆಯಂಗೌಃ’ ಎಂಬ ಮಂತ್ರದಿಂದ ನಿರಋತಿ ಆವಾಹನಮಾಡಬೇಕು. ಬಲಿಪ್ರದಾನ ಮಾಡುವಾಗ ‘ನೈಋತೇ ಖಡ್ಗಹಸ್ತಾಯ ನೀಲಲೋಹಿತಕಾಯಚ ಸರ್ವಬಾಹ್ಯಾಧಿಪತಯೇ ವಿರೂಪಾಖ್ಯಾಯ ವೈ ನಮಃ’

**ಸರ್ವಬಾಹ್ಯಾಧಿಪತಯೇ ವಿರೂಪಾಖ್ಯಾಯ ವೈ ನಮಃ ।**
**ಆಯಂಗೌರಿತಿ ಮಂತ್ರೇಣ ನೈಋತ್ಯಾಂ ತು ಪ್ರಕಲ್ಪಯೇತ್ ॥ ೫೭ ॥**

**ವಾರುಣ್ಯಾಂ ಪಾಶಹಸ್ತಾಯ ವರುಣಾಯೇತಿ ಕಲ್ಪಯೇತ್ ।**
**ಮಂತ್ರೇಣಾ ವಾಹನಂ ವಿದ್ಯಾತ್ಪಂಚನದ್ಯಃ ಸರಸ್ವತೀಂ ॥ ೫೮ ॥**

**ಪ್ರಾಣಾತ್ಮಕಾಯ ಧೂಪಾಯ ಅವ್ಯಂಗಾಯಾನಿಲಾಯ ಚ ।**
**ಧ್ವಜಹಸ್ತಾಯ ಭೀಮಾಯ ನಮೋ ಗಂಧವಹಾಯ ಚ ॥ ೫೯ ॥**

**ತಸ್ಯಾಪ್ಯಾವಾಹನಂ ವಿದ್ಯಾದ್ಯದ್ದೇವಾದೇವಹೇಡನಂ ।**
**ಗದಾಹಸ್ತಾಯ ಸೋಮಾಯ ಶುಷ್ಮಿಣೇ ನೃಗತಾಯಸ್ತ್ವಿಚ ॥ ೬೦ ॥**

**ಗದಾಪಟ್ಟಿಶ ಹಸ್ತಾಯ ಸೋಮರಾಜಾಯ ವೈ ನಮಃ ।**
**ಈಶಾವಾಸ್ಯಂ ಚ ಗುಹ್ಯಾಂ ವೈ ಸೋಮಮಂತ್ರಃ ಪ್ರಕೀರ್ತಿತಃ ॥ ೬೧ ॥**

---

ಎಂಬ ಮಂತ್ರವನ್ನು ಹೇಳಬೇಕು. ಕೈಯಲ್ಲಿ ಖಡ್ಗವನ್ನು ಧರಿಸಿದವನೂ, ನೀಲವೂ ಲೋಹಿತ ವರ್ಣವೂ ಆದ ದೇಹವುಳ್ಳವನೂ, ಸರ್ವಬಾಹ್ಯಾಧಿಪತಿಯೂ, ವಿರೂಪ ನೆಂಬ ಹೆಸರುಳ್ಳವನೂ ಆದ ನಿಋುಋತಿಗೆ ನಮಸ್ಕಾರ. (ಇದು ಮಂತ್ರಾರ್ಥ.)

೫೮. ಪಶ್ಚಿಮದಿಕ್ಕಿನಲ್ಲಿ ಪಾಶಹಸ್ತನಾದ ವರುಣನನ್ನು "ವರುಣಾಯ" ಎಂಬ ಮಂತ್ರದಿಂದ ಆವಾಹಿಸಬೇಕು. 'ಪಂಚನದ್ಯ' ಎಂಬ ಮಂತ್ರದಿಂದ ಸರಸ್ವತ್ಯಾವಾಹ ನವನ್ನೂ ಮಾಡಬೇಕು.

೫೯-೬೦. 'ಯದ್ದೇವಾ ದೇವ ಹೇಡನಂ' ಎಂಬ ಮಂತ್ರದಿಂದ ವಾಯುದೇವ ನನ್ನು ವಾಯವ್ಯದಿಕ್ಕಿನಲ್ಲಿ ಆವಾಹನಮಾಡಿ ಬಲಿ ಪ್ರದಾನಮಾಡುವಾಗ "ಪ್ರಾಣಾತ್ಮ ಕಾಯ ಧೂಪಾಯ ಅವ್ಯಂಗಾಯಾ ನಿಲಾಯ ಚ । ಧ್ವಜ ಹಸ್ತಾಯ ಭೀಮಾಯ ನಮೋಗಂಧವಹಾಯ ಚ ॥" ಎಂಬ ಈ ಮಂತ್ರವನ್ನು ಹೇಳಬೇಕು. ಜಗತ್ತಿಗೆ ಪ್ರಾಣಸ್ವರೂಪನೂ, ಹಸ್ತದಲ್ಲಿ ಧ್ವಜವನ್ನು ಧರಿಸಿದವನೂ, ಭೀಮಸ್ವರೂಪನೂ, ವಾಸನೆಯನ್ನು ಒಯ್ಯತಕ್ಕವನೂ, ಅವ್ಯಂಗನೂ, ಧೂಪಸ್ವರೂಪನೂ ಆದ ವಾಯು ವಿಗೆ ನಮಸ್ಕಾರ (ಇದು ಮಂತ್ರಾರ್ಥ.)

೬೧. ಗುಹ್ಯವಾದ ಈಶಾವಾಸ್ಯಮಂತ್ರದಿಂದ ಉತ್ತರದಿಕ್ಕಿನಲ್ಲಿ ಕುಬೇರನನ್ನು ಆವಾಹನಮಾಡಿ ಬಲಿಪ್ರದಾನದಲ್ಲಿ "ಗದಾಹಸ್ತಾಯ ಸೋಮಾಯ ಶುಷ್ಮಿಣೇ ನೃಗ

ಚತುರ್ಮುಖಾಯ ದೇವಾಯ ಪದ್ಮಾಸನ ಗತಾಯ ಚ ।
ಕೃಷ್ಣಾಜಿನನಿಷಣ್ಣಾಯ ನಮೋ ಲಂಬೋದರಾಯ ಚ ॥ ೬೨ ॥

ಗಣಾಧಿಪತಯೇ ದೇವ ನೀಲಕಂಠಾಯ ಶೂಲಿನೇ ।
ವಿರೂಪಾಕ್ಷಾಯ ರುದ್ರಾಯ ತ್ರೈಲೋಕ್ಯಾಧಿಪತೇ ನಮಃ ॥
ಅಭಿ ತ್ವಾ ಶೂರ ನೋ ಮಂತ್ರ ಈಶಾನಾಯ ಪ್ರಕಲ್ಪಯೇತ್ ॥ ೬೩ ॥

ಸರ್ವನಾಗಾಧಿರಾಜಾಯ ಶ್ವೇತವರ್ಣಾಯ ಭೋಗಿನೇ ।
ಸಹಸ್ರಫಣಿನೇ ನಿತ್ಯಮನಂತಾಯ ನಮೋನಮಃ ॥ ೬೪ ॥

---

ತಾಯ ಚ ॥ ಗದಾಪಟ್ಟಿಶ ಹಸ್ತಾಯ ಸೋಮರಾಜಾಯ ವೈ ನಮಃ " ಎಂಬ ಮಂತ್ರವನ್ನು ಹೇಳಬೇಕು ಕೈಯಲ್ಲಿ ಗದೆಯನ್ನು ಹಿಡಿದಿರುವ ಸೋಮನೆಂಬ ಹೆಸರುಳ್ಳವನೂ. ಋಕ್ಮಿಯೂ ನರವಾಹನನೂ, ಪಟ್ಟಿಶವನ್ನು ಹಿಡಿದಿರುವನೂ, ಸೋಮರಾಜನೂ ಆದ ಕುಬೇರನಿಗೆ ನಮಸ್ಕಾರ (ಇದು ಮಂತ್ರಾರ್ಥ.)

೬೨. ಆ ಉತ್ತರದಿಕ್ಕಿನಲ್ಲಿಯೇ ಪದ್ಮಾಸನದಲ್ಲಿರುವ ಚತುರ್ಮುಖನಾದ ದೇವನಿಗೂ, ಕೃಷ್ಣಾಜಿನದಲ್ಲಿ ಕುಳಿತಿರುವ ಲಂಬೋಧರನಾದ ಗಣಾಧಿಪತಿಗೂ ನಮಸ್ಕಾರ ಎನ್ನಬೇಕು.

೬೩. " ಅಭಿತ್ವಾ ಶೂರನೋನುಮಃ " ಎಂಬ ಮಂತ್ರದಿಂದ ಈಶಾನ್ಯದಿಕ್ಕಿನಲ್ಲಿ ಈಶಾನನನ್ನು ಅವಾಹನೆಮಾಡಿ ಬಲಿಪ್ರದಾನ ಮಾಡುವಾಗ " ಗಣಾಧಿಪತಯೇ ದೇವ ನೀಲಕಂಠಾಯ ಶೂಲಿನೇ ॥ ವಿರೂಪಾಕ್ಷಾಯ ರುದ್ರಾಯ ತ್ರೈಲೋಕ್ಯಾಧಿಪ ನಮಃ ॥ " ಈ ಮಂತ್ರವನ್ನು ಹೇಳಬೇಕು. ಪ್ರಮಥಗಣಗಳಿಗೆ ಒಡೆಯನೂ, ನೀಲಕಂಠನೂ, ತ್ರಿಶೂಲಾಯುಧಧರಿಸಿದವನೂ, ವಿರೂಪವಾದ ಅಕ್ಷಿಯುಳ್ಳವನೂ, ತ್ರೀಲೋಕೇಶ್ವರನೂ ಆದ ಈಶಾನನಿಗೆ ನಮಸ್ಕಾರ (ಇದುಮಂತ್ರಾರ್ಥ.)

೬೪. " ನಮೋಽಸ್ತುಸರ್ಪೇಭ್ಯಃ " ಎಂಬ ಮಂತ್ರದಿಂದ ಸರ್ವಾಧಾರನಾದ ಆದಿ ಶೇಷನನ್ನು ಆವಾಹನಮಾಡಿ ಬಲಿಪ್ರದಾನ ಮಾಡುವಾಗ " ಸರ್ವನಾಗಾಧಿರಾಜಾಯ ಶ್ವೇತವರ್ಣಾಯ ಭೋಗಿನೇ । ಸಹಸ್ರಫಣಿನೇ ನಿತ್ಯಂ ಅನಂತಾಯ ನಮೋನಮಃ ॥ ಎಂಬ ಈ ಮಂತ್ರವನ್ನು ಹೇಳಬೇಕು ನಾಗಗಳ ಒಡೆಯನೂ' ಶ್ವೇತವರ್ಣನೂ, ಸಹಸ್ರ ಹೆಡೆಗಳುಳ್ಳ ಸರ್ಪಸ್ವರೂಪನೂ, ಆದ ಅನಂತನಿಗೆ ನಮಸ್ಕಾರ (ಇದು ಮಂತ್ರಾರ್ಥ.)

ನಮೋಽಸ್ತು ಸರ್ವೇಭ್ಯ ಇತಿ ಮಂತ್ರಶ್ಚೈವ ಪ್ರಕೀರ್ತಿತಃ ।
ಪಂಚರಾತ್ರಾದಿಭಿರ್ನ್ಯಾಸೋಽಹ್ಯಂಗ ನ್ಯಾಸಃಪ್ರಯುಜ್ಯತೇ ॥ ೬೫ ॥

ತಥೋಪಕ್ಷೀರಪಾನ್ನೈಶ್ಚ ಸ್ತುತಿ ಸ್ತೋತ್ರೈಶ್ಚ ಭಾಸ್ಕರಂ ।
ವಿಪ್ರೇಭ್ಯೋ ಭೋಜಕೇಭ್ಯಶ್ಚ ತತೋ ದದ್ಯಾಚ್ಚ ದಕ್ಷಿಣಾಂ ॥ ೬೬ ॥

ಸೂರ್ಯಕ್ರತುಂ ಮಹಾಪುಣ್ಯಂ ನೈವಕುರ್ಯಾದದಕ್ಷಿಣಾಂ ।
ಸ್ಥಾಪ್ಯತೇಽನೇನ ವಿಧಿನಾ ತದ್ಭಕ್ತೈಃ ಪ್ರತಿಮಾ ಚ ಯಾ ॥ ೬೭ ॥

ಸಾ ತು ವೃದ್ಧಿಕರಾ ನಿತ್ಯಂ ಸಾನ್ನಿಧ್ಯಾಚ್ಚ ಸದಾ ಭವೇತ್ ।
ಸಪ್ತಜನ್ಮಸು ತೇಷಾಂ ತು ನ ರೋಗಾಃ ಸಂಭವಂತಿ ಹಿ ॥ ೬೮ ॥

ಉಪಾಸತೇ ತ್ರಿರಾತ್ರಂ ಯೇ ಭಾಸೋರ್ಯಾತ್ರಾಧಿವಾಸನೇ ।
ಗಂಧಮಾಲ್ಯೋಪಹಾರೈಸ್ತು ತೇ ಯಾಂತಿ ಭವನಂ ರವೇಃ ॥ ೬೯ ॥

---

೬೫. ಹೀಗೆ ಪಂಚರಾತ್ರಾಗಮ ಮೊದಲಾದುವುಗಳಲ್ಲಿ ಮಾಡುವ ನ್ಯಾಸವನ್ನೇ ಇಲ್ಲೂ ಅಂಗನ್ಯಾಸವಾಗಿ ಪ್ರಯೋಗಿಸಬೇಕು.

೬೬. ಬಳಿಕ ಲಘುವಾದ ಕ್ಷೀರ ನಿವೇದನದಿಂದಲೂ, ಸ್ತೋತ್ರಗಳಿಂದಲೂ ಸೂರ್ಯನನ್ನು ತೃಪ್ತಿಪಡಿಸಬೇಕು. ಬ್ರಾಹ್ಮಣರಿಗೂ ಭೋಜಕರಿಗೂ ಅನಂತರದಲ್ಲಿ ದಕ್ಷಿಣೆಯನ್ನು ಕೊಡಬೇಕು.

೬೭. ಮಹಾಪುಣ್ಯಕರವಾದ ಸೂರ್ಯಕ್ರತುವನ್ನು ದಕ್ಷಿಣಾರಹಿತವಾಗಿ ಮಾಡಬೇ ಬಾರದು. ಸೂರ್ಯಭಕ್ತರು ಈ ವಿಧಿಯಂತೆಯೇ ಪ್ರತಿಮಾಪ್ರತಿಷ್ಠೆ ಮಾಡಬೇಕು.

೬೮. ಹೀಗೆ ಪ್ರತಿಷ್ಠೆಮಾಡಿದ ಆ ಪ್ರತಿಮೆಯು ಸೂರ್ಯನ ಸಾನ್ನಿಧ್ಯವನ್ನು ಹೊಂದಿ ಸದಾವೃದ್ಧಿಕರವಾಗಿರುವುದು. ಅವರಿಗೂ ಆ ವಂಶಜರಾದ ಏಳುತಲೆಗಳ ವರಿಗೂ ರೋಗಗಳು ಸಂಭವಿಸುವುದಿಲ್ಲ

೬೯. ಯಾತ್ರಾಧಿವಾಸನದಲ್ಲಿ ಗಂಧ ಮಾಲ್ಯೋಪಹಾರಗಳಿಂದ ಮೂರುರಾತ್ರಿ ಗಳವರೆಗೆ ಯಾರು ಸೂರ್ಯನನ್ನು ಉಪಾಸನೆ ಮಾಡುವರೋ ಅವರು ಸೂರ್ಯಲೋಕಕ್ಕೆ ಹೋಗುವರು.

**ಆತ್ಮೀಯಂ ಪರಕೀಯಂ ವಾ ಪ್ರತಿಮಾಸ್ಥಾಪನಂ ರವೇಃ ।**
**ಯಃ ಪಶ್ಯತಿ ಪುಮಾರ್ನ್ ಭಕ್ತ್ಯಾ ಸ ಸ್ವರ್ಲೋಕಮವಾಪ್ನುಯಾತ್ ॥ ೭೦ ॥**

**ದಶಾನಾಮಶ್ವಮೇಧಾನಾಂ ವಾಜಪೇಯಶತಸ್ಯ ಚ ।**
**ಫಲಂ ಪ್ರಾಪ್ನೋತಿ ಪುರುಷಃ ಪ್ರತಿಷ್ಠಾಪ್ಯ ದಿವಾಕರಂ ॥ ೭೧ ॥**

**ಯಾವತ್ಕೀರ್ತಿಃ ಪುಣ್ಯಕೃತಾ ಭಾನೋಃ ಸ್ಥಾನೇ ನಿವೇಶಿತೇ ।**
**ತಾವತ್ಸ ತು ಯದುಶ್ರೇಷ್ಠ ಸೂರ್ಯಲೋಕೇ ಮಹೀಯತೇ ॥ ೭೨ ॥**

**ಸ್ಥಾಪನೇ ಚಾಸ್ಯ ವೈ ಮಂತ್ರಂ ಪ್ರೋಕ್ತೇಲೋಕೇಷು ಪೂಜಿತಃ ।**
**ಧ್ರುವಾ ದ್ಯೌಶ್ಚ ಧ್ರುವಾ ಪೃಥ್ವೀ ಧ್ರುವಂ ವಿಶ್ವವಿದಂ ಜಗತ್ ॥ ೭೩ ॥**

**ಶ್ರೇಯಸೇ ಯಜಮಾನಸ್ಯ ತಥಾ ತ್ವಂ ಧ್ರುವತಾಂ ವ್ರಜ ।**
**ಸ್ಥಾಪಯಿತ್ವಾ ರವಿಂಭಕ್ತ್ಯಾ ವಿಧಿದೃಷ್ಟೇನ ಕರ್ಮಣಾ ॥**
**ಮಾಸೇ ಮಾಸೇ ಕ್ರತುಫಲಂ ಲಭಂತೇ ನಾತ್ರ ಸಂಶಯಃ ॥ ೭೪ ॥**

---

೭೦. ತಾನು ಮಾಡಿದ ಅಥವಾ ಇತರರು ಮಾಡಿಸಿದ ಸೂರ್ಯನ ಪ್ರತಿಮಾಸ್ಥಾಪನವನ್ನು ಯಾವನು ಭಕ್ತಿಯಿಂದ ದರ್ಶನಮಾಡುವನೋ ಆತನು ಸ್ವರ್ಗಲೋಕವನ್ನು ಹೊಂದುವನು

೭೧. ಸೂರ್ಯಪ್ರತಿಷ್ಠೆಮಾಡಿದ ಮನುಷ್ಯನು ದಶಾಶ್ವಮೇಧಯಾಗದ ಫಲವನ್ನೂ, ಶತವಾಜಪೇಯ ಯಾಗದ ಫಲವನ್ನೂ ಹೊಂದುತ್ತಾನೆ.

೭೨. ಪುಣ್ಯಾತ್ಮನು ಸೂರ್ಯಾಲಯವನ್ನು ಏರ್ಪಡಿಸಿದುದರಿಂದುಂಟಾದ ಕೀರ್ತಿಯು ಎಷ್ಟುಕಾಲ ಪ್ರಸಿದ್ಧವಾಗಿರುವುದೋ ಅಷ್ಟುಕಾಲದವರೆಗೆ ಅವನು ಸೂರ್ಯಲೋಕದಲ್ಲಿ ಪೂಜಿತನಾಗುವನು.

೭೩. ಧ್ರುವಾ ದ್ಯೌರ್ಧ್ರುವಾಪೃಥಿವೀ ಧ್ರುವಂ ವಿಶ್ವಮಿದಂ ಜಗತ್ ॥ ಎಂಬ ಈ ಲೋಕಪೂಜಿತವಾದ ಮಂತ್ರವನ್ನು ಪ್ರತಿಮಾಸ್ಥಾಪನೋಪಯೋಜ್ಯವೆಂದು ಹೇಳಿದ್ದಾರೆ. ದ್ಯೌ-ಪೃಥಿವೀ- ಈ ಸಮಸ್ತಜಗತ್ತು ಹೇಗೆ ಧೃವವಾಗಿ (ಶಾಶ್ವತವಾಗಿರುವುವೋ !

೭೪. ಹಾಗೆಯೇ ನೀನೂ ಯಜಮಾನನಿಗೆ ಶ್ರೇಯಸ್ಸನ್ನುಂಟುಮಾಡುವುದಕ್ಕೆಂದು ಶಾಶ್ವತವಾಗಿ ನೆಲಸುವನಾಗು ಎಂಬುದು ಆ ಮಂತ್ರದ ಅರ್ಥ. ಶಾಸ್ತ್ರದಲ್ಲಿ

ಏಕಾಹೇನಾಪಿ ಯದ್ಭಾನೋಃ ಪೂಜಯಾ ಪ್ರಾಪ್ಯತೇ ಫಲಂ ।
ನ ತು ಕ್ರತುಶತೈರ್ವೀರ ಪ್ರಾಪ್ಯತೇ ಮಾನವೈರ್ಭುವಿ ॥ ೭೫ ॥

ಕೃತ್ವಾಪಿ ಸುಮಹತ್ಪಾಪಂ ಯಃಪಶ್ಚಾತ್ಸೇವತೇ ರವಿಂ ।
ಸ ಯಾತಿ ಸೂರ್ಯಲೋಕಂ ತು ನರೋ ವಿಗತಕಲ್ಮಷಃ ॥ ೭೬ ॥

ನಭವೇದಿಷ್ಟಕಾನಾಂ ಚ ದ್ರವಣಂ ಭೂಮಿತಸ್ಥುಷಾಂ ।
ಸ್ವರ್ಗೇ ಮಹೀಯತೇ ತಾವತ್ಕಾರಕೋ ದೇವವೇಶ್ಮನಃ ॥ ೭೭ ॥

ಖಂಡಸ್ಫುಟಿತಸಂಸ್ಕಾರಂ ಕೃತ್ವಾ ಯತ್ಫಲಮಾಪ್ಯತೇ ।
ನ ತು ಕ್ರತುಸಹಸ್ರೈಸ್ತು ಪ್ರಾಪ್ಯತೇ ಫಲಮುತ್ತಮಂ ॥ ೭೮ ॥

ಸಿಕತಾಯಾಮಪಿ ಗೃಹಂ ಯಸ್ತುಕುರ್ಯಾದ್ವಿಭಾವಸೋಃ ।
ಗೋಪತೇಃ ಸ ಪ್ರಿಯಸದಃ ಪ್ರಗಚ್ಛೇದ್ಗೋಪತೇರ್ವರಂ ॥ ೭೯ ॥

---

ಕಂಡ ವಿಧಾನದಿಂದ ಭಕ್ತಿಯಿಂದ ಸೂರ್ಯಪ್ರತಿಷ್ಠೆಮಾಡಿದವನು ತಿಂಗಳು ತಿಂಗಳಿಗೂ ಯಾಗ ಮಾಡಿದಷ್ಟು ಫಲವನ್ನು ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ

೭೫. ಮನುಷ್ಯರು ಭೂಲೋಕದಲ್ಲಿ ಮಾಡಿದ ನೂರಾರು ಕ್ರತುಗಳ ಫಲವೂ ಕೂಡ ಒಂದು ದಿನ ಸೂರ್ಯಪೂಜೆಮಾಡುವುದರಿಂದ ಉಂಟಾಗುವ ಫಲಕ್ಕೆ ಸಮವಾಗ ಲಾರದು.

೭೬. ಮಾನವನು ಬಹು ಪಾಪವನ್ನು ಮಾಡಿದ್ದರೂ ಸೂರ್ಯನನ್ನು ಸೇವಿಸಿದ ಮಾತ್ರದಿಂದ ಅವನು ಪಾಪಗಳನ್ನು ಕಳೆದುಕೊಂಡು ಸೂರ್ಯಲೋಕಕ್ಕೆಹೋಗುತ್ತಾನೆ.

೭೭. ದೇವಾಲಯವನ್ನು ಕಟ್ಟಿಸುವವನು ನೆಲದಲ್ಲಿ ಇಟ್ಟು ಸೇರಿದ ಇಟ್ಟಿಗೆ ಗಳು ಎಷ್ಟುಕಾಲ ಕರಗುವುದಿಲ್ಲವೋ ಅಷ್ಟುಕಾಲ ಅವನು ಸ್ವರ್ಗದಲ್ಲಿ ಪೂಜಿತನಾಗು ವನು.

೭೮. ಬಿರುಕುಬಿಟ್ಟ (ಶಿಥಿಲವಾದ) ಆಲಯವನ್ನು ಭದ್ರಪಡಿಸಿ ಜೀರ್ಣೋ ದ್ಧಾರ ಮಾಡಿದರೆ ಯಾವಫಲವುಂಟೋ ಆ ಉತ್ತಮಫಲವು ಕ್ರತುಸಹಸ್ರಗಳನ್ನು ಮಾಡಿದರೂ ಉಂಟಾಗಲಾರದು.

೭೯. ಯಾವನು ಮರಳಿನಲ್ಲಿಯಾದರೂ ಸೂರ್ಯದೇವಾಲಯವನ್ನು ಮಾಡು ವನೋ, ಅವನು ಶ್ರೇಷ್ಠನಾದ ಗೋಪತಿಗೆ ಪ್ರಿಯನಾಗಿ ಆತನ ಪ್ರಿಯಸಭೆಗೆ ಹೋಗು ವನು.

ಇತ್ಯೇವಂ ಸುರವರಸೇವಿತಸ್ಯ ಭಾನೋಃ-
ಭೂತಾನಾಂ ಸ್ಥಿತಿ ನಿಲಯಪ್ರಸೂತಿಹೇತೋಃ ।
ಶ್ರೀಭಾಗೀ ಭವತಿ ನರೋ ನಿಕೇತಕಾರೀ -
ಕಲ್ಪಾನಾಂ ವಸತಿ ಶತಂ ಸ ಸೂರ್ಯಲೋಕೇ ॥ ೮೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಾಂಬೋಪಾಖ್ಯಾನೇ ಸೂರ್ಯಪ್ರತಿಷ್ಠಾವರ್ಣನಂ ನಾಮ ಷಟ್ತ್ರಿಂಶದುತ್ತರ ಶತತಮೋಽಧ್ಯಾಯಃ.



---

೮೦. ಹೀಗೆ ಸುರವರಸೇವಿತನೂ, ಸ್ಥಿತಿ, ಪ್ರಳಯ, ಜನ್ಮ ಇವುಗಳಿಗೆ ಕಾರಣನೂ ಆದ ಸೂರ್ಯನ, ದೇವಾಲಯವನ್ನು ಮಾಡಿಸಿದವನು ಸಂಪದ್ಯುಕ್ತನಾಗಿ ಸೂರ್ಯಲೋಕದಲ್ಲಿ ನೂರುಕಲ್ಪಗಳವರೆಗೆ ವಾಸಮಾಡುವನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಬ್ರಾಹ್ಮಪರ್ವದ ಸಾಂಬೋಪಾಖ್ಯಾನದಲ್ಲಿ ಸೂರ್ಯ ಪ್ರತಿಷ್ಠಾವರ್ಣನೆಯೆಂಬ ನೂರಮೂವತ್ತಾರನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಸಪ್ತತ್ರಿಂಶದುತ್ತರಶತತಮೋಽಧ್ಯಾಯಃ

---

॥ ನಾರದ ಉವಾಚ ॥

ಯಃ ಸ್ವಾಪ್ರಸಾದಾನ್ ರಚಯತಿ ಪುಮಾರ್ನ್ ದೇವತಾನಾಂ ಪ್ರಯತ್ನಾತ್ ।
ತತ್ರ ಪ್ರೀತ್ಯಾ ಸಪದಿ ಕುರುತೇ ಸ್ಥಾಪನಾಂ ಭಾನುಭಕ್ತಃ ॥
ದಿವ್ಯಾನ್ ಭೋಗಾನ್ ಭಜತಿ ಚ ಸದಾ ಕಾಮತಶ್ಚಾಪ್ರಮೇಯಾಂ ।
ಸ್ವಾನ್ಭುಕ್ತ್ವಾಽಸೌ ಪುನರಪಿ ಭವೇಚ್ಚಕ್ರವರ್ತೀ ಪೃಥಿವ್ಯಾಂ ॥ ೧ ॥

ಯೇ ಮಾನವಾಸ್ತ್ರಿದಶಮೂರ್ತಿನಿಕೇತನಾನಿ -
ಕುರ್ವಂತಿ ಸಾಧುಜನದೃಷ್ಟಿಮನೋಹರಾಣಿ ।
ತೇಷಾಂ ಮೃತೇಷ್ವಪರಮಾರ್ಥಮಯೇ ಶರೀರೇ ॥
ಲೋಕೇ ಪರಿಭ್ರಮತಿ ಕೀರ್ತಿಮಯಂ ಶರೀರಂ ॥ ೨ ॥

---

### ನೂರಮೂವತ್ತೇಳನೆಯ ಅಧ್ಯಾಯ

೧. ನಾರದರು ಹೇಳುತ್ತಾರೆ—ಯಾವ ಮನುಷ್ಯನು ಸೂರ್ಯಭಕ್ತನಾಗಿ ಪ್ರಯತ್ನದಿಂದ ದೇವರಿಗೆ ದೇವಾಲಯಗಳನ್ನು ರಚಿಸುವನೋ, ಮತ್ತು ಅಲ್ಲಿ ಜಾಗ್ರತೆಯಲ್ಲಿಯೇ ಪ್ರತಿಷ್ಠಾದಿಗಳನ್ನೂ ಮಾಡಿಸುವನೋ, ಅವನು ಊಹಿಸಲು ಸಾಧ್ಯವಲ್ಲದಂಥ ಇಷ್ಟಾರ್ಥಗಳನ್ನು ಯಾವಾಗಲೂ ಹೊಂದುತ್ತಾನೆ. ಅಲ್ಲಿ ಆ ಸುಖಗಳನ್ನು ಅನುಭವಿಸಿ ಮತ್ತೆ ಭೂಲೋಕದಲ್ಲಿ ಜನಿಸಿ ಚಕ್ರವರ್ತಿಯಾಗುವನು.

೨. ಸಜ್ಜನರ ದೃಷ್ಟಿಯನ್ನೂ, ಮನಸ್ಸನ್ನೂ, ಸೆಳೆಯುವಷ್ಟು ರಮ್ಯವಾಗುವಂತೆ ಯಾವ ಮನುಷ್ಯರು ದೇವಮೂರ್ತಿಗಳಿಗೆ ಆಲಯಗಳನ್ನು ರಚಿಸುವರೋ ಅವರಿಗೆ ಪರಮಾರ್ಥವಲ್ಲದ ಈ ಶರೀರವು ನಾಶವಾದಾಗ್ಯೂ ಅವರ ಕೀರ್ತಿಮಯ ಶರೀರವು ಲೋಕದಲ್ಲಿ ಸ್ಥಿರವಾಗಿ ಸಂಚರಿಸುತ್ತದೆ.

ಇತಿ ತೇ ಕಥಿತಮಿದಂ ದೇವಪೂಜ್ಯಸ್ಯ -
ಸವಿತುಃ ಸ್ಥಾಪನವಿಧಾನಂ ।
ಸಾಧಾರಣಂ ವಿಧಾನಂ ಶೃಣು -
ದೇವಾನಾಂ ಪ್ರತಿಷ್ಠಾಪನೇ ವೀರ ॥ ೩ ॥

ಸ್ನಾತೋ ಭುಕ್ತೋ ವಸ್ತ್ರಾಲಂಕೃತ ಕುಸುಮೈರ್ಗಂಧೈಃ ।
ಪ್ರತಿಮಾಯಾ ಆಸ್ತೀರ್ಣಾಯಾಂ ಶಯ್ಯಾಯಾಂ ಸ್ಥಾಪನಂ ಕುರ್ಯಾತ್ ॥
ಸುಪ್ತಾಯಾಂ ತು ಸನ್ನೃತ್ಯ ಗೀತೈರ್ಜಾಗರಣೈಃ ಸಮ್ಯಗೇವಾಧಿವಾಸ್ಯ
ದೈವಜ್ಞೇನ ಪ್ರತಿದಿಷ್ಟಕಾಲೇ ಸಂಸ್ಥಾಪನಂ ಕುರ್ಯಾತ್ ॥
ಅಭ್ಯರ್ಚ್ಯ ಕುಸುಮಗಂಧಾನುಲೇಪನೈಃ ಶಂಖತೂರ್ಯ ।
ನಿರ್ಘೋಷೈಃ ಪ್ರಾದಕ್ಷಿಣ್ಯೇನ ನಯೇದಾಯತನಸ್ಯ ಪ್ರಯತ್ನೇನ
ಕೃತ್ವಾ ಚ ಬಲಿಂ ಪ್ರತಿಮಾಮಭ್ಯರ್ಚ್ಯ ಬ್ರಾಹ್ಮಣಾಂಶ್ಚ ಸಾಧೂನ್
ದತ್ವಾ ಹಿರಣ್ಯಕಲಶಂ ತತಃ ಕ್ಷಿಪೇತ್ಪಿಂಡಿಕಾಮಧ್ಯೇ ॥

---

೩. ಅಯ್ಯಾ ವೀರಸೇ ! ದೇವಪೂಜ್ಯನಾದ ಸೂರ್ಯನ ಪ್ರತಿಷ್ಠಾವಿಧಾನವನ್ನು ನಿನಗೆ ಹೇಳಿದುದಾಯಿತು; ಎಲ್ಲ ದೇವತಾ ಪ್ರತಿಷ್ಠೆಯ ಸಾಧಾರಣವಿಧಾನವನ್ನು ಹೇಳುವೆನು ಕೇಳು :-

೪. ಪ್ರತಿಮೆಗೆ ಅಭಿಷೇಕ (ಸ್ನಾನ) ನೈವೇದ್ಯ (ಭೋಜನ) ಗಳಾದನಂತರ, ವಸ್ತ್ರ ಭೂಷಣಾದಿಗಳಿಂದಲೂ ಗಂಧಮಾಲ್ಯಗಳಿಂದಲೂ ಅಲಂಕಾರ ಮಾಡಿದಮೇಲೆ ಹಾಸಿದ ಹಾಸಿಗೆಯಲ್ಲಿ ಪ್ರತಿಮೆಯನ್ನು ಅಧಿವಾಸನಮಾಡಿಸಬೇಕು (ಮಲಗಿಸಬೇಕು.) ಬಳಿಕ ಆ ಪ್ರತಿಮೆಯ ಸಂಮುಖದಲ್ಲಿ ನರ್ತನ, ಗಾನ, ಮುಂತಾದುವುಗಳನ್ನು ನಡೆಸುವ ಮೂಲಕ ಜಾಗರಣಮಾಡಿ ಚೆನ್ನಾಗಿ ಅಧಿವಾಸನಮಾಡಿ ಜ್ಯೌತಿಷ್ಕನು ನಿಷ್ಕರ್ಷಿಸಿದ ಮುಹೂರ್ತದಲ್ಲಿ ಅದನ್ನು ಪ್ರತಿಷ್ಠೆ ಮಾಡಲು ತರಬೇಕು.

ಪ್ರಯತ್ನಪೂರ್ವಕವಾಗಿ ಶಂಖಧ್ವನಿ, ವಾದ್ಯ ಇವುಗಳ ಸಮೇತ ದೇವಾಲಯದ ಸುತ್ತ ಮೂರ್ತಿಯನ್ನು ಪ್ರದಕ್ಷಿಣೆಮಾಡಿಸಿ ಬಲಿಪ್ರದಾನ ಮಾಡಬೇಕು.

ಬಳಿಕ ಬ್ರಾಹ್ಮಣರನ್ನೂ ಸಾಧುಗಳನ್ನೂ ಸತ್ಕರಿಸಿ ಸುವರ್ಣಕಲಶಗಳನ್ನು ದಾನಕೊಟ್ಟು ಆಮೇಲೆ ಪಿಂಡಿಕೆಯ ಪೀಠದಮೇಲೆ ಕಲ್ಲಿನಲ್ಲಿ ಆಳತೆಗೆ ಸರಿಯಾಗಿ ಏರ್ಪಡಿಸಿದ ಗುಳಿಯಲ್ಲಿ ಪ್ರತಿಮೆಯನ್ನು ವಿಧಿವತ್ತಾಗಿ ಇಟ್ಟು ಪ್ರತಿಷ್ಠಿಸಬೇಕು.

**ಸು ಶ್ವಭ್ರೇ ಸ್ಥಾಪಕಶ್ಚೈವಜ್ಞ್ನ ದ್ವಿಜಾನ್ ಸಮ್ಯಗ್ವಿಶೇಷತಃ ।**
**ಅಭ್ಯರ್ಚ್ಯಾಕಲ್ಪಾಂತಂ ಯೋಗೀ ಭವತೀಹ ಪರತ್ರ ಸುಖೀ ॥ ೪ ॥**

**ವಿಷ್ಣೋರ್ಭಾಗವತಾ ಮತಾಶ್ಚ ಸವಿತುಃ ।**
**ಶಂಭೋಃ ಸಭಸ್ಮದ್ವಿಜಾ ॥**
**ಮಾತೃಣಾಮಪಿ ಮಾತೃಮಂಡಲವಿದೋ ।**
**ವಿಪ್ರಾ ವಿದುರ್ಬ್ರಾಹ್ಮಣಾಃ ॥**
**ಸರ್ವೇ ಯೇ ಪ್ರತಿಮುಕ್ತಶುಕ್ಲವಸನಾ ।**
**ಬುದ್ಧಸ್ಯ ರಕ್ತಾಂಬರಾ ॥**
**ಯೇ ಯಂ ದೇವಮುಪಾಶ್ರಿತಾಃ ಸುವಿಧಿನಾ ।**
**ತೈಸ್ತಸ್ಯ ಕಾರ್ಯಾ ಕ್ರಿಯಾ ॥ ೫ ॥**

**ಸಾಮಾನ್ಯಮಿದಂ ದೇವಾನಾಮಧಿವಾಸನಂ ಭವತಿ ಮಯಾ ಕಥಿತಂ ।**
**ಕ್ರಿಯಮಾಣಮಿದಂ ದೃಷ್ಟ್ವಾ ದೇವಾನಾಂ ಪ್ರತಿಷ್ಠಾಪನಂ ॥**
**ನರೋ ಭಕ್ತ್ಯಾ ಇಹ ಕಾಮಾನವಾಪ್ಯ ಸರ್ವಾ‌ನ್ ಪರತ್ರ**
**ಸ್ವರ್ಗಭಾಜನಂ ಭವತಿ ॥ ೬ ॥**

---

(ಸ್ಥಪತಿ) ಸ್ಥಾಪಕರು, ಜ್ಯೋತಿಷ್ಕರು ಇತರ ಬ್ರಾಹ್ಮಣರು ಇವರನ್ನು ಚೆನ್ನಾಗಿ ಪೂಜಿಸಬೇಕು. ಹೀಗೆ ಮಾಡಿದರೆ ಇಹದಲ್ಲಿ ಭೋಗಶಾಲಿಯೂ ಪರದಲ್ಲಿ ಕಲ್ಪಾಂತದವರೆಗೂ ಸುಖಿಯೂ ಆಗುತ್ತಾನೆ.

೫ ವಿಷ್ಣುಭಕ್ತರು, ಸೂರ್ಯಭಕ್ತರು ಇವರನ್ನು ಭಾಗವತರೆನ್ನುತ್ತಾರೆ. ವಿಭೂತಿ ಗಂಧಾದಿಗಳನ್ನು ಧರಿಸುವ ದ್ವಿಜರನ್ನು ಶಂಭುಭಕ್ತರೆನ್ನುವರು. ಮಾತೃಮಂಡಲದ ವಿಧಾನವನ್ನರಿತವರನ್ನು ದೇವೀಪೂಜಾನಿರತರಾದ ಶಾಕ್ತಬ್ರಾಹ್ಮಣರು ಅಥವಾ ವಿಪ್ರರು ಎನ್ನುವರು. ಅವರು ಶುಭ್ರವಾದ ಬಿಳಿಯ ಮಡಿಬಟ್ಟೆಯನ್ನುಡುವರು, ಬುದ್ಧನ ಭಕ್ತರು ರಕ್ತವಸ್ತ್ರಾಧಾರಿಗಳು. ಯಾರು ಯಾರು ಯಾವ ಯಾವ ದೇವರನ್ನು ವಿಧಿವತ್ತಾಗಿ ಉಪಾಸಿಸುವರೋ ಅವರೇ ಆಯಾ ದೇವತಾಸೇವೆ ಮಾಡಬೇಕು ಎಂದರೆ ಅಂಥವರಿಂದಲೇ ಈ ಪ್ರತಿಷ್ಠಾದಿಗಳನ್ನು ಮಾಡಿಸಬೇಕು.

೬. ಎಲ್ಲಾ ದೇವಪ್ರತಿಮೆಗಳ ಅಧಿವಾಸನ ವಿಧಾನವನ್ನು ನಾನು ಸಾಮಾನ್ಯವಾಗಿ ಹೇಳಿದುದಾಯಿತು. ದೇವಪ್ರತಿಮೆಯ ಪ್ರತಿಷ್ಠಾಕಾರ್ಯವು ನೆರವೇರುತ್ತಿರುವುದನ್ನು ಭಕ್ತಿಯಿಂದ ನೋಡಿದ ಮನುಷ್ಯನು ಈ ಲೋಕದಲ್ಲಿ ಸಮಸ್ತ ಇಷ್ಟಗಳನ್ನೂ ಪಡೆದು ದೇಹಾವಸಾನದಲ್ಲಿ ಸ್ವರ್ಗವನ್ನೂ ಪಡೆಯುತ್ತಾನೆ.

ಇದಂ ತೇ ಕಥಿತಂ ರಾಜನ್ ಪ್ರತಿಷ್ಠಾಪನಮಾದಿತಃ ।
ಯತ್ಕೃತ್ವಾ ಸ್ನಪನಂ ಭಾನೋಃ ನರೋ ಯಾತಿ ಮನೋಗತಿಂ ॥ ೭ ॥

ಇತ್ಥಂ ಕುರ್ಯಾನ್ನರೋ ಭಕ್ತ್ಯಾ ಸವಿತುಃ ಸ್ಥಾಪನಂ ಬುಧಃ ।
ಕಾರಯೇತ್ಪುರತೋ ಭಕ್ತ್ಯಾ ಸವಿತುಃ ಸ್ಥಾಪನಂ ಬುಧಃ ॥ ೮ ॥

ಪುರಾಣಸ್ಯೇತಿಹಾಸಸ್ಯ ಶ್ರವಣಂ ಪಾಪನಾಶನಂ ।
ತಾಭ್ಯಾಂ ಹಿ ಶ್ರವಣಾದ್ವೀರ ಸಾನ್ನಿಧ್ಯಂ ಯಾತಿ ಭಾಸ್ಕರಃ ॥ ೯ ॥

ಕೃತೇತ್ವಾಯತನೇ ತಸ್ಮಿನ್ ಯೇ ಚಾನ್ಯೇ ಚಾಪಿ ದೇವತಾಃ ।
ತಸ್ಮಾತ್ಕಾರ್ಯಂ ಬುಧೈರ್ನಿತ್ಯಂ ಧರ್ಮಶ್ರವಣಮಾದಿತಃ ॥ ೧೦ ॥

ವಾಚಕಂ ಪೂಜಯಿತ್ವಾ ತು ಬ್ರಾಹ್ಮಣಾನ್ ಸಂಪ್ರಪೂಜ್ಯ ಚ ।
ಕಾರಯೇದ್ವಾಚನಂ ವೀರ ಪುಸ್ತಕಸ್ಯಾಗ್ರತೋ ರವೇಃ ॥ ೧೧ ॥

---

೭. ಅಯ್ಯಾ ದೊರೆಯೇ! ಪ್ರತಿಮಾಪ್ರತಿಷ್ಠೆಯ ವಿಧಾನವನ್ನು ಆ ಮೂಲಾಗ್ರವಾಗಿ ನಿನಗೆ ತಿಳಿಸಿ ಆಯಿತು. ಸೂರ್ಯನಿಗೆ ಅಭಿಷೇಕಮಾಡಿಸಿದ ಮನುಷ್ಯನು ತನ್ನ ಮನಸ್ಸಿನಲ್ಲಿ ಆಶಿಸುವ ಉತ್ತಮಗತಿಗಳನ್ನೆಲ್ಲಾ ಹೊಂದುತ್ತಾನೆ

೮. ತಿಳಿವಳಿಕೆಯುಳ್ಳ ಮನುಷ್ಯನು ಈ ರೀತಿ ಭಕ್ತಿಯಿಂದ ತಾನು ಸೂರ್ಯ ಪ್ರತಿಷ್ಠೆಯನ್ನು ಮಾಡಬೇಕು ವಿದ್ವಾಂಸನು ತನ್ನ ಸಮಕ್ಷದಲ್ಲಿ ಈ ಕ್ರಮದಲ್ಲಿ ಭಕ್ತಿ ಪೂರ್ವಕವಾಗಿ ಸೂರ್ಯಪ್ರತಿಷ್ಠೆ ಮಾಡಿಸಬೇಕು.

೯. ಇತಿಹಾಸ, ಪುರಾಣ ಇವನ್ನು ಕೇಳುವುದರಿಂದ ಪಾಪವು ನಾಶವಾಗುತ್ತದೆ. ಅಯ್ಯಾ ವೀರನೇ! ಅವೆರಡನ್ನೂ ಶ್ರವಣಮಾಡುವುದರಿಂದ ಭಾಸ್ಕರನು, ನಾವು ಇರುವ ಸ್ಥಳದಲ್ಲೇ ಸನ್ನಿಹಿತನಾಗಿರುತ್ತಾನೆ.

೧೦. ಸೂರ್ಯದೇವಾಲಯವನ್ನು ಕಟ್ಟಿಸಿ ಸೂರ್ಯಪ್ರತಿಮೆಯನ್ನು ಸ್ಥಾಪಿಸಿದರೆ ಇತರ ದೇವತೆಗಳೆಲ್ಲರೂ ಸ್ಥಾಪಿತರಾದ ಹಾಗೆಯೇ ಆಗುವುದು. ಆದ್ದರಿಂದ ತಿಳಿವಳಿಕೆಯುಳ್ಳ ವನು ನಿತ್ಯವೂ ಧರ್ಮಶ್ರವಣವನ್ನು ಮಾಡುತ್ತಿರಬೇಕು.

೧೧. ಪೌರಾಣಿಕನನ್ನು ಸತ್ಕರಿಸಿ ಇತರ ದ್ವಿಜರನ್ನೂ ಪೂಜಿಸಿ ಸೂರ್ಯನ ಸಮ್ಮುಖದಲ್ಲಿ ಪುರಾಣಪುಸ್ತಕವನ್ನು ಓದಿಸಬೇಕು.

**ಸರ್ವಸ್ವಂ ಸ್ಥಾಪಕೇ ದದ್ಯಾತ್ ಯತ್ಕಿಂಚಿದ್ಗೃಹಮಾಗತಂ ।**
**ಗೋದಾನಮಥ ವಾ ದದ್ಯಾತ್ತಸ್ಯ ಚಿತ್ತಂ ಪ್ರಸಾದಯೇತ್ ॥ ೧೨ ॥**

**ಇತ್ಯೇಷ ಕಥಿತೋ ವೀರ ಪ್ರತಿಷ್ಠಾಕಲ್ಪ ಆದಿತಃ ।**
**ಕೃತ್ವಾ ದೃಷ್ಟ್ವಾ ಚ ಶ್ರುತ್ವಾ ಚ ಯಂ ನರೋಽರ್ಕಮವಾಪ್ನುಯಾತ್ ॥ ೧೩ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ ಸಾಂಬೋಪಾಖ್ಯಾನೇ ಪ್ರತಿಷ್ಠಾಪನ ವಿಧಿವರ್ಣನಂ ನಾಮ ಸಪ್ತತ್ರಿಂಶದುತ್ತರಶತತಮೋಽಧ್ಯಾಯಃ.**



---

೧೨. ತನ್ನ ಮನೆಗೆ ಯಾವ ಪದಾರ್ಥ ಬಂದರೂ ಅದರಲ್ಲಿ ಸ್ವಲ್ಪವನ್ನು ಪ್ರತಿಮಾಸ್ಥಾಪಕನಿಗೆ ಕೊಡಬೇಕು. ಗೋವನ್ನಾದರೂ ಕೊಟ್ಟು ಅವನ ಮನಸ್ಸನ್ನು ತೃಪ್ತಿಪಡಿಸಬೇಕು.

೧೩. ಅಯ್ಯಾ ವೀರನೇ! ಈ ಪ್ರತಿಷ್ಠಾವಿಧಾನವನ್ನು ಆ ಮೂಲಾಗ್ರವಾಗಿ ಹೇಳಿದ್ದೇನೆ. ಇದನ್ನು ಆಚರಿಸಿದವನೂ, ಶ್ರವಣಮಾಡಿದವನೂ, ದರ್ಶನಮಾಡಿದವನೂ ಸೂರ್ಯಸಾಯುಜ್ಯವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಾಂಬೋಪಾಖ್ಯಾನದಲ್ಲಿ ಪ್ರತಿಷ್ಠಾವಿಧಿವರ್ಣನೆಯೆಂಬ ನೂರಮೂವತ್ತೇಳನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಅಷ್ಟತ್ರಿಂಶದುತ್ತರಶತತಮೋಽಧ್ಯಾಯಃ

॥ ನಾರದ ಉವಾಚ ॥

ಹಂತ ತೇ ಕಥಯಿಷ್ಯಾಮಿ ಧ್ವಜಾರೋಪಣಮುತ್ತಮಂ ।
ಯದುಕ್ತಂ ಬ್ರಹ್ಮಣಾ ಪೂರ್ವನ್ನೃಷಬಾಧಿಪತೇಃ ಪುರಃ ॥ ೧ ॥

ಪುರಾದೇವಾಸುರೇ ಯುದ್ಧೇ ಯಾನಿ ದೈವೈರ್ಜಯೇಪ್ಸುಭಿಃ ।
ಕೃತಾನ್ಯುಪರಿ ಚಿಹ್ನಾನಿ ವಾಹನಾನಿ ಧ್ವಜಾನಿ ತು ॥ ೨ ॥

ಲಕ್ಷ್ಮ ಚಿಹ್ನ ಧ್ವಜಂ ಕೇತುರಿತಿ ಪರ್ಯಾಯನಾಮಭಿಃ ।
ಕೀರ್ತಿತಃ ಸ ಚ ತಸ್ಯೇಹ ಪ್ರಮಾಣಂ ಗದತಃ ಶೃಣು ॥ ೩ ॥

---

## ನೂರಮೂವತ್ತೆಂಟನೆಯ ಅಧ್ಯಾಯ

೧. ನಾರದರು ಹೇಳುತ್ತಾರೆ—ಪೂರ್ವದಲ್ಲಿ ವೃಷಭಾಧಿಪತಿಯಾದ ದಿಂಡಿಯ ಇದಿರಿಗೆ ಬ್ರಹ್ಮನು ಹೇಳಿದ ಶ್ರೇಷ್ಠವಾದ ಧ್ವಜಾರೋಹಣದ ವಿಷಯವನ್ನು ನಿನಗೆ ಹೇಳುತ್ತೇನೆ ಕೇಳು.

೨. ಪೂರ್ವಕಾಲದಲ್ಲಿ ದೇವತೆಗಳಿಗೂ ರಾಕ್ಷಸರಿಗೂ ಯುದ್ಧ ನಡೆದಾಗ ಜಯಾಪೇಕ್ಷಿಗಳಾದ ದೇವತೆಗಳು ಯಾವ ವಾಹನಗಳನ್ನೂ ಅದರ ಮೇಲುಗಡೆ ಯಾವ ಚಿಹ್ನೆಯ ಧ್ವಜಗಳನ್ನೂ ಮಾಡಿಕೊಂಡರೆಂಬದನ್ನು ಕೇಳು:—

೩. ಧ್ವಜಕ್ಕೆ ಲಕ್ಷ್ಮ, ಚಿಹ್ನ, ಧ್ವಜ, ಕೇತು ಮುಂತಾದ ಪರ್ಯಾಯ ನಾಮಗಳಿವೆ. ಆ ಧ್ವಜದ ಪ್ರಮಾಣವನ್ನು ಹೇಳುತ್ತೇನೆ ಕೇಳು :—

ಧ್ವಜೋ ವಂಶಸ್ಯ ಕರ್ತವ್ಯಸ್ತ್ವವಿದ್ಧರುಜುರವ್ರಣಃ ।
ಪ್ರಾಸಾದವ್ಯಾಸ ತುಲ್ಯಾಸ್ತುಧ್ವಜವಂಶಪ್ರಮಾಣತಃ ॥ ४ ॥

ದೇವಾಗಾರಸ್ಯ ಯೇ ಪ್ರೋಕ್ತಾ ಮಂಜರೀಕಲಶಾದಯಃ ।
ಅಥ ವಾ ತತ್ಪ್ರಮಾಣಸ್ತು ಧ್ವಜದಂಡಃ ಪ್ರಕೀರ್ತಿತಃ ॥ ೫ ॥

ಅಂತರ್ಗೃಹಸ್ಯ ಯಾ ವೇದೀ ಸೂತ್ರತಃ ಪರಿಕಲ್ಪಿತಾ ।
ತಸ್ಯಾ ವ್ಯಾಸೋ ಭವೇದ್ವಂಶಃ ಪ್ರಾಸಾದಸ್ಯ ಯದೂತ್ತಮ ॥ ೬ ॥

ಅಥವಾ ಮೂಲಸೂತ್ರೇಣ ಯೋ ವ್ಯಾಸೋಽಂತರ್ಗೃಹಸ್ಯ ತು ।
ಪ್ರಾಸಾದವ್ಯಾಸ ಇತಿ ಸ ಪ್ರೋಕ್ತಶ್ಚೇಹ ನ ಸಂಶಯಃ ॥ ೭ ॥

ಕೇತುರ್ಭವೇದ್ವರೋ ವಂಶೋ ನ ನಿಮ್ನೋ ನ ಋಜುಸ್ತಥಾ ।
ಪತ್ರಂ ಧ್ವಜೇ ಯುಗಂ ಚೈವ ನಲಿಕಾ ಪುರುಷಸ್ತಥಾ ॥ ೮ ॥

---

೪. ನೇರವಾಗಿಯೂ ಹುಳುಕಿಲ್ಲದೆಯೂ ಏಟುತಗಲಿ ಕಚ್ಚಾಗದೆಯೂ ಇರುವ ಬಿದಿರು ಧ್ವಜದಂಡಕ್ಕೆ ಅರ್ಹವಾದುದು. ಆ ದಂಡವು ಪ್ರಾಸಾದದ ವ್ಯಾಸದಷ್ಟು ಎತ್ತರವುಳ್ಳದ್ದಾಗಿರಬೇಕು.

೫. ದೇವಸ್ಥಾನದ ಮಂಜರಿ ಕಲಶ ಮುಂತಾದ ಹೆಸರಿಂದ ಕರೆಯಿಸಿ ಕೊಳ್ಳುವ ಭಾಗಗಳ ಪ್ರಮಾಣಷ್ಟಾದರೂ ಧ್ವಜದಂಡವಿರಬೇಕೆಂದು ಹೇಳಿದೆ.

೬. ಅಯ್ಯಾ ಯದುಶ್ರೇಷ್ಠನೇ! ಗರ್ಭಗೃಹದಲ್ಲಿ ಸೂತ್ರಾನುಸಾರವಾಗಿ ಕಟ್ಟಿದ ಜಗಲಿಯ ವ್ಯಾಸವೇ ಪ್ರಾಸಾದವ್ಯಾಸವೆನಿಸುವುದು. ಧ್ವಜವಂಶವು ಈ ಅಳತೆಯುಳ್ಳದ್ದಾಗಿರಬೇಕು. (ಇದು ಕೆಲವರ ಮತ)

೭. ಅಥವಾ ಮೂಲಸೂತ್ರದಿಂದ ಗರ್ಭಗೃಹದ ಗೋಡೆಗೆ ಯಾವ ವಿಸ್ತಾರವುಂಟೋ, ಅದನ್ನೇ ಪ್ರಾಸಾದವ್ಯಾಸವೆಂದು ಹೇಳಿದೆ. ಇದರಲ್ಲಿ ಸಂಶಯವಿಲ್ಲ. (ಇದು ಕೆಲವರ ಮತ)

೮. ಬಿದಿರು, ಶ್ರೇಷ್ಠವಾದ ಧ್ವಜವಾಗುವುದು. ಅದು (ಆ ಬಿದಿರು) ಬಹು ಟೊಳ್ಳಾಗಿಯೂ ಇರಬಾರದು. ಬಹು ನೆಟ್ಟಗೂ ಇರಬಾರದು. ಧ್ವಜದಲ್ಲಿ ಪತ್ರ, ಯುಗ, ನಲಿಕಾ, ಪುರುಷ ಎಂಬ ಭಾಗಗಳನ್ನು ಮಾಡಿರಬೇಕು.

ಚತುರ್ಹಸ್ತಾ ಭವಂತ್ಯೇತೇ ಪ್ರಶಸ್ತಾಃ ಕೃಷ್ಣನಂದನ ।
ಅಷ್ಟಹಸ್ತಪ್ರಮಾಣಸ್ತು ವಂಶಾರ್ಥಸ್ತು ಪ್ರಮಾಣತಃ ॥ ೯ ॥

ಸಾಮಾನ್ಯೋ ಧ್ವಜದಂಡಸ್ತು ಸರ್ವಸಾಧಾರಣೋ ಮತಃ ।
ದಂಡಪಾಣಿಧ್ವಜೋ ಯಸ್ತು ಸ್ಮೃತಃ ಷೋಡಶಹಸ್ತವಾನ್ ॥ ೧೦ ॥

ವಿಂಶದ್ಧಸ್ತಾತ್ಪರೋ ದಂಡೋ ನ ಕಾರ್ಯಃ ಸರ್ವದಾ ರವೇಃ ।
ಯುಗ್ಮಹಸ್ತಸ್ತು ಕರ್ತವ್ಯೋ ಧ್ವಜದಂಡೋ ಮನೀಷಿಭಿಃ ॥ ೧೧ ॥

ಚತುರಂಗುಲವಿಸ್ತೀರ್ಣಃ ಸುವೃತ್ತೋ ದ್ವ್ಯಂಗುಲೋಪರಿ ।
ನಾತಿಸೂಕ್ಷ್ಮೋ ನ ಚ ಸ್ಥೂಲೋ ನ ಕಾರ್ಯೋ ನತಪರ್ವಕಃ ॥ ೧೨ ॥

ಸಮಪರ್ವಾ ತು ಕರ್ತವ್ಯಃ ಸುದೃಢಃ ಸೂಕ್ಷ್ಮ ಏವ ಹಿ ।
ವಕ್ರಃ ಪುತ್ರವಿನಾಶಾಯ ಸವ್ರಣೋಽರ್ಥವಿನಾಶನಃ ॥ ೧೩ ॥

---

೯. ಎಲೈ, ಸಾಂಬನೇ! ಪತ್ರ, ಯುಗ, ನಲಿಕಾ, ಪುರುಷ, ಇವು ಪ್ರತಿ ಯೊಂದೂ ನಾಲ್ಕು ಮೊಳವುಳ್ಳದ್ದಾಗಿದ್ದರೆ ಪ್ರಶಸ್ತ. ಒಟ್ಟು ಧ್ವಜದ ಅರ್ಧಪ್ರಮಾಣವು ಎಂಟು ಮೊಳವಾಗಿರಬೇಕು.

೧೦. ಸಾಮಾನ್ಯವಾಗಿ ಈ ಅಳತೆಯ ಧ್ವಜದಂಡವು ಸರ್ವಸಾಧಾರಣವೆಂದು ತಿಳಿಯಬೇಕು. ದಂಡಪಾಣಿಧ್ವಜದಂಡದ ಪ್ರಮಾಣವು ಹದಿನಾರುಹಸ್ತವುಳ್ಳದ್ದಾಗಿರುವುದು.

೧೧. ಸೂರ್ಯನಧ್ವಜದಂಡವನ್ನು ಇಪ್ಪತ್ತು ಹಸ್ತಗಳಿಗಿಂತ ಹೆಚ್ಚಾಗಿರುವಂತೆ ಸರ್ವಥಾ ಮಾಡಬಾರದು. ವಿದ್ವಾಂಸರು ಯಾವಾಗಲೂ ಧ್ವಜದಂಡವನ್ನು ಸಮ ಸಂಖ್ಯೆಯ ಮೊಳಗಳ ಅಳತೆಯಾಗಿಯೇ ಮಾಡಬೇಕು.

೧೨. ಆ ಬಿದಿರು ನಾಲ್ಕಂಗುಲ ವಿಸ್ತಾರ ಉಳ್ಳದ್ದೂ ಎರಡು ಅಂಗುಲಗಳ ಮೇಲ್ಪಟ್ಟು ದುಂಡುಳ್ಳದ್ದೂ ಆಗಿ ಇರಬೇಕು. ಬಹು ಸಣ್ಣದಾಗಲಿ ಬಹಳ ದಪ್ಪವಾಗಲಿ ಹತ್ತಿರ ಹತ್ತಿರಕ್ಕೆ ಗಿಣ್ಣುಳ್ಳದ್ದಾಗಲಿ ಆಗಿರಬಾರದು.

೧೩. ಸಮದೂರವಾದ ಗಿಣ್ಣುಗಳುಳ್ಳದ್ದೂ ಬಹುಗಟ್ಟಿಯೂ ಸಣ್ಣರಂಧ್ರವುಳ್ಳದ್ದೂ ಆಗಿ ಇರುವುದನ್ನು ಧ್ವಜದಂಡವಾಗಿಮಾಡಬೇಕು. ಆ ಬಿದಿರು ಡೊಂಕಾಗಿದ್ದರೆ ಪುತ್ರನಾಶವೂ, ಏಟುಬಿದ್ದು ಗಾಯವಾಗಿದ್ದರೆ ದ್ರವ್ಯನಾಶವೂ, ಆಗುವುದು.

ರೋಗದೋ ಯುಗ್ಮಹಸ್ತಸ್ತು ಭಿನ್ನೋ ದುಃಖಮಸಂತಕಂ ।
ಕರೋತಿ ಹಾನಿಂ ಧರ್ಮಸ್ಯ ಹೀನೋ ಯಸ್ತು ಪ್ರಮಾಣತಃ ॥ ೧೪ ॥

ವೈಷಮ್ಯಮಸಮಪರ್ವಾ ದದ್ಯಾತ್ಕೃಚ್ಛ್ರಮುಥೋನ್ನತಃ ।
ಜಯೋ ಜಯಂತೋ ಜೈತ್ರೇಯಃ ಶತ್ರುಹಂತಾ ಜಯಾವಹಃ ॥ ೧೫ ॥

ನಂದೋಪನಂದನೌ ಚೈವೇಂದ್ರೋಪೇಂದ್ರೌ ಗದಿತೌ ತಥಾ ।
ದಶೈತೇ ಕೀರ್ತಿತಾ ಭೇದಾ ಧ್ವಜಸ್ಯಾನಂದಸಂಮ್ಮಿತಾಃ ॥ ೧೬ ॥

ದ್ವಿಹಸ್ತಸ್ತು ಜಯೋ ದಂಡೋ ಜಯಂತೋ ದ್ವಿಗುಣೋ ಮತಃ ।
ಅಷ್ಟಹಸ್ತಸ್ತು ಜೈತ್ರೇಯಃ ಶತ್ರುಹಂತಾ ಕಲಾನ್ವಿತಃ ॥ ೧೭ ॥

ಜಯಾವಹಸ್ತು ವಿಂಶಾರ್ಧೋ ನಂದ ಆದಿತ್ಯ ಸನ್ನಿಭಃ ।
ಚತುರ್ದಶೋಪನಂದಸ್ತು ಇಂದ್ರಃ ಷೋಡಶ ಉಚ್ಯತೇ ॥ ೧೮ ॥

---

೧೪. ವಿಷಮಸಂಖ್ಯೆಯ ಮೊಳಗಳ ಅಳತೆಇದ್ದರೆ ರೋಗವುಂಟಾಗುವುದು ಒಡೆದು ಬಿರುಕುಬಿಟ್ಟಿದ್ದರೆ ಅಪಾರವಾದ ದುಃಖವನ್ನುಂಟುಮಾಡುವುದು. ಉಕ್ತ ಪ್ರಮಾಣಕ್ಕಿಂತ ಕಡಿಮೆ ಇದ್ದರೆ ಅದು ಧರ್ಮಹಾನಿಯನ್ನುಂಟುಮಾಡುವುದು.

೧೫. ಅಸಮವಾದ ಗಿಣ್ಣುಗಳುಳ್ಳದ್ದು ವೈಷಮ್ಯವುಂಟುಮಾಡುವುದು. ಬಹು ಎತ್ತರವಾಗಿದ್ದರೆ ಕಷ್ಟಪ್ರದವಾಗುವುದು. ಧ್ವಜಗಳಲ್ಲಿ ಜಯ ಜಯಂತ, ಜೈತ್ರೇಯ, ಶತ್ರುಹಂತಾ, ಜಯಾವಹ ಮತ್ತು.

೧೬. ನಂದ, ಉಪನಂದನ, ಇಂದ್ರ, ಉಪೇಂದ್ರ ತಥೇಂದ್ರ ಇವು ಹತ್ತೂ ಆನಂದಪ್ರದಗಳಾದ ಧ್ವಜದ ಭೇದಗಳೆಂದು ಹೇಳಲ್ಪಟ್ಟಿದೆ.

೧೭. ಎರಡು ಮೊಳಗಳುಳ್ಳ ಧ್ವಜದಂಡವನ್ನು ಜಯವೆಂದೂ ಇದರ ದ್ವಿಗುಣವು ಎಂದರೆ ನಾಲ್ಕುಮೊಳ ಉದ್ದವುಳ್ಳದ್ದನ್ನು ಜಯಂತವೆಂದೂ ಎಂಟುಮೊಳಗಳುಳ್ಳದ್ದನ್ನು ಜೈತ್ರೇಯವೆಂದೂ, ಮತ್ತು ಹದಿನಾರುಮೊಳ ಉದ್ದವುಳ್ಳದ್ದನ್ನು ಶತ್ರುಹಂತಾ ಎಂದೂ ಹೇಳುವರು.

೧೮. ಹತ್ತುಮೊಳ ಪ್ರಮಾಣವುಳ್ಳದ್ದನ್ನು ಜಯಯವಹವೆಂದೂ ಹನ್ನೆರಡು ಮೊಳ ಉದ್ದವುಳ್ಳದ್ದನ್ನು ನಂದವೆಂದೂ, ಹದಿನಾಲ್ಕುಮೊಳ ಉದ್ದಳ್ಳನ್ನು ಉಪನಂದವೆಂದೂ ಇಂದ್ರವು ಹದಿನಾರುಮೊಳ ಉಳ್ಳದ್ದನ್ನು ಇಂದ್ರ ಎಂದೂ.

ಉಪೇಂದ್ರೋಽಷ್ಟಾದಶಃ ಪ್ರೋಕ್ತಸ್ತಥೇಂದ್ರೋ ವಿಂಶತಿಃ ಸ್ಮೃತಃ ।
ಭಿನ್ನೋ ವಕ್ರೋಽಸಾಧಿತಶ್ಚ ನ ಕಾರ್ಯೋ ದಂಡ ಏವ ಹಿ ॥ ೧೯ ॥

ಮೂಲಮಂತ್ರೇಣ ಕರ್ತವ್ಯೋ ವ್ಯಾಸತೋಽಂತರ್ಗೃಹಸ್ಯ ತು ।
ಧ್ವಜದಂಡೋ ಮಹಾಬಾಹೋ ಅಥವಾ ವಾಸ್ತುಮಾನತಃ ॥ ೨೦ ॥

ಮಂಜರೀಮಾನತೋ ವಾಪಿ ತದರ್ಧೇನಾಥ ವಾ ವಿಭೋ ।
ಪತಾಕಾ ವೈ ಶುಭಾ ಕಾರ್ಯಾ ಧ್ವಜವಂಶಾವಲಂಬಿನೀ ॥ ೨೧ ॥

ದೇವಾಗಾರಸ್ಯ ಶಿಖರಾತ್ತ್ರಿಭಾಗಪರಿಮಾರ್ಜನೀ ।
ಸಾ ಪ್ರೋಕ್ತಾ ದಶಧಾ ವೀರ ಮಾನತೋಽಮಾನತಸ್ತಥಾ ॥ ೨೨ ॥

ಅಂಕುರಃ ಪಲ್ಲವಶ್ಚೈವ ಸ್ಕಂಧಃ ಶಾಖಾ ತಥೈವ ಚ ।
ಪತಾಕಾ ಕದಲೀ ವೀರ ಕೇತುರ್ಲಕ್ಷ್ಮ ಜಯಸ್ತಥಾ ॥ ೨೩ ॥

---

೧೯. ಹದಿನೆಂಟುಮೊಳ ಉಳ್ಳದ್ದನ್ನು ಉಪೇಂದ್ರ ಎಂದೂ, ಇಪ್ಪತ್ತುಮೊಳ ಉದ್ದವುಳ್ಳದ್ದನ್ನು ತದೇಂದ್ರ ಎಂದೂ ಹೇಳಿದರು. ಒಡೆದದ್ದು, ಡೊಂಕಾದ್ದು, ಅಸಾಧಿತವಾದ್ದು ಇದನ್ನು ಧ್ವಜದಂಡವನ್ನಾಗಿ ಮಾಡಬಾರದು.

೨೦. ಧ್ವಜದಂಡವನ್ನು ಅಂತರ್ಗೃಹದ ಅಗಲಕ್ಕೆ ಸರಿಯಾಗಿ ಅಥವಾ ವಾಸ್ತುಪ್ರಮಾಣಕ್ಕೆ ಅನುಸಾರವಾಗಿ ಮಾಡಬೇಕು. ಇದನ್ನು ಮೂಲಮಂತ್ರೋಚ್ಚಾರಣ ಪೂರ್ವಕ ರಚಿಸಬೇಕು.

೨೧. ಎಲೈ, ವಿಭುವೇ, ! ಬಾವುಟವನ್ನು ಮಂಜರೀಪ್ರಮಾಣಕ್ಕೆ ಸರಿಯಾಗಿ ಅಥವಾ ಅದರ ಅರ್ಧಪ್ರಮಾಣಕ್ಕೆ ಸರಿಯಾಗುವಂತೆ ಮಾಡಬೇಕು. ಶುಭವಾದ ಪತಾಕೆಯು ಧ್ವಜದಂಡವನ್ನು ಹೊಂದಿಕೊಂಡಿರಬೇಕು.

೨೨. ಇದು ದೇವಾಲಯ ಶಿಖರದಿಂದ ಇರುವ ದೂರದ ಮೂರರಲ್ಲೊಂದು ಭಾಗದಷ್ಟು ದೂರವನ್ನು ಪ್ರಮಾರ್ಜನಮಾಡು (ಸೋಕು) ವಂತೆ ಇರಬೇಕು. ಪತಾಕೆಯು ಅಳತೆ ದೂರ ಇವುಗಳಿ ಅಳತೆಗನುಸಾರವಾಗಿ ಹತ್ತುಬಗೆಯಾಗಿರುವುದು.

೨೩. ಅಂಕುರ. ಪಲ್ಲವಸ್ಕಂಧಶಾಖಾ, ಪತಾಕಾ, ಕದಲೀ, ಕೇತು, ಲಕ್ಷ್ಮ ಜಯ, ಧ್ವಜ ಎಂಬವು ಪತಾಕಾ ಭೇದಗಳು.

ಧ್ವಜಶ್ಚ ದಶಮಃ ಪ್ರೋಕ್ತಃ ಸರ್ವದೇವ ಮಯೋಽವ್ಯಯಃ ।
ಅಂಕುರೋ ದ್ವ್ಯಂಗುಲಃ ಪ್ರೋಕ್ತಃ ಪಲ್ಲವಶ್ಚತುರಂಗುಲಃ ॥ ೨೪ ॥

ಸ್ಕಂಧಃ ಷಡಂಗುಲಃ ಪ್ರೋಕ್ತಃ ಶಾಖಾಚಾಷ್ಟಾಂಗುಲಾ ಮತಾ ।
ಏಕಾದಶಪತಾಕಾ ತು ಕದಲೀ ಚ ಚತುರ್ದಶ ॥ ೨೫ ॥

ಕೇತುಸ್ತು ಷೋಡಶಃ ಪ್ರೋಕ್ತೋ ಲಕ್ಷ್ಮ್ಯಷ್ಟಾದಶಮುಚ್ಯತೇ ।
ಜಯಾ ವಿಂಶತಿ ರ್ವೈ ಪ್ರೋಕ್ತಾ ಏತಾವತ್ವಂಗುಲಾನಿ ತು ॥ ೨೬ ॥

ದೇವಾಗಾರಸ್ಯ ಕುಂಭಸ್ಯ ಪ್ರಸನ್ನಾ ಸಾ ಪ್ರಮಾರ್ಜನೀ ।
ಅಂಕುರೇತಿ ಪತಾಕಾ ಸಾ ವಿಜ್ಞೇಯಾ ಯದುನಂದನ ॥ ೨೭ ॥

ಪಲ್ಲವೇತಿ ದ್ವಿತೀಯಸ್ಯ ಮಾರ್ಜನೀ ಪರಿಕೀರ್ತಿತಾ ।
ತ್ರಿಭಾಗಮಾರ್ಜನೀ ಸ್ಕಂಧಃ ಶಾಖಾ ವೈ ಪಂಚಮಸ್ಯ ತು ॥ ೨೮ ॥

---

೨೪. ಇದನ್ನು ಸರ್ವದೇವಮಯವೂ ಅವ್ಯಯವೂ ಆದ ಧ್ವಜವೆಂದು ಹೇಳಿದೆ. ಅಂಕುರದ ಪ್ರಮಾಣ ಎರಡಂಗುಲ, ಪಲ್ಲವದ ಪ್ರಮಾಣ ನಾಲ್ಕಂಗುಲ.

೨೫. ಸ್ಕಂಧದ ಪ್ರಮಾಣ ಆರಂಗುಲ. ಶಾಖಾ ಎಂಬುದರ ಪ್ರಮಾಣ ಎಂಟು ಅಂಗುಲಗಳು. ಪತಾಕಾ ಎಂಬುದು ಹನ್ನೊಂದು ಅಂಗುಲ ಪ್ರಮಾಣವುಳ್ಳದ್ದು ಕದಲೀ ಎಂಬುದು ಹದಿನಾಲ್ಕು ಅಂಗುಲವುಳ್ಳದ್ದೂ ಆಗಿರಬೇಕು.

೨೬. ಕೇತು ಎಂಬುದು ಹದಿನಾರು ಅಂಗುಲವುಳ್ಳದ್ದು. ಲಕ್ಷ್ಮ್ಯವು ಹದಿನೆಂಟಂಗುಲದ್ದು. ಜಯ ಎಂಬುದರ ಅಳತೆ ಇಪ್ಪತ್ತಂಗುಲ, ಈ ಪ್ರಕಾರ ಅವುಗಳ ಪ್ರಮಾಣಗಳನ್ನು ಹೇಳಿದೆ.

೨೭. ಎಲೈ ಯದುನಂದನನೇ! ಅಂದವಾದ ಆ ಪತಾಕೆಯು ದೇವಾಲಯದ ಕುಂಭವನ್ನು ಪ್ರಮಾರ್ಜನ ಮಾಡುವಂತಿದ್ದರೆ ಆ ಪತಾಕೆಯನ್ನು ಅಂಕುರ ಎಂದು ತಿಳಿಯಬೇಕು.

೨೮. ಪಲ್ಲವಪತಾಕೆಯು ಎರಡನೆಯ ಭಾಗವನ್ನು ಪ್ರಮಾರ್ಜನ ಮಾಡುವಂತಿರಬೇಕು. ಸ್ಕಂಧ ಎಂಬುದು ಮೂರನೆಯ ಭಾಗವನ್ನು ಪ್ರಮಾರ್ಜನ ಮಾಡುವಂತಿರಬೇಕು. ಶಾಖಾ ಎಂಬುದು ಐದನೆಯ ಭಾಗವನ್ನು ಪ್ರಮಾರ್ಜನ ಮಾಡುವಂತಿರಬೇಕು.

ಷಷ್ಠಸ್ಯೋಕ್ತಾ ಪತಾಕಾ ತು ಕದಲೀ ಸಪ್ತಮಸ್ಯ ತು ।
ಅಷ್ಟಮಸ್ಯ ತಥಾ ಕೇತುರ್ಲಕ್ಷ್ಮ ಚ ನವಮಸ್ಯ ತು ॥ ೨೯ ॥

ತತಸ್ತು ದಶಮಃ ಪ್ರೋಕ್ತೋ ಜಯಂತೋ ಯದುನಂದನ ।
ವೃಷಸ್ಥಾನಾವಮಾರ್ಗೀ ತು ಧ್ವಜಸ್ತು ಪರಿಕೀರ್ತಿತಃ ॥ ೩೦ ॥

ಗಜೋ ಮೇಷೋಽಥ ಮಹಿಷಃ ಕಬಂಧಸ್ತು ವೃಷಸ್ತಥಾ ।
ಹರಿಣೋಽಥ ನರಶ್ಚೈವ ನರಶ್ಚ ನರಸತ್ತಮ ॥ ೩೧ ॥

ಸ್ಥಾನಾನ್ಯೇತಾನಿ ಭೂಯೋಽಥ ಪ್ರಯುಕ್ತಸ್ಯ ಧ್ವಜಸ್ಯ ತು ।
ದಿಶಾಭಾಗೇ ತು ಪೂರ್ವಾದಿ ಕ್ರಮೇಣ ಪರಿಕಲ್ಪಯೇತ್ ॥ ೩೨ ॥

ಏವಂ ದಶವಿಧಾ ಪ್ರೋಕ್ತಾ ಪತಾಕಾ ತತ್ತ್ವದರ್ಶಿಭಿಃ ।
ಕರ್ತವ್ಯಾ ಸಾ ಯಥಾಪೂರ್ವಂ ತಚ್ಛೃಣು ತ್ವಂ ನರಾಧಿಪ ॥ ೩೩ ॥

---

೨೯. ಪತಾಕಾ ಎಂಬುದು ಆರನೆಯ ಭಾಗವನ್ನು ಪ್ರಮಾರ್ಜನ ಮಾಡುವ ಹಾಗೆ ಇರಬೇಕು. ಕದಲೀ ಎಂಬುದು ಏಳನೆಯ ಭಾಗವನ್ನು ಪ್ರಮಾರ್ಜಿಸುವಂತಿರಬೇಕು. ಕೇತು ಎಂಬುದು ಎಂಟನೆಯ ಭಾಗ ಪ್ರಮಾರ್ಜನಕರವಾಗಿರಬೇಕು. ಲಕ್ಷ್ಮವು ಒಂಬತ್ತನೆಯ ಭಾಗ ಪ್ರಮಾರ್ಜನಮಾಡುವಂತಿರಬೇಕು.

೩೦. ಜಯಂತ ಎಂಬುದು ಹತ್ತನೆಯ ಭಾಗವನ್ನು ಪ್ರಮಾರ್ಜಿಸುವುದೆಂದು ಹೇಳಿವೆ. ವೃಷಸ್ಥಾನದ ಕೆಳಭಾಗದ ಮಾರ್ಗದಲ್ಲಿ ಪ್ರಸರಿಸಿರುವುದು. ಧ್ವಜವೆಂದು ಹೇಳಲ್ಪಟ್ಟಿರುವುದು.

೩೧. ಎಲೈ ಮನುಷ್ಯಶ್ರೇಷ್ಠನೇ! ಗಜ, ಮೇಷ, ಮಹಿಷ, ಕಬಂಧ, ವೃಷ, ಹರಿಣ, ನರ: ಎಂಬದಾಗಿ ಸಂಜ್ಞೆಗಳು ಇವೆ.

೩೨. ಇವು ಧ್ವಜಪ್ರಯುಕ್ತವಾದ ಸ್ಥಾನಗಳು, ಇವನ್ನು ಪೂರ್ವಾದಿ ದಿಗ್ಭಾಗಗಳಲ್ಲಿ ಕ್ರಮವಾಗಿ ಕಲ್ಪಿಸಬೇಕು.

೩೩. ತತ್ತ್ವವನ್ನು ಬಲ್ಲವರು ಈ ಪ್ರಕಾರ ಪತಾಕೆಯು ಹತ್ತುಬಗೆಯೆಂದು ಹೇಳಿರುವರು. ಅದನ್ನು ಮೊದಲು ಹೇಗೆ ಸಿದ್ಧಮಾಡಬೇಕು ಎಂಬುದನ್ನು ಹೇಳುತ್ತೇನೆ. ಎಲೈ ನರಾಧಿಪನೇ ಕೇಳು :–

ಶುಕ್ಲವಸ್ತ್ರಮಯೀ ಚಿತ್ರಾ ಸಘಂಟಾ ಸುಮನೋಹರಾ ।
ನಾನಾಚಾಮರಸಂಪನ್ನಾ ಕಿಂಕಿಣೀಜಾಲಮಂಡಿತಾ ॥ ೩೪ ॥

ಧ್ವಜಾಗ್ರೇ ಚೈವ ಕರ್ತವ್ಯೋ ದೇವತಾಲಿಂಗಸೂಚಕಃ ।
ಕಾಂಚನೋ ವಾಥ ರೌಪ್ಯೋ ವಾ ಮಣಿರತ್ನಮಯೋಽಪಿ ವಾ ॥ ೩೫ ॥

ರಂಗಕೈರ್ಲಿಖ್ಯತೇ ವಾಪಿ ತದ್ವಾಹನಸಮಾಕೃತಿಃ ।
ಧ್ವಜದಂಡೋಽತ್ರ ವಿನ್ಯಸ್ತಃ ಕರ್ತವ್ಯೋ ಯದುನಂದನ ॥ ೩೬ ॥

ಗರುತ್ಮಾಂಸ್ತು ಧ್ವಜೋ ವಿಷ್ಣೋರೀಶ್ವರಸ್ಯ ಧ್ವಜೋ ವೃಷಃ ।
ಬ್ರಹ್ಮಣಃ ಪಂಕಜಂ ಕಾರ್ಯಂ ರವೇರ್ಧರ್ಮಃ ಸ್ಮೃತೋ ಧ್ವಜಃ ॥ ೩೭ ॥

ಗಜೋ ದೇವಾಧಿಪಸ್ಯೋಕ್ತಃ ಸೋಮಸ್ಯ ತು ನರೋ ಧ್ವಜಃ ।
ಬಲದೇವಸ್ಯ ತಾಲಸ್ತು ಕಾಮಸ್ಯ ಮಕರಧ್ವಜಃ ॥ ೩೮ ॥

---

೩೪. ಧ್ವಜವು ಬಿಳಿಯವಸ್ತ್ರದಿಂದ ಕೂಡಿದುದೂ, ಚಿತ್ರವರ್ಣವಾದುದೂ, ಘಂಟೆಗಳಿಂದ ಕೂಡಿ ಮನೋಹರವಾದುದೂ, ನಾನಾ ಚಾಮರಗಳಿಂದಲೂ, ಕಿರುಘಂಟೆಗಳಿಂದಲೂ ಕೂಡಿದುದೂ ಆಗಿರಬೇಕು.

೩೫. ಧ್ವಜದ ತುದಿಯಲ್ಲಿ ಚಿನ್ನದ್ದೋ, ಬೆಳ್ಳಿಯದೋ, ಅಥವಾ ಮಣಿರತ್ನಮಯವಾದ್ದೋ ಆದ ದೇವತಾ ಚಿಹ್ನವನ್ನು ಸೂಚಿಸುವ ಗುರುತನ್ನು ಮಾಡಬೇಕು.

೩೬. ಎಲೈ ಯದುನಂದನನೇ! ಧ್ವಜದಲ್ಲಿ ಆಯಾ ದೇವತಾ ವಾಹನದ ಆಕೃತಿಗೆ ಸಮಾನವಾದ ಆಕೃತಿಯ ಚಿಹ್ನೆಗಳನ್ನು ಬಣ್ಣದಿಂದ ಬರೆಯಬೇಕು. ಇಂತಹ ಧ್ವಜವುಳ್ಳ ದಂಡವನ್ನು ಆಯಾ ಆಲಯದಲ್ಲಿಡಬೇಕು.

೩೭. ಗರುಡನು ವಿಷ್ಣುವಿನಧ್ವಜವು. ವೃಷಭವು ಈಶ್ವರನ ಧ್ವಜವು. ಬ್ರಹ್ಮನಿಗೆ ಕಮಲಧ್ವಜವನ್ನು ಮಾಡಬೇಕು. ಸೂರ್ಯನಿಗೆ ಧರ್ಮವು ಧ್ವಜವೆಂದು ತಿಳಿಯಬೇಕು.

೩೮. ಬಲದೇವನಿಗೆ ತಾಲ (ತಾಳೆಮರ) ಧ್ವಜ. ಕಾಮನಿಗೆ ಮಕರವು ಧ್ವಜ.

ಸಿಂಹೋ ಧ್ವಜಸ್ತು ದುರ್ಗಾಯಾಃ ಕೀರ್ತಿತೋ ಯದುನಂದನ ।
ಗೋಧಾ ಚಾಪಿ ಉಮಾದೇವ್ಯಾ ರೈವತಸ್ಯ ಹಯಃ ಸ್ಮೃತಃ ॥ ೩೯ ॥

ಕಚ್ಛಪೋ ವರುಣಸ್ಯೋಕ್ತೋ ವಾತಸ್ಯ ಹರಿಣೋ ಮತಃ ।
ಪಾವಕಸ್ಯ ಯಥಾ ಮೇಷ ಆಖುರ್ಗಣಪತೇರ್ಮತಃ ॥ ೪೦ ॥

ಬ್ರಹ್ಮರ್ಷೀಣಾಂ ಕುಶಃ ಪ್ರೋಕ್ತ ಇತ್ಯೇಷಾ ಧ್ವಜಕಲ್ಪನಾ ।
ಯಸ್ಯ ಯದ್ವಾಹನಂ ಪ್ರೋಕ್ತಂ ತತ್ತಸ್ಯ ಧ್ವಜ ಉಚ್ಯತೇ ॥ ೪೧ ॥

ವಿಷ್ಣೋರ್ಧ್ವಜೇ ತು ಸೌವರ್ಣಂ ದಂಡಂ ಕುರ್ಯಾದ್ವಿಚಕ್ಷಣಃ ।
ಪತಾಕಾ ಚಾಪಿ ಪೀತಾ ಸ್ಯಾದ್ಗರುಡಸ್ಯ ಸಮೀಪಗಾ ॥ ೪೨ ॥

ಈಶ್ವರಸ್ಯ ಧ್ವಜೇ ದಂಡೋ ರಾಜತೋ ಯದುನಂದನ ।
ಪತಾಕಾ ಚಾಪಿ ಶುಕ್ಲಾ ಸ್ಯಾದ್ವೃಷಭಸ್ಯ ಸಮೀಪಗಾ ॥ ೪೩ ॥

---

೩೯. ದುರ್ಗಾದೇವಿಗೆ ಸಿಂಹವು ಧ್ವಜ. ಉಮಾದೇವಿಗೆ ಉಡವು ಧ್ವಜ. ರೈವತನಿಗೆ ಅಶ್ವವು ಧ್ವಜವೆಂದು ಹೇಳಿದೆ.

೪೦. ಕಚ್ಛಪವು (ಆಮೆಯು) ವರುಣನಿಗೂ, ಹರಿಣವು ವಾಯುವಿಗೂ, ಟಗರು ಅಗ್ನಿಗೂ, ಇಲಿಯು ಗಣಪತಿಗೂ, ಕುಶವು ಬ್ರಹ್ಮರ್ಷಿಗಳಿಗೂ ಧ್ವಜವೆಂದು ಹೀಗೆ ಧ್ವಜಗಳನ್ನು ನಿರ್ಣಯಮಾಡಿದೆ.

೪೧. ಯಾರಿಗೆ ಯಾವುದು ವಾಹನವೋ ಅದು ಅವರಿಗೆ ಧ್ವಜವಾಗಿರುವುದೆಂದು ಹೇಳಬಹುದು. ಬುದ್ಧಿಶಾಲಿಯು ವಿಷ್ಣುಧ್ವಜಕ್ಕೆ ಸುವರ್ಣದಂಡವನ್ನು ಮಾಡಬೇಕು.

೪೨. ಅದರ ಬಾವುಟವೂ ಹಳದೀ ಬಟ್ಟೆಯಾಗಿರಬೇಕು. ಸಮೀಪದಲ್ಲಿ ಗರುಡನನ್ನು ಚಿತ್ರಿಸಬೇಕು.

೪೩. ಎಲೈ ಯದುನಂದನನೇ! ಈಶ್ವರನ ಧ್ವಜದಂಡವು ಬೆಳ್ಳಿಯದಾಗಿರಬೇಕು. ಬಾವುಟವೂ ಬೆಳ್ಳಗಿರಬೇಕು. ವೃಷಭದ ಚಿತ್ರವು ಸಮೀಪದಲ್ಲಿರಬೇಕು.

ಪಿತಾಮಹಧ್ವಜೇ ದಂಡಃ ಸ್ಮೃತಸ್ತಾಮ್ರಮಯೋ ಬುಧೈಃ ।
ಪದ್ಮವರ್ಣಾ ಪತಾಕಾ ಸ್ಯಾತ್ಪಂಕಜಸ್ಯ ಸಮೀಪಗಾ ॥ ೪೪ ॥

ಆದಿತ್ಯಸ್ಯ ಚ ಸೌವರ್ಣೋ ಧ್ವಜೇ ದಂಡಃ ಪ್ರಕೀರ್ತಿತಃ ।
ಪಂಚವರ್ಣಾ ಪತಾಕಾಸ್ಯಾದ್ಧರ್ಮಸ್ಯಾಧೋಗತಾ ನೃಪ ॥ ೪೫ ॥

ಕಿಂಕಿಣೀಜಾಲಸಂಪನ್ನಾ ನಾನಾಬುದ್ಬುದಸನ್ನಿಭಾ ।
ಪುಷ್ಪಮಾಲೋಪಸಂಪನ್ನಾ ನಾನಾವಾದಿಭಿರಾವೃತಾ ॥ ೪೬ ॥

ದಂಡ ಇಂದ್ರಧ್ವಜಸ್ಯೋಕ್ತಃ ಕಾಂಚನೋ ಯದುನಂದನ ।
ಪತಾಕಾ ಬಹುವರ್ಣಾಸ್ಯಾತ್ಕುಂಜರಸ್ಯ ಸಮೀಪಗಾ ॥ ೪೭ ॥

ಆಯಸಶ್ಚಾಪಿ ದಂಡೋಕ್ತೋ ಯಮಚಿಹ್ನಂ ವಿಚಕ್ಷಣೈಃ ।
ಪತಾಕಾ ವರ್ಣತಃ ಕೃಷ್ಣ ಮಹಿಷಸ್ಯ ಸಮೀಪಗಾ ॥ ೪೮ ॥

---

೪೪. ಬ್ರಹ್ಮಧ್ವಜಕ್ಕೆ ತಾಮ್ರದ ದಂಡವಿರಬೇಕು. ಪದ್ಮವರ್ಣದ ಪತಾಕೆಯಿರಬೇಕು. ಸಮೀಪದಲ್ಲಿ ಪಂಕಜವನ್ನು ಚಿತ್ರಿಸಿರಬೇಕು.

೪೫. ಆದಿತ್ಯಧ್ವಜಕ್ಕೆ ಸುವರ್ಣದಂಡವಿರಬೇಕು. ಧರ್ಮದೇವತಾ ಚಿತ್ರದ ಕೆಳಗಡೆ ಐದು ಬಣ್ಣಗಳುಳ್ಳ ಬಟ್ಟೆಯ ಪತಾಕೆ ಇರಬೇಕು.

೪೬. ನಾನಾ ಬಗೆಯ ಶಬ್ದಮಾಡುವ ಅನೇಕ ಸೀರ್ಗುಳ್ಳೆಗಳ ಸಮಾನವಾಗಿ, ಕಿರುಗಂಟೆಗಳ ಗುಂಪುಗಳಿಂದಲೂ ಹೂಮಾಲೆಗಳಿಂದಲೂ ಕೂಡಿರಬೇಕು.

೪೭. ಎಲೈ ಯದುನಂದನನೇ ! ಇಂದ್ರಧ್ವಜಕ್ಕೆ ಕಾಂಚನದಂಡವು ಇರಬೇಕೆಂದು ಹೇಳಿದೆ. ಐರಾವತ ಎಂಬ ಆನೆಯು ಸಮೀಪದಲ್ಲಿರುವಂತೆ ಚಿತ್ರಿತವಾದ ಪತಾಕೆಯು ಬಹು ವರ್ಣವುಳ್ಳದ್ದಾಗಿ ಇರಬೇಕು.

೪೮. ಬುದ್ಧಿವಂತರು ಯಮ ಧ್ವಜಕ್ಕೆ ಕಬ್ಬಿಣದ ದಂಡವು ಇರಬೇಕೆಂದು ಹೇಳುತ್ತಾರೆ ಕೋಣನ ಚಿತ್ರವು ಸಮೀಪದಲ್ಲಿರುವಂತೆ ಬರೆದ ಬಾವುಟವು ಕಪ್ಪು ಬಣ್ಣವಾಗಿರಬೇಕೆಂದು ಹೇಳಿದೆ.

ಜಲಾಧಿಪಧ್ವಜೋ ದಂಡೋ ರಾಜಿತಃ ಪರಿಕೀರ್ತಿತಃ ।
ಪತಾಕಾ ಸರ್ವತಃ ಶ್ವೇತಾ ವಿಚಿತ್ರಾ ಸಾ ಚ ಕಥ್ಯತೇ ॥ ೪೯ ॥

ಧ್ವಜೇ ಚಾಪಿ ಕುಬೇರಸ್ಯ ದಂಡೋ ಮಣಿಮಯಃ ಸ್ಮೃತಃ ।
ಪತಾಕಾ ಚಾಪಿ ರಕ್ತಾಸ್ಯಾನ್ನರಪಾದ ಸಮೀಪಗಾ ॥ ೫೦ ॥

ಬಲೀದೇವಧ್ವಜೇ ದಂಡೋ ರಾಜತೋ ಮಧುಸೂದನ ।
ಪತಾಕಾ ವರ್ಣತಃ ಶುಕ್ಲಾ ಕಾಲಸ್ಯಾಧೋಗತಾ ಸ್ಮೃತಾ ॥ ೫೧ ॥

ಕಾಮಧ್ವಜೇ ತ್ರಿಲೋಹಃಸ್ಯಾದ್ದಂಡೋ ಯದುಕುಲೋದ್ವಹ ।
ಪತಾಕಾ ರೋಹಿಣೀ ತತ್ರ ಮಕರಸ್ಯ ಸಮೀಪಗಾ ॥ ೫೨ ॥

ಮಯೂರಂ ಕಾರ್ತಿಕೇಯಸ್ಯ ಚಿಹ್ನಂ ಲೋಕೇಷು ಗೀಯತೇ ।
ತ್ರಿಲೋಹದಂಡಮಾರೂಢಂ ಬಹುರತ್ನವಿಭೂಷಿತಂ ॥ ೫೩ ॥

---

೪೯. ವರುಣನ ಧ್ವಜದಂಡವು ಬೆಳ್ಳಿಯದೆಂದು ಹೇಳಿದೆ. ಬಾವುಟದ ಬಟ್ಟೆಯು ಎಲ್ಲಾ ಕಡೆಯಲ್ಲೂ ಬೆಳ್ಳಗಿರಬೇಕು. ವಿಚಿತ್ರ ಆಕೃತಿ ಇರಬೇಕು.

೫೦. ಕುಬೇರನ ಧ್ವಜಕ್ಕೆ ಮಣಿಮಯಧ್ವಜದಂಡವೆಂದು ಹೇಳಿದೆ. ಬಾವುಟವ ಬಟ್ಟೆಯು ಕೆಂಪಗಿರಬೇಕು. ಅದರ ಸಮೀಪದಲ್ಲಿ ನರನ ಪಾದವಿರಬೇಕು.

೫೧. ಬಲದೇವನ ಧ್ವಜವಲ್ಲಿ ಬೆಳ್ಳಿಯದಂಡವಿರಬೇಕು. ಬಾವುಟದ ಬಟ್ಟೆಯು ಬಿಳಿಯದು. ತಾಳೆಮರದ ಚಿತ್ರವು ಕೆಳಗಡೆ ಇರಬೇಕು.

೫೨. ಕಾಮನ ಧ್ವಜದಂಡವು ಮೂರುಲೋಹಗಳಿಂದ ಮಾಡಿದ್ದಾಗಿ ಇರಬೇಕು. ಮಕರ (ಮೊಸಳೆ) ಚಿತ್ರವು ಸಮೀಪದಲ್ಲಿದ್ದು ರೋಹಿಣೀನಕ್ಷತ್ರದ ಬಣ್ಣದ ಪತಾಕೆ ಇರಬೇಕು.

೫೩. ಷಣ್ಮುಖನಿಗೆ ಮಯೂರಧ್ವಜವೆಂದು ಲೋಕಪ್ರಸಿದ್ಧ. ಇದಕ್ಕೆ ಅನೇಕ ರತ್ನಗಳಿಂದ ಅಲಂಕೃತವಾದ ತ್ರಿಲೋಹದಂಡವು ಇರಬೇಕು.

**ಬಹುವರ್ಣಕ ಚಿತ್ರಾ ತು ಪತಾಕಾ ಕಥಿತಾ ಬುಧೈಃ ।**
**ಹಸ್ತಿದಂಡಭವಂ ದಡಂ ಕುರ್ಯಾದ್ಗಣಪತೇರ್ನೃಪ ॥ ೫೪ ॥**

**ತಾಮ್ರದಂಡಂ ಸಮಾರೂಢಂ ಸಂಶುದ್ಧಂ ಸಂಪ್ರತಿಷ್ಠಿತಂ ।**
**ಶುಕ್ಲಾ ಪತಾಕಾ ಕರ್ತವ್ಯಾ ಸುಪ್ರಮಾಣಾ ಮಹೀಪತೇ ॥ ೫೫ ॥**

**ಮಾತೃಣಾಂ ಚಾಪಿ ಕರ್ತವ್ಯೋ ನೈಕರೂಪಧ್ವಜೋ ಬುಧೈಃ ।**
**ಪತಾಕಾಭಿರನೇಕಾಭಿರ್ಬಹುರತ್ನಾಭಿರನ್ವಿತಃ ॥ ೫೬ ॥**

**ರೇವತಸ್ಯಾಪಿ ಕರ್ತವ್ಯೋ ಧ್ವಜೋ ವಾಜೀ ನರಾಧಿಪ ।**
**ರಕ್ತಾ ಪತಾಕಾ ತತ್ರಾಪಿ ಕರ್ತವ್ಯಾ ಯದುನಂದನ ॥ ೫೭ ॥**

**ಚಾಮುಂಡಾಮಂದಿರೇ ಕಾರ್ಯಃ ಶಿರೋಮಾಲಾಕುಲೋ ಧ್ವಜಃ ।**
**ನೀಲಾ ಪತಾಕಾ ಕರ್ತವ್ಯಾ ದಂಡೋ ಲೋಹಮಯಸ್ತಥಾ ॥ ೫೮ ॥**

---

೫೪. ಎಲೈ ರಾಜನೇ ! ಗಣಪತಿಧ್ವಜಕ್ಕೆ ಆನೆಯಕೊಂಬಿನಿಂದ ಮಾಡಿದ ದಂಡ ವಿರಬೇಕು ನಾನಾಬಣ್ಣಗಳುಳ್ಳ ಬಟ್ಟೆಯ ಧ್ವಜದಲ್ಲಿ ಇಲಿಯನ್ನು ಚಿತ್ರಿಸಿರಬೇಕು.

೫೫. ಧ್ವಜವು ಸಾಮಾನ್ಯವಾಗಿ ತಾಮ್ರದ ದಂಡಕ್ಕೆ ಏರಿಸಲ್ಪಟ್ಟು ಶುದ್ಧ ವಾಗಿಯೂ ಶಾಸ್ತ್ರೋಕ್ತರೀತಿ ಪ್ರತಿಷ್ಠಿತವಾಗಿಯೂ ಪ್ರಮಾಣಾನುಸಾರವಾಗಿಯೂ ಇರಬೇಕು. ದಂಡದ ಅಳತೆಗೆ ತಕ್ಕಹಾಗೆ ಬಿಳಿಯ ಬಾವುಟವನ್ನು ಮಾಡಬೇಕು.

೫೬. ಸಪ್ತಮಾತೃಕೆಗಳಿಗೆ ಅನೇಕ ರೂಪಗಳುಳ್ಳ ಧ್ವಜದಂಡವನ್ನು ಮಾಡ ಬೇಕು. ಅದು ಅನೇಕವಿಧಗಳಾದ ಬಹುರತ್ನಗಳುಳ್ಳ ಬಾವುಟಗಳಿಂದ ಕೂಡಿದು ದಾಗಿರಬೇಕು.

೫೭. ಎಲೈ ಯದುನಂದನನಾದ ರಾಜನೇ ! ರೇವಂತನಿಗೆ ರಕ್ತವರ್ಣವಾದ ಬಾವುಟದಲ್ಲಿ ಅಶ್ವಚಿತ್ರವನ್ನೇರ್ಪಡಿಸಬೇಕು.

೫೮. ಚಾಮುಂಡಾದೇವಾಲಯದಲ್ಲಿ ತಲೆಬುರುಡೆಗಳ ಸಾಲಿನಿಂದ (ರುಂಡ ಮಾಲೆಗಳಚಿತ್ರದಿಂದ) ವ್ಯಾಪ್ತವಾದ ಧ್ವಜವಿರಬೇಕು. ಕರಿಯಬಾವುಟವನ್ನು ಲೋಹಮಯವಾದ ದಂಡದಲ್ಲಿ ಏರಿಸಿರಬೇಕು.

ರೀತೀಮಯಶ್ಚ ಮಾತೃಣಾಂ ರೇವತಸ್ಯ ಚ ಕಾರಯೇತ್ ।
ಗೌರ್ಯಾಧ್ವಜಸ್ತಾಮ್ರಮಯಃ ಪತಾಕಾ ಗೋಪಸನ್ನಿಭಾ ॥ ೫೯ ॥

ಸ್ವರ್ಣದಂಡಸ್ತು ವೀರಸ್ಯ ಧ್ವಜೋ ಮೇಷಸಮನ್ವಿತಃ ।
ಪತಾಕಾ ಬಹುರತ್ನಾಢ್ಯಾ ಕರ್ತವ್ಯಾ ಯದುನಂದನ ॥ ೬೦ ॥

ಅಶ್ಮಸಾರಮಯೋ ದಂಡೋ ಧ್ವಜೋ ವಾತಸ್ಯ ಉಚ್ಯತೇ ।
ಪತಾಕಾ ಕೃಷ್ಣವರ್ಣಾ ತು ಹರಿಣಸ್ಯ ಸಮೀಪಗಾ ॥ ೬೧ ॥

ಭಗವತ್ಯಾ.ಧ್ವಜೋದಂಡಃ ಸರ್ವರತ್ನ ಮಯಃಸ್ಮೃತಃ ।
ಪತಾಕಾ ತು ತ್ರಿವರ್ಣಾ ಸ್ಯಾ ತ್ಸಿಂಹಸ್ಯಾಧೋಗತಾ ನೃಪ ॥ ೬೨ ॥

ಏವಂವಿಧಮಿಮಂ ಕೃತ್ವಾ ಧ್ವಜಂ ಲಕ್ಷಣಲಕ್ಷಿತಂ ।
ಅಧಿವಾಸ್ಯ ತತೋ ರಾಜಂಸ್ತತ ಆರೋಪಯೇದ್ಬುಧಃ ॥ ೬೩ ॥

---

೫೯. ಸಪ್ತಮಾತೃಕೆಯರ ದೇವಾಲಯದಲ್ಲಿ ಹಿತ್ತಾಳೆಯ ಧ್ವಜದಂಡವನ್ನೂ ರೇವಂತನಿಗೂ ಹಿತ್ತಾಳೆಯ ದಂಡವನ್ನೂ ಮಾಡಬೇಕು. ಗೌರೀ ದೇವಾಲಯದಲ್ಲಿ ತಾಮ್ರ ಧ್ವಜದಂಡವನ್ನು ಮಾಡಬೇಕು. ಇವೆಲ್ಲಕ್ಕೂ ಬಾವುಟದ ಬಟ್ಟೆಯ ಬಣ್ಣವು ಇಂದ್ರಗೋಪ ಸಮಾನವಾಗಿರಬೇಕು.

೬೦. ವೀರನಿಗೆ (ಎಂದರೆ ಅಗ್ನಿಗೆ) ಸ್ವರ್ಣದಂಡವನ್ನೂ, ಮೇಷ ಚಿತ್ರಯುಕ್ತನಾದ ಧ್ವಜವನ್ನೂ ಮಾಡಬೇಕು. ಎಲೈ ಯದುನಂದನನೇ! ಪತಾಕೆಯನ್ನು ಬಹುರತ್ನಗಳಿಂದ ಕೂಡಿರುವಂತೆ ಮಾಡಬೇಕು.

೬೧. ವಾಯುದೇವನಿಗೆ ಕಬ್ಬಿಣದ ಧ್ವಜದಂಡವನ್ನೂ ಹರಿಣದ ಚಿತ್ರವು ಸಮೀಪದಲ್ಲಿರುವಂತೆ ಕೃಷ್ಣವರ್ಣದ ಪತಾಕೆಯನ್ನೂ ರಚಿಸಬೇಕು.

೬೨. ಭಗವತಿಯಾದ ದುರ್ಗಿಯ ಧ್ವಜದಂಡವು ಸರ್ವರತ್ನಮಯವಾಗಿರಬೇಕು. ಸಿಂಹದ ಚಿತ್ರವು ಕೆಳಭಾಗದಲ್ಲಿ ಲಿಖಿತವಾಗಿ ಮೂರು ಬಣ್ಣಗಳುಳ್ಳ ಬಟ್ಟೆಯ ಬಾವುಟವು ಇರತಕ್ಕದ್ದು

೬೩. ಅಯ್ಯಾ ರಾಜನೇ! ವಿದ್ವಾಂಸರು ಈ ಲಕ್ಷಣಗಳಿಂದ ಕೂಡಿದ ಈ ಪ್ರಕಾರಗಳಾದ ಧ್ವಜಗಳನ್ನುಮಾಡಿ, ಅದನ್ನು ಅಧಿವಾಸನಮಾಡಿ, ಅನಂತರ ಧ್ವಜವನ್ನು ಶಾಸ್ತ್ರವಿಧಿಪ್ರಕಾರ ಆರೋಹಣಮಾಡಬೇಕು. (ಇದು ಸಂಕ್ಷೇಪ ಸೂಚನೆ; ಇದರ ವಿವರವನ್ನು ಈ ಮುಂದೆ ತಿಳಿಸಿದೆ)

ತತಃ ಸರ್ವೌಷಧೀಭಿಶ್ಚ ಸ್ನಾಪಯಿತ್ವಾ ಪ್ರಯತ್ನತಃ ।
ಸಮಾಲಭ್ಯ ಚ ಬಧ್ನೀಯಾನ್ಮಧ್ಯೇ ಪ್ರತಿಸರಾನ್ನೃಪ ॥ ೭೪ ॥

ಕಲ್ಪಯಿತ್ವಾ ಶುಭಾಂ ವೇದಿಂ ಕಲಶೈರುಪಶೋಭಿತಾಂ ।
ತಸ್ಯಾಂ ವೇದ್ಯಾಂ ಸಮಾರೋಪ್ಯ ತಾಂ ರಾತ್ರಿಮಧಿವಾಸಯೇತ್ ॥ ೭೫ ॥

ನಾನಾಕುಸುಮಚಿತ್ರಾಂ ಚ ಸ್ರಜಂ ತಸ್ಯಾನುಲಂಬಯೇತ್ ।
ಸಮಭ್ಯರ್ಚ್ಯ ಪ್ರಯತ್ನೇನ ಧೂಪಮಸ್ಯ ನಿವೇದಯೇತ್ ॥ ೭೬ ॥

ಬಲಿಕರ್ಮ ತತಃ ಕೃತ್ವಾ ಕೃಶರಾಪೂಪಕಾದಿಭಿಃ ।
ಪಲಾಲಪೂಪಕಾಭಿಶ್ಚ ದಧಿಪಾಯಸಸೂಪಕೈಃ ॥ ೭೭ ॥

ಉದ್ದಿಶ್ಯ ಲೋಕಪಾಲಾನ್ ವೈ ವಾಯಸೇಭ್ಯೋ ಬಲಿಂ ದಿಶೇತ್ ।
ಬ್ರಾಹ್ಮಣಾನ್ ಸ್ವಸ್ತಿವಾಚ್ಯಾಥ ಕೃತ್ವಾ ಪುಣ್ಯಾಹಮಂಗಲಂ ॥ ೭೮ ॥

---

೭೪. ಅಯ್ಯಾ ರಾಜನೇ! ಸರ್ವೌಷಧಿರಸಗಳನ್ನೂ ಸವರಿ (ಬಳಿದು) ಸ್ನಾನಮಾಡಿಸಿ (ತೊಳೆದು) ಆ ಧ್ವಜಸ್ತಂಭದ ಮಧ್ಯೇ ಕಂಕಣಸೂತ್ರವನ್ನು ಕಟ್ಟಬೇಕು.

೭೫. ಮಂಗಳಕರವಾದ ವೇದಿಕೆಯನ್ನು (ಜಗಲಿ) ರಚಿಸಿ ಅದರ ಸುತ್ತಲೂ ಕಲಶಗಳನ್ನಿಟ್ಟು ಶೋಭಿಸುವಂತೆ ಮಾಡಿ, ಆ ವೇದಿಯಲ್ಲಿ ಅವನ್ನು (ಪ್ರತಿಮೆಯನ್ನು ಅಥವಾ ಧ್ವಜವನ್ನು) ಆರೋಪಣಮಾಡಿ ಆ ರಾತ್ರಿ ಅಲ್ಲಿ ಅಧಿವಾಸಮಾಡಬೇಕು.

೭೬. ಅನೇಕ ಪುಷ್ಪಗಳಿಂದ ವಿಚಿತ್ರವಾಗಿ ರಚಿಸಿದ ಮಾಲಿಕೆಯನ್ನು ಅದರ ಸುತ್ತಲೂ ಅಂದವಾಗಿ ತೂಗಾಡುವಂತೆ ಕಟ್ಟಬೇಕು. ಪ್ರಯತ್ನಪೂರ್ವಕವಾಗಿ ಚೆನ್ನಾಗಿ ಪೂಜಿಸಿ ಧೂಪವನ್ನು ಸಮರ್ಪಿಸಬೇಕು.

೭೭. ಅನಂತರ ಚಿಗುಳಿ ಭಕ್ಷ್ಯ ಮುಂತಾದ್ದನ್ನು ಬಲಿಪ್ರದಾನಮಾಡಿ ಪಲಾಲಪೂಪಿಕಾ (ಎಂದರೆ:—ಜಳ್ಳಿನಂತೆ ಅಂತಸ್ಸಾರ ಶೂನ್ಯವಾದ ಕರ್ಜಿಗೆಕಾಯಿ ಯಂತಹ ಭಕ್ಷ್ಯ) ಮೊಸರು, ತೊವ್ವೆ, ಪಾಯಸ ಇವುಗಳಿಂದ ಲೋಕಪಾಲಕರನ್ನು ಉದ್ದೇಶಿಸಿ ಬಲಿಸಮರ್ಪಣೆಮಾಡಿ ಕಾಗೆಗಳು ತಿನ್ನುವಂತೆ ಮಾಡಬೇಕು.

೭೮. ಬ್ರಾಹ್ಮಣ ಮುಖೇನ ಸ್ವಸ್ತಿವಾಚನ ಮಾಡಿಸಿ ಪುಣ್ಯಾಹಮಂಗಳವನ್ನು ಮಾಡಿಸಬೇಕು.

ವಾದಿತ್ರಕೃತನಿರ್ಘೋಷಂ ಜನಫೂತ್ಕಾರಸಂಕುಲಂ ।
ನಾನಾಬುದ್ಬುದಸಂಪನ್ನಂ ವೇಷ್ಟಿತಂ ನವವಾಸಸಾ ॥ ೬೯ ॥

ಶುಭೇ ಲಗ್ನೇ ದಿನೇ ಋಕ್ಷೇ ಧ್ವಜಂಚಾರೋಪಯೇದ್ಬುಧಃ ।
ವಿನ್ಯಸ್ಯ ಸ್ವರ್ಣಕಲಶಂ ಶ್ವಭ್ರರಾಜಂ ಧ್ವಜಸ್ಯ ತು ॥ ೭೦ ॥

ಏವಮಾರೋಪಯೇದ್ಯಸ್ತು ಧ್ವಜಂ ದೇವಾಲಯೋಪರಿ ।
ಸ ಶ್ರಿಯಾ ವರ್ಧತೇ ನಿತ್ಯಂ ಪ್ರಾಪ್ನೋತಿ ಪರಮಾಂ ಗತಿಂ ॥ ೭೧ ॥

ಅಸುರಾ ವಾಸಮಿಚ್ಛಂತಿ ಧ್ವಜಹೀನೇ ಸುರಾಲಯೇ ।
ತಸ್ಮಾದ್ದೇವಾಲಯಂ ಪ್ರಾಜ್ಞೋ ಧ್ವಜಹೀನಂ ನ ಕಾರಯೇತ್ ॥ ೭೨ ॥

ಮಂತ್ರಶ್ಚ ಸ್ಥಾಪನೇ ಪ್ರೋಕ್ತೋ ವಿಧಾನಜ್ಞೈ ರ್ಧ್ವಜಸ್ಯ ತು ।
ಏಹ್ಯೇಹಿ ಭಗವನ್ ದೇವ ದೇವವಾಹನ ವೈ ಖಗ ॥ ೭೩ ॥

---

೬೯. ವಾದ್ಯಗಳು ಘೋರ್ಗರೆಯುತ್ತ ಎಲ್ಲೆಲ್ಲಿಯೂ ಜನರ ಫೂತ್ಕಾರ ಶಬ್ದದಿಂದ ಕೂಡಿರಲು, ನಾನಾ ಬಗೆಯ ಬುದ್ಬುದ (ನೀರ್ಗುಳ್ಳೆ) ಸದೃಶವಾದ ಉಬ್ಬುಗಳಿಂದ ಕೂಡಿರುವಂತೆ ಹೊಸ ವಸ್ತ್ರವನ್ನು ಸುತ್ತಬೇಕು.

೭೦. ಹೀಗೆ ಸಿದ್ಧಮಾಡಿದ ಧ್ವಜಸ್ತಂಭವನ್ನು ಶುಭಕರವಾದ ನಕ್ಷತ್ರ, ತಿಥಿ, ಲಗ್ನ, ಮೊದಲಾದ್ದನ್ನು ನೋಡಿ ಧ್ವಜದಂಡವನ್ನು ನಿಲ್ಲಿಸುವುದಕ್ಕಾಗಿ ಆಳವಾದ ಗುಳಿಯನ್ನು ಮಾಡಿ, ದಂಡದ ತುದಿಗೆ ಸುವರ್ಣಕಲಶವನ್ನು ಜೋಡಿಸಿ, ಸ್ತಂಭವನ್ನು ಎತ್ತಿ ನಿಲ್ಲಿಸಬೇಕು.

೭೧. ಯಾವನು ಈ ರೀತಿ ದೇವಾಲಯದಲ್ಲಿ ಧ್ವಜಾರೋಪಣ ಮಾಡುವನೋ, ಅವನು ನಿತ್ಯವೂ ಸಂಪತ್ತಿನಿಂದ ವೃದ್ಧಿಹೊಂದುತ್ತಾನೆ. ಅಲ್ಲದೆ ಉತ್ತಮ ಗತಿಯನ್ನೂ ಹೊಂದುತ್ತಾನೆ.

೭೨. ಧ್ವಜವಿಲ್ಲದ ದೇವಾಲಯದಲ್ಲಿ ರಾಕ್ಷಸರು ಬಂದು ನೆಲಸಿಬಿಡುತ್ತಾರೆ. ಆದುದರಿಂದ ಪ್ರಾಜ್ಞನು ದೇವಾಲಯವನ್ನು ಕಟ್ಟಿಸಿ ಧ್ವಜವನ್ನು ಸ್ಥಾಪಿಸದೆ ಹಾಗೆಯೇ ಬಿಡಬಾರದು.

೭೩. ವಿಧಾನವನ್ನು ಬಲ್ಲವರು ಧ್ವಜವನ್ನು ಸ್ಥಾಪಿಸುವಾಗ ಈ ಮಂತ್ರವನ್ನು ಹೇಳಬೇಕು.

ಶ್ರೀಕರಃ ಶ್ರೀನಿವಾಸಶ್ಚ ಜಯಜೈತ್ರೋಪಶೋಭಿತ ।
ವ್ಯೋಮರೂಪ ಮಹಾರೂಪ ಧರ್ಮಾತ್ಮಸ್ತ್ವಂ ಚ ವೈ ಗತೇಃ ॥ ೭೪ ॥

ಸಾನ್ನಿಧ್ಯಂ ಕುರು ದಂಡೇऽಸ್ಮಿನ್ ಸಾಕ್ಷೀ ಚ ಧ್ರುವತಾಂ ವ್ರಜ ।
ಕುರು ವೃದ್ಧಿಂ ಸದಾ ಕರ್ತುಃ ಪ್ರಾಸಾದಸ್ಯಾರ್ಕವಲ್ಲಭ ॥ ೭೫ ॥

ಓಂ ಏಹ್ಯೇಹಿ ಭಗವನ್ನೀಶ್ವರ ವಿನಿರ್ಮಿತ ಉಪರಿ ಚರ-
ವಾಯುಮಾರ್ಗಾನುಸಾರಿನ್ ಶ್ರೀನಿವಾಸ ರಿಪುಧ್ವಂಸ-
ಯಕ್ಷನಿಲಯ ಸರ್ವದೇವಪ್ರಿಯ ಕುರುಸಾನ್ನಿಧ್ಯಂ-
ಶಾಂತಿಸ್ವಸ್ತ್ಯಯನಂ ಚ ಮೇऽಭಯಂ ಸರ್ವವಿಘ್ನಾ-
ನ್ಯಪಸರಂತು ॥ ೭೬ ॥

ಮಂತ್ರೇಣಾನೇನ ರಾಜೇಂದ್ರ ಶ್ವಭ್ರೇ ದಂಡಂ ನಿವೇಶಯೇತ್ ।
ಪತಾಕಾಂ ಪೂರ್ವಮಂತ್ರೇಣ ಸ್ಥಿತ್ವಾ ಪೂರ್ವಮುಖೋ ನೃಪ ॥ ೭೭ ॥

---

೭೪=೭೫. ದೇವರಿಗೆ ವಾಹನನಾಗಿರುವ ಎಲೈ ಪಕ್ಷಿದೇವನೇ ಬಾ ! ಶ್ರೀಕರನೂ, ಶ್ರೀನಿವಾಸನೂ, ಜಯಜೈತ್ರಗಳಿಂದ ಶೋಭಿತನೂ, ಆಕಾಶರೂಪನೂ, ಮಹಾರೂಪನೂ, ಆದ ಧರ್ಮಾತ್ಮನೇ! ನೀನು ಆಗಮಿಸಿ ಈ ದಂಡದಲ್ಲಿ ಸಾನ್ನಿಧ್ಯ ವನ್ನು ಮಾಡು; ಮತ್ತು ಸಾಕ್ಷಿಯಾಗಿದ್ದುಕೊಂಡು ಧ್ರುವತ್ವವನ್ನು ಹೊಂದು ಎಲೈ! ಸೂರ್ಯಪ್ರಿಯನಾದ ಪಕ್ಷಿರಾಜನೇ! ಈ ಪ್ರಾಸಾದವನ್ನು ಸ್ಥಾಪಿಸಿದವನಿಗೆ ಸದಾ ವೃದ್ಧಿಯನ್ನುಂಟುಮಾಡು !

೭೬. ಎಲೈ ರಾಜೇಂದ್ರನೇ! ಪೂರ್ವಾಭಿಮುಖವಾಗಿ ನಿಂತುಕೊಂಡು "ಓಂ ಏಹಿ, ಏಹಿ, ಭಗವನ್, ಈಶ್ವರ ನಿರ್ಮಿತ ಉಪರಿಚರ, ವಾಯುಮಾರ್ಗಾನು ಸಾರೀ, ಶ್ರೀನಿವಾಸ, ಶತ್ರುಧ್ವಂಸಕ, ಯಕ್ಷನಿಲಯ, ಸರ್ವದೇವಪ್ರಿಯ, ಸಾನ್ನಿಧ್ಯಂ ಕುರು, ಮೇ ಶಾಂತಿಂ ಸ್ವಸ್ತ್ಯಯನಂ ಚ ಮೇऽಭಯಂ ಕುರು, ಮೇ ಸರ್ವ ವಿಘ್ನಾನಿ ವ್ಯಪಸರಂತು" ಈ ಮಂತ್ರವನ್ನು ಹೇಳಿ ತೋಡಿದ್ದ ಗುಳಿಯಲ್ಲಿ ಧ್ವಜಸ್ತಂಭ ವನ್ನು ನಿಲ್ಲಿಸಬೇಕು, ಸ್ವಾಮಿಯ ಪ್ರಾಸಾದದ ಶಿಖರದಿಂದ ಮೇಲಕ್ಕೆ ಇರುವ ಆಕಾಶಕ್ಕೆ ಪತಾಕೆಯನ್ನು ಹಾರಿಸಬೇಕು.

ಕ್ಷಿಪೇದೂರ್ಧ್ವಮಥಾಕಾಶಂ ಪ್ರಾಸಾದಶಿಖರಾದ್ವಿಭೋಃ ।
ಯಜಮಾನಸ್ತತಃ ಪಶ್ಯೇತ್ಪತಾಕಾಂ ಯದುನಂದನ ॥ ೭೮ ॥

ಪ್ರಾಸಾದಪುರತೋ ವೀರ ಪತಾಕಾ ಪಾತಯೇದ್ಯದಿ ।
ಇಂದ್ರಲೋಕಂ ತದಾ ಕರ್ತಾ ವಿಶೇದ್ವೈ ಯದುನಂದನ ॥ ೭೯ ॥

ಆಗ್ನೇಯ್ಯಾಮಗ್ನಿಲೋಕಂ ತು ಯಾಮ್ಯಾಂ ಯಮಸದೋ ಭಜೇತ್ ।
ನೈಋತ್ಯಾಂ ನೈಋತಂ ಲೋಕಂ ವಾರುಣ್ಯಾಃ ವಾರುಣಂ ವ್ರಜೇತ್ ॥ ೮೦ ॥

ಯಸ್ಯ ದೇವಸ್ಯ ಯದ್ವೇಶ್ಮ ಕೃತಂ ಯದುಕುಲೋದ್ವಹ ।
ತಸ್ಯ ಲೋಕಮವಾಪ್ನೋತಿ ವೃಷಸ್ಥಾನಗತೋ ಯದಿ ॥ ೮೧ ॥

ವಾಯವ್ಯೇ ವಾಯುಮಾಪ್ನೋತಿ ಸೌಮ್ಯಾಯಾಂ ಸೋಮ-
ಮಾಪ್ನುಯಾತ್ ॥ ಐಶಾನ್ಯಾಮೀಶಮಾಪ್ನೋತಿ ಕರ್ತಾ ವೈ -
ದೇವವೇಶ್ಮನಃ ॥ ೮೨ ॥

---

೭೮. ಎಲೈ, ಯದುನಂದನನೇ! ಯಜಮಾನನು ಆಮೇಲೆ ಪತಾಕೆಯನ್ನು ನೋಡಬೇಕು. ಅಯ್ಯಾ ವೀರನೇ! ಪ್ರಾಸಾದದ ಮುಂಭಾಗದಲ್ಲಿ ಪತಾಕೆಯು ಬಿದ್ದರೆ ಆಗ ಕರ್ತನು ಇಂದ್ರಲೋಕಪ್ರವೇಶ ಮಾಡುವನು.

೭೯. ಅಯ್ಯಾ ಯದುನಂದನಾ! ಪ್ರಾಸಾದದ ದಕ್ಷಿಣ ದಿಕ್ಕಿನಲ್ಲಿ ಪತಾಕೆ ಬಿದ್ದರೆ ಯಮನ ಸಭೆಗೆ ಹೋಗುವನು.

೮೦. ಆಗ್ನೇಯ ದಿಕ್ಕಿನಲ್ಲಿ ಪತಾಕೆಯು ಬಿದ್ದರೆ ಅಗ್ನಿಲೋಕಕ್ಕೆ ಹೋಗುವನು. ನೈಋತ್ಯದಿಕ್ಕಿನಲ್ಲಿ ಬಿದ್ದರೆ ನಿಋಋತಿಯ ಲೋಕಕ್ಕೆ ಹೋಗುವನು.

೮೧. ಪಶ್ಚಿಮದಿಕ್ಕಿನಲ್ಲಿ ಬಿದ್ದರೆ ವರುಣ ಲೋಕಕ್ಕೆ ಹೋಗುವನು. ಅಯ್ಯಾ, ಯದುವಂಶಶ್ರೇಷ್ಠನೇ! ಪುಣ್ಯಪ್ರಾಪ್ತಿಯಿದ್ದರೆ ಯಾವ ದೇವರಿಗೆ ಯಾವ ಗೃಹ (ದೇವಾಲಯ) ಮಾಡಲ್ಪಡುವುದೋ ಆ ದೇವನ ಲೋಕಕ್ಕೆ ಹೋಗುತ್ತಾನೆ.

೮೨. ವಾಯವ್ಯ ದಿಕ್ಕಿನಲ್ಲಿ ಬಿದ್ದರೆ ವಾಯುಲೋಕವನ್ನು ಹೊಂದುತ್ತಾನೆ. ಉತ್ತರದಿಕ್ಕಿನಲ್ಲಿ ಬಿದ್ದರೆ ಕುಬೇರಲೋಕವನ್ನು ಹೊಂದುವನು. ಈಶಾನ್ಯದಲ್ಲಿ ಬಿದ್ದರೆ ಈಶ್ವರನ ಕೈಲಾಸವನ್ನು ಹೊಂದುವನು.

**ಯ ಏವಂ ಕಾರಯೇದ್ಭಕ್ತ್ಯಾ ಧ್ವಜಸ್ಯಾರೋಪಣಂ ರವೇಃ ।**
**ಸಹಿ ಭುಕ್ತ್ವಾ ಪರಾನ್ ಭೋಗಾನ್ ಸೂರ್ಯಲೋಕೇ -**
**ಮಹೀಯತೇ** ॥ ೮೩ ॥

**ತೇಜಸಾಬ್ಜಜ ಸಂಕಾಶಃ ಕಾಂತ್ಯಾಚಾಂಬುಜ ಸನ್ನಿಭಃ ।**
**ದ್ವಿಜಾತಿತುಲ್ಯಃ ಪ್ರಭಯಾ ವಿಕ್ರಮೇಣ ಚ ಗೋಪತೇಃ** ॥ ೮೪ ॥

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಾಂಬೋಪಾಖ್ಯಾನೇ ಧ್ವಜಾರೋಹಣ ವಿಧಿವರ್ಣನಂ ನಾಮಾಷ್ಟತ್ರಿಂಶದುತ್ತರ ಶತತಮೋಽಧ್ಯಾಯ.**



೮೩. ಯಾವನು ಹೀಗೆ ಸೂರ್ಯದೇವನಿಗೆ ಶ್ರೇಷ್ಠವಾದ ಧ್ವಜಾರೋಹಣವನ್ನು ಭಕ್ತಿಯಿಂದ ಮಾಡಿಸುವನೋ ಅವನು ಶ್ರೇಷ್ಠಗಳಾದ ಭೋಗಗಳನ್ನು ಅನುಭವಿಸಿ ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ.

೮೪. ಆತನು ತೇಜಸ್ಸಿನಲ್ಲಿ ಬ್ರಹ್ಮಸಮಾನನೂ, ಕಾಂತಿಯಿಂದ ಚಂದ್ರ ಸದೃಶನೂ, ಆಗಿ ಪ್ರಭೆ ಮತ್ತು ಪರಾಕ್ರಮಗಳಲ್ಲಿ ಸೂರ್ಯನಿಗೆ ಸಮಾನನಾಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಾಂಬೋಪಾಖ್ಯಾನದಲ್ಲಿ ಧ್ವಜಾರೋಹಣ ವಿಧಿವರ್ಣನೆಯೆಂಬ ನೂರಮೂವತ್ತೆಂಟನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ನವತ್ರಿಂಶದುತ್ತರಶತತಮೋಽಧ್ಯಾಯಃ

---

॥ ಸಾಂಬ ಉವಾಚ ॥

ತ್ವತ್ಪ್ರಸಾದಾನ್ಮಯಾ ಪ್ರಾಪ್ತಂ ರೂಪಮೇತತ್ಪುರಾತನಂ ।
ಪ್ರತ್ಯಕ್ಷದರ್ಶನಂ ಚಾಪಿ ಭಾಸ್ಕರಸ್ಯ ಮಹಾತ್ಮನಃ ॥ ೧ ॥

ಸರ್ವಮೇತತ್ತು ಸಂಪ್ರಾಪ್ಯ ಪುನಶ್ಚಿಂತಾಕುಲಂ ಮನಃ ।
ದೇವಸ್ಯ ಪರಿಚರ್ಯಾಯಾಃ ಪಾಲನಂ ಕಃ ಕರಿಷ್ಯತಿ ॥ ೨ ॥

ಗುಣಯುಕ್ತಂ ದ್ವಿಜಂ ಕಂಚಿತ್ ಸಮರ್ಥಂ ಪರಿಪಾಲನೇ ।
ಮಯ್ಯೇವಾನುಗ್ರಹಾದ್ಬ್ರಹ್ಮನ್ ದ್ವಿಜಂ ವ್ಯಾಖ್ಯಾತುಮರ್ಹಸಿ ॥ ೩ ॥

---

### ನೂರಮೂವತ್ತೊಂಭತ್ತನೆಯ ಅಧ್ಯಾಯ

೧. ಸಾಂಬನು ಹೇಳುತ್ತಾನೆ—ನಾನು ನಿನ್ನ ಅನುಗ್ರದಿಂದ ನನ್ನ ಪೂರ್ವದ ರೂಪವನ್ನು ಪಡೆದನು ಮಹಾತ್ಮನಾದ ಸೂರ್ಯನನ್ನು ಕಣ್ಣೆದುರಿಗೆ ನೋಡಿದುದಾಯಿತು.

೨. ಇದೆಲ್ಲವನ್ನೂ ಹೊಂದಿಯೂ ದೇವನ ಪೂಜಾಕಾರ್ಯವನ್ನು ಮಾಡುವುದಕ್ಕೆ ಯಾವನನ್ನು ನಿಯಮಿಸುವುದು? ಎಂದು ನನ್ನ ಮನಸ್ಸು ಚಿಂತಾಕುಲವಾಗಿದೆ.

೩. "ಋಷಿವರ್ಯನೇ! ಪೂಜಾಕಾರ್ಯವನ್ನು ಪಾಲನಮಾಡುವುದರಲ್ಲಿ ಶಕ್ತನೂ, ಮತ್ತು ಗುಣಯುಕ್ತನೂ ಆದ ಒಬ್ಬ ಬ್ರಾಹ್ಮಣನನ್ನು ಗೊತ್ತುಮಾಡಿ ಹೇಳಲು ನೀನು ಸಮರ್ಥನಾಗಿದ್ದೀಯೆ" ಎಂದನು.

ಏವಮುಕ್ತಸ್ತು ಸಾಂಬೇನ ನಾರದಃ ಪ್ರತ್ಯುವಾಚ ತಂ ।
ನ ದ್ವಿಜಾಃ ಪ್ರತಿಗೃಹ್ಣಂತಿ ದೇವಸ್ಯ ಸ್ವೀಕೃತಂ ಧನಂ ॥ ೪ ॥

ವಿದ್ಯತೇ ಹಿ ಧನಂ ಹ್ಯತ್ರ ಗುಣಶ್ಚಾಯಂ ಪ್ರತಿಗ್ರಹಃ ।
ದೇವಚರ್ಯಾಗತೈರ್ದ್ರವ್ಯೈಃ ಕ್ರಿಯಾ ಬ್ರಾಹ್ಮೀ ನ ವಿದ್ಯತೇ ॥ ೫ ॥

ಅವಜ್ಞಯಾ ಚ ಕುರ್ವಂತಿ ಯೇ ಕ್ರಿಯಾಂ ಲೋಭಮೋಹಿತಾಃ ।
ಅಪಾಂಕ್ತೇಯಾ ಭವಂತೀಹ ತೇ ವೈ ದೇವಲಕಾ ದ್ವಿಜಾಃ ॥ ೬ ॥

ದೇವಸ್ವಂ ಬ್ರಾಹ್ಮಣಸ್ವಂ ಚ ಯೇ ಲೋಭಾದುಪಜೀವತಿ ।
ಸ ಪಾಪಾತ್ಮಾ ನರೋ ಲೋಕೇ ಗೃಧ್ರೋಚ್ಛಿಷ್ಟೇನ ಜೀವತಿ ॥ ೭ ॥

---

೪. ನಾರದರು ಹೇಳುತ್ತಾರೆ:—ದೇವರಿಗೋಸ್ಕರವೆಂದು ಸ್ವೀಕರಿಸಿದ ಧನವನ್ನು ಬ್ರಾಹ್ಮಣರು ಪ್ರತಿಗ್ರಹಮಾಡುವುದಿಲ್ಲ.

೫. 'ಇಲ್ಲಿ ಧನವಿದೆ ಸ್ವೀಕರಿಸಿ' ಎಂದರೆ ಧನವನ್ನು ಪ್ರತಿಗ್ರಹಮಾಡುವುದು ನ್ಯಾಯ. ದೇವರ ಕಾರ್ಯಕ್ಕಾಗಿ ಬಂದ ವಸ್ತುಗಳಿಂದ ಮಾಡತಕ್ಕ ಕಾರ್ಯವು ಬ್ರಾಹ್ಮಕಾರ್ಯವಾಗುವುದಿಲ್ಲ.

೬. ಹಾಗೂ ಲೋಭಮೋಹಿತರಾದ ಜನರು ಅಲಕ್ಷ್ಯದಿಂದ ಆ ಕೆಲಸ ಮಾಡುತ್ತಾ ಬಂದರೆ ಅವರು ದೇವಲಕರೆಂದು ಪ್ರಸಿದ್ಧರಾಗಿ ಅಪಾಂಕ್ತೇಯರಾಗುವರು.

೭. ಯಾವನು ಲೋಭದಿಂದ ದೇವರ ಸ್ವತ್ತನ್ನಾಗಲೀ, ಬ್ರಾಹ್ಮಣನ ದ್ರವ್ಯವನ್ನಾಗಲೀ, ಇಟ್ಟುಕೊಂಡು ಜೀವಿಸುವನೋ ಅವನು ಪಾಪಸ್ವಭಾವವುಳ್ಳವನಾಗಿ, ಹದ್ದುಗಳು ತಿಂದು ಮಿಕ್ಕಿದ್ದನ್ನು (ಎಂದರೆ ಶವಶೇಷವನ್ನು) ತಿಂದು ಜೀವಿಸಿದಹಾಗೆ. ಆದುದರಿಂದ ಒಬ್ಬ ಬ್ರಾಹ್ಮಣನಾದರೂ ದೇವಾರ್ಚನಕಾರ್ಯವನ್ನು ಸರಿಯಾಗಿ ಮಾಡುವುದಿಲ್ಲ.

ತತೋ ನ ಬ್ರಾಹ್ಮಣಃ ಕಶ್ಚಿತ್ ದೇವಚರ್ಯಾಂ ಕರಿಷ್ಯತಿ ।
ವಿಧಿಜ್ಞಂ ಜ್ಞಾನವಂತಂ ಚ ಪರಿಚರ್ಯಾ ಕ್ಷಮಂ ತಥಾ ॥
ದೇವ ಏವ ಸಮಾಖ್ಯಾತು ತಸ್ಮಾತ್ತಂ ಶರಣಂ ವ್ರಜ ॥ ೮ ॥

ಅಥವಾ ಯದುಶಾರ್ದೂಲ ಉಗ್ರಸೇನಪುರೋಹಿತಂ ।
ಗತ್ವಾ ಗೌರಮುಖಂ ಪೃಚ್ಛ ಸ ತೇ ಕಾಮಂ ವಿಧಾಸ್ಯತಿ ॥ ೯ ॥

ನಾರದೇನೈವಮುಕ್ತಸ್ತು ಸಾಂಬೋ ಜಾಂಬವತೀಸುತಃ ।
ಸುಖಾಸೀನಂ ಗೃಹೇ ವೀರ ಉಗ್ರಸೇನಪುರೋಹಿತಂ ॥ ೧೦ ॥

ಕೃತಪೂರ್ವಾಹ್ನಿಕಂ ವೀರ ವಿಪ್ರಂ ಗೌರಮುಖಂ ನೃಪ ।
ವಿನಯೇನೋಪಸಂಗಮ್ಯ ಸಾಂಬೋ ವಾಕ್ಯಮಥಾಬ್ರವೀತ್ ॥ ೧೧ ॥

ಮಯಾ ಭಾನೋಃ ಪ್ರಸಾದೇನ ಕಾರಿತಂ ವಿಪುಲಂ ಗೃಹಂ ।
ಸಪತ್ನೀಕಂ ಸಸೈನ್ಯಂ ಚ ಪೃಥಿವ್ಯಾಂ ಸಾರವತ್ ಸ್ಥಿತಂ ॥ ೧೨ ॥

---

೮. ವಿಧಿಜ್ಞನೂ, ಜ್ಞಾನವಂತನೂ, ಸೇವಾಕಾರ್ಯಕ್ಕೆ ಯೋಗ್ಯನೂ ಆದ ವಿಪ್ರನು ಯಾರೆಂಬುದನ್ನು ಸ್ವಾಮಿಯೇ ಹೇಳಲಿ; ಆದುದರಿಂದ ಅವನನ್ನೇ ಮರೆ ಹೋಗು!

೯. ಅಥವಾ, ಎಲೈ ಯದುಶ್ರೇಷ್ಠನೇ! ಉಗ್ರಸೇನನ ಪುರೋಹಿತನಾದ ಗೌರಮುಖನ ಸಮೀಪಕ್ಕೆ ಹೋಗಿ ಅವನನ್ನು ಕೇಳು; ಅವನು ನಿನ್ನ ಇಷ್ಟವನ್ನು ನಡೆಯಿಸುತ್ತಾನೆ ಎಂದನು.

೧೦. ನಾರದನು ಹೀಗೆ ಹೇಳುತ್ತಲೆ ಜಾಂಬವತೀಪುತ್ರನಾದ ಸಾಂಬನು ಗೌರಮುಖನೆಂಬ ಬ್ರಾಹ್ಮಣನು ಪ್ರಾತರಾಹ್ನಿಕವನ್ನು ಮಾಡಿಕೊಂಡು ಕುಳಿತಿರುವ ಸಮಯದಲ್ಲಿ

೧೧. ಅವನ ಬಳಿಯನ್ನು ಸೇರಿ (ಸಮೀಪಿಸಿ) ವಿನಯದಿಂದ ಸಾಂಬನು ಅವನೊಡನೆ ಹೀಗೆ ಮಾತನಾಡಿದನು.

೧೨. ನಾನು ಸೂರ್ಯನ ಅನುಗ್ರಹದಿಂದ ಪೃಥಿವಿಯಲ್ಲಿ ವಿಸ್ತಾರವಾದ ದೇವಾಲಯವನ್ನು ಕಟ್ಟಿಸಿದೆನು. ಅದು ಬಹು ಗಟ್ಟಿಯಾಗಿದೆ. ಪತ್ನೀಸಹಿತವಾಗಿಯೂ ಪರಿವಾರಸಹಿತವಾಗಿಯೂ ಇರುವ ಮೂರ್ತಿಮಂಡಲವು ಅಲ್ಲಿ ಸ್ಥಾಪಿತವಾಗಿರುವುದು. ಅದಕ್ಕೆ ಬೇಕಾದ ಶ್ರೇಷ್ಠವಸ್ತುಗಳನ್ನೂ ಒದಗಿಸಿದ್ದೇನೆ.

ಸರ್ವಂ ತಸ್ಮಿನ್ ಮಯಾ ದತ್ತಂ ಕೃತಂ ಮೂರ್ತೇಶ್ಚ ಮಂಡಲಂ ।
ತಸ್ಮಾದಿಷ್ಟ್ವಾ ವಿಶಿಷ್ಟೇಭ್ಯೋ ದೇಯಂ ದಾನಂ ಮನೋಗತಂ ॥ ೧೩ ॥

ತತ್ಸರ್ವಂ ಮಮ ಸಂಪ್ರೀತ್ಯಾ ಗೃಹಾಣ ತ್ವಂ ಮಹಾಮುನೇ ।
ಸಾಂಬವಾಕ್ಯಮಿದಂ ಶ್ರುತ್ವಾ ಪ್ರತ್ಯುವಾಚ ಮಹಾಮುನಿಃ ॥ ೧೪ ॥

॥ ಗೌರಮುಖ ಉವಾಚ ॥

ಬ್ರವೀಮ್ಯಹಮಶೇಷೇಣ ಯಥಾವದನುಪೂರ್ವಶಃ ।
ಅಹಂ ವಿಪ್ರೋ ಭವಾನ್ ರಾಜಾ ಸ ಚ ದೇವಪರಿಗ್ರಹಃ ॥
ಅಪರಸ್ಪರಮೇವಂ ತು ಗ್ರಹಣಂ ಮೇ ವಿರುಧ್ಯತೇ ॥ ೧೫ ॥

ಬ್ರಹ್ಮವಿದ್ಯಾ ಪ್ರಣೀತಾನಿ ಸ್ವಕರ್ಮಾಣಿ ದ್ವಿಜಾತಯಃ ।
ಕುರ್ವಾಣಾ ನ ಪ್ರಹೀಯಂತೇ ಅನ್ಯೇಭ್ಯೋ ಭಿನ್ನವೃತ್ತಯಃ ॥ ೧೬ ॥

---

೧೩. ಅದರಲ್ಲಿ ನಾನು ಎಲ್ಲವನ್ನೂ ಇಟ್ಟಿದ್ದೇನೆ. ಸೂರ್ಯಮೂರ್ತಿಯ ಮಂಡಲ (ಬಿಂಬ)ವನ್ನೂ ಸಿದ್ಧಮಾಡಿದ್ದೇನೆ ಅದನ್ನು ಪ್ರತಿಷ್ಠಿಸಿ ಪೂಜೆಮಾಡಿ, ಯೋಗ್ಯತಾ ವಿಶೇಷವುಳ್ಳವರಿಗೆ ಮನಸ್ಸಿಗೆ ತೋರಿದ ದಾನವನ್ನು ಕೊಡಬೇಕು.

೧೪. ಎಲೈ ಮಹಾಮುನಿಸದೃಶನಾದ ವಿಪ್ರೋತ್ತಮನೇ! ನನ್ನಲ್ಲಿ ಪ್ರೀತಿಯಿಟ್ಟು ನೀನು ಅದೆಲ್ಲವನ್ನೂ ತೆಗೆದುಕೋ" ಎಂದನು. ಸಾಂಬನ ಈ ವಾಕ್ಯವನ್ನು ಕೇಳಿ ಮಹಾಮುನಿಯು ಪ್ರತ್ಯುತ್ತರ ಹೇಳುವನಾಗಿ

೧೫. ಗೌರಮುಖನು ಹೇಳುತ್ತಾನೆ—ಇದರ ವಿಚಾರಲ್ಲವನ್ನೂ ನಾನು ಕ್ರಮವಾಗಿ ಹೇಳುತ್ತೇನೆ. ನಾನು ಬ್ರಾಹ್ಮಣ, ನೀನು ರಾಜ, ಅದು ದೇವರ ಸ್ವತ್ತು ಪರಸ್ಪರ ಒಪ್ಪಿಗೆಯಿಲ್ಲದೆ ಹೀಗೆ ಗ್ರಹಿಸುವುದು ನನಗೆ ವಿರುದ್ಧವಾಗಿ ತೋರುವುದು.

೧೬. ಬ್ರಾಹ್ಮಣರು ವೇದೋಪದಿಷ್ಟಗಳಾದ ಕರ್ಮಗಳನ್ನು ಮಾಡುತ್ತಾ ಇತರರಿಗಿಂತ ಭಿನ್ನವಾದ ವೃತ್ತಿಗಳುಳ್ಳವರಾದರೆ, ಅವರು ಹೀನರಾಗುವುದಿಲ್ಲ.

ಕ್ಷಾಂತಿರಧ್ಯಾಪನಂ ಜಾಪಃ ಸತ್ಯಂ ಚ ಯದುನಂದನ ।
ಏತಾನಿ ವಿಪ್ರಕರ್ಮಾಣಿ ನ ದೇವಾರ್ಥಪರಿಗ್ರಹಃ ॥ ೧೭ ॥

ಯದಿ ದೇವಾರ್ಥದಾನಂ ಸ್ಯಾತ್ ತತೋ ದೇವಲಕಾ ದ್ವಿಜಾಃ ।
ದೇವದ್ರವ್ಯಾಭಿಲಾಷಶ್ಚ ಬ್ರಾಹ್ಮಣ್ಯಂ ತು ವಿಮುಂಚತಿ ॥ ೧೮ ॥

ದೇವದ್ವಾರೇ ಚ ಯದ್ದಾನಂ ಬ್ರಾಹ್ಮಣಾಯ ಪ್ರಯಚ್ಛತಿ ।
ದ್ವಾವೇತೌ ಪಾಪಕರ್ಮಾಣಾವಾತ್ಮದೋಷೇಣ ಮಾನವೌ ॥ ೧೯ ॥

ದೇವಾರ್ಥದಾನಂ ವಾರ್ಷ್ಣೇಯ ಯದ್ಗೃಹೀತ್ವಾ ತು ಯೋ ದ್ವಿಜಃ ।
ಶ್ರಾದ್ಧೇ ವಾ ಯದಿ ವಾ ಸತ್ರೇ ಯಜ್ಞೇ ಜುಹೋತಿ ದದಾತಿ ವಾ ॥ ೨೦ ॥

ಭಿನ್ನವೃತ್ತೋ ದ್ವಿಜಃ ಪಾಪೋ ರಾಕ್ಷಸಃ ಸೋಽಭಿಜಾಯತೇ ।
ದ್ವಿಜೋ ದೇವಲಕೋ ಯತ್ರ ಪಂಕ್ತ್ಯಾಂ ಭುಂಕ್ತೇ ಮಹೀಪತೇ ॥ ೨೧ ॥

---

೧೭. ಕ್ಷಮಾಗುಣಯುಕ್ತತೆ, ವೇದಪಾಠಮಾಡಿಸುವುದು, ಮಂತ್ರಜಪ ಮಾಡುವುದು, ಸತ್ಯವಾದಿಯಾಗಿರುವುದು, ಇವು ಬ್ರಾಹ್ಮಣನ ಕರ್ಮಗಳು; ಅಯ್ಯಾ ಯದುನಂದನನೇ! ದೇವದ್ರವ್ಯಗ್ರಹಣವು ಬ್ರಾಹ್ಮಣನ ಕರ್ಮವಲ್ಲ.

೧೮. ದೇವದ್ರವ್ಯದಾನ ಸ್ವೀಕಾರದಿಂದ ಬ್ರಾಹ್ಮಣರು ದೇವಲಕರಾಗುವುದಕ್ಕೆ ಅವಕಾಶವಿದೆ. ದೇವದ್ರವ್ಯದಲ್ಲಿ ಅಭಿಲಾಷೆಯುಂಟಾದರೆ ಬ್ರಾಹ್ಮಣತ್ವವೇ ಹಾಳಾಗುವುದು.

೧೯. ದೇವಗೃಹದ್ವಾರದಲ್ಲಿ ಬ್ರಾಹ್ಮಣನಿಗೆ ದಾನ ಮಾಡಿದರೆ ದಾತೃ, ಪ್ರತಿಗೃಹೀತೃಗಳಾದ ಇಬ್ಬರು ಮನುಷ್ಯರೂ ತಮ್ಮ ಈ ದೋಷದಿಂದಲೇ ಪಾಪಕಾರಿಗಳಾಗುವರು.

೨೦. ಎಲೈ ವಾರ್ಷ್ಣೇಯನೇ! ಯಾವ ಬ್ರಾಹ್ಮಣನು ದೇವದ್ರವ್ಯ ದಾನವನ್ನು ಸ್ವೀಕರಿಸಿ ಅದನ್ನು ಶ್ರಾದ್ಧದಲ್ಲಿ ಪಾಕಮಾಡುವನೋ, ಅಥವಾ ಯಜ್ಞದಲ್ಲಿ ಹೋಮ ಮಾಡುವನೋ, ಅಥವಾ ಅದನ್ನೇ ದಾನಮಾಡುವನೋ;

೨೧. ಆ ಪಾಪಿಯಾದ ಬ್ರಾಹ್ಮಣನು ತನ್ನ ನಡತೆ ತಪ್ಪಿದುದರಿಂದ ರಾಕ್ಷಸನಾಗುತ್ತಾನೆ. ಎಲೈ ರಾಜನೇ! ದೇವಲಕನಾದ ಬ್ರಾಹ್ಮಣನು ಯಾವ

**ಅನ್ನಾದ್ಯುಪಸ್ಪೃಶೇನ್ನಿತ್ಯಾ ಸಾ ಪಂಕ್ತಿಃ ಪಾಪಮೂಚರೇತ್ ।**
**ದ್ವಿಜೋ ದೇವಲಕೋ ಯಸ್ಯ ಸಂಸ್ಕಾರಂ ಸಂಪ್ರಯಚ್ಛತಿ ॥ ೨೨ ॥**

**ಸೋಽಧೋಮುಖಾನ್ ಪಿತೄನ್ ಸರ್ವಾನಾಕ್ರಮ್ಯ ವಿನಿಪಾತಯೇತ್ ।**
**ಆತ್ಮಾನಂ ಪಾತಯೇದ್ಯಸ್ತು ಸೋಽನ್ಯಾನುದ್ಧರತೇ ಕಥಂ ॥ ೨೩ ॥**

**ಉದ್ಧರಿಷ್ಯತಿ ಚಾತ್ಮಾನಮಿತ್ಯೇಷಾ ಕಲ್ಪನಾಧಮಾ ।**
**ಯೋ ಹಠಾಚ್ಚ ಭಯಾಚ್ಚೈವ ಕುರುತೇ ರವಿವೇಶ್ಮನಃ ।**
**ವೃತ್ತಿಂ ವಿಧತ್ತೇ ವಿಪ್ರತ್ವಾತ್ಪತಿತಸ್ಸ ತು ಜಾಯತೇ ॥ ೨೪ ॥**

**ಸ ಪ್ರತಿಗ್ರಹಮಂತ್ರೇಣ ದ್ವಿಜೋಽಶ್ನಾತಿ ಪರಿಗ್ರಹಂ ।**
**ದೇವಪ್ರತಿಗ್ರಹಾರ್ಥೇಷು ವೇದವಾಕ್ಯಂ ನ ವಿದ್ಯತೇ ॥ ೨೫ ॥**

---

ಪಂಕ್ತಿಯಲ್ಲಿ ಭೋಜನ ಮಾಡುತ್ತಾನೋ, ಅಥವಾ ಯಾವ ಪಂಕ್ತಿಯಲ್ಲಿ ಅನ್ನವನ್ನು ತೆಗೆದುಕೊಂಡು ಹೋಗಿ ಬಡಿಸುತ್ತಾನೋ ಆ ಪಂಕ್ತಿಯವರು ಪಾಪಭಾಜನರೆನಿಸುವರು.

೨೨. ದೇವಲಕನಾದ ಬ್ರಾಹ್ಮಣನು ಯಾವನಿಗೆ ಸಂಸ್ಕಾರಮಾಡುತ್ತಾನೋ ಅವನು ತನ್ನ ಎಲ್ಲಾ ಪಿತೃಗಳನ್ನೂ ದುರ್ಗತಿಗೆ ಗುರಿಮಾಡಿ ಅಧೋಮುಖರನ್ನಾಗಿ ಮಾಡಿ ಕೆಡಹುವನು.

೨೩. ತನ್ನನ್ನೇ ದುಸ್ಥಿತಿಗೆ ಕೆಡಹಿಕೊಳ್ಳುವನು ಇತರರನ್ನು ಉದ್ಧರಿಸುವುದು ಹೇಗೆ ? ತನ್ನನ್ನುದ್ಧರಿಸಿಕೊಳ್ಳುವೆನೆಂಬುದಂತೂ ತೀರ ತುಚ್ಛವಾದ ಕಲ್ಪನೆ.

೨೪. ಯಾವನು ಹಠದಿಂದಲೋ, ಭಯದಿಂದಲೋ ಸೂರ್ಯದೇವಾಲಯದಲ್ಲಿ ಪೂಜೆಮಾಡುವ ಮೂಲಕ ಜೀವನವನ್ನು ಮಾಡಿಕೊಂಡರೆ, ಅವನು ಬ್ರಾಹ್ಮಣ್ಯದಿಂದ ಪತಿತನಾಗುತ್ತಾನೆ.

೨೫. ಬ್ರಾಹ್ಮಣನು ಪದಾರ್ಥವನ್ನು ಪರಿಗ್ರಹಿಸಬೇಕಾದರೆ 'ದೇವಸ್ಯತ್ವಾ' ಎಂಬ ಪ್ರತಿಗ್ರಹ ಮಂತ್ರವನ್ನು ಹೇಳಿ, ಪ್ರತಿಗ್ರಹಿಸಿದ ವಸ್ತುವನ್ನು ಅನುಭವಿಸುತ್ತಾನೆ ದೇವರಿಗೋಸ್ಕರ ವಸ್ತುಪ್ರತಿಗ್ರಹ ಮಾಡುವಾಗ ಈ ವೇದವಾಕ್ಯ ಹೇಳಬೇಕಾಗಿಲ್ಲ.

ತಸ್ಮಾದ್ರಾಜಾ ನ ದೇವಾರ್ಥಂ ವಿಪ್ರೇ ದದ್ಯಾತ್ಕಥಂಚನ ।
ಬ್ರಹ್ಮಸೂತ್ರಮಹಂ ಛಿತ್ವಾ ಗಮಿಷ್ಯಾಮೀತಿ ಗಮ್ಯತಾ ॥ ೨೬ ॥

॥ ಸಾಂಬ ಉವಾಚ ॥

ಅಗ್ರಾಹ್ಯಂ ಚೇದ್ದ್ವಿಜಾತಿಭ್ಯಃ ಕಸ್ಮೈದೇಯಮಿದಂ ಮಯಾ ।
ಶ್ರುತಂ ವಾ ದೃಷ್ಟಪೂರ್ವಂ ವಾ ತನ್ಮೇ ವ್ಯಾಖ್ಯಾತುಮರ್ಹಸಿ ॥ ೨೭ ॥

॥ ಗೌರಮುಖ ಉವಾಚ ॥

ಮಗಾಯ ಸಂಪ್ರಯಚ್ಛ ತ್ವಂ ಪುರಮೇತಚ್ಛುಭಂ ವಿಭೋ ।
ತಸ್ಯಾಧಿಕಾರೋ ದೇವಾನ್ನೇ ದೇವತಾನಾಂ ಚ ಪೂಜನೇ ॥ ೨೮ ॥

॥ ಸಾಂಬ ಉವಾಚ ॥

ಕೋಽಯಂ ಮಗೇತಿ ತೇ ಪ್ರೋಕ್ತಃ ಕ್ವ ವಾಸೌ ವಸತೇ ವಿಭೋ ।
ಕಸ್ಯ ಪುತ್ರೋ ದ್ವಿಜಶ್ರೇಷ್ಠ ಕಿಮಾಚಾರಃ ಕಿಮಾಕೃತಿಃ ॥ ೨೯ ॥

---

೨೬. ಆದುದರಿಂದ ರಾಜನು ದೇವರಿಗೆ ಕೊಡುವ ವಸ್ತುವನ್ನು ಹೇಗೂ ಬ್ರಾಹ್ಮಣನಿಗೆ ಕೊಡಬಾರದು. ಒಂದುಪಕ್ಷ ಬಲಾತ್ಕಾರ ನಡೆಸಿದರೆ ಬ್ರಹ್ಮಸೂತ್ರವನ್ನು ಕಿತ್ತುಹಾಕಿ ನಾನು ಹೋಗುವೆನೆಂದು ಆ ವಿಪ್ರನು ಹೊರಟುಹೋಗಬೇಕು ಎಂದನು.

೨೭. ಸಾಂಬನು ಕೇಳುತ್ತಾನೆ—“ಬ್ರಾಹ್ಮಣರಿಗೆ ಇದು ಗ್ರಾಹ್ಯವಲ್ಲದಿದ್ದರೆ ನಾನು ಯಾರಿಗೆ ಕೊಡಬೇಕು? ಈ ವಿಚಾರವಾಗಿ ಯಾರಾದರೂ ಶ್ರುತಪಡಿಸಿದುದನ್ನು ಹಿಂದೆ ನೀವು ಕೇಳಿದ್ದರೆ ಅದನ್ನು ನನಗೆ ಹೇಳಿ. ಇದಕ್ಕೆ ನೀವೇ ಅರ್ಹರಾಗಿದ್ದೀರಿ” ಎಂದನು.

೨೮. ಗೌರಮುಖನು ಹೇಳುತ್ತಾನೆ—ಎಲೈ ವಿಭುವೇ! ಶುಭವಾದ ಈ ಪುರವನ್ನು ಮಗಸಂಜ್ಞಕನಾದ ಬ್ರಾಹ್ಮಣನಿಗೆ ಕೊಡು. ಆ ಮಗವಿಪ್ರನಿಗೆ ದೇವಾನ್ನದಲ್ಲೂ ದೇವತಾಪೂಜೆಯಲ್ಲೂ ಅಧಿಕಾರವಿರುವುದು ಎಂದನು.

೨೯. ಸಾಂಬನು ಹೇಳುತ್ತಾನೆ—ಎಲೈ ದ್ವಿಜೋತ್ತಮನೇ! ಮಗ–ಎಂದು ನೀನು ಹೇಳಿದವನು ಯಾರು? ಅವನು ಎಲ್ಲಿದ್ದಾನೆ? ಅವನು ಯಾರ ಪುತ್ರನು? ಅವನ ವಿಚಾರವೇನು? ಆತನ ಆಕೃತಿಯು ಹೇಗಿದೆ? ಎಂದನು.

॥ ಗೌರಮುಖ ಉವಾಚ ॥

**ಯೋಽಯಂ ಮಗೇತಿ ವೈ ಪ್ರೋಕ್ತೋ ಮಗೋ ದಿವ್ಯೋ ದ್ವಿಜೋತ್ತಮಃ।**
**ನಿಕ್ಷುಭಾಯಾಃ ಸುತೋ ವೀರ ಆದಿತ್ಯಾತ್ಮಜ ಉಚ್ಯತೆ ॥ ೩೦ ॥**

॥ ಸಾಂಬ ಉವಾಚ ॥

**ಕಥಂ ಸ ನಿಕ್ಷುಭಾಪುತ್ರಃ ಕಥಂ ವೀರಸುತಸ್ತಥಾ ।**
**ಕಥಂ ಚಾದಿತ್ಯತನಯೋ ಮಗೋಽಸಾವುಚ್ಯತೇನಘ ॥ ೩೧ ॥**

॥ ಗೌರಮುಖ ಉವಾಚ ॥

**ಮಾನುಷತ್ವಂ ಗತಾ ದೇವೀ ನಿಕ್ಷುಭಾ ಕಿಲ ಯಾದವ ।**
**ಗತಾಶಾಪಮವಾಪ್ಯೇ ಹ ಭಾಸ್ಕರಾಲ್ಲೋಕ ಪೂಜಿತಾ ॥ ೩೨ ॥**

**ಗೋತ್ರಂ ಮಿಹಿರಮಿತ್ಯಾಹುಸ್ತಸ್ಮಿ ಬ್ರಾಹ್ಮಣ್ಯಮುತ್ತಮಂ ।**
**ಸ ಜಿಹ್ವಾ ನಾಮ ಧರ್ಮಾತ್ಮಾ ಋಷಿಪುತ್ರಃ ಪುರಾನಘ ॥ ೩೩ ॥**

---

೩೦. ಗೌರಮುಖನು ಹೇಳುತ್ತಾನೆ—ಅಯ್ಯಾ ವೀರನೇ! ಮಗ ಎಂದು ವ್ಯವಹರಿಸಲ್ಪಡುವವನು ದಿವ್ಯ ಎಂಬ ಪಂಗಡದ ಬ್ರಾಹ್ಮಣೋತ್ತಮನು, ಅವನು ನಿಕ್ಷುಭೆಯಲ್ಲಿ ಹುಟ್ಟಿದ ಸೂರ್ಯಪುತ್ರನೆಂದು ಉಕ್ತನಾಗಿದಾನೆ ಎಂದನು.

೩೧. ಸಾಂಬನು ಹೇಳುತ್ತಾನೆ—ಎಲೈ ನಿರ್ದುಷ್ಟನೆ! ಅವನು ನಿಕ್ಷುಭಾಪುತ್ರನಾದುದು ಹೇಗೆ ? ಮತ್ತು ವೀರಸುತನು ಎಂಬ ಹೆಸರು ಬಂದುದು ಹೇಗೆ? ಈ ಮಗನೆಂಬುವನು ಸೂರ್ಯಪುತ್ರನೆಂದು ಹೇಗೆ ಹೇಳಲ್ಪಡುತ್ತಾನೆ? ಎಂದನು.

೩೨. ಗೌರಮುಖನು ಹೇಳುತ್ತಾನೆ—ಎಲೈ ಯದುವಂಶಸಂಭೂತನೇ ! ಲೋಕಪೂಜಿತೆಯಾದ ನಿಕ್ಷುಭೆಯು ಸೂರ್ಯನಿಂದ ಶಾಪಹೊಂದಿ ಮನುಷ್ಯತ್ವವನ್ನು ಪಡೆದು ಜನ್ಮವೆತ್ತಲು ಭೂಲೋಕಕ್ಕೆ ಹೋದಳು.

೩೩. ಪೂರ್ವಕಾಲದಲ್ಲಿ ಮಿಹಿರಗೋತ್ರೋತ್ಪನ್ನನಾಗಿ ಬ್ರಾಹ್ಮಣೋತ್ತಮನೆನಿಸಿದ ಋಷಿವರ್ಯನಿದ್ದನು. ಅವನಿಗೆ ಸುಜಿಹ್ವ ಎಂಬ ಪುತ್ರನು ಜನಿಸಿ ಧರ್ಮಾತ್ಮನೆಂದು ಖ್ಯಾತಿಪಡೆದಿದ್ದನು.

ತಸ್ಯಾತ್ಮಜಾ ಸಮುತ್ಪನ್ನಾ ನಿಕ್ಷುಭಾ ಸಾ ವರಾಂಗನಾ ।
ರೂಪೇಣಾಪ್ರತಿಮಾ ಲೋಕೇ ಹಾರಲೀಲಾ ಮತಾ ತು ಸಾ ॥ ೩೪ ॥

ಪಿತುರ್ನಿಯೋಗಾತ್ಸಾ ಕನ್ಯಾ ವಿಹರೇಜ್ಜ್ವಾತವೇದಸಿ ॥ ೩೫ ॥

ವಿಹರಂತೀ ಯಥಾನ್ಯಾಯಂ ಸಮಿದ್ಧೇ ಪಾವಕೇ ತಥಾ ।
ಅಥ ತಂ ದೇವದೇವೇಶೋ ಹ್ಯಂಶುಮಾಲೀ ದದರ್ಶ ಹ ॥ ೩೬ ॥

ರೂಪಯೌವನಸಂಪನ್ನಾಂ ತತಃ ಕಾಮವಶಂ ಗತಃ ।
ಚಿಂತಯಾಮಾಸ ದೇವೇಶಃ ಕಥಂ ತಾಂ ವೈ ಭಜಾಮ್ಯಹಂ ॥ ೩೭ ॥

ಅನಯಾಪಹೃತೋ ಯೋಽಯಂ ಪಾವಕೋ ದೇವಪೂಜಿತಃ ।
ಏನಮಾವಿಶ್ಯ ತನ್ವಂಗೀಂ ಭಜೇಯಂ ಲೋಕಪೂಜಿತಾಂ ॥ ೩೮ ॥

---

೩೪. ಆ ನಿಕ್ಷುಭೆಯು ಆ ಸುಜಿಹ್ವನ ಪತ್ನಿಯಲ್ಲಿ ಸರ್ವಲಕ್ಷಣಯುತೆಯಾದ ಪುತ್ರಿಯಾಗಿ ಜನಿಸಿದಳು. ಆಕೆಯು ಲೋಕದಲ್ಲಿ ಅನುಪಮಲಾವಣ್ಯವತಿಯೆನಿಸಿ ಹಾರಲೀಲೆಯೆಂಬ ಹೆಸರಿನಿಂದ ಶೋಭಿಸುತ್ತಿದ್ದಳು.

೩೫. ಆ ಹುಡುಗಿಯು ತನ್ನ ತಂದೆಯ ಅನುಮತಿಯನ್ನು ಪಡೆದು ಅಗ್ನಿ ಪುರುಷನಲ್ಲಿ ವಿಹರಿಸುತ್ತಿದ್ದಳು.

೩೬. ನ್ಯಾಯಮಾರ್ಗದಲ್ಲಿ ಅವಳು ಜ್ವಲಿಸುವ ಅಗ್ನಿಯೊಡನೆ ವಿಹರಿಸುತ್ತಿರುವಾಗ ದೇವದೇವೇಶನಾದ ಸೂರ್ಯನು ಅವಳನ್ನು ನೋಡಿದನು.

೩೭. ಅನಂತರದಲ್ಲಿ ರೂಪಯೌವನ ಸಂಪನ್ನಳಾದ ಅವಳನ್ನು ನೋಡಿ "ಇವಳನ್ನು ನಾನು ಹೇಗೆ ಹೊಂದುವುದು" ಎಂದು ದೇವೇಶನಾದ ಸೂರ್ಯನು ಬಹು ಪ್ರಕಾರ ಚಿಂತಿಸುತ್ತಾ ಹೀಗೆ ಯೋಚಿಸಿದನು.

೩೮. ದೇವಪೂಜಿತನಾದ ಅಗ್ನಿದೇವನು ಇವಳನ್ನು ನ್ಯಾಯವಿರುದ್ಧವಾಗಿ ಅಪಹರಿಸಿದಾನೆ. ಈ ಅಗ್ನಿದೇವನಲ್ಲಿ ನಾನು ಪ್ರವೇಶಿಸಿ ಲೋಕಪೂಜಿತಳೂ, ಕೃಶಾಂಗಿಯೂ ಆದ ಇವಳನ್ನು ಹೊಂದುವೆನು" ಎಂದು ನಿಶ್ಚಯಿಸಿದನು.

**ಇತಿ ಸಂಚಿಂತ್ಯ ದೇವೇಶಃ ಸಹಸ್ರಾಂಶುರ್ದಿವಸ್ಪತಿಃ ।**
**ವಿವೇಶ ಪಾವಕಂ ವೀರ ತತ್ಪುತ್ರಶ್ಚಾಭವತ್ತದಾ ॥ ೩೯ ॥**

**ತತೋ ವಿಲಾಸಲಾವಣ್ಯರೂಪಯೌವನಶಾಲಿನೀ ।**
**ಸಮಿದ್ಧಂ ಲಂಘಯಿತ್ವಾಗ್ನಿಂ ಜಗಾಮಾಯತಲೋಚನಾ ॥ ೪೦ ॥**

**ಕ್ರುದ್ಧಃ ಸ್ವರೂಪಮಾಸ್ಥಾಯ ದೃಷ್ಟ್ವಾ ಕನ್ಯಾಂ ಸ ಪೀಡಿತಃ ।**
**ಕರಂ ಕರೇಣ ಸಂಗೃಹ್ಯ ತತಸ್ತಾಂ ಹವ್ಯವಾಹನಃ ॥ ೪೧ ॥**

**ಉವಾಚ ಯದುಶಾರ್ದೂಲ ನೋದಿತೋ ಭಾಸ್ಕರೇಣ ತು ।**
**ವೇದೋಕ್ತಂ ವಿಧಿಮುತ್ಸೃಜ್ಯ ಯತೋಽಹಂ ಲಂಘಿತಸ್ತ್ವಯಾ ॥ ೪೨ ॥**

**ತಸ್ಮಾನ್ಮತ್ತಃ ಸಮುತ್ಪನ್ನೋ ನ ಚ ಪುತ್ರೋ ಭವಿಷ್ಯತಿ ।**
**ಜರಶಬ್ದ ಇತಿ ಖ್ಯಾತೋ ವಂಶಕೀರ್ತಿವಿವರ್ಧನಃ ॥ ೪೩ ॥**

---

೩೯. ದಿವಸ್ಪತಿಯೂ, ದೇವೇಶನೂ ಆದ ಸೂರ್ಯನು ಹೀಗೆ ನಿಶ್ಚಯಿಸಿ ಅಗ್ನಿ ದೇವನಲ್ಲಿ ಪ್ರವೇಶಿಸಿದನು. ಆಗ ಅವನಿಗೆ ಮಗನು ಹುಟ್ಟಿದನು.

೪೦. ಅನಂತರ ಬೆಡಗು, ಕಾಂತಿ, ಸೌಂದರ್ಯ, ಪ್ರಾಯ ಇವುಗಳಿಂದ ಕೂಡಿದವಳಾಗಿ ವಿಶಾಲನಯನಳಾದ ಆವಳು ಜ್ವಲಿಸುವ ಅಗ್ನಿಯನ್ನು ಬಿಟ್ಟು ಬಿಟ್ಟು ಹೊರಟುಹೋದಳು.

೪೧. ಯದುಶ್ರೇಷ್ಠನೇ ಕೇಳು—ಅನಂತರ ಅಗ್ನಿಯು ಕುಪಿತನಾಗಿ ತನ್ನ ನಿಜರೂಪಹೊಂದಿ ಕಾಮಪೀಡಿತನಾಗಿ ಆ ಕನ್ಯೆಯನ್ನು ನೋಡಿ ಅವಳ ಕೈಯ್ಯನ್ನು ತನ್ನ ಕೈಯಿಂದ ಹಿಡಿದುಕೊಂಡು

೪೨. ಅಂತಃಪ್ರವಿಷ್ಟನಾದ ಸೂರ್ಯನಿಂದ ಪ್ರೇರಿಸಲ್ಪಟ್ಟವನಾಗಿ (ಭೂತಾವೇಶ ನ್ಯಾಯದಿಂದ) ಅಗ್ನಿಯು ಈ ಪ್ರಕಾರ ಹೇಳಿದನು. (ಈ ಮಾತು ಅಗ್ನಿಯಬಾಯಿಂದ ಹೊರಡುತ್ತಿದ್ದರೂ ಸೂರ್ಯನ ಮಾತೇ ಆಗಿತ್ತು) "ಶಾಸ್ತ್ರೀಯಕ್ರಮವನ್ನು ತ್ಯಜಿಸಿ ನನ್ನನ್ನು ಉಲ್ಲಂಘಿಸಿದೆ. ಆದುದರಿಂದ ನನ್ನಿಂದ ನಿನಗೆ ಪುತ್ರನು ಉತ್ಪನ್ನನಾಗದೆ ಇರಲಿ.

೪೩. ಪುತ್ರನಾಗಿದ್ದರೆ ಜರಶಬ್ದ ಎಂಬ ಹೆಸರಿನಿಂದ ಪ್ರಸಿದ್ಧನಾಗಿ ವಂಶಕೀರ್ತಿಯನ್ನು ವಿಶೇಷವಾಗಿ ವೃದ್ಧಿಹೊಂದಿಸುತ್ತಿದ್ದನು" ಹೋಗಲಿ

ಅಗ್ನಿಜಾತ್ಯಾ ಮಗಾಃ ಪ್ರೋಕ್ತಾಃ ಸೋಮಜಾತ್ಯಾ ದ್ವಿಜಾತಯಃ ।
ಭೋಜಕಾದಿತ್ಯಜಾತ್ಯಾ ಹಿ ದಿವ್ಯಾಸ್ತೇ ಪರಿಕೀರ್ತಿತಾಃ ॥ ೪೪ ॥

ತಾಮೇವಮುಕ್ತ್ವಾ ಭಗವನಾದಿತ್ಯೋಽಂತರಿತಸ್ತದಾ ।
ಅಥೋತ್ಪನ್ನಾಂ ಪ್ರಜಾಂ ಜ್ಞಾತ್ವಾ ಧ್ಯಾನಯೋಗೇನ ವೈ ಋಷಿಃ ॥ ೪೫ ॥

ಪತಿತಸ್ಯಾನ್ಮಹಾತೇಜಾ ಋಗ್ಜಿಹ್ವಃ ಸುಮಹಾಮತಿಃ ।
ಶಾಪಮುದ್ಯಮ್ಯ ತೇಜಸ್ವೀ ಋಗ್ಜಿಹ್ವೋ ವಾಕ್ಯಮಬ್ರವೀತ್ ॥ ೪೬ ॥

ಆತ್ಮಾಪರಾಧಾತ್ಕಾಮಿನ್ಯಾ ಯಥಾ ಗರ್ಭೋಽನಲಾವೃತಃ ।
ಸಂಭೂತಸ್ತೇ ಮಹಾಭಾಗೇ ಅಪೂಜ್ಯೋಽಯಂ ಭವಿಷ್ಯತಿ ॥ ೪೭ ॥

ಪುತ್ರಶೋಕಾಭಿಸಂತಪ್ತಾ ಬಾಲಾ ಪರ್ಯಾಕುಲೇಕ್ಷಣಾ ।
ಚಿಂತಯಾಮಾಸ ದುಃಖಾರ್ತಾ ತಮೇಕಂ ಜ್ವಲನಾಕೃತಿಂ ॥ ೪೮ ॥

---

೪೪. ಈಗ ಸನ್ನಲ್ಲಿ ಅಗ್ನಿವಂಶೋತ್ಪನ್ನರಾದವರು ಮಗರೆಂದೂ, ಸೋಮವಂಶೋತ್ಪನ್ನರು ಬ್ರಾಹ್ಮಣರೆಂದೂ, ಆದಿತ್ಯವಂಶೋತ್ಪನ್ನರು ಭೋಜಕರೆಂದೂ, ಇವರೆಲ್ಲರೂ ಸಮುದಾಯವಾಗಿ ದಿವ್ಯರೆಂದೂ ಹೇಳಲ್ಪಡುತ್ತಾರೆ (ಎಂದನು.)

೪೫. ಅವಳನ್ನು ಕುರಿತು ಹೀಗೆ ಹೇಳಿ ಭಗವಂತನಾದ ಆದಿತ್ಯನು ಮರೆಯಾದನು. ಬಳಿಕ ಆ ಋಗ್ಜಿಹ್ವಋಷಿಯು ಆಕೆಯು ಗರ್ಭವತಿಯಾಗಿರುವುದನ್ನು ಧ್ಯಾನಯೋಗದಿಂದ ತಿಳಿದನು

೪೬. ಮಹಾಮತಿಯಾಗಿ ಧರ್ಮಭ್ರಷ್ಟೆಯಾದ ಇವಳ ಸಂಬಂಧದಿಂದ ತಾನೂ ಪತಿತನಾಗುವೆನಲ್ಲಾ ಎಂದು ರೇಗಿ, ಆಕೆಗೆ ಶಾಪವನ್ನು ಕೊಡಬೇಕು ಎಂಬದಾಗಿ ಕೈಯೆತ್ತಿ ಈ ವಾಕ್ಯವನ್ನು ಹೇಳಿದನು.

೪೭. "ಎಲೌ ಮಹಾಭಾಗಳೇ ! ಕಾಮಿನಿಯಾದ ನಿನ್ನ ಅಪರಾಧದಿಂದ ಅಗ್ನಿಯಿಂದ ವರಿಸಲ್ಪಟ್ಟು ಗರ್ಭವಾದುದರಿಂದ ನಿನ್ನಲ್ಲಿ ಹುಟ್ಟಿದವನು ಅಪೂಜ್ಯನಾಗುವನು " ಎಂದನು.

೪೮. ಇದನ್ನು ಕೇಳಿ ಪುತ್ರಶೋಕದಿಂದ ಸಂತಪ್ತಳಾದ ಆ ಹುಡುಗಿಯು ವ್ಯಾಕುಲನೇತ್ರೆಯೂ, ದುಃಖಾರ್ತಳೂ ಆಗಿ ಆ ಅಗ್ನಿಪುರುಷನ ಆಕೃತಿಯೊಂದನ್ನೇ ಚಿಂತಿಸಿದಳು.

**ತತೋ ದೇವವರಿಷ್ಠಸ್ಯ ಮಮಯೋನಿಸಮುದ್ಭವಃ ।**
**ಅಯಂ ದತ್ತೋ ಮಹಾಶಾಪಃ ಪ್ರೂಜ್ಯತಾಂ ಕರ್ತುಮರ್ಹಸಿ　　॥ ೪೯ ॥**

**ಭವೇತ್ಪೂಜ್ಯೋ ಹಿ ಮೇ ಪುತ್ರೋ ದೇವೇಶ್ವರ ತಥಾ ಕುರು ।**
**ಏವಂ ಚಿಂತಯಮಾನಸ್ತು ಭಗವಾನರ್ಯಮಾ ಕಿಲ　　॥ ೫೦ ॥**

**ಆಗ್ನೇಯಂ ರೂಪಮಾಶ್ರಿತ್ಯ ಚೇದಂ ವಚನಮಬ್ರವೀತ್ ।**
**ಸ್ನಿಗ್ಧೋ ಗಂಭೀರನಿರ್ಘೋಷಃ ಶಾಂತೋ ಜ್ವರವಿವರ್ಜಿತಃ　　॥ ೫೧ ॥**

**ಋಜ್ಜಿಹ್ವಃ ಸುಮಹಾತೇಜಾ ಧರ್ಮಂ ಚರತಿ ಸುವ್ರತಃ ।**
**ತೇನೋತ್ಸೃಷ್ಟಂ ಮಹಾಶಾಪಂ ನಾನ್ಯಥಾಕರ್ತುಮುತ್ಸಹೇ　　॥ ೫೨ ॥**

**ಕಿಂತು ಕಾರ್ಯಗರೀಯಸ್ತ್ವಾದಾತ್ಮನೋ ಯೋಗ್ಯಮುತ್ತಮಂ ।**
**ತವ ಪುತ್ರಂ ವಿಧಾಸ್ಯಾಮಿ ಚಾಪೂಜ್ಯಂ ವೇದಪಾರಗಂ　　॥ ೫೩ ॥**

---

೪೯. ಬಳಿಕ, ಹೇ ದೇವ! ದೇವಶ್ರೇಷ್ಠನಾದವನಿಂದ ನನ್ನ ಗರ್ಭದಲ್ಲಿ ಉತ್ಪನ್ನನಾಗುವನಿಗೆ ಈ ಮಹಾಶಾಪವು ಕೊಡಲ್ಪಟ್ಟಿರುವುದು ಆ ಪುತ್ರನಿಗೆ ಪೂಜ್ಯತ್ವವನ್ನುಂಟು ಮಾಡಲು ನೀನು ಅರ್ಹನಾಗಿದ್ದೀ.

೫೦. ಎಲೈ ದೇವೇಶ್ವರನೇ! ಹೇಗಾದರೂ ನನ್ನ ಪುತ್ರನು ಪೂಜ್ಯನಾಗಬೇಕು ಆ ರೀತಿ ಮಾಡು" ಎಂಬದಾಗಿ ಆಕೆ ಚಿಂತಿಸುತ್ತಾ ಇರಲು, ಪುನಃ ಸೂರ್ಯನೇ ಅಗ್ನಿಯರೂಪವನ್ನು ಧರಿಸಿ ಬಂದು ಈ ಮಾತನ್ನು ಹೇಳಿದನು.

೫೧. "ಎಲೌ ಸ್ತ್ರೀಯೇ! ಸುವ್ರತನೂ, ಮನೋಹರನೂ, ಗಂಭೀರಧ್ವನಿಯುಳ್ಳವನೂ, ಶಾಂತವೂ, ತಾಪರಹಿತನೂ ;

೫೨. ಮಹಾತೇಜಸ್ವಿಯೂ ಆದ ಋಜ್ಜಿಹ್ವನು ಧರ್ಮತತ್ಪರನಾಗಿ ಇದ್ದಾನೆ. ಅವನು ಕೊಟ್ಟ ಮಹಾಶಾಪವನ್ನು ಬದಲಾಯಿಸಲು ನನಗೆ ಸಾಧ್ಯವಿಲ್ಲ.

೫೩. ಆದರೆ ಅಪೂಜ್ಯನಾದ ನಿನ್ನ ಪುತ್ರನನ್ನು ವೇದಪಾರಂಗತನನ್ನಾಗಿ ಮಾಡಿ, ಕಾರ್ಯಗೌರವದಿಂದ ಅವನು ಯೋಗ್ಯನೂ, ಉತ್ತಮನೂ, ನಿನಗೆ ಯಶಸ್ಕರನೂ ಆಗುವಂತೆ ಏರ್ಪಡಿಸುತ್ತೇನೆ.

ವಂಶಶ್ಚ ಸುಮಹಾಂಸ್ತಸ್ಯ ನಿವಸಿಷ್ಯತಿ ಭೂತಲೇ ।
ಮಮಾಂಗಾನಿ ಮಹಾತ್ಮಾನೋ ವಾಶಿಷ್ಠಾ ಬ್ರಹ್ಮವಾದಿನಃ ॥ ೫೪ ॥

ಮದ್ಗಾಯನಾ ಮದ್ಯಜನಾ ಮದ್ಭಕ್ತಾ ಮತ್ಪರಾಯಣಾಃ ।
ಮಮ ಶುಶ್ರೂಷಕಾಶ್ಚೈವ ಮಮ ಚ ವ್ರತಚಾರಿಣಃ ॥ ೫೫ ॥

ತ್ವಾಂ ಚ ಮಾಂ ಚ ಯಥಾನ್ಯಾಯಂ ವೇದಂ ತತ್ವಾರ್ಥದರ್ಶಿನಃ ।
ಪೂಜಯಿಷ್ಯಂತಿ ನಿರತಾಃ ಸದಾ ಮದ್ಭಾವಭಾವಿತಾಃ ॥ ೫೬ ॥

ಮತ್ಕರ್ಮಣಾಂ ಮದಂಗಾನಾಂ ಮದ್ಭಾವವಿನಿವೇಶನಾತ್ ।
ವಿರಜಾ ಮತ್ಪ್ರಸಾದೇನ ಮಾಮೇ ವೈಷ್ಯಂತ್ಯಸಂಶಯಃ ॥ ೫೭ ॥

ಜಟಾಶ್ಮಶ್ರುಧರಾ ನಿತ್ಯಂ ಸದಾ ಮಯಿ ಪರಾಯಣಾಃ ।
ಪಂಚಕಾಲವಿಧಾನಜ್ಞಾ ವೀರಕಾಲಸ್ಯ ಯಜ್ವನಃ ॥ ೫೮ ॥

---

೫೪. ಅವನ ವಂಶವು ಭೂತಲದಲ್ಲಿ ಬಹುದೊಡ್ಡದಾಗಿ ಪರಿಣಮಿಸುವುದು. ಬ್ರಹ್ಮವಾದಿಗಳಾದ ವಾಸಿಷ್ಠರೆನಿಸಿ ನನ್ನ ಅಂಗಗಳಾಗಿರುವರು. ಅವರು ಮಹಾಮಹಿಮರೆನಿಸುವರು.

೫೫. ಅವರು ನನ್ನ ಸ್ತೋತ್ರವನ್ನು ಗಾನಮಾಡುತ್ತಾ, ನನ್ನನ್ನು ಪೂಜಿಸುತ್ತಾ, ನನ್ನ ಭಕ್ತರೂ ನನ್ನಲ್ಲಿ ಆಸಕ್ತರೂ, ನನ್ನನ್ನು ಸೇವಿಸುವವರೂ, ನನ್ನ ವ್ರತವನ್ನು ಆಚರಿಸುವವರೂ ಆಗಿರುತ್ತಾರೆ.

೫೬. ತತ್ವಾರ್ಥವನ್ನು ಬಲ್ಲವರು ನಿನ್ನನ್ನೂ, ನನ್ನನ್ನೂ, ವೇದವನ್ನೂ, ನ್ಯಾಯರೀತ್ಯಾ ಆಸಕ್ತಿಯುತರಾಗಿ ಪೂಜಿಸುವರು. ಅವರು ಯಾವಾಗಲೂ ನನ್ನ ವಿಷಯಕವಾದ ಭಾವದಿಂದ ಭಾವಿತರಾಗಿರುವರು.

೫೭. ನನ್ನ ಕರ್ಮವನ್ನು ಮಾಡುವರಾಗಿ ನನ್ನ ಅಂಗವಾಗಿರುವವರಿಗೆ ನಾನು ನನ್ನ ಸ್ವರೂಪವನ್ನು ಕೊಡುವುದರಿಂದ, ಅವರು ನಿರ್ದೋಷರಾಗಿ ನನ್ನ ಅನುಗ್ರಹದಿಂದ ನನ್ನನ್ನೇ ಹೊಂದುವರು. ಸಂಶಯವಿಲ್ಲ.

೫೮. ಮತ್ತು ಅವರು ಯಾವಾಗಲೂ ಜಡೆಗಳು, ಗಡ್ಡಮೀಸೆಗಳು ಇವನ್ನು ಧರಿಸಿ ಸದಾ ನನ್ನಲ್ಲಿ ಆಸಕ್ತರಾಗಿ ಪಂಚಕಾಲ ಪೂಜಾವಿಧಾನವನ್ನು ತಿಳಿದವರಾಗಿರಬೇಕು. ಅವರು ಅಗ್ನಿಪೂಜೆಗೆ ಉಕ್ತವಾದ ಕಾಲದಲ್ಲಿ ತಪ್ಪದೆ ಹೋಮಸನ್ನದ್ಧರಾಗಿ

ಪೂರ್ಣೈಕ ದಕ್ಷಿಣೇ ಪಾಣೌ ಚರ್ಮ ವಾಮೇನ ಧಾರಯನ್ ।
ಪರಿಧಾನೇನ ವದನಂ ಪ್ರಚ್ಛಾದ್ಯ ನಿಯತಃ ಶುಚಿಃ ॥ ೫೯ ॥

ಪ್ರಾಣಂ ಹಿ ಮಹತಾಂ ಕೃತ್ವಾ ತತೋ ಭುಂಜೀತ ವಾಗ್ಯತಃ ।
ಅಯಮಾಚ್ಚಾಪ್ರಸಾದಾ ಚ್ಚ ವ್ಯಾಕುಲೇಂದ್ರಿಯಚೇತಸಾ ॥ ೬೦ ॥

ವಿಧಿಹೀನಂ ಮಂತ್ರಹೀನಂ ಯೇ ವೈ ಯಕ್ಷ್ಯಂತಿ ಮಾಮತಃ ।
ತೇಪಿ ಸ್ವರ್ಗಾಚ್ಚ್ಯುತಾಃ ಕ್ಲಾಂತಾ ರಮಂತೇ ಸೂರ್ಯಸನ್ನಿಧೌ ॥ ೬೧ ॥

ಏವಂ ವಿಧಾಸ್ತವ ಸುತಾ ಭವಿಷ್ಯಂತಿ ಮಹೀತಲೇ ।
ಮಗವಂಶೇ ಮಹಾತ್ಮನೋ ವೇದವೇದಾಂಗಪಾರಗಾಃ ॥ ೬೨ ॥

ಏವಮಾಶ್ವಾಸ್ಯ ತಾಂ ದೇವೀಂ ಭಾಸ್ಕರೋ ವಾರಿತಸ್ಕರಃ ।
ಅಂತರ್ದಧೇ ಮಹಾತೇಜಾಃ ಸಾ ಚ ಹರ್ಷಮವಾಪ ಹ ॥ ೬೩ ॥

---

೫೯. ಪೂರ್ಣಪಾತ್ರೆಯನ್ನು ಬಲಗೈಯಲ್ಲಿಯೂ, ಕೃಷ್ಣಾಜಿನವನ್ನು ಎಡಗೈಯಿಂದಲೂ ಹಿಡಿದು, ಹೊದ್ದಿರುವ ವಸ್ತ್ರದಿಂದ ಬಾಯಿಗೆ ಮರೆಮಾಡಿಕೊಂಡು, ನಿಯಮದಿಂದ ಕೂಡಿ ಶುಚಿಯಾಗಿ ಹೋಮಮಾಡಬೇಕು. ಅವರು ಮಹತ್ವಯುಕ್ತವಾದ ಪ್ರಾಣಾಹುತಿಪುರಸ್ಸರವಾಗಿ ಮೌನವಾಗಿ ಭೋಜನ ಮಾಡಬೇಕು.

೬೦. ಇಂದ್ರಿಯನಿಗ್ರಹವಿಲ್ಲದೆಯೂ, ಚಿತ್ತನೈರ್ಮಲ್ಯವಿಲ್ಲದೆಯೂ, ಕದಡಿದ ಮನಸ್ಸಿನಿಂದಲೂ, ಚಪಲೇಂದ್ರಿಯಗಳಿಂದಲೂ ಕೂಡಿದವರಾಗಿ

೬೧. ವಿಧಿಹೀನವಾಗಿಯೂ, ಮಂತ್ರಹೀನವಾಗಿಯೂ, ಯಾರು ನನ್ನನ್ನು ಪೂಜಿಸುವರೋ, ಅವರು ಸ್ವರ್ಗಚ್ಯುತರಾಗಿ ಬಳಲಿ ಸೂರ್ಯಸನ್ನಿಧಿಯಲ್ಲಿ ಕ್ರೀಡಿಸುತ್ತಾರೆ.

೬೨. ನಿನ್ನ ಮಕ್ಕಳು ಭೂಮಂಡಲದಲ್ಲಿ ಇಂಥವರಾಗುವರು. ಮಗವಂಶದವರು ಮಹಾತ್ಮರೂ ವೇದವೇದಾಂಗಪಾರಂಗತರೂ ಆಗುವರು" (ಎಂಬುದಾಗಿ ಹೇ[illegible])

೬೩. ಜಲಶೋಷಕನೂ ಮಹಾತೇಜಸ್ಸಿನಿಂದ ಕೂಡಿದವನೂ ಆದ ಸೂರ್ಯನು ಹೀಗೆ ಹಾರಲೀಲಾದೇವಿಯನ್ನು ಸಮಾಧಾನಪಡಿಸಿ ಅಂತರ್ಧಾನನಾದನು. ಅವಳೂ ಸಂತೋಷವನ್ನು ಹೊಂದಿದಳು.

ಏವಮೇತೇ ಸಮುತ್ಪನ್ನಾ ಭೋಜಕಾಃ ಕೃಷ್ಣನಂದನ ।
ವಿಷ್ಣುಭಾಸ್ತೇ ತವಾದಿತ್ಯಾ ಉತ್ಪನ್ನಾ ಲೋಕಪೂಜಿತಾಃ ॥ ೭೪ ॥

ತೇಷಾಮೇತತ್ಪುರಂ ದೇಹಿ ಪರ್ಯಾಪ್ತಾಸ್ತೇ ಪ್ರತಿಗ್ರಹೇ ।
ತ್ವದೀಯಸ್ಯಾಸ್ಯ ಮೇ ವೀರ ತಥಾ ಭಾಸ್ಕರಪೂಜನೇ ॥ ೭೫ ॥

ತಸ್ಯ ಗೌರಮುಖಸ್ಯೇದಂ ವಾಕ್ಯಂ ಶ್ರುತ್ವಾ ಸ ಯಾದವಃ ।
ಸಾಂಬೋ ಜಾಂಬವತೀಪುತ್ರಃ ಪ್ರಣಮ್ಯ ಶಿರಸೋಕ್ತವಾನ್ ॥ ೭೬ ॥

ಕ್ವ ವಸಂತೇ ಮಹಾತ್ಮಾನ ಏತೇ ಭಾಸ್ಕರಪುತ್ರಕಾಃ ।
ಭೋಜಕಾ ದ್ವಿಜಶಾರ್ದೂಲ ಯೇನ ತಾನಾನಯಾಮ್ಯಹಂ ॥ ೭೭ ॥

॥ ಗೌರಮುಖ ಉವಾಚ ॥

ನಾಹಂ ಜಾನೇ ಮಹಾಬಾಹೋ ವಸಂತೇ ಯತ್ರ ವೈ ಮಗಾಃ ।
ಜಾನೀತೇ ತಾನ್ ರವಿರ್ವೀರ ತಸ್ಮಾತ್ತ್ವಂ ಶರಣಂ ವ್ರಜ ॥ ೭೮ ॥

---

೭೪. ಎಲೈ ಸಾಂಬನೇ! ಆದಿತ್ಯವಂಶಜರಾದ ಈ ಭೋಜಕರು ಈ ಪ್ರಕಾರ ಉತ್ಪನ್ನರಾಗಿ ಲೋಕಪೂಜಿತರೂ, ವಿಷ್ಣುವಿನಂತೆ ಕಾಂತಿಯುಳ್ಳವರೂ ಆಗಿರುವರು.

೭೫. ಅವರಿಗೆ ಈ ಪಟ್ಟಣವನ್ನು ಕೊಡು. ಅವರು ನಿನ್ನ ದಾನದ ಪ್ರತಿಗ್ರಹಕ್ಕೆ ಸಾಕಾದಷ್ಟು ಯೋಗ್ಯತೆಯುಳ್ಳವರು. ಎಲೈ ವೀರನೇ! ಅವರು ಸೂರ್ಯನನ್ನು ಪೂಜಿಸಲು ಯೋಗ್ಯರು ಎಂದು ನನಗೆ ತೋರುತ್ತದೆ ಎಂದನು,

೭೬. ಜಾಂಬವತೀಸುತನಾದ ಆ ಸಾಂಬನು ಆ ಗೌರಮುಖನ ಈ ಮಾತನ್ನು ಕೇಳಿ, ತಲೆವಾಗಿ ನಮಸ್ಕರಿಸಿ ಇಂತೆಂದನು.

೭೭. ಸಾಂಬನು ಹೇಳುತ್ತಾನೆ—ಬ್ರಾಹ್ಮಣೋತ್ತಮನೇ! ಮಹಾತ್ಮರಾದ ಆ ಸೂರ್ಯಪುತ್ರರು ಎಲ್ಲಿದ್ದಾರೆ? ಹೇಳು ನಾನವರನ್ನು ಕರೆದುಕೊಂಡುಬರುತ್ತೇನೆ ಎಂದನು.

೭೮. ಆ ಮಾತಿಗೆ ಗೌರವಮುಖನು ಉತ್ತರ ಹೇಳುತ್ತಾನೆ—"ಎಲೇ ಮಹಾಬಾಹುವೇ! ಮಗರು ಎಲ್ಲಿದ್ದಾರೋ ನಾನು ಕಾಣೆ. ಅದು ಸೂರ್ಯನಿಗೆ ಗೊತ್ತು. ಆದುದರಿಂದ ಅವನನ್ನೇ ಮರೆಹೊಗು" ಎಂದನು.

ಬ್ರಾಹ್ಮಣೇನೈವಮುಕ್ತಸ್ತು ಪ್ರಣಮ್ಯ ಶಿರಸಾ ರವಿಂ ।
ಜಗಾದ ಭಾಸ್ಕರಂ ಸಾಂಬಃ ಕಸ್ತೇಪೂಜಾಂ ಕರಿಷ್ಯತಿ ॥ ೬೯ ॥

ವಿಜ್ಞಪ್ತಸ್ತ್ವೇವ ಸಾಂಬೇನ ಪ್ರತಿಮಾ ತಮುವಾಚ ಹ ।
ನ ಯೋಗ್ಯಾಃ ಪರಿಚರ್ಯಾಯಾಂ ಜಂಬೂದ್ವೀಪೇ ಮಮಾನಘ ॥ ೭೦ ॥

ಮಮ ಪೂಜಾಕರಂ ಗತ್ವಾ ಶಾಕದ್ವೀಪಾದಿಹಾನಯ ।
ಲವಣೋದಾತ್ಪರೇ ಪಾರೇ ಕ್ಷೀರೋದೇನ ಸಮಾವೃತಃ ॥ ೭೧ ॥

ಜಂಬೂದ್ವೀಪಾತ್ಪರೋ ಯಸ್ಮಾಚ್ಛಾಕದ್ವೀಪ ಇತಿಸ್ಮೃತಃ ।
ತತ್ರ ಪುಣ್ಯಾ ಜನಪದಾಶ್ಚತುರ್ವರ್ಣಸಮನ್ವಿತಾಃ ॥ ೭೨ ॥

ಮಗಾಶ್ಚ ಮಗಗಾಶ್ಚೈವ ಗಾನಗಾ ಮಂದಗಾಸ್ತಥಾ ।
ಮಗಾ ಬ್ರಾಹ್ಮಣಭೂಯಿಷ್ಠಾ ಮಗಗಾಃ ಕ್ಷತ್ರಿಯಾಃ ಸ್ಮೃತಾಃ ॥ ೭೩ ॥

---

೬೯. ಆ ಬ್ರಾಹ್ಮಣನು ಹೀಗೆ ಹೇಳಿದ ಮೇಲೆ ಸಾಂಬನು ಸೂರ್ಯಪ್ರತಿಮೆಗೆ ತಲೆಬಾಗಿ ನಮಿಸಿ, "ನಿನಗೆ ಪೂಜೆಯನ್ನು ಮಾಡುವವರು ಯಾರು ? ಎಲ್ಲಿರುವರು ?" ಎಂದನು.

೭೦. ಸಾಂಬನು ಹೀಗೆ ಕೇಳುತ್ತಲೇ ಆ ಪ್ರತಿಮೆಯು ಅವನನ್ನು ಕುರಿತು "ಎಲೈ ನಿರ್ದೋಷಿಯೇ ನನ್ನ ಸೇವೆಗೆ ಯೋಗ್ಯರು ಈ ಜಂಬೂ ದ್ವೀಪದಲ್ಲಿ ಇಲ್ಲ.

೭೧. ಶಾಕದ್ವೀಪಕ್ಕೆ ಹೋಗಿ ಅಲ್ಲಿಂದ ನನ್ನ ಪೂಜೆಮಾಡುವವನನ್ನು ಇಲ್ಲಿಗೆ ಕರೆದುಕೊಂಡು ಬಾ; ಅದು ಲವಣಸಮುದ್ರದ ಆಚೆಯ ದಡದಲ್ಲಿ ಕ್ಷೀರಸಮುದ್ರದಿಂದ ಆವೃತವಾಗಿರುವುದು.

೭೨. ಜಂಬೂದ್ವೀಪದಿಂದ ಆಚೆಗೆ ಆ ಶಾಕದ್ವೀಪವಿದೆ, ಅಲ್ಲಿ ಬ್ರಾಹ್ಮಣಾದಿ ಚತುರ್ವರ್ಣದಿಂದ ಕೂಡಿರುವ ಪುಣ್ಯದೇಶಗಳು ಇವೆ.

೭೩. ಆ ಶಾಕದ್ವೀಪದಲ್ಲಿರುವ ದೇಶಗಳಿಗೆ ಮಗ, ಮಗಗ, ಗಾನಗ, ಮಂದಗ ಎಂಬ ಹೆಸರು. ಇವುಗಳಲ್ಲಿ ಮಗದೇಶದಲ್ಲಿ ಬ್ರಾಹ್ಮಣರು ವಿಶೇಷವಾಗಿರುವರು. ಮಗಗ ದೇಶದಲ್ಲಿ ಕ್ಷತ್ರಿಯರು ಅಧಿಕವಾಗಿದಾರೆ.

ವೈಶ್ಯಾಸ್ತು ಗಾನಗಾ ಜ್ಞೇಯಾಃ ಶೂದ್ರಾಸ್ತೇಷಾಂ ತು ಮಂದಗಾಃ ।
ನ ತೇಷಾಂ ಸಂಕರಃ ಕಶ್ಚಿದ್ಧರ್ಮಾಶ್ರಯಕೃತೇ ಕ್ವಚಿತ್ ॥ ೭೪ ॥

ಧರ್ಮಸ್ಯಾಸ್ಯ ವಿಚಾರೋ ವಾ ಹ್ಯೇಕತಃ ಸುಖಿನಃ ಪ್ರಜಾಃ ।
ತೇಜಸಸ್ತೇ ಮದೀಯಸ್ಯ ನಿರ್ಮಿತಾ ವಿಶ್ವಕರ್ಮಣಾ ॥ ೭೫ ॥

ತೇಭ್ಯೋ ವೇದಾಸ್ತು ಚತ್ವಾರಃ ಸರಹಸ್ಯಾ ಮಯೇರಿತಾಃ ।
ವೇದೋಕ್ತೈರ್ವಿವಿಧೈಃ ಸ್ತೋತ್ರೈಃ ಪರೈರ್ಗುಹ್ಯೈರ್ಮಯಾ ಕೃತೈಃ॥೭೬॥

ತೇ ಚ ಧ್ಯಾಯಂತಿ ಮಾಮೇವ ಯಜಂತೇ ಮಾಂ ಚ ನಿತ್ಯಶಃ ।
ಮನ್ಮಾನಸಾ ಮದ್ಯಜನಾ ಮದ್ಭಕ್ತಾ ಮತ್ಪರಾಯಣಾಃ ॥ ೭೭ ॥

ಮಮ ಶುಶ್ರೂಷಕಾಶ್ಚೈವ ಮಮ ಚ ವ್ರತಚಾರಿಣಃ ।
ಅವ್ಯಂಗಧಾರಿಣಶ್ಚೈವ ವಿಧಿದೃಷ್ಟೇನ ಕರ್ಮಣಾ ॥ ೭೮ ॥

---

೭೪. ಗಾನಗದೇಶದಲ್ಲಿ ವೈಶ್ಯರು ಸಮೃದ್ಧಿಯಾಗಿರುವರು ಮಂದಗದೇಶದಲ್ಲಿ ಶೂದ್ರರು ಯಥೇಷ್ಟವಾಗಿದ್ದಾರೆ. ಧರ್ಮಾನುಸರಣ ದೃಷ್ಟಿಯಿಂದ ಅವುಗಳಿಗೆ ಸ್ವಲ್ಪವೂ ಸಾಂಕರ್ಯವಿಲ್ಲ.

೭೫. ಈ ಧರ್ಮಾನುಸರಣ ವಿಚಾರ ಒಂದರಲ್ಲಿ ಅಲ್ಲದೆ ಪ್ರಜೆಗಳೂ ಅಲ್ಲಿ ಸುಖಿಗಳಾಗಿರುವರು. ಅವರನ್ನು ವಿಶ್ವಕರ್ಮನು ನನ್ನ ತೇಜಸ್ಸೆಂಬ ಉಪಕರಣದಿಂದ ನಿರ್ಮಿಸಿದನು. ಅವರಿಗೆ ನಾನು ರಹಸ್ಯಸಹಿತಗಳಾದ ನಾಲ್ಕು ವೇದಗಳನ್ನೂ ಹೇಳಿದ್ದೇನೆ.

೭೬. ನಾನೇ ರಚಿಸಿದ ಶ್ರೇಷ್ಠಗಳೂ ಅತಿ ಗುಹ್ಯಗಳೂ ಆದ ಬಗೆಬಗೆಯಾದ ಸ್ತೋತ್ರಗಳಿಂದ ಅವರು ನನ್ನನ್ನೇ ಧ್ಯಾನಮಾಡುತ್ತಾರೆ.

೭೭. ಮತ್ತು ಅವರು ನಿತ್ಯವೂ ನನ್ನನ್ನು ಪೂಜಿಸುತ್ತಾರೆ. ಮತ್ತು ನನ್ನನ್ನೇ ಮನಸ್ಸಿನಲ್ಲಿ ಧ್ಯಾನಿಸುತ್ತಾ ಪೂಜಿಸುತ್ತಾರೆ, ನನ್ನಲ್ಲಿ ಆಸಕ್ತರೂ ನನ್ನ ಭಕ್ತರೂ

೭೮. ನನ್ನನ್ನು ಸೇವಿಸುವವರೂ ಆಗಿ ನನ್ನ ವ್ರತವನ್ನು ಆಚರಿಸುತ್ತಾ ಅವ್ಯಂಗವನ್ನು ಧರಿಸಿ ವಿಧಿದೃಷ್ಟವಾದ ಕರ್ಮವನ್ನು ಸಾಂಗವಾಗಿ ಮಾಡುತ್ತಾರೆ.

ಕುರ್ವಂತಿ ತೇ ಸದಾ ಭದ್ರಾಂ ಮಮ ಪೂಜಾಂ ಮಮಾನುಗಾಃ ।
ತಥಾ ದೇವಾಃ ಸಗಂಧರ್ವಾಃ ಸಿದ್ಧಾಶ್ಚ ಸಹಚಾರಣೈಃ ॥ ೭೯ ॥

ವಿಹರಂತೇ ರಮಂತೇ ಚ ದೃಶ್ಯಮಾನಾಶ್ಚ ತೈಃ ಸಹ ।
ಜಂಬೂದ್ವೀಪೇತ್ವಹಂ ವಿಷ್ಣುರ್ವೇದವೇದಾಂಗ ಪೂಜಿತಃ ॥ ೮೦ ॥

ಶಕ್ರೋಽಹಂ ಶಾಲ್ಮಲೀದ್ವೀಪೇ ಕ್ರೌಂಚದ್ವೀಪೇ ಹ್ಯಹಂ ಭಗಃ ।
ಪ್ಲಕ್ಷದ್ವೀಪೇ ತ್ವಹಂ ಭಾನುಃ ಶಾಕದ್ವೀಪೇ ದಿವಾಕರಃ ।
ಪುಷ್ಕರೇ ಚ ಸ್ಮೃತೋ ಬ್ರಹ್ಮಾ ತತಶ್ಚಾಹಂ ಮಹೇಶ್ವರಃ ॥ ೮೧ ॥

ತಾನ್ಮಗಾನ್ಮಮ ಪೂಜಾರ್ಥಂ ಶಾಕದ್ವೀಪಾದಿಹಾನಯ ।
ಆರುಹ್ಯ ಗರುಡಂ ಸಾಂಬ ಶೀಘ್ರಂ ಗತ್ವಾವಿಚಾರಯನ್ ॥ ೮೨ ॥

ತಥೇತಿ ಗೃಹ್ಯ ತಾಮಾಜ್ಞಾಂ ರವೇರ್ಜಾಂಬವತೀಸುತಃ ।
ಪುನರ್ದ್ವಾರವತೀಂ ಗತ್ವಾ ಕಾಂತ್ಯಾತೀವ ಸಮನ್ವಿತಃ ॥ ೮೩ ॥

---

೭೯. ಅವರು ಯಾವಾಗಲೂ ಮಂಗಳಕರವಾದ ಕ್ರಮದಿಂದ ಪೂಜೆಯನ್ನು ಮಾಡುತ್ತಾರೆ. ಮತ್ತು ನನ್ನ ವ್ರತವನ್ನು ಅನುಸರಿಸುತ್ತಾರೆ.

೮೦. ಅಲ್ಲದೆ ಅವರು ದೇವತೆಗಳು, ಗಂಧರ್ವರು, ಚಾರಣರು, ಸಿದ್ಧರು ಇವರುಗಳು ಒಡಗೂಡಿ ವಿಹರಿಸುವಂತೆ ಕಾಣಿಸಿಕೊಳ್ಳುತ್ತಾರೆ. ವೇದವೇದಾಂಗಪೂಜಿತನಾದ ನಾನು ಜಂಬೂದ್ವೀಪದಲ್ಲಿ ವಿಷ್ಣುವೆಂಬ ಹೆಸರಿನಿಂದಲೂ, ಶಾಲ್ಮಲೀದ್ವೀಪದಲ್ಲಿ ಶಕ್ರನೆಂಬ ಹೆಸರಿನಿಂದಲೂ, ಕ್ರೌಂಚದ್ವೀಪದಲ್ಲಿ ಭಗನೆಂಬ ಹೆಸರಿನಿಂದಲೂ, ಪೂಜಿತನಾಗುತ್ತೇನೆ.

೮೧. ನಾನು ಪ್ಲಕ್ಷದ್ವೀಪದಲ್ಲಿ ಭಾನುವೆಂಬ ಹೆಸರಿನಿಂದಲೂ, ಶಾಕದ್ವೀಪದಲ್ಲಿ ದಿವಾಕರನೆಂಬದಾಗಿಯೂ, ಪುಷ್ಕರದ್ವೀಪದಲ್ಲಿ ಬ್ರಹ್ಮನೆಂದೂ ಪೂಜಿತನಾಗಿ ಅಲ್ಲಿಂದ ಮುಂದೆ ನಾನು ಮಹೇಶ್ವರನೆನಿಸಿಕೊಂಡಿದ್ದೇನೆ.

೮೨. ಆ ಮಗರನ್ನು ನನ್ನ ಪೂಜೆಗಾಗಿ ಇಲ್ಲಿಗೆ ಕರೆದುಕೊಂಡು ಬಾ. ಅಯ್ಯಾ ಸಾಂಬನೇ! ವಿಚಾರಮಾಡದೆ ಗರುಡನನ್ನೇರಿ ಬೇಗಹೋಗಿ ಕರೆದುಕೊಂಡು ಬಾ ಎಂದನು.

೮೩. ಹಾಗೆಯೇ ಆಗಲೆಂದು ಒಪ್ಪಿ ಸೂರ್ಯನ ಅಪ್ಪಣೆಪಡೆದು ಬಹುಕಾಂತಿಯುಕ್ತನಾದಸಾಂಬನು ಕುಷ್ಠರೋಗವಿಮುಕ್ತನಾಗಿ ಪುನಃ ದ್ವಾರವತಿಗೆ ಬಂದು

ಆಖ್ಯಾತವಾನ್ಪಿತುಃ ಸರ್ವಂ ಸ್ವಕೀಯಂ ದೇವದರ್ಶನಂ ।
ತಸ್ಮಾಚ್ಚ ಗರುಡಂ ಲಬ್ಧ್ವಾ ಯಯೌ ಸಾಂಬೋಧಿರುಹ್ಯಂ ತಂ ॥ ೮೪ ॥

ಶಾಕದ್ವೀಪಮನುಪ್ರಾಪ್ಯ ಸಂಪ್ರಹೃಷ್ಟತನೂರುಹಃ ।
ತತ್ರಾಪಶ್ಯದ್ಯಥೋದ್ದಿಷ್ಟಾನ್ ಸಾಂಬಸ್ತೇಜಸ್ವಿನೋ ಮಗಾನ್ ॥ ೮೫ ॥

ವಿವಸ್ವಂತಂ ಪೂಜಯಂತೋ ಧೂಪದೀಪಾದಿಭಿಃ ಶುಭೈಃ ।
ಸೋಽಭಿವಾದ್ಯ ಚ ತಾನ್ಪೂರ್ವಂ ಕೃತ್ವಾಪ್ಯೇಷಾಂ ಪ್ರದಕ್ಷಿಣಾಂ ॥ ೮೬ ॥
ಪೃಷ್ಟ್ವಾ ಚಾನಾಮಯಂ ತೇಷಾಂ ಪ್ರಶಂಸಾಸಾಮಪೂರ್ವಕಂ ।

ಯೂಯಂ ಹಿ ಪುಣ್ಯಕರ್ಮಾಣೋ ದ್ರಷ್ಟೄವ್ಯಾರ್ಥೇ ಶುಭಾರ್ಥಿನಃ ।
ರತಾಯೇಽರ್ಕಸ್ಯ ಪೂಜಾಯಾಂ ಯೇಷಾಂ ಚೈವ ವರಪ್ರದಃ ॥ ೮೭ ॥

ತನಯಂ ವಿತ್ತ ಮಾಂ ವಿಷ್ಣೋಃ ಸಾಂಬಂ ನಾಮ್ನಾ ಚ ವಿಶ್ರುತಂ ।
ಚಂದ್ರಭಾಗಾತಟೇ ಚಾಪಿ ಮಯಾ ಸೂರ್ಯೋ ನಿವೇಶಿತಃ ॥ ೮೮ ॥

---

೮೪. ಅಲ್ಲಿ ತಂದೆಯು ಸಂಗಡ ತಾನು ದೇವನ ದರ್ಶನಮಾಡಿದ ವಿಷಯವನ್ನೆಲ್ಲವನ್ನೂ ಹೇಳಿದನು. ಬಳಿಕ ತಂದೆಯಿಂದ ಗರುಡನನ್ನು ಪಡೆದುಕೊಂಡು ಅವನನ್ನೇರಿ ಹೊರಟನು.

೮೫. ಸ್ವಲ್ಪಹೊತ್ತಿನಲ್ಲಿ ಶಾಕದ್ವೀಪಕ್ಕೆ ಬಂದು ನೋಡಿ ರೋಮಾಂಚಿತನಾಗಿ ಸಾಂಬನು ತಾನು ಮನಸ್ಸಿನಲ್ಲಿ ಉದ್ದೇಶಿಸಿಕೊಂಡು ಬಂದಂತೆ ತೇಜಸ್ವಿಗಳಾದ ಮಗರನ್ನು ಕಂಡನು.

೮೬. ಅವರು ಶುಭಕರವಾದ ಧೂಪದೀಪಾದಿಗಳಿಂದ ಸೂರ್ಯನನ್ನು ಪೂಜಿಸುತ್ತಿದ್ದರು. ಅವನು ಮೊದಲು ಅವರಿಗೆ ಪ್ರದಕ್ಷಿಣನಮಸ್ಕಾರವನ್ನು ಮಾಡಿದನು.

೮೭. ಬಳಿಕ ಅವರನ್ನು ಆರೋಗ್ಯ ಪ್ರಶ್ನೆ ಮಾಡಿ ಪ್ರಶಂಸಾಸಾಮಪೂರ್ವಕವಾಗಿ ಸ್ವಾಮಿಾ ಸೂರ್ಯಪೂಜೆಯಲ್ಲಾಸಕ್ತರೆನಿಸಿ ಸೂರ್ಯನಿಂದ ವರಪಡೆದವರಾಗಿರುವ ನೀವು ಪುಣ್ಯಕರ್ಮರು. ನಿಮ್ಮನ್ನು ದರ್ಶನಮಾಡುವವರ ವಿಷಯದಲ್ಲಿ ನೀವು ಶುಭಾರ್ಥಿಗಳು.

೮೮. ನಾನು ಶ್ರೀಕೃಷ್ಣನ ಪುತ್ರನು. ನನ್ನ ಹೆಸರು ಸಾಂಬನೆಂದು ಪ್ರಸಿದ್ಧವಾಗಿದೆ. ನಾನು ಚಂದ್ರಭಾಗಾ ನದೀತೀರದಲ್ಲಿ ಸೂರ್ಯವಿಗ್ರಹವನ್ನು ಸ್ಥಾಪಿಸಿದ್ದೇನೆ.

ತೇನಾಹಂ ಪ್ರೇಷಿತಶ್ಚಾತ್ರ ಉತ್ತಿಷ್ಠಧ್ವಂ ವ್ರಜಾಮಹೇ ।
ತೇ ತಮೂಚುಸ್ತತಃ ಸಾಂಬಮೇವಮೇತನ್ನ ಸಂಶಯಃ ॥ ೮೯ ॥

ಅಸ್ಮಾಕಮಪಿ ದೇವೇನ ವ್ಯಾಖ್ಯಾತಂ ಪೂರ್ವಮೇವ ಹಿ ।
ಅಷ್ಟಾದಶಕಲಾನೀಹ ಮಗಾನಾಂ ವೇದವಾದಿನಾಂ ।
ಯಾಸ್ಯಂತಿ ಯೇ ತ್ವಯಾ ಸಾರ್ಧಂ ಯಥಾ ದೇವೇನ ಭಾಷಿತಂ ॥ ೯೦ ॥

ತತಸ್ತಾನಿ ದಶಾಷ್ಟೌ ಚ ಕಲಾನೀಹ ಸಮಂತತಃ ।
ಆರೋಪ್ಯ ಗರುಡೇ ಸಾಂಬಸ್ತ್ವರಿತಃ ಪುನರಭ್ಯಗಾತ್ ॥ ೯೧ ॥

ಸ್ವಲ್ಪೇನೈವ ತು ಕಾಲೇನ ಪ್ರಾಪ್ತೋ ಮಿತ್ರವನಂ ತತಃ ।
ಕೃತ್ವಾಜ್ಞಾಂ ತು ರವೇಃ ಸಾಂಬಃ ಕೃತ್ಸ್ನಂ ತ್ವೇವಂ ನ್ಯವೇದಯೇತ್ ॥ ೯೨ ॥

ರವಿಃ ಶೋಭನಮಿತ್ಯುಕ್ತ್ವಾ ಪ್ರಸನ್ನಃ ಸಾಂಬಮಬ್ರವೀತ್ ।
ಮಮಪೂಜಾ ಕರಾಹ್ಯೇತೇ ಪ್ರಜಾನಾಂ ಶಾಂತಿಕಾರಕಾಃ ॥ ೯೩ ॥

---

೮೯. ಸೂರ್ಯದೇವನೇ ನನ್ನನ್ನು ಇಲ್ಲಿಗೆ ಕಳುಹಿಸಿಕೊಟ್ಟಿದ್ದಾನೆ. ಏಳಿ ಹೋಗೋಣ ಎಂದನು, ಆ ಮೇಲೆ ಸಾಂಬನನ್ನು ಕುರಿತು ಹಾಗೆಯೇ ಆಗಲಿ.

೯೦ ಸೂರ್ಯದೇವನು ಈ ಮೊದಲೇ ಇದನ್ನು ನಮಗೂ ಹೇಳಿದ್ದಾನೆ. ವೇದ ವಾದಿಗಳಾದ ಮಗರ ಹದಿನೆಂಟು ಗುಂಪುಗಳು ಸ್ವಾಮಿಯ ಅಪ್ಪಣೆಪ್ರಕಾರ ನಿನ್ನೊಡನೆ ಹೊರಡುವರು ಎಂದರು.

೯೧. ಅನಂತರದಲ್ಲಿ ಸಾಂಬನು ಆ ಹದಿನೆಂಟು ಗುಂಪಿನವರನ್ನು ಗರುಡನ ಮೇಲೆ ಏರಿಸಿಕೊಂಡು ತ್ವರೆಯಿಂದ ಹಿಂದಿರುಗಿದನು.

೯೨. ಅವನು ಸ್ವಲ್ಪಹೊತ್ತಿನಲ್ಲೇ ಮಿತ್ರವನಕ್ಕೆ ಬಂದಿಳಿದನು. ಅಲ್ಲಿ ಸಾಂಬನು ಸ್ವಾಮಿಯ ಆಜ್ಞೆಯನ್ನು ನಡೆಸಿದ ಪ್ರಕಾರವೆಲ್ಲವನ್ನೂ ಆ ಪ್ರತಿಮೆಗೆ ತಿಳಿಸಿದನು.

೯೩. ಸೂರ್ಯನು ಒಳ್ಳೆಯದೆಂದು ಹೇಳಿ ಪ್ರಸನ್ನನಾಗಿ ಸಾಂಬನನ್ನು ಕುರಿತು ಅಯ್ಯಾ ಇವರು ನನ್ನ ಪೂಜೆಯನ್ನು ಮಾಡುವವರೂ ಪ್ರಜೆಗಳಿಗೆ ಶಾಂತಿಕರರೂ ಆಗಿದ್ದಾರೆ.

**ಮಮ ಪೂಜಾಂ ಕರಿಷ್ಯಂತಿ ವಿಧಾನೋಕ್ತಾಂ ಯದೂತ್ತಮ ।**
**ತತ್ಕೃತೇ ನ ಪುನಶ್ಚಿಂತಾ ತವ ಕಾಚಿದ್ಭವಿಷ್ಯತಿ ॥ ೯೪ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಾಂಬೋಪಾ ಖ್ಯಾನೇ ಭೋಜಕಾನಯನಂ ನಾಮ್ನೈಕೋನಚತ್ವಾರಿಂಶದುತ್ತರ ಶತತಮೋಽಧ್ಯಾಯಃ.**



---

೯೪. "ಎಲೈ ಯದೂತ್ತಮನಾದ ಸಾಂಬನೇ! ಇವರು ವಿಧಾನೋಕ್ತವಾಗಿ ನನ್ನ ಪೂಜೆಯನ್ನು ಮಾಡುವರು. ಅದಕ್ಕಾಗಿ ಪುನಃ ನಿನಗೆ ಯಾವ ಚಿಂತೆಯೂ ಉಂಟಾಗುವುದಿಲ್ಲ ಎಂದು" ಹೇಳಿದನು.

ಇಲ್ಲಿಗೆ ಶ್ರೀ ಭವ್ಶಿಷಮಹಾಪುರಾಣದ ಬ್ರಾಹ್ಮೇಪರ್ವದಲ್ಲಿ ಸಾಂಬೋಪಾಖ್ಯಾನ ದಲ್ಲಿ ಭೋಜಕರನ್ನು ಕರೆತಂದವಿಚಾರವಾದ ನೂರಮೂವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಚತ್ವಾರಿಂಶದುತ್ತರಶತತಮೋಽಧ್ಯಾಯಃ

॥ ಸುಮಂತುರುವಾಚ ॥

ಏವಂ ಸ ಆನಯಿತ್ವಾ ತು ಮಗಾನ್ ಸಾಂಬೋ ಮಹೀಪತೇ ।
ಸ ಮಹಾತ್ಮಾ ಪುರಾ ಸಾಂಬಶ್ಚಂದ್ರಭಾಗಾಸರಿತ್ತಟೇ ॥ ೧ ॥

ಪುರಂ ನಿವೇಶಯಾಮಾಸ ಸ್ಥಾಪಯಿತ್ವಾ ದಿವಾಕರಂ ।
ಕೃತ್ವಾ ಧನಸಮೃದ್ಧಂ ತು ಭೋಜಕಾನಾಂ ಸಮಾರ್ಪಯತ್ ॥ ೨ ॥

ತತ್ಪುರಂ ಸವಿತುಃ ಪುಣ್ಯಂ ತ್ರಿಷು ಲೋಕೇಷು ವಿಶ್ರುತಂ ।
ಸಾಂಬೇನ ಕಾರಿತಂ ಯಸ್ಮಾತ್ತಸ್ಮಾತ್ಸಾಂಬಪುರಂ ಸ್ಮೃತಂ ॥ ೩ ॥

---

## ನೂರನಲವತ್ತನೆಯ ಅಧ್ಯಾಯ

೧. ಸುಮಂತುಮುನಿವರ್ಯರು ಹೇಳುತ್ತಾರೆ—ಎಲೈ ರಾಜನೇ! ಹೀಗೆ ಮಹಾತ್ಮನಾದ ಸಾಂಬನು ಪೂರ್ವಕಾಲದಲ್ಲಿ ಮಗಸಂಜ್ಞಕರನ್ನು ಕರೆತಂದು ಚಂದ್ರಭಾಗಾ ನದಿಯ ದಡದಲ್ಲಿ ಸೂರ್ಯನನ್ನು ಪ್ರತಿಷ್ಠೆಮಾಡಿಸಿ ಅಲ್ಲಿ ಒಂದು ಪಟ್ಟಣವನ್ನು ಕಟ್ಟಿಸಿದನು.

೨-೩. ಅದನ್ನು ಧನಸಮೃದ್ಧವನ್ನಾಗಿ ಮಾಡಿ ಆ ನಗರವನ್ನು ಭೋಜಕರಿಗೆ ಅರ್ಪಿಸಿದನು. ಪುಣ್ಯಕರವಾದ ಆ ಪುರವು ಮೂರುಲೋಕಗಳಲ್ಲೂ ಪ್ರಸಿದ್ಧವಾದುದು. ಸಾಂಬನು ಕಟ್ಟಿಸಿದುದರಿಂದ ಆ ಪುರಕ್ಕೆ ಸಾಂಬಪುರವೆಂದು ಹೆಸರಾಗಿದೆ.

ತಸ್ಮಿನ್ ಪ್ರತಿಷ್ಠಿತೋ ದೇವಃ ಪುರಮಧ್ಯೇ ದಿವಾಕರಃ ।
ಸತ್ಕೃತ್ಯ ಸ್ಥಾಪಿತಾಃ ಸರ್ವೇ ಆತ್ಮನಾಮಾಂಕಿತೇ ಪುರೇ ॥ ೪ ॥

ಮಗಾನಾಂ ತು ಸದಾಚಾರೋ ದೃಷ್ಟ್ವಾಚಾರಕುಲೋಚಿತಃ ।
ದೇವಶುಶ್ರೂಷಣಂ ಗೀತಂ ವೇದಪ್ರೋಕ್ತೇನ ಕರ್ಮಣಾ ॥ ೫ ॥

ಕೃತಕೃತ್ಯಸ್ತದಾ ಸಾಂಬೋ ವರಂ ಲಬ್ಧ್ವಾ ಪುನರ್ಯುವಾ ।
ಆದಿದೇವಂ ಸುರಜ್ಯೇಷ್ಠಮಾದಿತ್ಯಂ ಪ್ರಣಿಪತ್ಯ ಸಃ ॥ ೬ ॥

ಅನಂತರಂ ಮಗಾನ್ ಸರ್ವಾನ್ ಪ್ರಣಿಪತ್ಯಾಭಿವಾದ್ಯ ಚ ।
ಪ್ರಸ್ಥಿತೋ ನಿರ್ಮಲಾಂ ಸಾಂಬಃ ಪುರೀಂ ದ್ವಾರವತೀಂ ತದಾ ॥ ೭ ॥

ಮಗಾನಾಂ ಕಾರಣಾರ್ಥೇನ ಪ್ರಾರ್ಥಿತಾ ಭೋಜವಂಶಜಾಃ ।
ವಸುದೇವಸ್ಯ ಪೌತ್ರೇಣ ಗೋತ್ರಜೇನ ಮಹಾತ್ಮನಾ ॥ ೮ ॥

ಕನ್ಯಾದಾನಂ ಕೃತಂ ತೇಷಾಂ ಮಗಾನಾಂ ಭೋಜಕೋತ್ತಮೈಃ ।
ಸರ್ವಾಸ್ತಾಃ ಸಹಿತಾಃ ಕನ್ಯಾಃ ಪ್ರವಾಲಮಣಿಭೂಷಿತಾಃ ॥ ೯ ॥

---

೪. ಆ ಪುರಮಧ್ಯದಲ್ಲಿ ಸೂರ್ಯದೇವನನ್ನು ಪ್ರತಿಷ್ಠೆಮಾಡಿದನು. ತನ್ನ ಹೆಸರಿನ ಅಂಕಿತದ ಸಾಂಬಪುರವೆಂಬ ಆ ಪಟ್ಟಣದಲ್ಲಿ ಇತರ ಎಲ್ಲಾ ದೇವರನ್ನೂ ಸ್ಥಾಪಿಸಿದನು.

೫. ಮಗರ ಸದಾಚಾರವಾದರೋ ಆಚಾರಶೀಲರ ಕುಲಕ್ಕೆ ಯೋಗ್ಯವಾದುದು· ವೇದೋಕ್ತಕ್ರಮದಿಂದ ದೇವರಶುಶ್ರೂಷಣವನ್ನು ಮಾಡಿ

೬. ಗಾನದಿಂದ ದೇವನನ್ನು ಮೆಚ್ಚಿಸಿ ಕೃತಾರ್ಥನಾದ ಸಾಂಬನು ಸೂರ್ಯಾನುಗ್ರಹ ಪಡೆದು ಪುನಃ ರೂಪಸಂಪನ್ನನಾದನು. ಅವನು ಅಲ್ಲಿ ಆದಿದೇವನೂ ಸುರಜ್ಯೇಷ್ಠನೂ ಆದ

೭. ಆದಿತ್ಯನಿಗೆ ನಮಸ್ಕರಿಸಿ ಎಲ್ಲಾ ಮಗರನ್ನೂ ಅಭಿವಂದಿಸಿದ ಮೇಲೆ ಪವಿತ್ರವಾದ ದ್ವಾರಕಾನಗರಕ್ಕೆ ಹೋಗುವುದಾಗಿ ನಿಶ್ಚಯಿಸಿ.

೮. ವೃಷ್ಣಿಗೋತ್ರನೂ, ಮಹಾತ್ಮನೂ, ವಸುದೇವಪೌತ್ರನೂ ಆದ ಸಾಂಬನು ಮಗರಿಗೆ ವಿವಾಹಮಾಡುವುದಕ್ಕೋಸ್ಕರ ಭೋಜಕ ವಂಶದವರನ್ನು ಪ್ರಾರ್ಥಿಸಿದನು.

೯. ಆ ಪ್ರಾರ್ಥನೆಯಂತೆ ಉತ್ತಮರಾದ ಭೋಜಕರು ತಮ್ಮ ಪುತ್ರಿಯರನ್ನು ಪ್ರವಾಳಮಣಿಗಳಿಂದ ಅಲಂಕರಿಸಿ ಆ ಮಗರಿಗೆ ಕನ್ಯಾದಾನ ಮಾಡಿದರು.

**ಅರ್ಚಯಿತ್ವಾ ತು ತಾಃ ಸರ್ವಾಃ ಪ್ರೇಷಿತಾಃ ಸವಿತುರ್ಗೃಹಂ ।**
**ಪುನರ್ಗತ್ವಾ ತು ಸಾಂಬೇನ ಪೃಷ್ಟೋ ದೇವೋ ದಿವಾಕರಃ ॥ ೧೦ ॥**

**ಮಗಾನಾಂ ಜ್ಞಾನಮಾಖ್ಯಾಹಿ ವೇದಾನವ್ಯಂಗಮೇವ ಚ ।**
**ಸಾಂಬಸ್ಯ ವಚನಂ ಶ್ರುತ್ವಾ ಭಾಸ್ಕರೋ ವಾಕ್ಯಮಬ್ರವೀತ್ ॥ ೧೧ ॥**

**ಪೃಚ್ಛ ತ್ವಂ ನಾರದಂ ಗತ್ವಾ ಸ ತೇ ಸರ್ವಂ ವದಿಷ್ಯತಿ ।**
**ಏವಮುಕ್ತೋಽಥ ವೈ ಸಾಂಬೋ ಗತವಾನ್ನಾರದಂ ಪ್ರತಿ ॥ ೧೨ ॥**

**ಗತ್ವಾ ಕೃತ್ಸ್ನಮಿದಂ ಸರ್ವಂ ತಸ್ಮೈ ತೇನ ನಿವೇದಿತಂ ।**
**ಸ ಚಾಪ್ಯಾಹ ತತಃ ಸಾಂಬಂ ನ ಜಾನೇ ಜ್ಞಾನಮುತ್ತಮಂ ॥ ೧೩ ॥**

**ಭೋಜಕಾನಾಂ ಯದುಶ್ರೇಷ್ಠ ಜ್ಞಾನಂ ವ್ಯಾಸೋ ಮಹಾಮುನಿಃ ।**
**ತಂ ಗತ್ವಾ ಪರಿಪೃಚ್ಛ ತ್ವಂ ಪ್ರಣಮ್ಯ ಶಿರಸಾ ಮುನಿಂ ॥ ೧೪ ॥**

---

೧೦ ಸಾಂಬನು ಆ ಸ್ತ್ರೀಸಮೇತರಾದ ಆ ಮಗರನ್ನು ಪೂಜಿಸಿ, ಸೂರ್ಯದೇವನ ದೇವಾಲಯಕ್ಕೆ ಕಳುಹಿಸಿ ತಾನೂ ಅಲ್ಲಿಗೆ ಪುನಃ ಹೋಗಿ ಸೂರ್ಯನನ್ನು ಕುರಿತು

೧೧. "ಈ ಮಗರಿಗೆ ಅವ್ಯಂಗಧಾರಣವನ್ನೂ ವೇದ ವೇದಾಂಗಸಮೇತವಾಗಿ ಜ್ಞಾನವನ್ನೂ ಉಪದೇಶ ಮಾಡು" ಎಂದು ಕೇಳಿದನು. ಆಗ ಸೂರ್ಯನು ಸಾಂಬನ ಮಾತನ್ನು ಕೇಳಿ,

೧೨. ಅಯ್ಯಾ ಸಾಂಬನೇ! ನೀನು ನಾರದರಲ್ಲಿಗೆ ಹೋಗಿ ಕೇಳು. ಅವರು ನಿನಗೆ ಎಲ್ಲವನ್ನೂ ಹೇಳುವರು ಎಂದು ಹೇಳಿದನು. ಈಮಾತನ್ನು ಕೇಳಿದ ಸಾಂಬನು ನಾರದನ ಬಳಿಗೆ ಹೊರಟನು.

೧೩. ಬಳಿಕ ಅವನು ಅಲ್ಲಿಗೆ ಹೋಗಿ ನಡೆದುದೆಲ್ಲವನ್ನೂ ಸಮಗ್ರವಾಗಿ ನಾರದರಿಗೆ ತಿಳಿಸಿದನು. ಆಗ ನಾರದರು "ಎಲೈ ಯದುಶ್ರೇಷ್ಠನೇ! ಉತ್ತಮಜ್ಞಾನದ ವಿಚಾರವನ್ನು ನಾನರಿಯೆನು.

೧೪. ಅದನ್ನು ವ್ಯಾಸಮಹಾಮುನಿಯು ಬಲ್ಲನು. ಆತನ ಬಳಿಗೆ ಹೋಗಿ ನಮಸ್ಕರಿಸಿ ವಿನಯದಿಂದ ಆತನನ್ನು ಕೇಳು.

ಕೃಷ್ಣಾನುರೋಧಾತ್ತೇ ಸರ್ವಂ ಸ ವಕ್ಷ್ಯತಿ ನ ಸಂಶಯಃ ।
ನಾರದೇನೈವಮುಕ್ತಸ್ತು ಸಾಂಬೋ ಜಾಂಬವತೀಸುತಃ ॥ ೧೫ ॥

ವ್ಯಾಸಾಶ್ರಮಂ ಸ ಗತ್ವಾ ತು ಪ್ರಣಮ್ಯ ಶಿರಸಾ ಮುನಿಂ ।
ಕೃತಾಂಜಲಿಪುಟೋ ಭೂತ್ವಾ ಇದಂ ವಚನಮಬ್ರವೀತ್ ॥ ೧೬ ॥

ಶಾಕದ್ವೀಪಂ ಮಯಾ ಗತ್ವಾ ಆನೀತಾ ಮಗಪುಂಗವಾಃ ।
ಬಾಲಾ ಯೌವನಸಂಪನ್ನಾಃ ಸಂನಿವಿಷ್ಟಾ ಮಗೋತ್ತಮಾಃ ॥ ೧೭ ॥

ಸತ್ಕೃತ್ಯ ಪೂಜಯಿತ್ವಾ ತು ಪುರಂ ತೇಷಾಂ ಸಮರ್ಪಿತಂ ।
ಸಂಪ್ರಾಪ್ಯ ತು ಪುರಂ ತೇ ವೈ ಜ್ಯೇಷ್ಠಮಧ್ಯಕನೀಯಸಃ ॥ ೧೮ ॥

ಭೋಜವಂಶಸಮುತ್ಪನ್ನಾಃ ಕನ್ಯಕಾಃ ಸಮಲಂಕೃತಾಃ ।
ವರಯಿತ್ವಾ ಕೃತಂ ತೇಷಾಂ ವಿಪ್ರಪ್ರಣಯನಂ ಶುಭಂ ॥ ೧೯ ॥

---

೧೫. ನೀನು ಕೃಷ್ಣನ ಅನುಯಾಯಿಯಾದುದರಿಂದ ಅವನು ನಿನಗೆ ಎಲ್ಲವನ್ನೂ ಹೇಳುತ್ತಾನೆ. ಸಂಶಯವಿಲ್ಲ" ಎಂದು ಹೇಳಿದನು. ಹೀಗೆ ಹೇಳಿದ್ದನ್ನು ಕೇಳಿ ಜಾಂಬವತೀಸುತನಾದ ಸಾಂಬನು

೧೬. ಬಳಿಕ ವ್ಯಾಸಾಶ್ರಮಕ್ಕೆ ಹೋಗಿ ಆ ಮುನಿಗೆ ತಲೆಬಾಗಿ ನಮಸ್ಕರಿಸಿ ಕೈಮುಗಿದು ಈ ಮುಂದಿನಮಾತನ್ನು ಹೇಳಿದನು.

೧೭. ಸ್ವಾಮಿ ಮುನಿಪುಂಗವರೆ! ನಾನು ಶಾಕದ್ವೀಪಕ್ಕೆ ಹೋಗಿ ಮಗಶ್ರೇಷ್ಠರನ್ನು ಕರೆತಂದೆನು. ಅವರಲ್ಲಿ ಕೆಲವರು ಬಾಲರೂ, ಕೆಲವರು ಯೌವನಸಂಪನ್ನರೂ ಕೆಲವರು ಸಂನಿವಿಷ್ಟರೂ ಆಗಿದ್ದರು.

೧೮. ಅವರನ್ನು ಸತ್ಕಾರಮಾಡಿ ಪೂಜಿಸಿ ಒಂದು ಪಟ್ಟಣವನ್ನು ಕಟ್ಟಿ ಅವರಿಗೆ ಸಮರ್ಪಣೆಮಾಡಿದುದೂ ಆಯಿತು. ಜ್ಯೇಷ್ಠರೂ, ಮಧ್ಯದವರೂ, ಕಿರಿಯರೂ ಆದ ಅವರು ಆ ಪಟ್ಟಣದಲ್ಲಿರುತ್ತಾರೆ.

೧೯. ಆ ಮಗರಲ್ಲಿ ಯುವಕರು ಭೋಜಕವಂಶದಲ್ಲಿ ಅಲಂಕೃತರಾದ ಕನ್ಯೆಯರನ್ನು ವರಿಸಿ, ಅವರಲ್ಲಿ ವಿಪ್ರರಿಗೆ ಉಚಿತವಾದ ಶುಭಪ್ರಣಯವನ್ನೂ ಮಾಡಿದರು.

**ಅಹೋ ಸಭಾಗ್ಯಾಃ ಶ್ಲಾಘ್ಯಾಶ್ಚ ಕೃತಪುಣ್ಯಾಶ್ಚ ತೇ ಸದಾ ।**
**ಪೂಜಾಯಾಂ ಯೇ ರತಾ ಭಾನೋರ್ಯೇಷಾಂ ಚೈವ ವರಪ್ರದಃ ॥ ೨೦ ॥**

**ಪರ್ಯಾಪ್ತಂ ಸರ್ವಮೇತೇಷಾಮಿಹ ಚಾಮುಷ್ಮಿಕಂ ಫಲಂ ।**
**ಅನಿತ್ಯೇ ಸತಿ ಮಾನುಷ್ಯೇ ದೇವಪೂಜಾ ರತಾ ಹಿ ಯೇ ॥ ೨೧ ॥**

**ಕಿಂತು ಚಿಂತಯತಃ ಸೂರ್ಯಂ ಚಿಂತಯಿತ್ವಾ ತು ಭೋಜಕಾನ್ ।**
**ಜ್ಞಾನಂ ಪ್ರತಿ ತಥಾ ಚೈಷಾಂ ಹೃದಯೇ ಸಂಶಯೋ ಮಮ ॥ ೨೨ ॥**

**ಕಥಂ ಪೂಜಾಕರಾಹ್ಯೇತೇ ಕೇ ಮಗಾಃ ಕೇ ಚ ಭೋಜಕಾಃ ।**
**ಜ್ಞಾನಂ ಕಿಂ ಪರಮಂ ತೇಷಾಂ ಜ್ಞೇಯಸ್ತೇಷಾಂ ಕ ಏವ ತು ॥ ೨೩ ॥**

**ದಿವ್ಯೇತಿ ತೇ ಕಥಂ ಪ್ರೋಕ್ತಾಃ ಕಿಮರ್ಥಂ ಕೂರ್ಚಧಾರಣಂ ।**
**ಸೌರವ್ರತಂ ಕಿಮರ್ಥಂ ತು ವಾಚಕಾಸ್ತೇ ಕಥಂ ಸ್ಮೃತಾಃ ॥ ೨೪ ॥**

---

೨೦. ಅಹಾ! ಅವರೇ ಅದೃಷ್ಟವಂತರು, ಶ್ಲಾಘ್ಯರು, ಪುಣ್ಯವಂತರು, ಅವರು ಸೂರ್ಯಪೂಜೆಯಲ್ಲಿ ಆಸಕ್ತರು; ಅವರಿಗೆ ಸೂರ್ಯನುವರಪ್ರದನಾಗಿದ್ದಾನೆ.

೨೧. ಮನುಷ್ಯಜನ್ಮವು ಅನಿತ್ಯವಾದುದು, ಇದು ಲಭ್ಯವಾದಾಗ ದೇವಪೂಜೆಯಲ್ಲಿ ಆಸಕ್ತರಾದವರಿಗೆ ಐಹಿಕ ಆಮುಷ್ಮಿಕಫಲಗಳೆಲ್ಲಾ ಸಂಪೂರ್ಣವಾಗಿ ದೊರೆಯುವುವು. ಇದು ನಿಶ್ಚಯ.

೨೨. ಆದರೆ ಸೂರ್ಯನನ್ನು ಆರಾಧಿಸುತ್ತಿರುವ ಭೋಜಕರ ವಿಚಾರದ ನೆನಪು ಬಂದು ಅವರ ಜ್ಞಾನದ ವಿಷಯದಲ್ಲಿ ನನಗೆ ಸಂದೇಹವಾಗಿದೆ.

೨೩. ಮಗರು ಯಾರು? ಭೋಜಕರು ಯಾರು? ಇವರು ಅರ್ಚಕರಾದುದು ಹೇಗೆ? ಇವರ ಉತ್ಕೃಷ್ಟವಾದ ಜ್ಞಾನವು ಎಂಥದು? ಅವರ ಜ್ಞಾನಕ್ಕೆ ವಿಷಯನಾದವನು ಯಾರು?

೨೪. ಅವರಿಗೆ ದಿವ್ಯರೆಂದು ಹೆಸರು ಬರಲು ಕಾರಣವೇನು? ಅವರು ಗಡ್ಡ ಮೀಸೆಗಳನ್ನು ಏತಕ್ಕೆ ಬಿಟ್ಟಿರುವರು? ಅವರು ಸೌರವ್ರತವನ್ನು ಏತಕ್ಕೆ ಮಾಡುತ್ತಾರೆ? ಅವರನ್ನು ವಾಚಕರೆಂದು ಏಕೆ ಕರೆಯಬೇಕು?

ಕಿಮರ್ಥಂ ತೇಜಸಾ ವೇದಾನ್ ಗಾಯಂತಶ್ಚೈವ ತೇ ಕಥಂ ।
ಅಥಾಹಿಕಂಚುಕಸ್ಯಾಂಗಂ ಕಿಂ ಪ್ರಮಾಣಂ ಚ ಕಸ್ಯ ವೈ ॥ ೨೫ ॥

ಕಸ್ಯ ವೈ ಕಾ ಚ ತನ್ಮಾತಾ ಯದುತ್ಪನ್ನಂ ಕಥಂ ಸ್ಮೃತಂ ।
ಕಥಂ ದೇವಾಂಶ್ಚ ಗಾಯಂತಿ ಯಜ್ಞಂ ಕುರ್ವಂತಿ ತೇ ಕಥಂ ॥ ೨೬ ॥

ಅಗ್ನಿಹೋತ್ರಂ ಚ ಕಿಂ ತೇಷಾಂ ಪಂಚದೋಲಾಶ್ಚ ಕಾ ಸ್ಮೃತಾಃ ।
ಏತತ್ಸರ್ವಂ ಸಮಾಖ್ಯಾಹಿ ಭೋಜಕಾನಾಂ ವಿಚೇಷ್ಟಿತಂ ॥ ೨೭ ॥

ಸಾಂಬಸ್ಯ ವಚನಂ ಶ್ರುತ್ವಾ ಕೃಷ್ಣದ್ವೈಪಾಯನೋ ಮುನಿಃ ।
ಕಾಲೀಸುತೋ ಮಹಾತೇಜಾ ಉವಾಚ ಪರಮಂ ವಚಃ ॥ ೨೮ ॥

ಸಾಧು ಸಾಧು ಯದುಶ್ರೇಷ್ಠ ಸಾಧು ಪೃಷ್ಟೋಽಸ್ಮಿ ಸುವ್ರತ ।
ದುರ್ಜ್ಞೇಯಂಚೇಷ್ಟಿತಂ ಕಿಂಚಿತ್ ಭೋಜಕಾನಾಂ ನ ಸಂಶಯಃ ॥ ೨೯ ॥

---

೨೫. ಅವರು ಬಹುತೇಜೋವಂತರಾಗಿ ವೇದಗಳನ್ನು ಏತಕ್ಕೋಸ್ಕರ ಹಾಗೆ ಗಾನಮಾಡುತ್ತಾರೆ ? ಇವರು ಧಾರಣೆಮಾಡುವ ಅಹಿಕಂಚುಕದ ಅಂಗವು ಎಂದರೆ ಅವ್ಯಂಗವು ಯಾವ ಅಳತೆಯದಾಗಿರಬೇಕು ಅದನ್ನು ಹೇಗೆ ಮಾಡಬೇಕು ?

೨೬. ಅವರು (ಭೋಜಕರು) ಯಾವನ ಮಕ್ಕಳು ? ಅವರ ತಾಯಿಯಾರು? ಅವರ ಉತ್ಪತ್ತಿ ಹೇಗೆ ಆಯಿತು ? ಅವರು ದೇವತೆಗಳನ್ನು ಹೇಗೆ ಗಾನಮಾಡುತ್ತಾರೆ? ಯಜ್ಞವನ್ನು ಹೇಗೆ ಮಾಡುತ್ತಾರೆ ?

೨೭. ಅವರಿಗೆ ಅಗ್ನಿಹೋತ್ರವಿಧಿಯಾವುದು? ಪಂಚದೋಲಗಳು ಯಾವುವು? ಭೋಜಕರ ಸಂಬಂಧವಾದ ಈ ಎಲ್ಲಾ ವಿಷಯಗಳನ್ನು ಹೇಳು ಎಂದನು.

೨೮ ಕಾಲೀರೂಪಿಣಿಯಾದ ಸತ್ಯವತೀಪುತ್ರನೂ, ಮಹಾತೇಜಸ್ವಿಯೂ ಆದ ವ್ಯಾಸಮುನಿಯು, ಸಾಂಬನ ಈ ಮಾತುಗಳನ್ನು ಕೇಳಿ ಈ ಶ್ರೇಷ್ಠವಾದ ಮಾತನ್ನು ಹೇಳಿದನು.

೨೯. ಸುವ್ರತನಾದ ಯದುಶ್ರೇಷ್ಠನೇ ! ನೀನು ನನ್ನನ್ನು ಚೆನ್ನಾಗಿ ಕೇಳಿದೆ. ಭೋಜಕರ ವ್ಯಾಪಾರಗಳಲ್ಲಿ ತಿಳಿಯಲು ಅಸಾಧ್ಯವಾದ ಒಂದಾನೊಂದು ವಿಚಾರವು.

**ಭಾಸ್ಕರಸ್ಯ ಪ್ರಸಾದೇನ ಮಮಾಪಿ ಸ್ಮೃತಿಮಾಗತಂ ।**
**ಯಥಾಖ್ಯಾತಂ ವಶಿಷ್ಠೇನ ತಥಾ ತೇ ವಚ್ಮಿ ಕೃತ್ಸ್ನಶಃ** ॥ ೩೦ ॥

**ಮಗಾನಾಂ ಚರಿತಂ ಶ್ರೇಷ್ಠಂ ಶೃಣು ತ್ವಂ ಕೃಷ್ಣನಂದನ ।**
**ಜ್ಞಾನವೇದಿನ ಏವೈತೇ ಕರ್ಮಯೋಗಂ ಸಮಾಶ್ರಿತಾಃ** ॥ ೩೧ ॥

**ಶ್ರೂಯಂತೇ ಋಷಯಸ್ಸರ್ವೇ ಮೌನೇನ ನಿಯಮಸ್ಥಿತಾಃ ।**
**ಭುಂಜತೇ ಚಾಪಿ ಮೌನೇನ ಸರ್ವೇ ವೈ ಪರಮರ್ಷಯಃ** ॥ ೩೨ ॥

**ಮುನಿಚರ್ಯಾಕೃತಸ್ತೇಽಪಿ ಶಾಕದ್ವೀಪನಿವಾಸಿನಃ ।**
**ತಸ್ಮಾನ್ಮೌನೇನ ಭೋಕ್ತವ್ಯಮಗುಣತ್ವಮನಿಚ್ಛತಾ** ॥ ೩೩ ॥

**ವಚಸ್ಸೂರ್ಯ ಸಮಾಖ್ಯಾತಂ ಕಾರಣಂ ಚ ವರಂ ತಥಾ ।**
**ಅರ್ಚಾಯಾಂ ಕೇ ಚ ತೇ ಯುಕ್ತಾ ಅರ್ಚಯಂತಿ ಚ ತೇ ಕಥಂ** ॥ ೩೪ ॥

---

೩೦. ಸೂರ್ಯಾನುಗ್ರಹದಿಂದ ಈಗ ನನ್ನ ನೆನಪಿಗೆ ಬಂದಿತು. ವಸಿಷ್ಠನು ಹೇಳಿದಪ್ರಕಾರ ನಿನಗೆ ಆ ವಿಷಯವನ್ನು ಸಮಗ್ರವಾಗಿ ಹೇಳುತ್ತೇನೆ

೩೧. ಎಲೈ ಕೃಷ್ಣಸೂನುವಾದ ಸಾಂಬನೇ! ಶ್ರೇಷ್ಠರಾದ ಆ ಮಗಸಂಜ್ಞಕರ ಚರಿತ್ರೆಯನ್ನು ಕೇಳು. ಆ ಜನರು ಅವಶ್ಯವಾಗಿ ತಿಳಿಯಬೇಕಾದುದನ್ನು ತಿಳಿದುಕೊಂಡಿರುವರು. ಮತ್ತು ಕರ್ಮಯೋಗವನ್ನು ಆಶ್ರಯಿಸಿರುವರು.

೩೨. ಪರಮಋಷಿಸದೃಶರಾದ ಅವರೆಲ್ಲಾ ಮೌನನಿಯಮದಲ್ಲಿರತಕ್ಕವರೆಂದು ಕೇಳಿದೇನೆ. ಆ ಋಷಿಶ್ರೇಷ್ಠರೆಲ್ಲರೂ ಮೌನದಿಂದ ಭೋಜನಮಾಡುತ್ತಾರೆ

೩೩. ಶಾಕದ್ವೀಪ ನಿವಾಸಿಗಳಾದ ಅವರು ಋಷಿಗಳಂತೆ ನಡವಳಿಕೆಯುಳ್ಳವರು. ಆದ್ದರಿಂದ (ಗುಣರಾಹಿತ್ಯ) ಅಗುಣತ್ವವನ್ನು ಅಪೇಕ್ಷಿಸದವನು ಮೌನದಿಂದ ಭೋಜನಮಾಡಬೇಕು ಎಂದನು.

೩೪. ಅರ್ಚಕರ ವಿಷಯದಲ್ಲಿ ಸೂರ್ಯನು ಹೇಳಿದ ಮಾತು ಯಾವುದು? ಮತ್ತು ಅವನು ಹೇಳಿದ ಶ್ರೇಷ್ಠವಾದ ಕಾರಣ ಯಾವುದು? ಪೂಜಾವಿಷಯಕ್ಕೆ ನಿಯತರಾದವರು ಯಾರು? ಈಗ ಪೂಜೆಮಾಡುತ್ತಿರುವವರು ಯಾರು? ಯಾವ ಕ್ರಮದಲ್ಲಿ ಪೂಜಿಸುವರು? ಎಂದು ಕೇಳಿದನು.

ಭೋಜಕನ್ಯಾಸು ಜಾತತ್ವಾದ್ಭೋಜಕಾಸ್ತೇನ ತೇ ಸ್ಮೃತಾಃ ।
ಬ್ರಾಹ್ಮಣಾನಾಂ ಯಥಾ ಪ್ರೋಕ್ತಾ ವೇದಾಶ್ಚತ್ವಾರ ಏವ ತು ॥ ೩೫ ॥

ಋಗ್ವೇದೋಽಥಯಜುರ್ವೇದಃ ಸಾಮವೇದಸ್ತ್ವಥರ್ವಣಃ ।
ಬ್ರಾಹ್ಮಣೋಕ್ತಾ ಸ್ತಥಾ ವೇದಾಃ ಮಗಾನಾಮಪಿ ಸುವ್ರತ ॥ ೩೬ ॥

ತ ಏವ ವಿಪರೀತಾಸ್ತು ತೇಷಾಂ ವೇದಾಃ ಪ್ರಕೀರ್ತಿತಾಃ ।
ವೇದೋ ವಿಶ್ವಮದಶ್ಚೈವ ವಿದ್ವದ್ವಹ್ನಿ ರಸಸ್ತಥಾ ॥ ೩೭ ॥

ವೇದಾಹ್ಯೇತೇ ಮಗಾನಾಂ ತು ಪುರೋವಾಚ ಪ್ರಜಾಪತಿಃ ।
ಮಗಾ ವೇದಮಧೀಯುಸ್ತೇ ವೇದಾಂಗಸ್ತೇನ ತೇ ಸ್ಮೃತಾಃ ॥ ೩೮ ॥

ಶೇಷಸ್ಸ ಹಿ ಮಹಾಭಾಗಃ ಸರ್ವ ಸತ್ವ ಸುಖಾವಹಃ ।
ಸ ಸೂರ್ಯರಥಮಾಸಾದ್ಯ ರಥಿಭಿಸ್ಸಹ ವರ್ಷತಿ ॥ ೩೯ ॥

---

೩೫. ಆಗ ವ್ಯಾಸನು ಎಲೈ ಸಾಂಬನೇ! ಭೋಜಕಕನ್ಯೆಯರಲ್ಲಿ ಹುಟ್ಟಿದ್ದರಿಂದ ಭೋಜಕರೆಂದು ಹೆಸರಾಯಿತು. ಬ್ರಾಹ್ಮಣರಿಗೆ ಋಗ್ವೇದ ಮುಂತಾದ ನಾಲ್ಕೇ ವೇದಗಳೆಂದು ಉಕ್ತವಾಗಿದೆ.

೩೬. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ, ಎಂಬ ನಾಲ್ಕು ವೇದಗಳೂ ಬ್ರಾಹ್ಮಣರಿಗೆ ಉಂಟೆಂದು ಬ್ರಹ್ಮನೇ ಹೇಳಿದಾನೆ. ಮಗರಿಗೂ ನಾಲ್ಕು ವೇದಗಳುಂಟು.

೩೭. ಆದರೆ ಈ ನಾಲ್ಕು ವೇದಗಳಲ್ಲ. ಅವರಿಗೆ ತದ್ಭಿನ್ನವಾದ ವೇದ, ವಿಶ್ವಮದ ವಿದ್ವತ್ ವಹ್ನಿರಸ ಎಂಬ ಬೇರೆ ನಾಲ್ಕು ವೇದಗಳು ಇವೆ.

೩೮. ಮಗರಿಗೆ ಅವು ಸಂಬಂಧಪಟ್ಟವು ಎಂದು ಪೂರ್ವದಲ್ಲಿ ಬ್ರಹ್ಮನು ಹೇಳಿದ್ದಾನೆ. ಮಗರು ಈ ವೇದವನ್ನು ಅಭ್ಯಾಸಮಾಡುತ್ತಾರೆ. ಆದ್ದರಿಂದ ಅವರಿಗೆ ವೇದಾಂಗರೆಂದು ಹೆಸರಾಯಿತು.

೩೯. ಮಹಾಭಾಗನಾದ ಶೇಷನು ಸರ್ವಪ್ರಾಣಿಗಳಿಗೂ ಸುಖವನ್ನು ಉಂಟುಮಾಡುತ್ತಾ, ಸೂರ್ಯರಥದಲ್ಲಿದ್ದುಕೊಂಡು ಆ ರಥಿಗಳೊಡನೆ ತಾನೂ ವರ್ಷಿಸುತ್ತಾನೆ.

**ಯಸ್ತ್ರಸ್ಯ ತು ಪುನರ್ಮೋಕಂ ಸ ರವೇರ್ಹಿ ಮಹಾನಕಃ ।**
**ವಂದಿತವ್ಯೋ ಮಗಾನಾಂ ತು ಅಸ್ತ್ರಮಂತ್ರೇಣ ನಿತ್ಯಶಃ　　॥ ೪೦ ॥**

**ಯಥಾಸ್ರಜೋ ದ್ವಿಜಾನಾಂ ತು ಪೂಜಾಕಾಲೇ ಪ್ರಮಿಾಯತೇ ।**
**ಸರ್ವಸಂಸ್ಕಾರಯಜ್ಞೇಷು ಯಥಾ ದರ್ಭಾ ದ್ವಿಜಾತಿಷು　　॥ ೪೧ ॥**

**ಪವಿತ್ರಾಃ ಕೀರ್ತಿತಾಸ್ತೇಷಾಂ ತಥಾ ಧರ್ಮೋ ಮಗಸ್ಯ ತು ।**
**ಏಭಿರ್ಜಯಂತಿ ಭೂಯಿಷ್ಠಂ ತಸ್ಮಿನ್ ದ್ವೀಪೇ ಮಗಾಧಿಪಾಃ　　॥ ೪೨ ॥**

**ವಿದ್ಯಾವಂತಃ ಕುಲಶ್ರೇಷ್ಠಾಃ ಶೌಚಾಚಾರ ಸಮನ್ವಿತಾಃ ।**
**ಯಜ್ಞಾವಸಕ್ತಾ ಭಕ್ತಾಶ್ಚ ಜಪಂತೋ ಮಂತ್ರಮಾದಿತಃ　　॥ ೪೩ ॥**

**ಪ್ರಿಯಾಸ್ತು ಯದುಶಾರ್ದೂಲ ಭೋಜಕಾ ಯದುನಂದನ ।**
**ಅಸ್ತ್ರಮಿವ ವೈ ಮಂತ್ರೋ ವೇದಸ್ಯ ಪರಿಪಠ್ಯತೇ　　॥ ೪೪ ॥**

---

೪೦. ಹೀಗೆ ಆ ಶೇಷನು ಸೂರ್ಯಮಂಡಲದಲ್ಲಿಲ್ಲದೆ. ಅದು ಬಿಡುಗಡೆ ಯಾದಾಗ ಸೂರ್ಯನು ದಿವ್ಯವಾಗಿ ಪ್ರಕಾಶಿಸುವನು. ಮಗರು ನಿತ್ಯವೂ ಅಸ್ತ್ರಮಂತ್ರ ದಿಂದ ಸೂರ್ಯನನ್ನು ಸ್ತುತಿಸುವರು.

೪೧. ಬ್ರಾಹ್ಮಣರಿಗೆ ಸರ್ವಸಂಸ್ಕಾರಗಳಲ್ಲಿಯೂ, ಸರ್ವಕರ್ಮಗಳಲ್ಲಿಯೂ ಪವಿತ್ರಗಳಾದ ದರ್ಭೆಗಳು ಇಷ್ಟು ಇಷ್ಟು ಉದ್ದದವು ಎಂದು ಅಳತೆಮಾಡಿ ಹೇಗೆ ಉಪ ಯೋಗಿಸಲ್ಪಡುವುವೋ, ಮತ್ತು ಪೂಜಾಕಾಲದಲ್ಲಿ ಬ್ರಾಹ್ಮಣರಿಗೆ ಕೊಡುವ ಹೂವು ಗಳು ಹೇಗೆ ಅಳತೆಮಾಡಲ್ಪಡುವುವೋ, ಹಾಗೆಯೇ ಮಗರ ಧರ್ಮಗಳಲ್ಲಿ ಅನುಸರಿಸು ವಂತಹವನ್ನು ಕ್ಲ್ರಪ್ತಮಾಡಿಕೊಂಡು ಆಚರಿಸಬೇಕು.

೪೨. ಈ ಕ್ರಮದಿಂದಲೇ ಆ ದ್ವೀಪದಲ್ಲಿರುವ ಮಗಶ್ರೇಷ್ಠರು ಬಹುಕಾರ್ಯಗ ಳನ್ನು ಸಾಧಿಸುತ್ತಾರೆ.

೪೩. ಅವರು ವಿದ್ಯಾವಂತರು, ಕುಲಶ್ರೇಷ್ಠರು, ಮಡಿ, ಮೈಲಿಗೆ, ಶೌಚ ಇತ್ಯಾದಿ (ಆಚಾರ) ಆಚಾರವಂತರು, ಯಜ್ಞದಲ್ಲಿ ಆಸಕ್ತಿಯುಳ್ಳವರು, ದೈವಭಕ್ತರು ಕರ್ಮಾಚರಣೆಗೆ ಪ್ರಾರಂಭಿಸಿದಂದಿನಿಂದಲೂ ಮಂತ್ರವನ್ನು ಜಪಿಸತಕ್ಕವರು.

೪೪. ಎಲೈ ಯದುಶ್ರೇಷ್ಠನೇ! "ಅಸ್ತ್ರಮಿವ ವೈ" ಎಂಬ ವೇದಮಂತ್ರವನ್ನು ಪಠಿಸುತ್ತಾರೆಯಾಗಿ ಭೋಜಕರು ಸೂರ್ಯನಿಗೆ ಪ್ರಿಯರು.

**ಸರ್ವೇಷಾಂ ಬ್ರಾಹ್ಮಣಾನಾಂ ತು ಸಾವಿತ್ರೀ ಪರಿಕಲ್ಪ್ಯತೇ ।**
**ಅಸ್ಮಾಕಂ ತು ಯದುಶ್ರೇಷ್ಠ ಮಹಾವ್ಯಾಹೃತಿಪೂರ್ವಿಕಾ ॥ ೪೫ ॥**

**ಅಮೋಹಕೇನಾಥ ವಿಮಾನಭುಂಜೀ ಮೌನೇನ ಚೈವಾಪಿ ಯಥಾ ಹಿ ಯುಕ್ತಂ । ನ ಚಾಪಿ ಕಿಂಚಿತ್ ಸ್ಮೃತಿಕಂ ಸ್ಪೃಶೇಚ್ಚ ತಚ್ಚಾಪಿ ನಾತ್ರೈವ ಚ ಸಂಸ್ಪೃಶೇದ್ಧಿ ॥ ೪೬ ॥**

**ಶ್ವಸಂತ್ಯನಿಚ್ಛಂಸ್ತು ಪರಿಕ್ಷಿಪೇತ್ತು ಸ್ವಾಭೀಷ್ಟ ಸೂರ್ಯಂತು ನಮೋತ್ಸದೈವ । ಯಥಾ ಯಜ್ಞಂ ಹಿ ಮಂತ್ರೇಣ ವೇದಪ್ರೋಕ್ತೇನ ಕರ್ಮಣಾ ॥ ೪೭ ॥**

**ತತ್ವಮಸ್ಮನ್ಮಗಾನಾಂ ತು ವಿಧಿಮಂತ್ರಪುರಸ್ಕೃತಂ ।**
**ಹವಿಸ್ಸಂಪದ್ಯತೇ ಯಸ್ಮಾತ್ತೇನ ತೇ ಯಜ್ವಿನಃ ಸ್ಮೃತಾಃ ॥ ೪೮ ॥**

---

೪೫. ಎಲ್ಲಾ ಬ್ರಾಹ್ಮಣರಿಗೂ ಗಾಯತ್ರಿಯು ಅವಶ್ಯವಾದುದೆಂದು ಕಲ್ಪಿತವಾಗಿದೆ. ಎಲೈ ಯದುಶ್ರೇಷ್ಠನೇ! ನಮಗಾದರೋ ಅದು ಮಹಾವ್ಯಾಹೃತಿಪೂರ್ವಕವಾಗಿರಬೇಕೆಂದು ಕಲ್ಪಿತವಾಗಿದೆ.

೪೬. ತನಗೆ ಇಷ್ಟವಾದ ಯಾವ ಆಹಾರಸೇವನೆಯಿಂದ ಅಜ್ಞಾನವುಂಟಾಗದೆ ಜ್ಞಾನವುಂಟಾಗುವುದಾದರೂ ಅದನ್ನೂ ಮಿತಿಮೀರಿ ತಿನ್ನಬಾರದು. ಮತ್ತು ಮೌನದಿಂದಲೇ ಭೋಜನಮಾಡಬೇಕು. ನೆನಪಿಗೆ ಬಂದ ವಿಷಯಗಳನ್ನೆಲ್ಲಾ ಆ ಕಾಲದಲ್ಲಿ ಸ್ಮರಿಸಬಾರದು. ಮತ್ತು ಭೋಜನಮಾಡುವಾಗ ಒಬ್ಬರನ್ನೊಬ್ಬರು ಮುಟ್ಟಬಾರದು.

೪೭. ವೇದದಲ್ಲಿ ಇಷ್ಟಪ್ರಾಪ್ತಿ, ಅನಿಷ್ಟನಿವೃತ್ತಿ, ಎರಡನ್ನೂ ಉಂಟುಮಾಡತಕ್ಕ ಕರ್ಮಗಳು ಹೇಳಿವೆ. ಹಾಗಿದ್ದರೂ ಅನಿಷ್ಟಪ್ರದವಾದ ಕರ್ಮವನ್ನು ಬಿಟ್ಟು ಇಷ್ಟಾರ್ಥಪ್ರದವಾದ ಯಾಗಾದಿಗಳನ್ನೇ ಮಾಡುವಂತೆ, ತನಗೆ ಇಚ್ಛೆ ಇಲ್ಲದಿರತಕ್ಕ ಪದಾರ್ಥವನ್ನು ಶ್ವಾಸೋಚ್ಛ್ವಾಸ ನಡೆಯುವವರಿಗೂ ತ್ಯಾಜ್ಯಮಾಡಿ ಅಭೀಷ್ಟನಾದ ಸೂರ್ಯದೇವನನ್ನೇ ನಮಸ್ಕರಿಸಬೇಕು.

೪೮. ಮಗರಲ್ಲಿ ಮತ್ತೊಂದು ತತ್ವ (ರಹಸ್ಯ)ವುಂಟು. ವಿಧಿಮಂತ್ರಪೂರ್ವಕವಾಗಿ ಹವಿಸ್ಸನ್ನು ಆಹುತಿಕೊಡುವ ಕಾರಣದಿಂದ ಅವರಿಗೆ ಯಾಗಶೀಲರೆಂದು ಹೆಸರು.

**ಯಥಾಗ್ನಿಹೋತ್ರಂ ಪ್ರಥಿತಂ ದ್ವಿಜಾನಾಂ ತಥಾಧ್ವ ಹೋತ್ರಂ ವಿಹಿತಂ ಮಗಾನಾಂ । ಅಚ್ಛಂ ಚ ನಾಮೇತಿ ತದಧ್ವರಸ್ಯ ಮುನೇರ್ವಚೋ ನಾತ್ರ ವಿಚಾರಣಾಸ್ತಿ ॥ ೪೯ ॥**

**ಪಂಚಧೂಪಾಃ ಪ್ರದಾತವ್ಯಾಃ ಸಿದ್ಧಿರಸ್ಯೇಹ ಸರ್ವದಾ ।**
**ದಂಡನಾಯಕ ವೇಲೇ ದ್ವೇ ತ್ರಿಸಂಧ್ಯಂ ಭಾಸ್ಕರಸ್ಯ ತು ॥ ೫೦ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಾಂಬೋಪಾಖ್ಯಾನೇ ಭೋಜಕೋತ್ಪತ್ತಿ ವರ್ಣನಂ ನಾಮ ಚತ್ವಾರಿಂಶದುತ್ತರ ಶತತಮೋಽಧ್ಯಾಯಃ.**



೪೯. ಬ್ರಾಹ್ಮಣರಿಗೆ ಅಗ್ನಿಹೋತ್ರವು ಹೇಗೆ ಪ್ರಸಿದ್ಧವೋ ಹಾಗೆ ಮಗರಿಗೆ ಅಧ್ವಹೋತ್ರವು ವಿಹಿತವಾದುದು. ಆ ಅಧ್ವರಕ್ಕೆ 'ಅಚ್ಛಂ' ಎಂಬ ಹೆಸರಿದೆ. ಎಂದು ಮುನಿ ಹೇಳಿದ್ದಾನೆ. ಈ ವಿಷಯದಲ್ಲಿ ವಿಚಾರಮಾಡಬೇಕಾದ್ದೇ ಇಲ್ಲ.

೫೦. ಸೂರ್ಯಪೂಜೆಯಲ್ಲಿ ಯಾವಾಗಲೂ ಐದುಕಾಲಗಳಲ್ಲಿ ಧೂಪವನ್ನು ಹಾಕಬೇಕು ಹಾಗೆ ಮಾಡಿದರೆ ಯಾಗ ಸಿದ್ಧಿಯಾಗುವುದು. ಸೂರ್ಯನ ಕಡೆಯ ದಂಡನಾಯಕ ವೇಳೆಗಳು ಎರಡು ; ತ್ರಿಸಂಧ್ಯೆಗಳು ಮೂರು ; ಈ ಪ್ರಕಾರ ಐದುಕಾಲದಲ್ಲಿ ಧೂಪವನ್ನು ಹಾಕಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಾಂಬೋಪಾಖ್ಯಾನದಲ್ಲಿ ಭೋಜಕೋತ್ಪತ್ತಿ ವರ್ಣನವೆಂಬ ನೂರನಲವತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಏಕಾಚತ್ವಾಂಶದುತ್ತರಶತತಮೋಽಧ್ಯಾಯಃ

---

॥ ಸಾಂಬ ಉವಾಚ ॥

ಭೋಜಕಾನಾಂ ಯತ್ವಯೋಕ್ತಮವ್ಯಂಗೋ ದೇಹಶೋಧಕಃ ।
ವ್ರತಬಂಧಸ್ತ್ವಸೌ ಪ್ರೋಕ್ತಃ ತೇಷಾಂ ಜಾತಿಶ್ಚ ಕಾ ಸ್ಮೃತಾ ॥ ೧ ॥

ವ್ಯಾಸ ಉವಾಚ ॥

ತೇ ಪೃಷ್ಟಾ ಭವತಾ ಸರ್ವೇ ಭೋಜಕಾನಾಂ ಕುಮಾರಕಾ ।
ಕಿಮಾಖ್ಯಾತಂ ತತಸ್ತೈಸ್ತು ತದೇವಾಚಕ್ಷ್ವ ಕೃತ್ಸ್ನಶಃ ॥ ೨ ॥

---

## ನೂರನಲವತ್ತೊಂದನೆಯ ಅಧ್ಯಾಯ

೧. ಸಾಂಬನು ಹೇಳುತ್ತಾನೆ—ಸ್ವಾಮೀ ! ನೀನು ಅವ್ಯಂಗವು ಭೋಜಕರ ದೇಹಶೋಧಕವೆಂದು ಇದು ಅವರಿಗೆ (ವ್ರತಬಂಧ) ಉಪನಯನವೆಂದೂ ಹೇಳಿದೆ ಯಷ್ಟೆ. ಆ ಭೋಜಕರ ಜಾತಿಯಾವುದು ಎಂದು ಹೇಳಿದೆ ? ಎಂದನು.

೨. ವ್ಯಾಸರು ಹೇಳುತ್ತಾರೆ—ಅಯ್ಯಾ ! ನೀನು ಭೋಜಕರ ಕುಮಾರರೆಲ್ಲ ರನ್ನೂ ಕೇಳಿದ್ದೆಯಷ್ಟೆ; ಆವಾಗ ಅವರೇನು ಹೇಳಿದರೋ ಅದನ್ನೆಲ್ಲಾ ಸಮಗ್ರವಾಗಿ ಹೇಳು ಎಂದರು.

॥ ಸಾಂಬ ಉವಾಚ ॥

ಸನ್ನಿವೇಶಾ ಮಯಾ ಪ್ರೋಕ್ತಾ ಭೋಜಕಾನಾಂ ಸಮಂತತಃ ।
ಮಮೈವ ಬ್ರೂತ ತತ್ತ್ವಂ ತದ್ವರ್ಣಃ ಕೋऽತ್ರ ಕಥಂ ಸ್ಥಿತಃ ॥ ೩ ॥

ತತಸ್ತು ಭಗವಾನ್ ಪ್ರಾಹ ವಾಕ್ಯಂ ವಾಕ್ಯವಿಶಾರದಃ ।
ಯೇ ತ್ವಯೋಕ್ತಾಃ ಕೃತಾಃ ಸಾಂಬ ಭೋಜಕಾನಾಂ ಕುಮಾರಕಾಃ ॥ ೪ ॥

ಮಮೈವೇತೇ ಮಗಾ ಜ್ಞೇಯಾ ಅಷ್ಟೌ ಶೂದ್ರಾಃ ಮದಂಗಜಾಃ ।
ಏತಚ್ಛ್ರುತ್ವಾ ತು ವಚನಂ ಪ್ರಣಮ್ಯ ಶಿರಸಾ ರವಿಂ ॥ ೫ ॥

ದತ್ತಾ ಭೋಜಕುಲೋತ್ಪನ್ನಾ ದಶಭ್ಯೋ ದಶ ಕನ್ಯಕಾಃ ।
ತತಸ್ತು ಮಂದಕೇಭ್ಯೋऽಪಿ ದತ್ತಾಶ್ಚಾಷ್ಟೌ ಹಿ ಕನ್ಯಕಾಃ ॥ ೬ ॥

ತತೋ ನಿವೇಶಿತಂ ತೇಷಾಂ ಮಯಾ ಸಾಂಬಪುರಂ ಸ್ಮರ ।
ದಾಸಕನ್ಯಾಸ್ತು ಯಾಶ್ಚಾಷ್ಟೌ ಭೋಜಕನ್ಯಾಶ್ಚ ಯಾ ದಶ ॥ ೭ ॥

---

೩. ಸಾಂಬನು ಹೇಳುತ್ತಾನೆ—ನಾನು ಭೋಜಕರ ಸನ್ನಿವೇಶಗಳನ್ನೆಲ್ಲಾ ಆಗಲೇ ಹೇಳಿದೇನೆಯಷ್ಟೆ. ಈಗ ಅವರ ಜಾತಿ ಯಾವುದೆಂಬುದನ್ನು ಅದರ ಸ್ವರೂಪವೇನೆಂಬುದನ್ನು ನನಗೆ ಹೇಳಿ.

೪. ಆಗ ಪೂಜ್ಯನೂ, ಚತುರವಾಕ್ಕುಳ್ಳವನೂ ಆದ ರವಿಯು ಎಲೈ ಸಾಂಬನೆ! ನೀನು ಭೋಜಕಪುತ್ರರ ವಿಷಯವಾಗಿ ಹೇಳಿದ್ದನ್ನೆಲ್ಲಾ ಕೇಳಿದೆ.

೫. ಇವರು ನನ್ನವರೇ ಆದ ಮಗರು. ಇವರೆಂಟುಮಂದಿ ನನ್ನಂಗದಲ್ಲಿ ಜನಿಸಿದ ಶೂದ್ರರು ಎಂದನು. ಈ ಮಾತನ್ನು ಕೇಳಿ ಸಾಂಬನು ಸೂರ್ಯನಿಗೆ ತಲೆವಾಗಿ ವಂದಿಸಿ.

೬. ಭೋಜಕುಲದಲ್ಲಿ ಹುಟ್ಟಿದ ಹತ್ತುಮಂದಿ ಕನ್ಯೆಯರನ್ನು ಹತ್ತುಮಂದಿ ಮಗರಿಗೆ ಕೊಟ್ಟು ವಿವಾಹಮಾಡಿದ್ದಾಯಿತು. ಆ ಮೇಲೆ ಮಂದಕರಿಗೂ ಎಂಟು ಮಂದಿ ಕನ್ಯೆಯರನ್ನು ಕೊಟ್ಟದ್ದಾಯ್ತು.

೭. ಆ ಮೇಲೆ ನಾನು ಅವರಿಗಾಗಿ ಸಾಂಬಪುರವನ್ನು ಏರ್ಪಡಿಸಿದೆನು. ಸ್ಮರಿಸಿಕೊ; ಎಂಟುಮಂದಿ ದಾಸಕನ್ಯೆಯರೂ ಹತ್ತುಮಂದಿ ಭೋಜಕನ್ಯೆಯರೂ ಕೊಡಲ್ಪಟ್ಟರಷ್ಟೆ.

ಏತಾಸ್ತೇಷಾಂ ಕುಮಾರಾಣಾಂ ಜ್ಞೇಯಾಸ್ತಾ ದಶ ಚಾಷ್ಟ ಚ ।
ತತ್ರ ತೇ ಭೋಜಕನ್ಯಾಸು ದ್ವಿಜೈರುತ್ಪಾದಿತಾಃ ಸುತಾಃ ॥ ೮ ॥

ಭೋಜಕಾಸ್ತಾನ್ ಗಣಾನ್ ಪ್ರಾಹುರ್ಬ್ರಾಹ್ಮಣಾನ್ ದಿವ್ಯಸಂಜ್ಞಕಾನ್ ।
ದಾಸಕನ್ಯಾಸು ಯೇ ಜಾತಾ ಮಂದಗೈರಂತ್ಯ ಸಂಜ್ಞಿಕೈಃ ॥ ೯ ॥

ಮದಂಗಾ ನಾಮ ತೇ ಜ್ಞೇಯಾಃ ಸವಿತುಃ ಪರಿಚಾರಕಾಃ ।
ತೇ ಚ ವಿಪ್ರಪುರೇ ತಸ್ಮಿನ್ ಪುತ್ರದಾರಶುಭೈರ್ವೃತಾಃ ॥ ೧೦ ॥

ಸ್ವಧರ್ಮೈರ್ಯಷ್ಟುಮಾರಬ್ಧೈಃ ಶಾಕದ್ವೀಪೇಽರ್ಚಿತೋ ರವಿಃ ।
ನಾನಾ ವಿಧೈರ್ವೈದಿಕೈಸ್ತು ಮಂತ್ರೈರ್ಮುನಿವರೋತ್ತಮಾಃ ॥ ೧೧ ॥

ಅವ್ಯಂಗಧಾರಿಣೋ ಮರ್ತ್ಯಾಃ ಪೂಜಯಂತೇ ದಿವಸ್ಪತಿಂ ।
ದೃಷ್ಟ್ವಾಽವ್ಯಂಗಂ ತು ವೈ ತೇಷಾಂ ಕೌತೂಹಲಸಮನ್ವಿತಃ ॥ ೧೨ ॥

---

೮. ಆ ಹದಿನೆಂಟುಮಂದಿ ಕನ್ಯೆಯರೂ ಈ ಮಗರಿಗೆ ವಿನಿಯೋಗವಾದರು. ಈ ಬ್ರಾಹ್ಮಣರು ಆ ಭೋಜಕನ್ಯೆಯರಲ್ಲಿ ಆ ಮಕ್ಕಳಿಗೇ ಜನ್ಮದಾತರಾದರು.

೯. ಭೋಜಕರು ಅವರನ್ನು ದಿವ್ಯಸಂಜ್ಞೆಯುಳ್ಳ ಬ್ರಾಹ್ಮಣ ಗಣಗಳೆಂದು ಹೇಳುವರು. ಅಂತ್ಯಸಂಜ್ಞೆಯುಳ್ಳ ನನ್ನ ಅಂಗಗಳಿಂದ ದಾಸಕನ್ಯೆಗಳಲ್ಲಿ ಹುಟ್ಟಿದವರನ್ನು ಸೂರ್ಯಪರಿಚಾರಕರಾದ ಮದಂಗರೆಂದು ತಿಳಿಯತಕ್ಕದ್ದು. ಅವರು ಆ ವಿಪ್ರಪುರದಲ್ಲಿ ಶುಭಕರರಾದ ಪತ್ನೀಪುತ್ರಾದಿಗಳಿಂದ ಕೂಡಿದವರಾಗಿದಾರೆ.

೧೧. ಎಲೈ ಮುನಿಶ್ರೇಷ್ಠರೇ! ನಾನಾವಿಧ ವೈದಿಕಮಂತ್ರಗಳಿಂದ ಅವರು ಶಾಕದ್ವೀಪದಲ್ಲಿ ಸ್ವಧರ್ಮಾನುಸಾರ ಪೂಜಿಸುವುದಕ್ಕೆ ಸಿದ್ಧರಾಗಿ ಸೂರ್ಯನನ್ನಾರಾಧಿಸಿದರು.

೧೨. ಮಾನವರು ಅವ್ಯಂಗಧಾರಿಗಳಾಗಿಯೇ ದಿವಸ್ಪತಿಯಾದ ಸೂರ್ಯನನ್ನು ಪೂಜಿಸಬೇಕು. ಅವರ ಅವ್ಯಂಗವನ್ನು ನೋಡಿ ಕುತೂಹಲಯುಕ್ತನಾದ ಸಾಂಬನು ಪುನಃ ವ್ಯಾಸರಿಗೆ ನಮಸ್ಕರಿಸಿ ಕೇಳಿದನು.

ಸಾಂಬಃ ಪ್ರಾಹ ನಮಸ್ಕೃತ್ಯ ಭೂಯಃ ಸತ್ಯವತೀಸುತಂ ।
ಕಥಂ ವರೋಽಯಮವ್ಯಂಗಃ ಕಥಿತೋ ಮುನಿ ಸತ್ತಮ ॥ ೧೩ ॥

ಕುತ ಏಷ ಸಮುತ್ಪನ್ನಃ ಕಸ್ಮಾಚ್ಚ ಸ ಶುಚಿ ಸ್ಮೃತಃ ।
ಬಂಧನೀಯಃ ಕದಾ ಚಾಯಂ ಕಿಮರ್ಥಂ ಚೈವ ಧಾರ್ಯತೇ ॥ ೧೪ ॥

ಕಿಂ ಪ್ರಮಾಣಂ ಚ ಭಗವನ್ ವ್ಯಂಗಶ್ಚಾಯಂ ಕಿಮುಚ್ಯತೇ ।

॥ ಸುಮಂತುರುವಾಚ ॥

ಶ್ರುತ್ವೈವಂ ವಚನಂ ವ್ಯಾಸೋ ಜಾಂಬವತ್ಯಾಃ ಸುತಸ್ಯ ಚ ॥ ೧೫ ॥

ಉವಾಚ ಕುರುಶಾರ್ದೂಲ ಸಾಂಬಂ ಕಾಲೀಸುತಃ ಸ ತು ।
ಏತಚ್ಚ ಮೇ ಯಥೋಕ್ತಸ್ತ್ವಂ ಜಾತಿರೇಷಾಂ ನ ಸಂಶಯಃ ॥ ೧೬ ॥

---

೧೩. ಎಲೈ ಮುನಿವರನೆ! ಈ ಅವ್ಯಂಗವೆಂಬುದು ಹೇಗೆ ಶ್ರೇಷ್ಠವೆನಿಸಿತು? ಇದು ಏತರಿಂದ ಹುಟ್ಟಿದುದು? ಯಾವ ಕಾರಣದಿಂದ ಅದನ್ನು ಶುದ್ಧವೆಂದು ತಿಳಿಯಬೇಕು?

೧೪. ಇದನ್ನು ಯಾವಾಗ ಕಟ್ಟಿಕೊಳ್ಳಬೇಕು! ಏತಕ್ಕೆ ಇದನ್ನು ಧರಿಸಿಕೊಳ್ಳುತ್ತಾರೆ? ಅಯ್ಯಾ ಭಗವಂತನೇ! ಇದರ ಅಳತೆ ಏನು? ಇದನ್ನು ಅವ್ಯಂಗವೆಂದು ಏಕೆ ಕರೆಯುತ್ತಾರೆ? ಎಂದನು.

೧೫. ಸುಮಂತುಮುನಿವರ್ಯರು ಹೇಳುತ್ತಾರೆ—ಅಯ್ಯಾ ಕುರುಕುಲೋತ್ಪನ್ನನೇ! ಜಾಂಬವತೀಸುತನಾದ ಸಾಂಬನು ಹೇಳಿದ ಈ ಮಾತನ್ನು ವ್ಯಾಸಮಹರ್ಷಿಗಳು ಕೇಳಿದರು.

೧೬. ಆ ಕಾಳೀಸ್ವರೂಪಿಣಿಯಾದ ಸತ್ಯವತಿಯ ಪುತ್ರರಾದ ವ್ಯಾಸರು ಬಳಿಕ ಸಾಂಬನನ್ನು ಕುರಿತು ಇಂತೆಂದರು.

॥ ವ್ಯಾಸಉವಾಚ ॥

ಅವ್ಯಂಗಸ್ಯಾಪಿ ತೇ ವಚ್ಮಿ ಲಕ್ಷಣಂ ಗದತಃ ಶೃಣು ॥ ೧೭ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಾಂಬೋಪಾಖ್ಯಾನೇ ಭೋಜಕ ಜಾತಿವರ್ಣನಂ ನಾಮ ಏಕಚತ್ವಾರಿಂಶದುತ್ತರಶತತಮೋಽಧ್ಯಾಯಃ.



---

೧೭. ವ್ಯಾಸರು ಹೇಳುತ್ತಾರೆ—ಇವರ ಜಾತಿವಿಚಾರವು ಈಗ ಹೇಳಿದ ಹಾಗೆಯೇ ಸರಿ ಸಂಶಯವಿಲ್ಲ. ನಿನಗೆ ಅವ್ಯಂಗದ ಲಕ್ಷಣವನ್ನು ಮುಂದೆ ಹೇಳುತ್ತೇನೆ. ಕೇಳು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಾಂಬೋಪಾಖ್ಯಾನದಲ್ಲಿ ಭೋಜಕ ಜಾತಿವರ್ಣನವೆಂಬ ನೂರನಲವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ದ್ವಿಚತ್ವಾಂರಿಶದುತ್ತರಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

ದೇವತಾ ಋಷಯೋ ನಾಗಾ ಗಂಧರ್ವಾಪ್ಸರಸಾಂ ಗಣಾಃ ।
ಯಕ್ಷರಕ್ಷಾಂಸಿ ವೈ ಭಾನೌ ನಿವಸಂತಿ ಋತುಕ್ರಮಾತ್ ॥ ೧ ॥

ತತ್ರ ತು ವಾಸುಕಿರ್ಹ್ಯಬ್ದಮುದ್ಯತ್ಸೂರ್ಯರಥಂ ಜವಾತ್ ।
ಸ್ವಸ್ಥಾನಮಾಜಗಾಮಾಶು ನಮಸ್ಕೃತ್ಯ ದಿವಾಕರಂ ॥ ೨ ॥

ಅವ್ಯಂಗಮೇವ ಸೂರ್ಯಾಯ ಪ್ರೀತ್ಯರ್ಥಂ ವೈ ಸಮರ್ಪಯೇತ್ ।
ಗಾಂಗೇಯಭೂಷಿತಂ ದಿವ್ಯಂ ನಾತಿರಕ್ತಸಿತಂ ಶುಭಂ ॥ ೩ ॥

---

### ನೂರನಲವತ್ತೆರಡನೆಯ ಅಧ್ಯಾಯ

೧. ವ್ಯಾಸರು ಹೇಳುತ್ತಾರೆ—ದೇವತೆಗಳು, ಋಷಿಗಳು, ನಾಗರು, ಗಂಧರ್ವರು, ಅಪ್ಸರರು, ಯಕ್ಷರು, ರಕ್ಷರು ಇವರು ಸರದಿಯಪ್ರಕಾರ ಕ್ರಮವನ್ನನುಸರಿಸಿ ಪ್ರತಿಋತುವಿನಲ್ಲೂ ಸೂರ್ಯಸನ್ನಿಧಿಯಲ್ಲಿ ವಾಸಿಸುತ್ತಾರೆ.

೨. ಅವರಲ್ಲಿ ವಾಸುಕಿಯು ಸಂವತ್ಸರಾವಧಿಯಲ್ಲಿ ಉದಯಿಸುತ್ತಿರುವ ಸೂರ್ಯನ ರಥವನ್ನು ವೇಗದಿಂದ ತಲಪಿ ಸೂರ್ಯನಿಗೆ ನಮಸ್ಕಾರಮಾಡಿ ಬೇಗ ಸ್ವಸ್ಥಾನಕ್ಕೆ ಬರುತ್ತಾನೆ.

೩. ಆ ವಾಸುಕಿ ಹಾಗೆ ಸೂರ್ಯರಥಕ್ಕೆ ಹೋದಾಗ ಸೂರ್ಯಪ್ರೀತ್ಯರ್ಥವಾಗಿ ಸುವರ್ಣಭೂಷಿತವೂ, ಶ್ರೇಷ್ಠವೂ, ಅತಿ ಕೆಂಪೂ ಅತಿಬಿಳುಪೂ ಅಲ್ಲದ, ಶುಭವಾದ ಅವ್ಯಂಗವನ್ನು ಸಮರ್ಪಿಸುತ್ತಾನೆ.

ಬಬಂಧ ತಂಚ ತತ್ಪ್ರೀತ್ಯೈ ಮಧ್ಯಭಾಗೇ ತಮಾತ್ಮನಃ ।
ನಾಗರಾಜಾಂಗ ಸಂಭೂತೋ ಧೃತೋ ಯಸ್ಮಾಚ್ಚ ಭಾನುನಾ ॥ ೪ ॥

ತತ್ತಸ್ಮಾದ್ಧಾರ್ಯತೇ ಸೂರ್ಯಪ್ರೀತ್ಯೈ ತದ್ಭಕ್ತಿಮಿಚ್ಛತಾ ।
ವಿಧಾನೇನ ಚ ತತ್ತೇನ ಶುಚಿರ್ಭವತಿ ಭೋಜಕಃ ॥ ೫ ॥

ನಿತ್ಯಂ ಚ ಧಾರಣಾತ್ತಸ್ಯ ಭವೇತ್ಪ್ರೀತೋ ದಿವಾಕರಃ ।
ನ ಧಾರಯಂತಿ ಯೇ ತ್ವೇವಂ ಭೋಜಕಾಃ ಪೂಜಕಾ ರವೇಃ ॥ ೬ ॥

ಸೌರಹೀನಾ ನ ತೇ ಯಾಜ್ಯಾ ಉಚ್ಛಿಷ್ಟಾ ನಾತ್ರ ಸಂಶಯಃ ।
ಸ್ಮೃತ್ಯಾಚಾರೇ ತೇಹಿ ಭಗ್ನಾ ರವಿಂ ನಾರ್ಹಂತಿ ಪೂಜಿತುಂ ॥ ೭ ॥

ಪೂಜಯಂತೋ ರವಿಂ ತೇ ಹಿ ನರಕಂ ಯಾಂತಿ ರೌರವಂ ।
ನ ವೈ ಹಸೇನ್ನ ಉತ್ತಿಷ್ಠೇದ್ಯಾವದರ್ಚಾಂ ಲಭಂತಿ ತೇ ॥ ೮ ॥

---

೪. ಅವನ ಸಂತೋಷಕ್ಕಾಗಿ ಸೂರ್ಯನು ಅದನ್ನು ಮಧ್ಯಭಾಗದಲ್ಲಿ ಧರಿಸಿಕೊಳ್ಳುತ್ತಾನೆ. ನಾಗರಾಜನ ದೇಹದಿಂದ ಹುಟ್ಟಿದುದನ್ನು ಸೂರ್ಯನು ಧರಿಸಿದ ಕಾರಣದಿಂದ

೫. ಅವನ ಭಕ್ತನಾದ ಭೋಜಕನು ಸೂರ್ಯಪ್ರೀತಿಗಾಗಿ ಅದನ್ನು ತಾವೂ ಧರಿಸಬೇಕು. ಹೀಗೆ ಮಾಡಿದರೆ ತತ್ವತಃ ಭೋಜಕನು ಶುಚಿಯಾಗುವನು.

೬. ಅದನ್ನು ಯಾವಾಗಲೂ ಧರಿಸಿರುವುದರಿಂದ ಸೂರ್ಯನೂ ಪ್ರೀತನಾಗುವನು. ಯಾವ ಭೋಜಕರು ಹೀಗೆ ಧರಿಸದೆ ಸೂರ್ಯಪೂಜೆ ಮಾಡುವರೋ

೭. ಅವರು ಸೌರಹೀನರಾದ್ದರಿಂದ ಪೂಜ್ಯರಲ್ಲ ಅವರು ಉಚ್ಛಿಷ್ಟಸದೃಶರು. ಇದರಲ್ಲಿ ಸಂಶಯವಿಲ್ಲ. ಅವರು ಸ್ಮೃತ್ಯಾಚಾರಭ್ರಷ್ಟರಾದ್ದರಿಂದ ಸೂರ್ಯನನ್ನು ಪೂಜಿಸಲರ್ಹರಲ್ಲ.

೮. ಅವ್ಯಂಗವನ್ನು ಧರಿಸದೆ ಅವರು ಸೂರ್ಯನನ್ನು ಪೂಜಿಸಿದರೆ ರೌರವನರಕವನ್ನು ಹೊಂದುತ್ತಾರೆ. ಅವರಿಗೆ ಸನ್ಮಾನ ದೊರೆಯುತ್ತಿದ್ದರೆ ಪ್ರಾಜ್ಞನು ಸಂತೋಷಪಡಬಾರದು. ಅಲ್ಲದೆ ಏಳಲೂ ಬಾರದು.

ಇತ್ಥಂ ಜ್ಞಾತ್ವಾ ನ ಸಂದೇಹೋ ಹ್ಯವ್ಯಂಗೇನ ವಿನಾ ರವಿಃ ।
ನಾಗರಾಜಸ್ಯ ಸಂತುಷ್ಟೋ ಹ್ಯಾರಸುಸ್ತೇನ ಸಂಸ್ಕೃತಃ ॥ ೯ ॥

ಏಕವರ್ಣಃ ಸ ಕರ್ತ್ತವ್ಯಃ ಕಾರ್ಯಸಿದ್ಧಿಕರಸ್ತದಾ ।
ಪ್ರಮಾಣೇನಾಂಗುಲಾನಾಂ ತು ಶತಾರ್ದ್ಧಶತಮುತ್ತಮಂ ॥ ೧೦ ॥

ಉತ್ಕೃಷ್ಟೋಽಯಂ ಪ್ರಮಾಣೇನ ಮಧ್ಯಮೋ ವಿಂಶದುತ್ತರಃ ।
ಶತಮಷ್ಟೋಕ್ತರಂ ಹ್ರಸ್ವೋ ನ ತು ಹ್ರಸ್ವತರಸ್ತತಃ ॥ ೧೧ ॥

ತದಾಕೃತಿಃ ಕೃತಶ್ಚೈವ ನಿರ್ಮಿತೋ ವಿಶ್ವಕರ್ಮಣಾ ।
ಮಧ್ಯಮೋ ಭೋಜಕನಾಂ ತು ಪರಃ ಶತ ಉದಾಹೃತಃ ॥ ೧೨ ॥

ಸಂಸ್ಕೃತೋಽಪಿ ವಿನಾ ತೇನ ಶುಚಿರ್ನೈವ ಭವತ್ಯುತ ।
ತೇನಾಸ್ಯ ಧಾರಣಾದ್ವೀರ ಶುಚಿರೇವ ತದಾ ಭವೇತ್ ॥ ೧೩ ॥

---

೯ "ನಾಗರಾಜನಿಂದ ಸಮರ್ಪಿತವಾದ ಅವ್ಯಂಗವನ್ನು ಧರಿಸದೆ ಸೂರ್ಯನು ಎಂದಿಗೂ ಪ್ರೀತನಾಗುವುದಿಲ್ಲ. ಇದರಲ್ಲಿ ಸಂಶಯವಿಲ್ಲ." ಎಂಬುದನ್ನು ತಿಳಿದು ಅದರಂತೆ ನಡೆದವನು ಅರಸು ಎನಿಸುತ್ತಾನೆ.

೧೦. ಅದನ್ನು ಒಂದೇ ಬಣ್ಣವುಳ್ಳದನ್ನಾಗಿ ಮಾಡಬೇಕು. ಹಾಗೆ ಮಾಡುವುದು ಕಾರ್ಯಸಿದ್ಧಿಕರವಾಗುವುದು. ಅದು ಅಳತೆಯಲ್ಲಿ ನೂರೈವತ್ತು ಅಂಗುಲವಿದ್ದರೆ ಉತ್ತಮ.

೧೧. ಇದು ಅದರ ಉತ್ಕೃಷ್ಟಪ್ರಮಾಣ; ನೂರಿಪ್ಪತ್ತು ಅಂಗುಲಗಳಿದ್ದರೆ ಮಧ್ಯಮಪ್ರಮಾಣ; ನೂರೆಂಟು ಅಂಗುಲಗಳು ಹ್ರಸ್ವಪ್ರಮಾಣ; ಇದಕ್ಕಿಂತ ಹ್ರಸ್ವವಾಗಿರಲೇ ಬಾರದು.

೧೨. ಅದರ ಈ ಆಕೃತಿಯು ವಿಶ್ವಕರ್ಮನಿಂದ ನಿರ್ಮಿತವಾಯಿತು. ಭೋಜಕರು ಧರಿಸುವ ಅವ್ಯಂಗವು ನೂರಕ್ಕೆ ಮೀರಿದ ಮಧ್ಯಮಪ್ರಮಾಣದಲ್ಲಿರಬೇಕು.

೧೩. ಅವ್ಯಂಗವನ್ನು ಧರಿಸದೆಹೋದರೆ ಉಪನಯನಾದಿ ಸಂಸ್ಕಾರವಾಗಿದ್ದರೂ ಪರಿಶುದ್ಧನಾಗುವುದಿಲ್ಲ. ಅದು ಕಾರಣ ಎಲೈ ವೀರನೇ! ಇದನ್ನು ಧರಿಸುವುದರಿಂದಲೇ ಶುದ್ಧನಾಗುವನು.

ಹವಿಹೋರ್ಮಾದಿಕಾಃ ಸರ್ವಾ ಭವಂತ್ಯಸ್ಯ ಕ್ರಿಯಾಃ ಶುಭಾಃ ।
ಅವ್ಯಂಗಃ ಪತಿತಾಂಗಶ್ಚ ಅವ್ಯಂಗೋಽಥ ಮಹೀಪತೇ ॥ ೧೪ ॥

ಏಷ ಸಾರಶ್ಚ ಸಾ ರಮ್ಯಾ ವೈ ಜ್ಞೇಯಾ ಜಯನಾಮಭಿಃ ।
ಅಹೇರಂಗಾತ್ಸಮುತ್ಪನ್ನೋ ಹ್ಯವ್ಯಂಗಸ್ತು ತತಃ ಸ್ಮೃತಃ ॥ ೧೫ ॥

ಯಸ್ಮಾದಸ್ಮಾದಹೇರಂಗಮವ್ಯಂಗಸ್ತೇನ ಚೋಚ್ಯತೇ ।
ಅರ್ಹೇತಿ ಪೂಜಾಯಾಂ ಧಾತೋಃ ಪ್ರತ್ಯಯೋ ಣ್ವುಲ್ತತಃ ಸ್ಮೃತಃ ॥೧೬॥

ಪೂಜಿತಶ್ಚ ಪವಿತ್ರಶ್ಚ ಯಸ್ಮಾತ್ತೇನಾರ್ಹಕಃ ಸ್ಮೃತಃ ।
ಸಾರಸಾರ್ತಃ ಸ್ಮೃತಂ ರೂಪಂ ಪ್ರಧಾನಂ ಸಾರ ಉಚ್ಯತೇ ॥ ೧೭ ॥

ಷಣ ಭಕ್ತೌ ಸ್ಮೃತೋ ಧಾತುಃ ತಸ್ಮಾತ್ಸಾರಸನಃ ಸ್ಮೃತಃ ।
ಯಸ್ಮಾದರ್ಚಿತಮೇವಂ ತು ಸುವರ್ಣಮಣಿ ಮೌಕ್ತಿಕೈಃ ॥ ೧೮ ॥

---

೧೪. ಇವನ್ನು ಧರಿಸಿದವನು ಮಾಡುವ ಹವಿ ಹೋಮ ಮೊದಲಾದ ಕ್ರಿಯೆಗಳೆಲ್ಲವೂ ಶುಭಗಳೆನಿಸುವುವು. ಎಲೈ ರಾಜನೇ! ಇವನು ಅವಿಯಅಂಗದಂತೆ ಪತಿತಾಂಗನಾಗಿದ್ದವನು ಅನಂತರ ಅವ್ಯಂಗ ಧರಿಸಿ.

೧೫. ಇವನು ಸಾರ (ಶ್ರೇಷ್ಠ) ನಾಗಿದ್ದಾನೆ. ರಮ್ಯವಾದ ಆವಸ್ತುವು ಜಯನಾಮಸಂಜ್ಞೆಗಳಿಂದ ತಿಳಿಯತಕ್ಕದು. ಸರ್ಪದ ಅಂಗದಿಂದ ಹುಟ್ಟಿದುದರಿಂದ ಅವ್ಯಂಗವೆಂದು ಹೆಸರಾಗಿದೆ.

೧೬. ಅಹಿಯು ಎಂಪರೆ ಸರ್ಪದ ಅಂಗವಾದ ಕಾರಣದಿಂದಲೇ ಅವ್ಯಂಗವೆಂದು ಹೇಳುತ್ತಾರೆ. "ಅರ್ಹ" ಎಂಬುದು ಪೂಜಾರ್ಥಕವಾದ ಧಾತುವು. ಅದಕ್ಕೆ ಣ್ವುಲ್ ಪ್ರತ್ಯಯಸೇರಿ ಅರ್ಹಕ ಎಂದಾಗುತ್ತದೆ.

೧೭. ಪೂಜಿತವೂ ಪವಿತ್ರವೂ ಆದುದರಿಂದ ಅರ್ಹಕ ಎಂದು ಹೇಳಬೇಕು. ಅರ್ಕನು ಪ್ರಧಾನನೂ ಸಾರಸೂ ಆದುದರಿಂದ ಸಾರನಾಗಿದ್ದಾನೆ. ಷಣ ಭಕ್ತೌ ಎಂಬ ಧಾತುವಿದೆ. ಸಾರನಲ್ಲಿ ಭಕ್ತಿಮಾಡುವುದರಿಂದ ಸಾರಸನನೆಂದಾಗುವುದು.

೧೮. ಹೀಗೆ ಸ್ವರ್ಣಮುಕ್ತಾಮಣಿ ರಚಿತವಾದ ಅದು ಸಮರ್ಪಿತವಾಗಿ ಅವನು ನಿತ್ಯಯಜ್ಞರಾದವರಿಂದ ಉಪಾಹೃತನಾಗುವುದರಿಂದ ಪತಿತಾಂಗನೆಂದು ತಿಳಿಯಬೇಕು.

ಸ ಜ್ಞೇಯಃ ಪತಿತಾಂಗಸ್ತು ನಿತ್ಯಯಜ್ಞೈರುಪಾಹೃತಃ ।
ಇತ್ಯೇತೇ ಕಥಿತಾ ವೀರ ಅವ್ಯಂಗಾವ್ಯಂಗ ಭೋಜಕಾಃ ॥ ೧೯ ॥

ಋದ್ಧಿವೃದ್ಧಿಕರೋ ನಿತ್ಯಂ ಕಾಯಶುದ್ಧಿಕರಸ್ತಥಾ ।
ಸರ್ವವೇದಮಯಶ್ಚಾಯಂ ಸರ್ವದೇವಮಯಸ್ತಥಾ ॥ ೨೦ ॥

ಸರ್ವಭೂತಮಯಃ ಸಾಂಬ ಸರ್ವಲೋಕಮಯಸ್ತಥಾ ।
ಮಧ್ಯೇಽಸ್ಯ ಸಂಸ್ಥಿತೋ ಬ್ರಹ್ಮಾ ಮೂಲೇ ವಿಷ್ಣುರ್ಮಹಾಮತೇ ॥ ೨೧ ॥

ಶಶಾಂಕ ಮೌಲಿರಗ್ರೇ ತು ಸಂಸ್ಥಿತೋ ಯದುನಂದನ ।
ಋಗ್ವೇದೋಽಸ್ಯ ಸ್ಥಿತೋ ಮೂಲೇ ಯಜುರ್ವೇದೋಽಸ್ಯ ಮಧ್ಯಗಃ
॥ ೨೨ ॥

ಅಗ್ರೇ ಸ್ಥಿತಃ ಸಾಮವೇದೋ ಗ್ರಂಥಿರಾಂಗಿರಸೋಽನಘ ।
ಪೃಥಿವೀಮೂಲಮಾಶ್ರಿತ್ಯ ಸ್ಥಿತಾ ಚ ಯದುಸತ್ತಮ ॥ ೨೩ ॥

---

೧೯. ಎಲೈ ವೀರನೇ! ಈ ಪ್ರಕಾರವಾಗಿ ಈ ಅವ್ಯಂಗವಿಚಾರವನ್ನೂ, ಅವ್ಯಂಗಧಾರಿಗಳಾದ ಭೋಜಕರ ವಿಚಾರವನ್ನೂ ಕುರಿತು ಹೇಳಿದುದಾಯಿತು

೨೦. ಅಯ್ಯಾ ಸಾಂಬನೇ! ಇದು ಯಾವಾಗಲೂ ಋದ್ಧಿವೃದ್ಧಿಗಳನ್ನುಂಟು ಮಾಡುವುದೂ, ಕಾಯಶುದ್ಧಿಯನ್ನುಂಟುಮಾಡುವುದೂ, ಸರ್ವವೇದಮಯವೂ ಮತ್ತು ಸರ್ವ ದೇವಮಯವೂ ಆದುದು.

೨೧. ಮತ್ತು ಸರ್ವಭೂತಮಯವೂ, ಸರ್ವಲೋಕಮಯವೂ, ಆದುದು. ಇದರ ಮಧ್ಯದಲ್ಲಿ ಬ್ರಹ್ಮನಿರುವನು, ಬುಡದಲ್ಲಿ ವಿಷ್ಣುವಿರುವನು, ತುದಿಯಲ್ಲಿ ಶಿವನು ಇದ್ದಾನೆ.

೨೨. ಅಯ್ಯಾ ಪಾಪರಹಿತನೆ! ಇದರ ಮೂಲದಲ್ಲಿ ಋಗ್ವೇದವೂ ಮಧ್ಯ ದಲ್ಲಿ ಯಜುರ್ವೇದವೂ ತುದಿಯಲ್ಲಿ ಸಾಮವೇದವೂ ಇದೆ.

೨೩. ಎಲೈ ಯದುಶ್ರೇಷ್ಠನೆ! ಆಂಗಿರಸನು ಇದರ ಗ್ರಂಥಿಸ್ವರೂಪ ಪೃಥಿವಿಯು ಇದರ ಮೂಲವನ್ನಾಶ್ರಯಿಸಿರುವುದು.

ಮೂಲಾಸನಾಸ್ತ್ವಪಃ ಸಾಂಬ ಮಧ್ಯೇ ದೇವೋ ವಿಭಾವಸುಃ ।
ತಾಸಾಮನಂತರಂ ವಾತ ಆಕಾಶೋಽಗ್ರೇ ಸಮಾಸ್ಥಿತಃ ॥ ೨೪ ॥

ಮೂಲೇ ಸ್ಥಿತಸ್ತು ಭೂರ್ಲೋಕೋ ಭುವರ್ಲೋಕಸ್ತು ಮಧ್ಯಗಃ ।
ಸ್ವರ್ಲೋಕಶ್ಚಾಗ್ರಮಾಶ್ರಿತ್ಯ ಸ್ಥಿತೋಽವ್ಯಂಗಸ್ಯ ಯಾವತಾ ॥ ೨೫ ॥

ಏವಂ ದೇವಮಯಃ ಸಾಂಬ ಏವಂ ಲೋಕಮಯಸ್ತಥಾ ।
ಧಾರಣೀಯೋ ಮಹಾರ್ಹ ಭಕ್ತ್ಯಾ ಪೂಜಕೈಃ ಪ್ರೀತಯೇ ರವೇಃ ॥ ೨೬ ॥

ಪೂಜಯಂತಿ ರವಿಂ ಯೇ ವೈ ವಿನಾನೇನ ಯದೂತ್ತಮ ।
ಪೂಜಾಫಲಂ ನ ತೇಷಾಂ ಸ್ಯಾನ್ನರಕಂ ಚ ವ್ರಜಂತಿ ತೇ ॥ ೨೭ ॥

ತಥಾ ತೇಷಾಂ ಭವೇನ್ನಿತ್ಯಮವ್ಯಂಗೋ ಭೋಜಕಃ ಸದಾ ।
ಅನ್ಯಕಾಲೇ ಯದುಶ್ರೇಷ್ಠ ಇತ್ಯೇತತ್ಕಥಿತಂ ತವ ॥ ೨೮ ॥

---

೨೪. ಅಯ್ಯಾ ಸಾಂಬನೇ! ಅವ್ಯಂಗದಮೂಲದಲ್ಲಿ ಜಲದೇವತೆಯೂ, ಮಧ್ಯದಲ್ಲಿ ಅಗ್ನಿದೇವನೂ ಇದ್ದಾರೆ. ಅವಾದ ಮೇಲೆ ತುದಿಯಲ್ಲಿ ಆಕಾಶವಿರುವುದು.

೨೫. ಅವ್ಯಂಗದ ಮೂಲದಲ್ಲಿ ಭೂಲೋಕವೂ, ಮಧ್ಯದಲ್ಲಿ ಭುವರ್ಲೋಕವೂ ಅವ್ಯಂಗದ ಕೊನೆಯಲ್ಲಿ ಸ್ವರ್ಲೋಕವೂ ಇರುವುವು.

೨೬. ಎಲೈ ಸಾಂಬನೇ! ಇದು ಹೀಗೆ ದೇವಮಯವೂ, ಮತ್ತು ಲೋಕಮಯವೂ ಆಗಿದೆ. ಆದುದರಿಂದ ಸೂರ್ಯಪ್ರೀತಿಗಾಗಿ ಪೂಜಕರು ಮಹತ್ತಾದ ಇದನ್ನು ಧಾರಣೆಮಾಡಬೇಕು.

೨೭. ಅಯ್ಯಾ ಯದುಶ್ರೇಷ್ಠನೆ! ಇದಿಲ್ಲದೆ ಯಾರು ಸೂರ್ಯನನ್ನು ಪೂಜಿಸುತ್ತಾರೋ ಅವರಿಗೆ ಪೂಜಾಫಲವಿಲ್ಲ. ಅವರು ನರಕಕ್ಕೂ ಹೋಗುತ್ತಾರೆ.

೨೮. ಎಲೈ ಸುವ್ರತನೇ! ಕೇಳು ಹಾಗೆಮಾಡಿದ ಅವನಿಗೆ ಯಾವಾಗಲೂ ಅವ್ಯಂಗನಾದ ಭೋಜಕನೆಂದು ಹೆಸರಾಗುವುದು.

ಬಂಧನೇ ಕಾರಣಂ ವೀರ ಭೂಷಣಾನಿ ಚ ಸುವ್ರತ ॥ ೨೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಾಂಭೋ
ಪಾಖ್ಯಾನೇವ್ಯಂಗೋತ್ಪತ್ತಿ ರ್ನಾಮದ್ವಿಚರಿಂಶದು
ತ್ತರ ಶತತಮೋऽಧ್ಯಾಯಃ.



---

೨೯. ಎಲೈ ಯದುಶ್ರೇಷ್ಠನೇ! ಹೀಗೆ ಅವ್ಯಂಗಬಂಧನಕ್ಕೆ ಕಾರಣವನ್ನೂ ಇತರ ಭೂಷಣಗಳ ವಿಚಾರವನ್ನೂ ನಿನಗೆ ಹೇಳಿದುದಾಯಿತು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಾಂಭೋಪಾ
ಖ್ಯಾನದಲ್ಲಿ ಅವ್ಯಂಗೋತ್ಪತ್ತಿ ಎಂಬ ನೂರನಲವತ್ತೆರಡನೆಯ
ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ತ್ರಿಚತ್ವಾರಿಂಶದುತ್ತರಶತತಮೋಽಧ್ಯಾಯಃ

---

॥ ಸುಮಂತುರುವಾಚ ॥

ಶ್ರುತ್ವೈವಮೇವ ಸಾಂಬೇನ ವ್ಯಾಸಾತ್ಸತ್ಯವತೀಸುತಾತ್ ।
ಅವ್ಯಂಗಸ್ಯ ಚ ಉತ್ಪತ್ತಿಂ ಪುನರಾಗಾನ್ಮಹಾಮತಿಃ ॥ ೧ ॥

ಅಥಾಗತ್ಯ ಮಹಾತೇಜಾಃ ಸಾಂಬೋ ಗತ್ವಾಶ್ರಮಂ ಪುನಃ ॥ ೨ ॥

ನಾರದಸ್ಯ ಮಹಾಬಾಹೋರ್ನಾರದಂ ವಾಕ್ಯಮಬ್ರವೀತ್ ।
ಕಥಮುತ್ಕ್ಷಿಪ್ಯ ವೈ ಧೂಪಂ ಭೋಜಕೈಃ ಸವಿತುರ್ಮುನೇ ॥ ೩ ॥

---

## ನೂರನಲವತ್ತಮೂರನೆಯ ಅಧ್ಯಾಯ

೧. ಸುಮಂತುಮುನಿವರ್ಯರು ಹೇಳುತ್ತಾರೆ—ಮಹಾಬುದ್ಧಿಶಾಲಿಯಾದ ಸಾಂಬನು ಸತ್ಯವತೀಪುತ್ರನಾದ ವ್ಯಾಸನಿಂದ ಈ ಪ್ರಕಾರವಾಗಿ ಅವ್ಯಂಗೋತ್ಪತ್ತಿಯನ್ನು ತಿಳಿದುಕೊಂಡು ಹಿಂದಿರುಗಿ ಬಂದನು.

೨. ಆಮೇಲೆ ಮಹಾತೇಜಸ್ವಿಯಾದ ಸಾಂಬನು ಪುನಃ ನಾರದಾಶ್ರಮಕ್ಕೆ ಹೋಗಿ ನಾರದನನ್ನು ಕುರಿತು

೩. ಎಲೈ ಮಹಾಮುನಿಯೆ ! ಭೋಜಕರು ಸೂರ್ಯನಿಗೆ ಹೇಗೆ ಧೂಪಪವನ್ನು ಸಮರ್ಪಿಸುವರು ?

ಸ್ನಾನಮಾಚಮನಂ ಚೈವಮರ್ಘ್ಯದಾನಂ ಮಹಾತ್ಮನೇ ।
ಸಾಂಬಸ್ಯ ವಚನಂ ಶ್ರುತ್ವಾ ನಾರದೋ ಮುನಿಸತ್ತಮಃ ॥ ೪ ॥

ಉವಾಚ ಕುರುಶಾರ್ದೂಲ ಸಾಂಬಂ ಜಾಂಬವತೀಸುತಂ ।
ಹಂತ ತೇ ಕಥಯಿಷ್ಯಾಮಿ ರವೇರ್ಧೂಪವಿಧಿಕ್ರಮಂ ॥ ೫ ॥

ಸ್ನಾನಮಾಚಮನಂ ಚೈವ ಸ್ವರ್ಣದಾನಂ ತಥೈವ ಚ ।
ಆಚಾಂತಸ್ತ್ರಿಸ್ತತಃ ಸ್ನಾತ್ವಾ ವಾಸಸೀ ನಿರ್ಮಲೇ ಶುಭೇ ॥ ೬ ॥

ಅನಾರ್ದ್ರೇ ಸಂವಸೀತೈವ ಪವಿತ್ರೇ ಪರಿಧಾಯ ಚ ।
ಉದಙ್ಮುಖಃ ಪ್ರಾಙ್ಮುಖೋ ವಾಪ್ಯಾಚಾಮೇಚ್ಚ ಪ್ರಯತ್ನತಃ ॥ ೭ ॥

ಜಲೇ ಜಲಸ್ಥೋ ನಾಚಾಮೇಜ್ಜಲಾದುತ್ತೀರ್ಯ ಯತ್ನತಃ ।
ಅಪ್ಸು ಸೂರ್ಯಸ್ತಥಾಗ್ನಿಶ್ಚ ಮಾತಾ ದೇವೀ ಸರಸ್ವತೀ ॥ ೮ ॥

ತಸ್ಮಾದುತ್ತೀರ್ಯ ಚಾಚಾಮೇನ್ನಾಚಾಮೇತ್ತು ಜಲಾಶಯೇ ।
ಉಪವಿಶ್ಯ ಶುಚೌ ದೇಶೇ ಪ್ರಯತಃ ಪ್ರಾಗುದಙ್ಮುಖಃ ॥ ೯ ॥

---

೪. ಸ್ನಾನ, ಆಚಮನ, ಅರ್ಘ್ಯದಾನ ಇವುಗಳನ್ನು ಹೇಗೆ ಮಾಡುತ್ತಾರೆ? ಎಂದನು. ಮುನಿಶ್ರೇಷ್ಠನಾದ ನಾರದನು ಸಾಂಬನ ಮಾತನ್ನು ಕೇಳಿ ಇಂತೆಂದನು.

೫-೬. ಎಲೈ ಕುರುಶಾರ್ದೂಲನೇ ಕೇಳು—ನಾರದನು ಜಾಂಬವತೀಪುತ್ರನಾದ ಸಾಂಬನನ್ನು ಕುರಿತು ಅಯ್ಯಾ! ಸೂರ್ಯನಿಗೆ ಧೂಪವಿಧಿಕ್ರಮವನ್ನು ಮತ್ತು ಸ್ನಾನ ಆಚಮನ, ಸ್ವರ್ಣದಾನ ಇವುಗಳ ಕ್ರಮವನ್ನು ನಿನಗೆ ಹೇಳುತ್ತೇನೆ. ಮೂರಾವೃತ್ತಿ ಆಚಮನ ಮಾಡಿ ಆಮೇಲೆ ಸ್ನಾನಮಾಡಬೇಕು.

೭. ನಿರ್ಮಲವಾಗಿ ಒಗೆದು ಒಣಗಿಸಿದ ಎರಡು ವಸ್ತ್ರಗಳನ್ನು ಧರಿಸಿ ಎರಡು ಪವಿತ್ರಗಳನ್ನಿಟ್ಟುಕೊಂಡು ಉತ್ತರಾಭಿಮುಖವಾಗಿಯೋ, ಪೂರ್ವಾಭಿಮುಖವಾಗಿಯೋ ಕುಳಿತು ಪ್ರಯತ್ನದಿಂದ ಆಚಮನಮಾಡಬೇಕು.

೮. ನೀರಿನಲ್ಲಿ ನಿಂತು ಆಚಮನಮಾಡಬಾರದು, ನೀರಿನಿಂದಮೇಲಕ್ಕೆ ಬಂದೇ ಆಚಮನಮಾಡಬೇಕು. ಜಲದಲ್ಲಿ ಸೂರ್ಯ, ಅಗ್ನಿ, ದೇವಿಯಾದ ಸರಸ್ವತೀಮಾತೆ ಇವರು ಇರುವರು.

೯. ಆದುದರಿಂದ ನೀರಿನಿಂದ ಈಚೆಗೆಬಂದು ಆಚಮನಮಾಡಬೇಕು. ಜಲಾಶಯದಲ್ಲಿಯೇ ಆಚಮನಮಾಡಬಾರದು. ಪಾತ್ರೆಯಲ್ಲಿ ಜಲವನ್ನು ತಂದು ಶುದ್ಧವಾದ

ಪಾದೌ ಪ್ರಕ್ಷಾಳ್ಯ ಹಸ್ತೌ ಚ ಅಂತರ್ಜಾನುಸ್ತಥಾ ಚಾಮೇತ್ ।
ಪ್ರಸನ್ನಾಸ್ತ್ರಿಃ ಪಿಬೇತ್ತಾಪಃ ಪ್ರಯತಃ ಸುಸಮಾಹಿತಃ ॥ ೧೦ ॥

ಸಂಮಾರ್ಜನಂ ತು ದ್ವಿಃ ಕುರ್ಯಾತ್ರಿಭಿರಭ್ಯುಕ್ಷಣಂ ಪುನಃ ।
ಮೂರ್ಧಾನಂ ಖಾನಿ ಚಾತ್ಮಾನಮುಪಸ್ಪೃಶ್ಯಾನುಪೂರ್ವಶಃ ॥ ೧೧ ॥

ಆಚಾಂತೋಽರ್ಕಂ ನಮಸ್ಕೃತ್ಯ ಶೌಚೇಷು ಶುಚಿತಾಮಿಯಾತ್ ।
ಕ್ರಿಯಾಂ ಯಃ ಕುರುತೇ ಮೋಹಾದನಾಚಮ್ಯೇಹ ನಾಸ್ತಿಕಃ ॥ ೧೨ ॥

ಭವಂತೀಹ ಕ್ರಿಯಾಃ ಸರ್ವಾಃ ವೃಥಾ ತಸ್ಯ ನ ಸಂಶಯಃ ।
ಶುಚಿಕಾಮಾ ಹಿ ವೈ ದೇವಾಃ ವೇದೈರೇವಮುದಾಹೃತಾಃ ॥ ೧೩ ॥

---

ಸ್ಥಳದಲ್ಲಿ ಪರಿಶುದ್ಧಚಿತ್ತನಾಗಿ ಪೂರ್ವಮುಖವಾಗಿಯೋ ಉತ್ತರಮುಖವಾಗಿಯೋ ಕುಳಿತುಕೊಂಡು ಇದನ್ನು (ಮಾಡಬೇಕು.)

೧೦. ಮೊದಲು ಕಾಲುಗಳಿಗೂ ಕೈಗಳಿಗೂ ನೀರುಪ್ರೋಕ್ಷಿಸಿಕೊಂಡು, ಕೈಯು ಮಂಡಿಯೊಳಗೆ ಇರುವಂತೆ ಮಾಡಿಕೊಂಡು, ಶುದ್ಧನೂ, ಸ್ವಸ್ಥಚಿತ್ತನೂ, ಆಗಿ ನಿರ್ಮಲವಾದ ಜಲವನ್ನು ಮೂರಾವೃತ್ತಿ ಪ್ರಾಶನಮಾಡಬೇಕು.

೧೧. ಬಳಿಕ ಎರಡಾವೃತ್ತಿ ಸಮ್ಮಾರ್ಜನಮಾಡಿಕೊಳ್ಳಬೇಕು. ಶಿರಸ್ಸನ್ನೂ ಇಂದ್ರಿಯಗಳನ್ನೂ ದೇಹವನ್ನೂ, ಕ್ರಮವಾಗಿ ಸ್ಪರ್ಶಮಾಡಿಕೊಂಡು ಬಾಯೊರಸಿಕೊಳ್ಳಬೇಕು.

೧೨. ಹೀಗೆ ಆಚಮನವನ್ನು ಮಾಡಿ ಶುದ್ಧವಾದ ಸ್ಥಲದಲ್ಲಿ ಸೂರ್ಯನಿಗೆ ನಮಸ್ಕಾರಮಾಡಿದವನು ಪರಿಶುದ್ಧಿ ಹೊಂದುವನು ನಾಸ್ತಿಕತೆಯಿಂದಲೋ ತಿಳಿಯದೆಯೋ ಯಾವನೂ ಆಚಮನವಿಲ್ಲದೆ ಕಾರ್ಯಮಾಡಬಾರದು.

೧೩. ಹಾಗೆ ಮಾಡಿದರೆ ಆತನ ಎಲ್ಲಾ ಕೆಲಸಗಳೂ ವ್ಯರ್ಥಗಳೇ ಸರಿ. ಸಂದೇಹವಿಲ್ಲ. ದೇವತೆಗಳು ಶುಚಿಯಾಗಿರುವವರನ್ನೇ ಮೆಚ್ಚುವರು. ಎಂದರೆ ಶುಚಿರ್ಭೂತರೇ ಅವರಿಗೆ ಇಷ್ಟರಾದವರು ಎಂದು ವೇದಗಳಲ್ಲಿ ಹೇಳಿದೆ.

ಇನೋಪಾಸಾಕೃತಶ್ಚೈವ ಸರ್ವೇ ದೇವಾಃ ಪ್ರಯತ್ನತಃ ।
ಶೌಚಮೇವ ಪ್ರಶಂಸಂತಿ ಶೌಚಾಂಗೈರ್ಹಿ ವಿಜೀಯತೇ ॥ ೧೪ ॥

ಆಚಾಂತೋ ಮೌನಮಾಸ್ಥಾಯ ದೇವಾಗಾರಂ ತತೋ ವ್ರಜೇತ್ ।
ಶ್ವಾಸರೋಧನಿಮಿತ್ತಂ ತು ಘ್ರಾಣಮಾಚ್ಛಾದ್ಯ ವಾಸಸಾ ॥ ೧೫ ॥

ಶಿರಃ ಪ್ರಾವೃತ್ಯ ಯತ್ನೇನ ಕೇಶೋದರನಿವೃತ್ತಯೇ ।
ತತಃ ಪೂಜಾಂ ರವೇಃ ಕುರ್ಯಾತ್ಪುಷ್ಪೈರ್ನಾನಾವಿಧೈಃ ಶುಭೈಃ ॥ ೧೬ ॥

ಗಾಯತ್ರೀಂ ಸಶಿರಸ್ಕಾಂ ಚ ಯಜಮಾನಃ ಪ್ರಯತ್ನತಃ ।
ಧೂಪಂ ತತೋಽಗ್ನಯೇ ದದ್ಯಾತ್ಪ್ರಥಮಂ ಗುಗ್ಗುಲಾಹುತಿಂ ॥ ೧೭ ॥

ಪುಷ್ಪಾಂಜಲಿಂ ತತೋ ಗೃಹ್ಯ ಮಂತ್ರಾಂತೇ ಚ ಪ್ರಯತ್ನತಃ ।
ರವೇರ್ಮೂರ್ಧನಿ ತಂ ದದ್ಯಾದೇವಂ ಮಂತ್ರಮುದಾಹರನ್ ॥ ೧೮ ॥

---

೧೪. ಪ್ರಯತ್ನದಿಂದ ಸೂರ್ಯನನ್ನು ಉಪಾಸನೆಮಾಡುತ್ತಾ ಶುಚಿಯಾಗಿರುವವರನ್ನೇ ಎಲ್ಲಾ ದೇವತೆಗಳೂ ಹೊಗಳುತ್ತಾರೆ. ಸ್ನಾನ, ಆಚಮನ ಮೊದಲಾದ ಶೌಚಾಂಗಗಳು ಯಾವಾಗಲೂ ಜಯಪ್ರದಗಳಾಗುತ್ತವೆ.

೧೫. ಆಚಮನ ಮಾಡಿ ಮೌನವಾಗಿ ದೇವಮಂದಿರವನ್ನು ಪ್ರವೇಶಿಸಬೇಕು. ತನ್ನ ನಿಶ್ವಾಸವು ದೇವರ ಮೈಯಮೇಲೆ ಬೀಳದಂತೆ ನಿರೋಧಮಾಡುವುದಕ್ಕಾಗಿ ಮೂಗನ್ನೂ ಬಾಯಿಯನ್ನೂ ಬಟ್ಟೆಯಿಂದ ಆವರಿಸುವಂತೆ ಮಾಡಿಕೊಳ್ಳಬೇಕು.

೧೬. ಕೂದಲಿನಿಂದ ನೀರು ಸೋರದಂತೆ ಇರುವುದಕ್ಕಾಗಿ ಪ್ರಯತ್ನಪಟ್ಟು ಬಟ್ಟೆಯಿಂದ ತಲೆಗೂ ಕಟ್ಟಿಕೊಂಡು ಅನಂತರ ನಾನಾವಿಧಗಳೂ ಗ್ರಾಹ್ಯಗಳೂ ಆದ ಶುಭಪುಷ್ಪಗಳಿಂದ ಸೂರ್ಯನನ್ನು ಆರಾಧನೆಮಾಡಬೇಕು.

೧೭. ಶಿರಸ್ಸಿನಿಂದ ಕೂಡಿದ ಎಂದರೆ (ಓಮಾಪೋ ಎಂಬ ಮಂತ್ರದಿಂದ ಸಹಿತವಾದ) ಗಾಯತ್ರಿಯನ್ನು ಪ್ರಯತ್ನದಿಂದ ಜಪಿಸುತ್ತಾ ಮೊದಲು ಗುಗ್ಗುಳದ ಧೂಪವನ್ನು ಅಗ್ನಿಯಲ್ಲಿ ಹಾಕಿ ಸಮರ್ಪಿಸಬೇಕು.

೧೮. ಬೊಗಸೆಯಲ್ಲಿ ಹೂವನ್ನು ತೆಗೆದುಕೊಂಡು ಮಂತ್ರಪುಷ್ಪವನ್ನು ಹೇಳುತ್ತಾ ಮಂತ್ರದ ಕೊನೆಯಲ್ಲಿ ಅದನ್ನು ಪ್ರಯತ್ನಪೂರ್ವಕವಾಗಿ ಸೂರ್ಯದೇವನ ಶಿರಸ್ಸಿನ ಮೇಲೆ ಸಮರ್ಪಿಸಬೇಕು.

" ಓಂ ವ್ರತೇನ ಯದ್ವ್ರತಿನೋ ವರ್ಜಯಂತಿ ।
ದೇವಾ ಮನುಷ್ಯಾಃ ಪಿತರಶ್ಚ ಸರ್ವೇ ॥
ತಸ್ಯಾದಿತ್ಯಂ ಪ್ರಸರಂ ಚ ಮನಾಮಹೇ ।
ಯಸ್ತೇಜಸಾ ಪ್ರಥಮಂ ನಾ ವಿಭಾತಿ " ॥ ೧೯ ॥

ಧೂಪವೇಲಾಃ ಸ್ಮೃತಾಃ ಪಂಚ ಧೂಪೇಷ್ವೇವ ತು ಪಂಚಸು ।
ಹವನಾದ್ಯಾಃ ಕ್ರಿಯಾಃ ಪಂಚ ರಕ್ಷಿಷ್ಯೇಹಂ ತಥಾ ಪುನಃ ॥ ೨೦ ॥

ದಂಡನಾಯಕವೇಲಾ ತು ಪ್ರತ್ಯಕ್ಷಂ ಋಕ್ಷದರ್ಶನಾತ್ ।
ನಾಜ್ಞಾವೇಲಾ ಪ್ರದೋಷಸ್ತು ತತ್ವಕಾರ್ಯಂ ವಿಜಾನತಾ ॥ ೨೧ ॥

ತ್ರಿಕಾಲಂ ತು ರವೇಃ ಪೂಜಾ ಕರ್ತವ್ಯಾ ಸೂರ್ಯದರ್ಶನಾತ್ ।
ಅರ್ಧೋದಿತಸ್ತು ಪೂರ್ವಾಹ್ನೇ ತತೋರ್ಧಸ್ತು ರವಿರ್ವಿಭುಃ ॥ ೨೨ ॥

---

೧೯. ದೇವತೆಗಳು, ಮನುಷ್ಯರು ಎಲ್ಲಾ ಪಿತೃಗಳು ವ್ರತಿಗಳಾಗಿ ಯಾವುದನ್ನು ಪರಿತ್ಯಾಗ ಮಾಡುತ್ತಾರೆಯೋ, ಅದಕ್ಕೆ ಸೂರ್ಯನನ್ನು ಪ್ರಸರನೆಂದು (ಪ್ರೇರಕನೆಂದು) ತಿಳಿಯಬೇಕು. ಆ ಆದಿತ್ಯನು ತನ್ನ ತೇಜಸ್ಸಿನಿಂದ ಮೊದಲು ಪುರುಷ ರೂಪದಿಂದ ಪ್ರಕಾಶಿಸುತ್ತಾನೆ.

೨೦. ಧೂಪಗಳು ಐದು ಬಗೆ. ಆ ಧೂಪಹಾಕುವ ಧೂಪವೇಳೆಗಳೂ ಐದು. ಹವನಾದಿಕ್ರಿಯೆಗಳೂ ಐದು, ಎಂಬದಾಗಿ ತಿಳಿಯಬೇಕು. ಈ ವಿಷಯವನ್ನು ಮರೆಯಬಾರದು.

೨೧. ದಂಡನಾಯಕನ ವೇಳೆಯೆಂಬುದು ನಕ್ಷತ್ರದರ್ಶನ ಮೊದಲ್ಗೊಂಡು ಪ್ರಾರಂಭವಾಗುವುದು. ಪ್ರದೋಷಕಾಲವು ಆಜ್ಞಾಕಾಲವಲ್ಲ. ತಿಳಿದವನು ಆ ಕಾಲದಲ್ಲಿ ಆಜ್ಞೆಮಾಡುವುದು ಅಕಾರ್ಯವೆನಿಸುವುದು.

೨೨. ಹಗಲು ಸೂರ್ಯೋದಯಕಾಲದಿಂದ ಮೊದಲುಗೊಂಡು ಸಾಯಂಕಾಲದವರೆಗೆ ಮೂರು ವೇಳೆಗಳಲ್ಲಿ ಸೂರ್ಯಾರಾಧನೆ ನಡೆಯಬೇಕು. ಪೂರ್ವಾಹ್ನದ ಪೂಜೆಗೆ (ಪ್ರಾತಃಕಾಲ) ಅರ್ಧಉದಯವಾಗಿರಬೇಕು. ಆ ಮೇಲಿನ ಪೂಜೆಗೆ ಪೂರ್ಣವಾಗಿ ಉದಯವಾಗಬೇಕು.

ಹೇಲಯೇತಿ ಚ ಪೂರ್ವಾಹ್ನೇ ಮಧ್ಯಾಹ್ನೇ ಜ್ವಲನಾಯ ಚ ।
ತಥೈವ ಮಂಡಲೇ ದೇಯಂ ನೀಚಾಹ್ನೇ ಜ್ವಲನಾಯ ಚ ॥ ೨೩ ॥

ಚಂದನೋದಕಮಿಶ್ರಾಣಿ ಗಂಧೋದಕಯುತಾನಿ ಚ ।
ಪದ್ಮಾನಿ ಕರವೀರಾಣಿ ತಥಾ ರಕ್ತೋತ್ಪಲಾನಿ ಚ ॥ ೨೪ ॥

ಕುಸುಮೋದಕಮಿಶ್ರಾಣಿ ಕುರಂಟಕುಸುಮಾನಿ ಚ ।
ಗಂಧಾದೀನಿ ಚ ದಿವ್ಯಾನಿ ಕೃತ್ವಾ ವೈ ತಾಮ್ರಭಾಜನೇ ॥ ೨೫ ॥

ಧೂಪಂ ದತ್ವಾಗ್ನಯೇ ವೀರ ಪ್ರಯತ್ನಾದ್ಗುಗ್ಗುಲಾಹುತಿಂ ।
ಅರ್ಘ್ಯಪಾತ್ರಂ ತದಾಕೃಷ್ಯ ಕುರ್ಯಾದಾವಾಹನಂ ರವೇಃ ॥ ೨೬ ॥

ಏಹಿ ಸೂರ್ಯ ಸಹಸ್ರಾಂಶೋ ತೇಜೋರಾಶೇ ಜಗತ್ಪತೇ ।
ಅನುಕಂಪಯ ಮಾಂ ದೇವ ಗೃಹಾಣಾರ್ಘ್ಯಂ ದಿವಾಕರ ॥ ೨೭ ॥

---

೨೩. ಪೂರ್ವಾಹ್ನದಲ್ಲಿ ಹೇಲಯೇನಮಃ ಎಂದೂ, ಮಧ್ಯಾಹ್ನದಲ್ಲೂ ಅಪರಾಹ್ನದಲ್ಲೂ ಜ್ವಲನಾಯನಮಃ ಎಂದೂ, ನಾಮೋಚ್ಚಾರಣೆಮಾಡಿ ಮಂಡಲದಲ್ಲಿ ಅರ್ಚಿಸಬೇಕು.

೨೪. ರಕ್ತಚಂದನ ಶ್ರೀಗಂಧ ಇವುಗಳ ಉದಕದಿಂದ ಕೂಡಿದ ಕೆಂದಾವರೆ, ಕೆಂಪುನೈದಿಲೆ, ಕಣಿಗಲೆ, ಕುರಂಟಪುಷ್ಪ ಇವೂ.

೨೫. ಮತ್ತು ವಿವಿಧ ಪುಷ್ಪೋದಕಯುಕ್ತವಾದ ದಿವ್ಯಗಂಧವನ್ನೂ ಸಿದ್ಧಮಾಡಿ ತಾಮ್ರದ ಪಾತ್ರೆಯಲ್ಲಿಟ್ಟುಕೊಂಡು

೨೬. ಅಯ್ಯಾ ವೀರನೇ ಕೇಳು ಅಗ್ನಿ ಸಂಜ್ಞಕನಾದ ಸೂರ್ಯನಿಗೆ ಪ್ರಯತ್ನ ಪೂರ್ವಕವಾಗಿ ಗುಗ್ಗುಳ ಹಾಕಿದ ಧೂಪವನ್ನು ಬೆಳಗಿ ಆ ತಾಮ್ರಪಾತ್ರೆ (ಪ್ರಸನ್ನಾರ್ಘ್ಯ ಪಾತ್ರೆ) ಯಲ್ಲಿ

೨೭. ಸೂರ್ಯನನ್ನು ಆವಾಹನ ಮಾಡುವವನಾಗಿ, ಆವಾಹನಕಾಲದಲ್ಲಿ "ಏಹಿ ಸೂರ್ಯ ಸಹಸ್ರಾಂಶೋ ತೇಜೋರಾಶೇ ಜಗತ್ಪತೇ । ಅನುಕಂಪಯ ಮಾಂ ದೇವ ಗೃಹಾಣಾರ್ಘ್ಯಂ ದಿವಾಕರ ॥ " ಎಲೈ ಸಹಸ್ರಕಿರಣನೂ, ತೇಜೋರಾಶಿಯೂ, ಜಗತ್ಪತಿಯೂ ಆದ ಸೂರ್ಯನೇ! ಬಾ; ನನ್ನಲ್ಲಿ ದಯೆತೋರಿಸು " ಎಂಬ ಅರ್ಥವುಳ್ಳ ಈ ಮಂತ್ರದಿಂದ ಆವಾಹನೆಮಾಡಬೇಕು.

**ಅನೇನಾವಾಹನಂ ಕೃತ್ವಾ ಜಾನುಭ್ಯಾಮವನೀಂ ಗತಃ ।**
**ರವೇರ್ನಿವೇದಯೇದರ್ಘ್ಯಮಾದಿತ್ಯಹೃದಯೇನ ಚ ॥ ೨೮ ॥**

**ಓಂ ನಮೋ ಭಗವತೇ ಆದಿತ್ಯಾಯ ವಿಶ್ವಾಯ ಖೇಶಾಯ ಬ್ರಹ್ಮಣೇ**
**ಲೋಕಕರ್ತ್ರೇ । ಈಶಾನಾಯ ಪುರಾಣಾಯ ಸಹಸ್ರಾಕ್ಷಾಯ ತೇ ನಮಃ**
**॥ ೨೯ ॥**

**ಸೋಮಾಯ ಋಗ್ಯಜುರಥರ್ವಾಯ ಓಂ ಭೂರ್ಭುವಸ್ವಃ ।**
**ಓಂ ಮಹಃ ಓಂ ಜನಃ ಓಂ ತಪಃ ಓಂ ಸತ್ಯಂ ಬ್ರಹ್ಮಣೇ ಮೂಲೇ ಮಧ್ಯೇ**
**ಪುರತಃ ಆದಿತ್ಯಾಯನಮಃ ॥ ೩೦ ॥**

**॥ ನಾರದ ಉವಾಚ ॥**

**ಸಾವಿತ್ರ್ಯೈಶ್ಚ ಪರೇ ತಂತ್ರೇ ತ್ರೈಲೋಕ್ಯತ್ರಾಣಕಾರಿಣೇ ।**
**ಪರಿತಃ ಪರಿಗೃಹ್ಯಾಥ ಧೂಪಭಾಜನಮುತ್ಕ್ಷಿಪೇತ್ ॥ ೩೧ ॥**

---

೨೮. ಮಂಡಿಗಳನ್ನು ನೆಲಕ್ಕೆ ಊರಿಕೊಂಡು ದಿವಾಕರನೇ ಅರ್ಘ್ಯವನ್ನು ಸ್ವೀಕರಿಸು. ಎಂಬ ಅರ್ಥದ ಈ ಮಂತ್ರದಿಂದಲೂ ಮತ್ತು ಆದಿತ್ಯಹೃದಯ ಸ್ತೋತ್ರ ದಿಂದಲೂ ಸೂರ್ಯನಿಗೆ ಅರ್ಘ್ಯವನ್ನು ಸಮರ್ಪಿಸಬೇಕು.

೨೯–೩೦. ಓಂ ನಮೋ ಭಗವತೇ ಆದಿತ್ಯಾಯನಮಃ ಇದಮರ್ಘ್ಯಂ ಸಮರ್ಪಯಾಮಿ, ವಿಶ್ವಾಯ ಇದಮರ್ಘ್ಯಂ, ಹೀಗೆಯೇ ಖೇಶಾಯ, ಬ್ರಹ್ಮಣೇ, ಲೋಕಕರ್ತ್ರೇ, ಈಶಾನಾಯ, ಪುರಾಣಾಯ, ಸಹಸ್ರಾಕ್ಷಾಯ, ಸೋಮಾಯ, ಋಗ್ವೇದಾಯ, ಯಜುರ್ವೇದಾಯ, ಅಥರ್ವವೇದಾಯ ಎಂದು ಪ್ರತಿಯೊಂದು ನಾಮದ ಮುಂದೆಯೂ ಇದಮರ್ಘ್ಯಂ ಸಮರ್ಪಯಾಮಿ ಎಂದು ಹೇಳಿಕೊಂಡು ಅರ್ಘ್ಯಪ್ರದಾನವನ್ನು ಪೂರೈಸುವುದು. ಓಂ ಭೂಃ ಇದಮರ್ಘ್ಯಂ, ಓಂ ಭುವಃ ಇದಮರ್ಘ್ಯಂ, ಓಂ ಸುವಃ ಇದಮರ್ಘ್ಯಂ ಈ ರೀತಿ ಪ್ರತಿನಾಮದ ಜತೆ ಮೂರುಸಾರಿ ಹೇಳಬೇಕು.

೩೧. ನಾರದನು ಹೇಳುತ್ತಾನೆ—ಮೂರುಲೋಕಗಳಿಗೂ ರಕ್ಷಕನಾದ ಸೂರ್ಯನಿಗೆ ಗಾಯತ್ರಿಸಮೇತವಿಲ್ಲದ ಈ ವ್ಯಾಹೃತಿತಂತ್ರದಲ್ಲಿ ಎಲ್ಲಾ ಕಡೆಯಲ್ಲೂ ಈ ರೀತಿ ಮೂರುಸಾರಿ ಗ್ರಹಿಸಬೇಕು. ಬಳಿಕ ಧೂಪಕುಂಡವನ್ನು ಮೇಲಕ್ಕೆತ್ತಿ ಹಿಡಿದು ಧೂಪವನ್ನು ಸಮರ್ಪಿಸಬೇಕು.

ನಿವೇದಯೇತ್ತತೋ ಧೂಪಂ ವಾಚಮೇತಾಮುದೀರಯೇತ್ ।
ತ್ವಮೇಕ ಏವ ರುದ್ರಾಣಾಂ ವಸೂನಾಂ ಚ ಪುರಾತನಃ ॥ ೩೨ ॥

ದೇವಾನಾಂ ಗೀರ್ಭಿರಭಿತಃ ಸಂಸ್ತುತಃ ಶಾಶ್ವತೋ ದಿವಿ ।
ಪೂರ್ವಾಹ್ಣೇ ಚ ತಥಾ ತೇನ ಮಧ್ಯಾಹ್ನೇ ಚಾಪರೇಣ ತು ॥ ೩೩ ॥

ಓಂ ನಮೋ ಭಗವತೇ ಜ್ಞಾನಾತ್ಮನೇ ತ್ವಾಂ ಚ ।
ವಿಷ್ಣೋಸ್ತತ್ಪರಮಂ ಪದಂ ಸದಾ ಪಶ್ಯಂತಿ ಸೂರಯಃ ॥ ೩೪ ॥

ದಿವಾಕರರಾಯ ಸಾಯಾಹ್ನೇ ಮಂತ್ರೇಣಾರ್ಘ್ಯಂ ನಿವೇದಯೇತ್ ।
ಓಂ ನಮೋ ವರುಣಾಯ ಶಂಭವೇ ॥ ೩೫ ॥

ಓಂ ಆಕೃಷ್ಣೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂಚ।
ಹಿರಣ್ಮಯೇನ ಸವಿತಾರಥೇನಾ ದೇವೋಯಾತಿ ಭುವನಾನಿ ಪಶ್ಯನ್॥ ೩೬ ॥

---

೩೨. ಧೂಪವನ್ನು ಸಮರ್ಪಿಸಿ ಅನಂತರದಲ್ಲಿ 'ನೀನೊಬ್ಬನೇ ರುದ್ರರಲ್ಲೂ ವಸುಗಳಲ್ಲೂ ಪುರಾತನನಾದವನು' ಎಂದು ಈ ಮಾತನ್ನು ಹೇಳಬೇಕು.

೩೩. ಪೂರ್ವಾಹ್ನದಲ್ಲೂ, ಮಧ್ಯಾಹ್ನದಲ್ಲೂ, ಅಪರಾಹ್ನದಲ್ಲೂ ಅರ್ಘ್ಯವನ್ನು ಕೊಡಬೇಕು. ದೇವವಾಣಿಯಿಂದ ನಮ್ಮೆದುರಿಗೆ ಆಕಾಶದಲ್ಲಿ ಶಾಶ್ವತನಾಗಿರುವ ಎಂಬ

೩೪. " ದೇವಾನಾಂ ಗೀರ್ಭಿರಭಿತಃ ಸಂಸ್ತುತಃ ಶಾಶ್ವತೋದಿವಿ ಓಂ ನಮೋ ಭಗವತೇ ಜ್ಞಾನಾತ್ಮನೇ ತ್ವಾಂ ಚ ವಿಷ್ಣೋಸ್ತತ್ಪರಮಂ ಪದಂ ಸದಾ ಪಶ್ಯಂತಿ ಸೂರಯಃ " ಎಂಬ ಮಂತ್ರದಿಂದ ಪ್ರಾತಃಕಾಲದಲ್ಲೂ

೩೫. " ಓಂ ನಮೋ ವರುಣಾಯ ಶಂಭವೇ " ಈ ಮಂತ್ರದಿಂದ ದಿವಾಕರನಿಗೆ ಸಾಯಂಕಾಲದಲ್ಲೂ ಅರ್ಘ್ಯವನ್ನು ಸಮರ್ಪಿಸಬೇಕು.

೩೬. " ಓಂ ಆಕೃಷ್ಣೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂ ಚ। ಹಿರಣ್ಯಯೇನ ಸವಿತಾ ರಥೇನಾದೇವೋ ಯಾತಿ ಭೂವನಾನಿ ಪಶ್ಯನ್" ಎಂಬ ಮಂತ್ರದಿಂದ ಮಧ್ಯಾಹ್ನದಲ್ಲಿ ಅರ್ಘ್ಯವನ್ನು ಕೊಡಬೇಕು.

ಅನೇನ ವಿಧಿನಾ ದತ್ವಾ ಧೂಪಂ ಸೂರ್ಯಾಯ ಭೋಜಕಃ ।
ಉತ್ಕ್ಷಿಪೇಚ್ಚೈವ ಧೂಪೇನ ವಿಶೇದ್ಗರ್ಭಗೃಹಂ ತತಃ ॥ ೩೭ ॥

ತತಃ ಪ್ರವಿಶ್ಯ ಧೂಪಂ ತು ಪ್ರತಿಮಾಯೈ ನಿವೇದಯೇತ್ ।
ಮಂತ್ರೇಣ ಮಿಹಿರಾಯೇತಿ ನಿಕ್ಷುಭಾಯೇತಿ ನಿತ್ಯಶಃ ॥ ೩೮ ॥

ತತೋ ರಾಜ್ಞ್ಯೈ ನಮಶ್ಚೇತಿ ನಿಕ್ಷುಭಾಯೈ ತತೋ ನಮಃ ।
ದಂಡನಾಯಕಸಂಜ್ಞಾಯ ಪಿಂಗಲಾಯ ಚ ವೈ ನಮಃ ॥ ೩೯ ॥

ತಥಾ ರಾಜ್ಞಾಯ ಸ್ರೌಷಾಯ ತಥೇಶಾಯ ಗರುತ್ಮತೇ ।
ತತಃ ಪ್ರದಕ್ಷಿಣಂ ಕುರ್ವನ್ ದಿಗ್ದೇವೇಭ್ಯೋ ನಿವೇದಯೇತ್ ॥ ೪೦ ॥

ದಂಡಿನೇ ತು ತತೋ ದದ್ಯಾದ್ಧೇಹಂತಾಯ ಯದೂತ್ತಮ ।
ಮಹೇಶ್ವರಾಯ ದದ್ಯಾತ್ತು ತಥಾ ವ್ಯೋಮಾಯ ಯಾದವ ॥ ೪೧ ॥

---

೩೭. ಭೋಜಕನು ಈ ವಿಧಿಯಿಂದ ಸೂರ್ಯನಿಗೆ ಧೂಪವನ್ನು ಹಾಕಿ ಮೇಲಕ್ಕೆ ಎತ್ತಿದ ಆ ಮೇಲೆ ಧೂಪಕುಂಡದೊಡನೆ ಗರ್ಭಗೃಹವನ್ನು ಪ್ರವೇಶಿಸಿ

೩೮. ಮಿಹಿರಾಯನಮಃ, ನಿಕ್ಷುಭಾಯನಮಃ, ಎಂಬ ಮಂತ್ರದಿಂದ ಪ್ರತಿಮೆಗೆ ಧೂಪವನ್ನು ಸಮರ್ಪಿಸಬೇಕು.

೩೯–೪೦ ಆ ಮೇಲೆ ರಾಜ್ಞ್ಯೈನಮಃ ನಿಕ್ಷುಭಾಯೈನಮಃ ಎಂಬ ಮಂತ್ರದಿಂದ ಸೂರ್ಯಪತ್ನಿಯರಿಗೂ ದಂಡನಾಯಕ ಸಂಜ್ಞಾಯನಮಃ, ಪಿಂಗಳಾಯನಮಃ, ರಾಜ್ಞಾಯನಮಃ, ಸ್ರೌಷಾಯನಮಃ, ಈಶಾನಾಯನಮಃ, ಗರುತ್ಮತೇನಮಃ, ಎಂಬ ಮಂತ್ರಗಳಿಂದಲೂ ಆ ಸೂರ್ಯದ್ವಾರಪಾಲಕಾದಿಗಳಿಗೆ ಧೂಪವನ್ನು ಸಮರ್ಪಿಸಿ ಅನಂತರ ಪ್ರದಕ್ಷಣೆಮಾಡುತ್ತಾ ದಿಗ್ದೇವತೆಗಳಿಗೆಲ್ಲಾ ಧೂಪವನ್ನು ಸಮರ್ಪಿಸಬೇಕು.

೪೧. ಎಲೈ ಯದೂತ್ತಮನೇ! ಅನಂತರದಲ್ಲಿ ದಂಡಿಗೂ ಹೇಹಂತನಿಗೂ ಧೂಪವನ್ನು ಸಮರ್ಪಿಸಬೇಕು. ಎಲೈ ಯಾದವನೇ! ವಿಶ್ವೇಭ್ಯೋ ದೇವೇಭ್ಯೋ ನಮಃ, ರುದ್ರೇಭ್ಯೋನಮಃ, ಎಂಬ ಮಂತ್ರದಿಂದ ಮಹೇಶ್ವರನಿಗೂ ಮತ್ತು ವ್ಯೋಮಕ್ಕೂ ಅರ್ಪಿಸಬೇಕು.

ವಿಶ್ವೇಭ್ಯೋ ದೇವೇಭ್ಯೋನಮಃ ರುದ್ರೇಭ್ಯೋನಮಃ ।
ಓಂ ಬ್ರಹ್ಮಣೇ ಮುಂಡಪತಯೇ ಆದಿತ್ಯಾಯ
ಪುರುಷೇಶ್ವರಾಯ ಸೂರ್ಯಾಯ ನಮೋನಮಃ ॥ ೪೨ ॥

ಓಂ ಅನೇಕಕಾಂತಯೇ ನತ್ವಾ ಶೇಷಾಯ ವಾಸುಕಿ ತಕ್ಷಕ
ಕಾರ್ಕೋಟಕಾಯ ಪದ್ಮಶಂಖಕುಲಿಕೇಭ್ಯೋ
ನಾಗರಾಜೋಭ್ಯೋನಮಃ ॥ ೪೩ ॥

ತಲ ಸುತಲ ಪಾತಾಳಾತಲ ವಿತಲ ರಸಾತಲಾದಿ ವಾಸಿಭ್ಯೋ ।
ದೈತ್ಯದಾನವ ಪಿಶಾಚೇಭ್ಯೋ ನಮಃ ತತಃ ಪ್ರದಕ್ಷಿಣಂ
ಕುರ್ಯಾನ್ಮಾತೃಕೇಭ್ಯೋನಮಃ ಓಂ ಗ್ರಹೇಭ್ಯೋನಮಃ ॥ ೪೪ ॥

ಓಂ ದಂಡನಾಯಕಾಯನಮಃ ಓಂ ಮಾರ್ತಂಡಾಯನಮಃ ।
ಓಂ ವಿನಾಯಕಾಯನಮಃ ॥ ೪೫ ॥

ಏವಮುದ್ದಿಶ್ಯ ನಾಮಾನಿ ಧೂಪಂ ದತ್ವಾ ವರಾನನೆ ।
ಉತ್ಕ್ಷಿಪ್ತೋ ಯತ್ರ ವೈ ಧೂಪೋ ಮುಕ್ತ್ವಾ ತತ್ರೈವ ತಂ ಪುನಃ ॥೪೬॥

---

೪೨. ಓಂ -ಬ್ರಹ್ಮಣೇನಮಃ, ಮುಂಡಪತಯೇನಮಃ, ಆದಿತ್ಯಾಯನಮಃ, ಪುರುಷೇಶ್ವರಾಯನಮಃ, ಸೂರ್ಯಾಯನಮೋನಮಃ,

೪೩. ಓಂ ಅನೇಕ ಕಾಂತಯೇನಮಃ ಎಂದು ಹೇಳಿ ತಲ, ಸುತಲ, ಪಾತಾಲ, ಅತಲ, ವಿತಲ, ರಸಾತಲವಾಸಿಗಳಾದ ಶೇಷ, ವಾಸುಕಿ, ತಕ್ಷಕ, ಕಾರ್ಕೋಟಕ, ಪದ್ಮ,

೪೪. ಶಂಖ, ಕುಲಿಕ, ನಾಗರಾಜ ಇವರಿಗೂ, ದೈತ್ಯ, ದಾನವ, ಪಿಶಾಚರಿಗೂ ಧೂಪಹಾಕಬೇಕು. ಅನಂತರದಲ್ಲಿ ಮಾತೃಕಾಭ್ಯೋನಮಃ, ಓಂ ಗ್ರಹೇಭ್ಯೋನಮಃ ಎಂದು ಧೂಪವನ್ನು ಬೆಳಗಬೇಕು.

೪೫. ಓಂ ದಂಡನಾಯಕಾಯನಮಃ, ಓಂ ಮಾರ್ತಂಡಾಯನಮಃ, ಓಂ ವಿನಾಯಕಾಯನಮಃ

೪೬. ಎಲೈ ಸುಮುಖನೇ! ಹೀಗೆ ನಾಮೋದ್ದೇಶದಿಂದ ಧೂಪವನ್ನರ್ಪಿಸಿ ಧೂಪ ಕುಂಡವನ್ನು ಯಾವ ಸ್ಥಳದಿಂದ ಮೇಲಕ್ಕೆತ್ತಲಾಯಿತೋ ಪುನಃ ಅಲ್ಲೇ ಇಡಬೇಕು.

ಸೂರ್ಯಗುಪ್ತೈರಭಿಷ್ಟೂಯ ಏವಂ ವಿಜ್ಞಾಪಯೇತ್ತತಃ ।
ಅರ್ಚಿತಸ್ತ್ವಂ ಯಥಾಶಕ್ತ್ಯಾ ಮಯಾ ಭಕ್ತ್ಯಾ ವಿಭಾವಸೋ ।
ಐಹಿಕಾಮುಷ್ಮಿಕೀಂ ನಾಥ ಕಾರ್ಯಸಿದ್ಧಿಂ ದದಸ್ವ ಮೇ ॥ ೪೭ ॥

ಏವಂ ತ್ರಿಷವಣಂ ಸ್ನಾತ್ವಾ ಯೋಽರ್ಚಯೇತ್ಪ್ರಣತೋ ರವಿಂ ।
ವಿಧಿನಾ ತು ಯಥೋಕ್ತೇನ ಸೋಽಶ್ವಮೇಧ ಫಲಂ ಲಭೇತ್ ॥ ೪೮ ॥

ಯಶ್ಚೈವಂ ಕುರುತೇ ನಿತ್ಯಂ ಯಥೋಕ್ತಂ ಧೂಪವಿಸ್ತರಂ ।
ಸ ಪುತ್ರವಾನರೋಗೀ ಚ ಮೃತಃ ಸಂಲೀಯತೇ ರವೌ ॥ ೪೯ ॥

ವಿಧಿನಾ ತು ಯಥೋಕ್ತೇನ ಕ್ರಿಯಮಾಣಾನಿ ಯತ್ನತಃ ।
ಸರ್ವಕಾರ್ಯಾಣಿ ಸಿಧ್ಯಂದಿ ಸಫಲಾನಿ ಭವಂತಿ ಚ ॥ ೫೦ ॥

ಪುಷ್ಪಂ ಶ್ರೇಷ್ಠಂ ಯದಾ ನ ಸ್ಯಾತ್ಪತ್ರಾಣಿ ಸಮುಪಾಹರೇತ್ ।
ಪತ್ರಂ ನಸ್ಯಾತ್ತತೋ ಧೂಪಂ ಧೂಪೋ ನ ಸ್ಯಾತ್ತತೋ ಜಲಂ ॥ ೫೧ ॥

---

೪೭. ಆ ಮೇಲೆ ಎಲೈ ವಿಭಾವಸುವೇ! ನಾನು ನಿನ್ನನ್ನು ನನ್ನ ಶಕ್ತಿಯಿದ್ದಷ್ಟು ಭಕ್ತಿಯಿಂದ ಪೂಜಿಸಿದೆನು. ಸ್ವಾಮಿಯೇ! ನನಗೆ ಐಹಿಕ ಆಮುಷ್ಮಿಕ ಕಾರ್ಯಗಳಲ್ಲಿ ಸಿದ್ಧಿಯನ್ನು ಕೊಡು ಎಂದು ವಿಜ್ಞಾಪಿಸಬೇಕು.

೪೮. ಹೀಗೆ ಯಾರು ತ್ರಿಕಾಲದಲ್ಲೂ ಉಕ್ತವಿಧಿಯಂತೆ ಸ್ನಾನಮಾಡಿ ಸೂರ್ಯನನ್ನು ಪೂಜಿಸಿ ನಮಸ್ಕರಿಸುವರೋ ಅವರಿಗೆ ಅಶ್ವಮೇಧ ಫಲವು ಪ್ರಾಪ್ತವಾಗುವುದು.

೪೯. ಹಿಂದೆ ಹೇಳಿದಂತೆ ಹೀಗೆ ಸದಾ ಯಾವನು ಧೂಪಸಮರ್ಪಣವನ್ನು ಮಾಡುವನೋ, ಅವನು ಪುತ್ರವಂತನೂ, ರೋಗವಿಲ್ಲದವನೂ ಆಗಿ, ಮರಣಾನಂತರ ಸೂರ್ಯನಲ್ಲಿ ಲೀನವಾಗುವನು.

೫೦. ಹಿಂದೆ ಹೇಳಿದಂತೆ ವಿಧಿವತ್ತಾಗಿ ಯತ್ನದಿಂದ ಮಾಡಿದರೆ ಅವನ ಕಾರ್ಯಗಳೆಲ್ಲವೂ ಸಿದ್ಧಿಸುವುವು. ಸಫಲಗಳೂ ಆಗುವುವು.

೫೧. ಶ್ರೇಷ್ಠವಾದ ಪುಷ್ಪಗಳು ಸಿಕ್ಕದಿದ್ದರೆ ಪತ್ರಗಳನ್ನು ಅರ್ಪಿಸಬೇಕು. ಪತ್ರವೂ ಇಲ್ಲದಿದ್ದರೆ ಆಗ ಧೂಪವನ್ನೂ ಧೂಪವೂ ಇಲ್ಲದಿರುವಾಗ ಜಲವನ್ನೂ ಅರ್ಪಿಸಬೇಕು.

ಸರ್ವಂ ನ ಸ್ಯಾದ್ಯದಾ ಚೈವ ಪ್ರಣಿಪಾತೇನ ಪೂಜಯೇತ್ ।
ಅಶಕ್ತೌ ಪ್ರಣಿಪಾತಸ್ಯ ಮನಸಾ ಪೂಜಯೇದ್ರವಿಂ ॥ ೫೨ ॥

ಅಸಂಭವೇ ತು ದ್ರವ್ಯಾಣಾಂ ವಿಧಿರೇಷ ಪ್ರಕೀರ್ತಿತಃ ।
ದ್ರವ್ಯಾಣಾಂ ಸಂಭವೇ ಚೈವ ಸರ್ವಮೇವೋಪಹಾರಯೇತ್ ॥ ೫೩ ॥

ಮಂತ್ರೈಃ ಕರ್ಮಯುತೋ ಯಸ್ತು ಮಿತ್ರೇ ಧೂಪಂ ನಿವೇದಯೇತ್ ।
ಉಚ್ಚಾರಣಾಚ್ಚ ವೈ ತೇಷಾಂ ಧೂಪಪ್ರೀತೋ ಭವೇದ್ರವಿಃ ॥ ೫೪ ॥

ಶಿರೋ ನಾಸಾಮುಖಂ ಚೈವ ಭೃಶಮಾವೃತ್ಯ ಯತ್ನತಃ ।
ಪೂಜಯೇದ್ಭಾಸ್ಕರಂ ವೀರ ಶಿಥಿಲಂ ತು ನ ಕಾರಯೇತ್ ॥ ೫೫ ॥

ನಲಿನೇನ ತು ರಾಜೇಂದ್ರ ನರೋ ಯಾತಿ ದಿವಾಕರಂ ।
ತಸ್ಮಾದ್ಯುಕ್ತಂ ಸದಾ ಕಾರ್ಯಂ ಪೂಜ್ಯತೇ ಚ ದಿವಾಕರಃ ॥ ೫೬ ॥

---

೫೨. ಇವುಗಳಲ್ಲಿ ಯಾವುದೂ ಇಲ್ಲದಿರುವಾಗ ನಮಸ್ಕಾರವನ್ನೇ ಸಮರ್ಪಿಸಿ ಪೂಜಿಸಬೇಕು. ನಮಸ್ಕರಿಸುವುದಕ್ಕೂ ಶಕ್ತಿಯಿಲ್ಲದಿರುವಾಗ ಸೂರ್ಯನನ್ನು ಮನಸ್ಸಿನಿಂದ ಪೂಜಿಸಬೇಕು.

೫೩. ಪದಾರ್ಥಗಳು ದೊರೆಯದೆ ಇರುವಾಗ ಈ ವಿಧಿಯು ಹೇಳಿದೆ. ಪದಾರ್ಥಗಳು ಸಿಕ್ಕುವಾಗ ಸಿಕ್ಕುವ ಪದಾರ್ಥಗಳೆಲ್ಲವನ್ನೂ ಅರ್ಪಿಸಲೇಬೇಕು.

೫೪. ಮಾನವನು ಮಂತ್ರವತ್ತಾದ ಕರ್ಮಯುಕ್ತನಾಗಿ ಮಿತ್ರನಿಗೆ ಧೂಪವನ್ನು ಸಮರ್ಪಿಸಿದರೆ ಮಂತ್ರೋಚ್ಚಾರಣದಿಂದಲೇ ಸೂರ್ಯನು ಧೂಪಹಾಕಿದಷ್ಟು ಪ್ರೀತಿಯನ್ನು ಹೊಂದುತ್ತಾನೆ.

೫೫. ತಲೆ, ಮೂಗು, ಬಾಯಿಗಳನ್ನು ಪ್ರಯತ್ನದಿಂದ ಚೆನ್ನಾಗಿ ಮುಚ್ಚಿಕೊಂಡು ಸೂರ್ಯನನ್ನು ಪೂಜಿಸಬೇಕು. ಬಾಯಿ ಮೂಗುಗಳಿಗೆ ಮುಚ್ಚಿದ ಬಟ್ಟೆಯನ್ನು ಸಡಲಿಸಬಾರದು.

೫೬. ರಾಜನೇ! ಕೇಳು ಹೀಗೆ ಆಚರಿಸಿದ ಮನುಷ್ಯನು ಕಮಲಾಸನಾರೂಢನಾಗಿ ಸೂರ್ಯನನ್ನು ತಲಪುವನು. ಆದುದರಿಂದ ಯುಕ್ತವಾದುದನ್ನು ಸದಾ ಮಾಡುತ್ತಾ ಸೂರ್ಯನನ್ನು ಚೆನ್ನಾಗಿ ಪೂಜಿಸಬೇಕು.

ತೇಽಶ್ವಮೇಧಫಲಂ ಪ್ರಾಪ್ಯ ಸೂರ್ಯಲೋಕಂ ವ್ರಜಂತಿ ಹಿ ।
ಧೂಪೇನ ಪೂಜ್ಯಮಾನಂ ತು ನರಾಃ ಪಶ್ಯಂತಿ ಯಾದವ ॥ ೫೭ ॥

ಯಾಂತಿ ತೇ ಪರಮಂ ಸ್ಥಾನಂ ಯನ್ನ ಪಶ್ಯಂತಿ ಸೂರಯಃ ।
ಕ್ರಿಯಮಾಣಂ ತಥಾರ್ಕಂ ಚ ಭಕ್ತ್ಯಾ ಪಶ್ಯಂತಿ ಯೇ ನರಾಃ ।
ಸರ್ವಾನ್ಕಾಮಾನಿಹ ಪ್ರಾಪ್ಯ ತೇ ಯಾಂತಿ ಪರಮಂ ಪದಂ ॥ ೫೮ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಾಂಬೋಪಾಖ್ಯಾನೇ ಧೂಪಾದಿ ವಿವಿಧ ವಿಧಿವರ್ಣನಂ ನಾಮ ತ್ರಿಚತ್ವಾರಿಂಶದುತ್ತರ ಶತತಮೋಽಧ್ಯಾಯಃ.



---

೫೭. ಯಾರು ಸೂರ್ಯನಿಗೆ ಧೂಪಸಮರ್ಪಣೆಯಾಗುವಾಗ ಭಕ್ತಿಯಿಂದ ದರ್ಶನಮಾಡುತ್ತಾರೋ, ಅವರು ಅಶ್ವಮೇಧ ಫಲವನ್ನು ಹೊಂದಿ ಸೂರ್ಯಲೋಕಕ್ಕೆ ಹೋಗುತ್ತಾರೆ.

೫೮. ಅಲ್ಲಿ ಅವರು ಶ್ರೇಷ್ಠವಾದ ಸ್ಥಾನವನ್ನು ಹೊಂದುವರು. ಅದನ್ನು ಸೂರಿಗಳು ಕೂಡ ಹೊಂದಲಾರರು. ಯಾವ ಮನುಷ್ಯರು ಸೂರ್ಯನಿಗೆ ಧೂಪಾರತಿ ಮಾಡುತ್ತಿರುವುದನ್ನೂ ಮತ್ತು ಸೂರ್ಯನನ್ನೂ ಭಕ್ತಿಯಿಂದ ದರ್ಶನಮಾಡುತ್ತಾರೋ ಅವರು ಸರ್ವೇಷ್ಟಾರ್ಥಗಳನ್ನು ಹೊಂದಿ ಶ್ರೇಷ್ಠವಾದ ಸ್ಥಾನಕ್ಕೆ ಹೋಗುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮಿಕಲ್ಪದಲ್ಲಿ ಸಾಂಬೋಪಾಖ್ಯಾನದಲ್ಲಿ ಧೂಪಾದಿ ವಿವಿಧವರ್ಣನೆಯೆಂಬ ನೂರನಲತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಚತುಶ್ಚತ್ವಾರಿಂಶದುತ್ತರಶತತಮೋಽಧ್ಯಾಯಃ

॥ ಸುಮಂತುರುವಾಚ ॥

**ಅಥಾಜಗಾಮ ಭಗವಾನ್ ವ್ಯಾಸೋ ದ್ವಾರವತೀಂ ಪುರೀಂ ।**
**ದ್ರಷ್ಟುಂ ನಾರಾಯಣಂ ದೇವಂ ಶಂಖಚಕ್ರಗದಾಧರಂ ॥ ೧ ॥**

**ತಮಾಗತಮೃಷಿಂ ದೃಷ್ಟ್ವಾ ವಾಸುದೇವೋ ವಿಶಾಂಪತೇ ।**
**ಅಭ್ಯುತ್ಥಾಯ ಮಹಾತೇಜಾಃ ಪೂಜಯಾಮಾಸ ಭಾರತ ॥ ೨ ॥**

**ಸ್ವಯಮೇವಾಸನಂ ದತ್ವಾ ಪಾದ್ಯಮರ್ಘ್ಯಂ ತಥೈವ ಚ ।**
**ಪಪ್ರಚ್ಛ ಪ್ರಯತೋ ಭೂತ್ವಾ ವ್ಯಾಸಂ ಸತ್ಯವತೀಸುತಂ ॥ ೩ ॥**

---

## ನೂರನಲವತ್ತನಾಲ್ಕನೆಯ ಅಧ್ಯಾಯ

೧. ಸುಮಂತುಮುನಿವರ್ಯರು ಹೇಳುತ್ತಾರೆ—ಆ ಮೇಲೆ ಭಗವಂತನಾದ ವ್ಯಾಸಮಹರ್ಷಿಯು ಶಂಖಚಕ್ರಗಧಾದರನಾದ ಶ್ರೀ ಕೃಷ್ಣನನ್ನು ನೋಡಲು ದ್ವಾರವತೀಪುರಿಗೆ ಬಂದನು.

೨. ಮಹಾತೇಜಸ್ವಿಯಾದ ವಾಸುದೇವನು ಆ ಋಷಿಯು ಬಂದುದನ್ನು ಕಂಡು ಪೂಜಿಸುವವನಾಗಿ

೩. (ಕೃಷ್ಣನು) ಆಸನದಿಂದೆದ್ದು ಆತನಿಗೆ ತಾನೇ ಪೀಠವನ್ನು ಕೊಟ್ಟು, ಪಾದ್ಯ ಮತ್ತು ಅರ್ಘ್ಯ ಇವನ್ನು ಸಮರ್ಪಿಸಿ, ಪರಿಶುದ್ಧನಾಗಿ ಸತ್ಯವತೀಪುತ್ರನಾದ ವ್ಯಾಸನನ್ನು ಪ್ರಶ್ನೆಮಾಡಿದನು.

ಯ ಏತೇ ಭೋಜಕಾ ವಿಪ್ರಾಃ ಆನೀತಾ ಮತ್ಸುತೇನ ವೈ ।
ಶಾಕದ್ವೀಪಮಿತೋ ಗತ್ವಾ ಜ್ಞಾನಿನೋ ಮೋಕ್ಷಗಾಮಿನಃ ॥ ४ ॥

ತಾನ್‌ದೃಷ್ಟ್ವಾ‌ರೂಪತೋ ವಿಪ್ರ ಪ್ರವೇಶಾತ್ಕರ್ಮತಸ್ತಥಾ ।
ಕೌತೂಹಲಂ ಸಮುತ್ಪನ್ನಂ ಹರ್ಷಶ್ಚ ಪರಮೋ ಮಮ ॥ ೫ ॥

ಕಥಮೇತೇ ಕ್ಷಣಮಪಿ ತಿಷ್ಠಂತೇ ಪೃಥಿವೀತಲೇ ।
ಯೇಷಾಂ ರವಿಃ ಸದಾ ಪೂಜ್ಯಸ್ತೇಷಾಂ ಮುಕ್ತಿಃ ಸದಾ ವಸೇತ್ ॥ ೬ ॥

ನಾಗತ್ವಾಭೋಜಕತ್ವಂ ಹಿ ಮೋಕ್ಷಮಾಪ್ನೋತಿ ಕಶ್ಚನ ।
ಇದಂ ಮೇ ಮನಸೋ ಬ್ರಹ್ಮನ್ ಸದಾ ಸಂಪ್ರತಿಭಾತಿ ವೈ ॥ ೭ ॥

॥ ವ್ಯಾಸ ಉವಾಚ ॥

ಏವಮೇವ ಯಥಾತ್ಥ ತ್ವಂ ಶಂಖಚಕ್ರಗದಾಧರ ।
ಧನ್ಯಾ ಏತೇ ಮಹಾತ್ಮಾನೋ ಭೋಜಕಾ ನಾತ್ರ ಸಂಶಯಃ ॥ ೮ ॥

---

४. ನನ್ನ ಮಗ ಸಾಂಬನು ಕರೆತಂದ ಜ್ಞಾನಿಗಳಾದ ಈ ಭೋಜಕರು ಇಲ್ಲಿಂದ ಶಾಕದ್ವೀಪಕ್ಕೆ ಹೋಗಿ ಮೋಕ್ಷವನ್ನು ಹೊಂದುತ್ತಾರೆ.

೫. ಅವರ ರೂಪವನ್ನೂ ಕರ್ಮಪ್ರವೇಶವನ್ನೂ ವಿಮರ್ಶಿಸಿ ನೋಡಿ ನನಗೆ ಕುತೂಹಲವು ಉದಿಸಿತು. ತುಂಬ ಸಂತೋಷವೂ ಆಯಿತು.

೬. ಸದಾ ಪೂಜ್ಯನಾಗಿ ರವಿಯು, ಅವರಿಗೆ ಸದಾ ಮುಕ್ತಿಕೊಡಲು ಸಿದ್ಧವಾಗಿರುವಾಗ, ಇವರು ಒಂದು ಕ್ಷಣವಾದರೂ ಭೂಲೋಕದಲ್ಲಿ ಹೇಗೆ ನಿಂತಾರು ?

೭. ಭೋಜಕತ್ವದಿಂದಲ್ಲದೆ ಯಾರೂ ಮುಕ್ತಿಯನ್ನು ಹೊಂದುವುದಿಲ್ಲ. ಎಲೈ ವ್ಯಾಸನೇ ! ಈಗ ನನಗೆ ಸದಾ ಇದು ಮನಸ್ಸಿಗೆ ತೋರುತ್ತಿದೆ. (ಎಂದನು.)

೮. ವ್ಯಾಸರು ಹೇಳುತ್ತಾರೆ—ಎಲೈ ಶಂಖಚಕ್ರ ಗಧಾದರನೇ ! ನೀನು ಹೇಳಿದುದು ಸರಿ. ಮಹಾತ್ಮರಾದ ಭೋಜಕರು ಧನ್ಯರು. ಇದರಲ್ಲಿ ಸಂದೇಹವಿಲ್ಲ.

ಯೇ ಪೂಜಯಂತಿ ಸತತಂ ಭಾನುಮಂತಂ ದಿವಾಕರಂ ।
ಜ್ಞಾನಿನಃ ಕರ್ಮನಿಷ್ಠಾಶ್ಚ ಸದಾ ಮೋಕ್ಷಗತಿಂ ಗತಾಃ ॥ ೯ ॥

ಯಜಂತೇ ಸತತಂ ಭಾನುಂ ಬಲಿಪುಷ್ಪಫಲೈಸ್ತಥಾ ।
ಅನ್ನೇನೌಷಧಿಭಿಶ್ಚೈವ ಆಜ್ಯಹೋಮೈಶ್ಚ ಕೃತ್ಸ್ನಶಃ ॥ ೧೦ ॥

ಹೋಮಂ ಚ ಶಾಶ್ವತಂ ಕೃತ್ವಾ ಪರಂ ಹೋಮಂ ತತಃ ಶ್ರಿತಾಃ ।
ಪರಹೋಮಸ್ಯಕರಣಾತ್ಪೂತಾತ್ಮಾನೋ ಹ್ಯಕಲ್ಮಷಾಃ ॥ ೧೧ ॥

ವಿಶಂತಿ ಪರಮಾಂ ದಿವ್ಯಾಂ ಭಾಸ್ಕರೀಂ ತೈಜಸೀಂ ಕಲಾಂ ।
ಕರ್ಮಣಃ ಸಾಧನೇ ಚೈಕಾ ತತ್ರ ಚಾಗ್ನೌ ಪ್ರತಿಷ್ಠಿತಾ ॥ ೧೨ ॥

ವಾಯುಮಾರ್ಗಸ್ಥಿತಾ ವ್ಯೋಮ್ನಿ ದ್ವಿತೀಯಾಂತಃ ಪ್ರಕಾಶಿಕಾ ।
ತತಃ ಪರಂ ತೃತೀಯಾ ತು ತತ್ಸ್ಮೃತಂ ಸೂರ್ಯಮಂಡಲೇ ॥ ೧೩ ॥

---

೯. ಭಾನುಮಂತನಾದ ಸೂರ್ಯನನ್ನು ಯಾವಾಗಲೂ ಪೂಜಿಸುವವರು, ಜ್ಞಾನಿಗಳೂ, ಸದಾ ಕರ್ಮನಿಷ್ಠರೂ ಆಗಿ ಮೋಕ್ಷವನ್ನು ಹೊಂದಲರ್ಹರಾಗಿರುವರು.

೧೦. ಸೂರ್ಯನನ್ನು ಯಾವಾಗಲೂ ಬಲಿ ಪುಷ್ಪ ಮಂತ್ರ ಇವುಗಳಿಂದಲೂ, ಅನ್ನ, ಔಷಧಿಗಳು, ಆಜ್ಯಹೋಮಗಳು ಇವುಗಳಿಂದಲೂ ಸಂಪೂರ್ಣವಾಗಿ ಸೇವಿಸಬೇಕು.

೧೧. ಹೀಗೆ ಮಾಡುವವರು ಶಾಶ್ವತಹೋಮವನ್ನು ಮಾಡಿ ಆ ಮೇಲೆ ಪರಹೋಮವನ್ನು ಮಾಡುತ್ತಾರೆ. ಹಾಗೆ ಮಾಡುವುದರಿಂದ ಪೂತಾತ್ಮರೂ ನಿಷ್ಕಲ್ಮಷರೂ ಆಗುತ್ತಾರೆ.

೧೨. ಹಾಗೆ ಪರಿಶುದ್ಧರಾಗಿ ಶ್ರೇಷ್ಠವೂ, ದಿವ್ಯವೂ, ತೈಜಸವೂ ಆದ ಸೂರ್ಯಕಲೆಯನ್ನು ಪ್ರವೇಶಿಸುತ್ತಾರೆ. ಅದು ಕರ್ಮವನ್ನು ಸಾಧಿಸುವುದರಲ್ಲಿ ಮುಖ್ಯವಾಗಿದೆ. ಅಲ್ಲದೆ ಅದರಲ್ಲಿ ಅಗ್ನಿಯು ಪ್ರತಿಷ್ಠಿತನಾಗಿದಾನೆ.

೧೩. ವಾಯುಮಾರ್ಗದಲ್ಲಿರುವ ಎರಡನೆಯಕಲೆ ಅಂತಃಪ್ರಕಾಶಕವಾದುದು. ಆ ಮೇಲೆ ಮೂರನೆಯದು ಸೂರ್ಯಮಂಡಲದಲ್ಲಿರುವುದೆಂದು ಖಚಿತವಾಗಿದೆ.

ಮಂಡಲಂ ತಚ್ಚ ಸವಿತುರ್ದಿವ್ಯಂ ಹ್ಯಜರಮವ್ಯಯಂ ।
ತಸ್ಯಾಸೌ ಪುರುಷೋ ಮಧ್ಯೇ ಯೋಽಸೌ ಸದಸದಾತ್ಮಕಃ ॥ ೧೪ ॥

ಕ್ಷರಾಕ್ಷರಸ್ತು ವಿಜ್ಞೇಯೋ ಮಹಾಸೂರ್ಯಸ್ತಥೈವ ಚ ।
ನಿಷ್ಕಲಃ ಸಕಲಶ್ಚಾಪಿ ದ್ವೌ ಚ ತಸ್ಯ ಪ್ರಕಲ್ಪಿತೌ ॥ ೧೫ ॥

ಅಕ್ಷರಃ ಸಕಲಶ್ಚೈವ ಸರ್ವಭೂತವ್ಯವಸ್ಥಿತಃ ।
ಸತತ್ತ್ವಃ ಸಕಲಃ ಪ್ರೋಕ್ತಸ್ತತ್ವಹೀನಸ್ತು ನಿಷ್ಕಲಃ ॥ ೧೬ ॥

ತೃಣಗುಲ್ಮಲತಾವೃಕ್ಷವೃಕಸಿಂಹದ್ವಿಜಾಧಿಪಾನ್ ।
ಸುರಸಿದ್ಧಮನುಷ್ಯಾಂಶ್ಚ ಸ್ಥಲಜಾನ್ ಜಲಜಾನ್ ಹರೇತ್ ॥ ೧೭ ॥

ವ್ಯವಸ್ಥಿತಃ ಸ ಸರ್ವತ್ರ ಸರ್ವೇಷಾಮಂತರಾತ್ಮನಿ ।
ಯದಾ ಕಲ್ಪಾತ್ಮಕಶ್ಚೈವ ದ್ವಿತೀಯಾಂ ತನುಮಾಶ್ರಿತಃ ॥ ೧೮ ॥

ನಿಷ್ಕಲಸ್ತು ಸದಾ ಜ್ಞೇಯಃ ಸಂಸ್ಥಿತಸ್ತೈಜಸೀಂ ಕಲಾಂ ।
ಹಿಮಂ ಘರ್ಮಂ ಚ ವರ್ಷಂ ಚ ತ್ರೈಲೋಕ್ಯೇ ಕುರುತೇ ಸದಾ ॥ ೧೯ ॥

---

೧೪-೧೫. ಆ ಸೂರ್ಯಮಂಡಲವು ದಿವ್ಯವೂ, ಜರಾನಾಶರಹಿತವೂ ಆದುದು. ಅದರ ಮಧ್ಯದಲ್ಲಿ ಸದಸದಾತ್ಮಕನಾಗಿರುವ ಅವನನ್ನು ಕ್ಷರಾಕ್ಷರನೆಂದೂ, ಮಹಾ ಸೂರ್ಯನೆಂದೂ ತಿಳಿಯಬೇಕು. ನಿಷ್ಕಲ ಸಕಲ ಎಂಬ ಎರಡು ಪ್ರಕಾರಗಳೂ ಅವನಿಗೆ ಕಲ್ಪಿತವಾಗಿವೆ.

೧೬. ಅಕ್ಷರನು ಸಕಲನು; ಸರ್ವಪ್ರಾಣಿಗಳಲ್ಲೂ ಇದ್ದಾನೆ. ತತ್ವಸಹಿತನನ್ನು ಸಕಲನೆಂದೂ ತತ್ವಹೀನನನ್ನು ನಿಷ್ಕಲನೆಂದೂ ಹೇಳುತ್ತಾರೆ.

೧೭. ಅವನು ತೃಣ, ಗುಲ್ಮ, ಲತಾ, ವೃಕ್ಷ, ವೃಕ, ಸಿಹ್ಮ, ಶ್ರೇಷ್ಠಪಕ್ಷಿಗಳು, ಸುರರು, ಸಿದ್ಧರು, ಇವರನ್ನೂ, ಮನುಷ್ಯರನ್ನೂ, ಜಲಜ ಮತ್ತು ಸ್ಥಲಜ ಪ್ರಾಣಿಗಳನ್ನೂ ಪರಿಹರಿಸುವನು.

೧೮. ಅವನು ಎಲ್ಲೆಲ್ಲಿಯೂ, ಎಲ್ಲರ ಅಂತರಾತ್ಮದಲ್ಲೂ ಇರುವನು. ಎರಡನೇ ಶರೀರವನ್ನಾಶ್ರಯಿಸಿ ಪ್ರಳಯಮಾಡುವುದಕ್ಕೆ ಸಿದ್ಧನಾಗಿರುವವನು

೧೯. ಯಾವಾಗಲೂ ತೈಜಸಕಲೆಯನ್ನು ಆಶ್ರಯಿಸಿ, ನಿಷ್ಕಲನಾಗಿರುವನೆಂದು ತಿಳಿಯಬೇಕು. ಆಗ ಮಂಜು, ಮಳೆ ಸೆಕೆ ಇವನ್ನು ತ್ರಿಲೋಕಗಳಲ್ಲಿ ಯಾವಾಗಲೂ ಉಂಟುಮಾಡುವನು.

ದ್ವಿತೀಯಾ ಯಾ ತನುಸ್ತಸ್ಯ ಅಕ್ಷರಂ ತತ್ಪರಂ ಪದಂ ।
ದೇವಯಾನಂ ತು ಪಂಥಾನಂ ಕರ್ಮಯೋಗೇನ ಸಂಸ್ಥಿತಾ ॥ ೨೦ ॥

ಆದಿತ್ಯಸಿದ್ಧಾಂತರತಾಃ ಸಾಂಖ್ಯಯೋಗವಿದಶ್ಚ ಯೇ ।
ತೇऽಭಿಗಚ್ಛಂತಿ ತತ್ಸ್ಥಾನಂ ಸ ಮೋಕ್ಷಃ ಪರಿಕೀರ್ತಿತಃ ॥ ೨೧ ॥

ನಿರ್ದ್ವಂದ್ವೋ ನಿರ್ಗಮಶ್ಚೈವ ತತ್ರ ಗತ್ವಾ ನ ಶೋಚತಿ ।
ವೇದೇಷು ಬ್ರಹ್ಮ ವದಂತಿ ಧ್ಯಾಯಂತೇ ತತ್ವವೇದಿನಃ ॥ ೨೨ ॥

ಓಂಕಾರಂ ತತ್ವಶ್ಚಾಪಿ ಧ್ಯಾಯಂತೇ ಪುರುಷೋತ್ತಮಃ ।
ತ್ರ್ಯಕ್ಷರಂ ಚ ತಮೋಂಕಾರಂ ಸಾರ್ಧಮಾತ್ರಾತ್ರಯೇ ಸ್ಥಿತಂ ॥ ೨೩ ॥

ವದಂತಿ ಚಾರ್ಧಮಾತ್ರಸ್ಥಂ ಮಕಾರಂ ವ್ಯಂಜನಾತ್ಮಕಂ ।
ಧ್ಯಾಯಂತಿ ಯೇ ಮಕಾರೀಯಂ ಜ್ಞಾನಂ ತೇ ಹಿ ಸದಾತ್ಮಕಂ ॥ ೨೪ ॥

---

೨೦. ಅವನ ಎರಡನೆಯ ಶರೀರವು ನಾಶರಹಿತವಾದ ಪರಮಸ್ಥಾನ. ಆ ಶರೀರವು ಕರ್ಮಯೋಗಯುಕ್ತವಾಗಿ ದೇವತೆಗಳು ಸಂಚರಿಸುವ ಮಾರ್ಗವನ್ನು ಆಶ್ರಯಿಸಿರುವುದು.

೨೧. ಸೂರ್ಯಾರಾಧನದಲ್ಲಿ ಆಸಕ್ತರಾದವರೂ, ಸಾಂಖ್ಯಯೋಗವನ್ನು ಬಲ್ಲವರೂ ಸಹ, ಅದೇ ಸ್ಥಾನವನ್ನು ಹೊಂದುತ್ತಾರೆ. ಅದೇ ಮೋಕ್ಷವೆಂದು ಹೇಳಲ್ಪಡುತ್ತದೆ.

೨೨. ಆ ಸ್ಥಾನಕ್ಕೆ ಹೋದಮೇಲೆ ದ್ವಂದ್ವದುಃಖರಹಿತನೂ, ಗಮನಶೂನ್ಯನೂ ಆಗುವುದರಿಂದ ದುಃಖದ ಪ್ರಸಕ್ತಿಯೇ ಇಲ್ಲ. ವೇದಗಳಲ್ಲಿ ಆ ಬ್ರಹ್ಮಸ್ವರೂಪವನ್ನು ವಿಶದವಾಗಿ ನಿರೂಪಿಸಿರುತ್ತಾರೆ. ತತ್ವಜ್ಞರು ಅದನ್ನೇ ಧ್ಯಾನಿಸುತ್ತಾರೆ.

೨೩. ಅಯ್ಯಾ ಪುರುಷೋತ್ತಮನೇ! ಮೂರೂವರೆ ಮಾತ್ರೆಗಳುಳ್ಳದೂ, ಮೂರು ಅಕ್ಷರಗಳಿಂದ ಕೂಡಿದುದೂ ಆದ ಓಂಕಾರವನ್ನೇ ವಸ್ತುತಃ ಧ್ಯಾನಮಾಡುತ್ತಾರೆ (ಓಮಿತ್ಯೇಕಾಕ್ಷರಂ ಬ್ರಹ್ಮಾ ಎಂದು ಉಕ್ತಿ ಇದೆ.)

೨೪. ಯಾರು ವ್ಯಂಜನಾತ್ಮಕವಾದ ಮಕಾರವನ್ನು ಅರ್ಧಮಾತ್ರೆಯೆಂದು ಹೇಳುವರೋ, ಅವರು ಮಕಾರಸಂಬಂಧಿಯಾದ ಜ್ಞಾನವನ್ನು ಸದಾತ್ಮಕವೆಂದು (ಸತ್‌ಸ್ವರೂಪವೆಂದು) ಧ್ಯಾನಿಸುತ್ತಾರೆ.

ಮಕಾರೋ ಭಗವಾನ್ ದೇವೋ ಭಾಸ್ಕರಃ ಪರಿಕೀರ್ತಿತಃ ।
ಮಕಾರಧ್ಯಾನಯೋಗಾಚ್ಚ ಮಗಾಹ್ಯೇತೇ ಪ್ರಕೀರ್ತಿತಾಃ ॥ ೨೫ ॥

ಧೂಪಮಾಲ್ಯೈರ್ಯುತಶ್ಚಾಪಿ ಉಪಹಾರೈಸ್ತಥೈವ ಚ ।
ಭೋಜಯಂತಿ ಸಹಸ್ರಾಂಶುಂ ತೇನ ತೇ ಭೋಜಕಾಸ್ಮೃತಾಃ ॥ ೨೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ
ಸಾಂಬೋಪಾಖ್ಯಾನೇ ಭೋಜಕಸ್ಯೋತ್ಪತ್ತಿವರ್ಣನಂ ನಾಮ
ಚತುಶ್ಚತ್ವಾರಿಂಶದುತ್ತರ ಶತತಮೋಽಧ್ಯಾಯಃ.



---

೨೫. ಮಕಾರವು ಭಗವಂತನಾದ ಭಾಸ್ಕರವೇವನೆಂದು ಉಕ್ತವಾಗಿದೆ. ಮಕಾರವನ್ನು ಧ್ಯಾನಮಾಡುವುದರಿಂದಲೇ ಅವರು ಮಗರೆಂದು ಹೇಳಿಸಿಕೊಳ್ಳುವರು.

೨೬. ಧೂಪ, ಪುಷ್ಪಮಾಲಿಕೆಗಳು, ಭೋಜ್ಯವಸ್ತುಗಳ ನಿವೇದನ, ಇವುಗಳಿಂದ ಇವರು ಸೂರ್ಯನಿಗೆ ಭೋಜನ ಮಾಡಿಸುವ ಕಾರಣದಿಂದ ಅವರಿಗೆ ಭೋಜಕರೆಂದು ಹೆಸರಾಯಿತು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸಾಂಬೋಪಾಖ್ಯಾನದಲ್ಲಿ
ಭೋಜಕರ ಉತ್ಪತ್ತಿಯನ್ನು ತಿಳಿಸುವ ನೂರನಲವತ್ತ
ನಾಲ್ಕನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಪಂಚಚತ್ವಾರಿಂಶದುತ್ತರಶತತಮೋಽಧ್ಯಾಯಃ

---

॥ ವಾಸುದೇವ ಉವಾಚ ॥

ಜ್ಞಾನೋಪಲಬ್ಧಂ ವಿಪ್ರೇಂದ್ರ ಭೋಜಕಾನಾಂ ಮಹಾಮುನೇ ।
ಬ್ರೂಹಿ ತತ್ವಂ ದ್ವಿಜಶ್ರೇಷ್ಠ ಕೌತುಕಂ ಪರಮಂ ಮಮ ॥ ೧ ॥

॥ ವ್ಯಾಸ ಉವಾಚ ॥

ಇಮಾಂ ಜ್ಞಾನೋಪಲಬ್ಧಿಂ ತು ನಿಬೋಧ ಗದತೋ ಮಮ ।
ಅಸ್ಥಿಸ್ಥೂಲಂ ಸ್ನಾಯುಯುತಂ ಮಾಂಸಶೋಣಿತಲೇಪನಂ ॥ ೨ ॥

---

### ನೂರನಲವತ್ತೈದನೆಯ ಅಧ್ಯಾಯ

೧. ವಾಸುದೇವನು ಹೇಳುತ್ತಾನೆ—ಎಲೈ ವಿಪ್ರಶ್ರೇಷ್ಠನಾದ ಮಹಾಮುನಿಯೆ! ಭೋಜಕರು ಜ್ಞಾನವನ್ನು ಹೊಂದಿದ ಕ್ರಮವನ್ನು ಕುರಿತು ನಿಜಸ್ಥಿತಿಯನ್ನು ಹೇಳು; ನನಗೆ ತುಂಬಾ ಕುತೂಹಲವಿದೆ.

೨. ವ್ಯಾಸರು ಹೇಳುತ್ತಾರೆ—ಈ ಜ್ಞಾನಲಾಭಕ್ರಮವನ್ನು ಕುರಿತು ನಾನು ಹೇಳುವುದನ್ನು ಕೇಳು. ಈ ದೇಹವು ಅಸ್ಥಿಗಳಿಂದ ಸ್ಥೂಲವಾದುದೂ, ಸ್ನಾಯು (ಕಾಲಖಂಡ) ವಿನಿಂದ ಯುಕ್ತವಾದುದೂ, ಮಾಂಸರಕ್ತಗಳಿಂದ ಲಿಪ್ತವೂ ಆಗಿ ಮೇಲೆ ಚರ್ಮವನ್ನು ಹೊದ್ದಿಸಿ

೩. ಮುಪ್ಪು ದುಃಖ ಇವುಗಳಿಗೆ ಗುರಿಯಾಗುತ್ತಾ ರೋಗಗಳಿಗೆ ಉತ್ಪತ್ತಿಸ್ಥಾನವೂ ರೋಗದಿಂದ ಪೀಡಿತವೂ ಆಗಿವೆ. ಸ್ತ್ರೀವ್ಯಕ್ತಿಯ ಶರೀರ

ಚರ್ಮಾವನದ್ಧಂ ದುರ್ಗಂಧಿ ಪೂರ್ಣಂ ಮೂತ್ರಪುರೀಷಯೋಃ ।
ಜರಾಶೋಕಸಮಾವಿಷ್ಟಂ ರೋಗಾಯತನಮಾತುರಂ ।
ರಜಸ್ವಲಮನಿತ್ಯಂ ಚ ಭೂತಾವಾಸಮಿಮಂ ತ್ಯಜೇತ್ ॥ ೩ ॥

ಕಪಾಲಂ ವೃಕ್ಷಮೂಲಾನಿ ಕುಚ್ಛೈಲಮಸಹಾಯತಾ ।
ಸಮತಾ ಸರ್ವಭೂತೇಷು ಏವಂ ಮುಕ್ತಸ್ಯ ಲಕ್ಷಣಂ ॥ ೪ ॥

ತಿಲೇ ತೈಲಂ ಗವಿ ಕ್ಷೀರಂ ಕಾಷ್ಠೇ ಪಾವಕಸಂತತಿಃ ।
ಉಪಾಯಂ ಚಿಂತಯೇದಸ್ಯ ಧಿಯಾ ಧೀರಃ ಸಮಾಹಿತಃ ॥ ೫ ॥

ಪ್ರಮಾಥಿ ಚ ಪ್ರಯತ್ನೇನ ಮನಃ ಸಂಯಮ್ಯ ಚಂಚಲಂ ।
ಜ್ಞಾನೇಂದ್ರಿಯಾಣಿ ಸಂಯಮ್ಯ ಶಕುನಾನೀವ ಪಂಜರೇ ॥ ೬ ॥

---

ವಂತೂ ರಜೋಯುಕ್ತವೂ ಆಗಿವೆ. ಅಂತು ಸರ್ವಶರೀರಗಳೂ ನಾಶವಾಗತಕ್ಕುವಾಗಿ ಪಂಚಭೂತಗಳಿಗೆ ವಾಸಸ್ಥಾನವಾಗಿ ಇವೆ. ಇಂತಹ ಶರೀರವನ್ನು ಪರಿತ್ಯಾಗ ಮಾಡಬೇಕು.

೪. ತಲೆಯೋಡೇ ಭಿಕ್ಷಾಪಾತ್ರೆ, ಮರದಬುಡವೇ ವಾಸಸ್ಥಾನ, ಕುತ್ಸಿತವಸ್ತ್ರವೇ ಆಚ್ಛಾದನ, ಏಕಾಕಿಯಾಗಿರುವುದೇ ಎಂದರೆ ನಿಸ್ಸಹಾಯತೆಯೇ ಸ್ಥಿತಿ, ಸರ್ವಪ್ರಾಣಿಗಳನ್ನು ಸಮಾನತೆಯಿಂದ ನೋಡುವುದೇ ಸ್ವಭಾವ, ಇವು ಮುಕ್ತಿಗೆ ಅರ್ಹನಾದವನ ಲಕ್ಷಣಗಳು.

೫. ಧೀರನಾದವನು ಏಕಾಗ್ರಚಿತ್ತನಾಗಿ ತಿಲದಲ್ಲಿ ತೈಲವಿರುವುದಕ್ಕೂ, ಹಸುವಿನ ಕೆಚ್ಚಲಲ್ಲಿ ಹಾಲಿರುವುದಕ್ಕೂ, ಕಟ್ಟಿಗೆಯಲ್ಲಿ ಅಗ್ನಿಯಿರುವುದಕ್ಕೂ, ಕಾರಣವನ್ನು ತನ್ನ ಬುದ್ಧಿಯಿಂದ ಚಿಂತಿಸಬೇಕು.

೬. ಅಯ್ಯಾ ಮಹಾಬುದ್ಧಿಶಾಲಿಯಾದ ಜನಾರ್ದನನೇ! ಪಂಜರದಲ್ಲಿ ಪಕ್ಷಿಗಳನ್ನು ಕೂಡಿಡುವಹಾಗೆ ತನ್ನಲ್ಲಿ ತಾನೇ ಬಲವಾಗಿ ಮಥನಮಾಡಿಕೊಳ್ಳುವ ಚಂಚಲವಾದ ಮನಸ್ಸನ್ನು ಪ್ರಯತ್ನದಿಂದ ನಿಗ್ರಹಿಸಿ, ಚಕ್ಷುಸ್ಸು ಮುಂತಾದ ಜ್ಞಾನೇಂದ್ರಿಯಸಂಯಮನ ಮಾಡುವುದನ್ನು ರೂಢಿಗೆ ತರಬೇಕು.

ಇಂದ್ರಿಯೈರ್ನಿರ್ಯತ್ನೈರ್ದೇಹೀ ಧಾರಾಭಿರಿವ ತೃಪ್ಯತೇ ।
ಸತತಮಮೃತಸ್ಯೈವ ಜನಾರ್ದನ ಮಹಾಮತೇ ॥ ೭ ॥

ಪ್ರಾಣಾಯಾಮೈರ್ದಹೇದ್ದೋಷಾನ್ ಧಾರಣಾಭಿಶ್ಚ ಕಿಲ್ಬಿಷಂ ।
ಪ್ರತ್ಯಾಹಾರೇಣ ಸಂಸರ್ಗಾನ್ಧ್ಯಾನೇನಾನೀಶ್ವರಾನ್ಗುಣಾನ್ ॥ ೮ ॥

ಧ್ಯಾಯಮಾನಸ್ಯ ದಹ್ಯಂತೇ ಚಾಂತೇ ದೋಷಾ ಯಥಾಗ್ನಿನಾ ।
ತಥೇಂದ್ರಿಯಕೃತಾ ದೋಷಾ ದಹ್ಯಂತೇ ಪ್ರಾಣನಿಗ್ರಹಾತ್ ॥ ೯ ॥

ಚಿತ್ತಂಚಿತ್ತೇನ ಸಂಶೋಧ್ಯ ಭಾವಂ ಭಾವೇನ ಶೋಧಯೇತ್ ।
ಮನಸ್ತು ಮನಸಾ ಶೋಧ್ಯ ಬುದ್ಧಿಂ ಬುಧ್ಯಾ ತು ಶೋಧಯೇತ್ ॥ ೧೦ ॥

ಚಿತ್ತಸ್ಯಾತಿಪ್ರಸಾದೇನ ಭಾತಿ ಕರ್ಮ ಶುಭಾಶುಭಂ ।
ಶುಭಾಶುಭವಿನಿರ್ಮುಕ್ತೋ ನಿರ್ದ್ವಂದ್ವೋ ನಿಷ್ಪರಿಗ್ರಹಃ ॥ ೧೧ ॥

---

೭. ಹೀಗೆ ಇಂದ್ರಿಯನಿಗ್ರಹವು ಅಭ್ಯಾಸವಾದ ಮೇಲೆ ಆ ದೇಹಿಯು ನಿತ್ಯ ತೃಪ್ತಿಹೊಂದುವುದು. ಸರ್ವದಾ ಅಮೃತದ ಧಾರೆಗಳು ಬೀಳುತ್ತಿದ್ದರೆ ಹೇಗೆ ಆನಂದ ವಾಗುವುದೋ ಹಾಗೆ ಇಂದ್ರಿಯನಿಗ್ರಹ ಮಾಡಿದಮೇಲೆ ಆಶೆಯೇ ಹುಟ್ಟದೆ ಇರುವುದ ದರಿಂದ ಅವನು ತೃಪ್ತನಾಗಿ ಆನಂದ ಪೂರ್ಣನಾಗುವನು,

೮. ಪ್ರಾಣಾಯಾಮ ಮಾಡುವುದರಿಂದ ದೇಹದ ದೋಷಗಳು ದಹಿಸಿ ಹೋಗುವವು. ಧಾರಣದಿಂದ ಪಾಪವು ದಹಿಸುವುದು. ಪ್ರತ್ಯಾಹಾರದಿಂದ ಸಂಸರ್ಗ ಗಳೂ, ಧ್ಯಾನದಿಂದ ಅನೀಶ್ವರಗುಣಗಳೂ ದಗ್ಧವಾಗುವವು.

೯. ಅಗ್ನಿಯಿಂದ ವಸ್ತುಗಳು ದಹಿಸಲ್ಪಡುವಂತೆ ಧ್ಯಾನದಿಂದ ಅಂತರಿಂದ್ರಿಯ ದೋಷಗಳು ದಹಿಸಲ್ಪಡುವವು. ಹಾಗೆಯೇ ಒಹಿರಿಂದ್ರಿಯ ಕೃತಗಳಾದ ದೋಷಗಳು ಶ್ವಾಸನಿಗ್ರಹದಿಂದ ದಹಿಸಲ್ಪಡುವುವು.

೧೦. ಹೀಗೆ ಚಿತ್ತವನ್ನು ಚಿತ್ತದಿಂದ ಶೋಧನೆಮಾಡಿ, ಭಾವವನ್ನು ಭಾವ ದಿಂದ ಶೋಧಿಸಬೇಕು. ಮನಸ್ಸನ್ನು ಮನಸ್ಸಿನಿಂದ ಶೋಧಿಸಿ, ಬುದ್ಧಿಯನ್ನು ಬುದ್ಧಿ ಯಿಂದ ಶೋಧಿಸಬೇಕು.

೧೧. ಚಿತ್ತಪ್ರಸನ್ನತೆಯಿದ್ದರೆ ಇದು ಶುಭ, ಇದು ಅಶುಭ, ಎಂಬುದು ತೋರಿ ಯುವುದು. ಶುಭಾಶುಭಗಳಿಂದ ಮುಕ್ತನಾದರೆ ದ್ವಂದ್ವದುಃಖರಹಿತನೂ ಪರಿಗ್ರಹ ರಹಿತನೂ ಅಹಂಕಾರರಹಿತನೂ ಆಗಿ ಅನಂತರ ಉತ್ಕೃಷ್ಟಗತಿಯನ್ನು ಹೊಂದುವನು.

ನಿರ್ಮಮೋ ನಿರಹಂಕಾರಸ್ತತೋ ಯಾತಿ ಪರಾಂ ಗತಿಂ ।
ಪೂರ್ವಾಹ್ಣೇ ಲೋಹಿತಂ ರೂಪಂ ಪ್ರಥಮಮೃಙ್ಮಯಂ ಸ್ಮೃತಂ ।
ಯಜುರ್ಮಯಂ ದ್ವಿತೀಯಂ ತು ಶ್ವೇತಂ ಮಾಧ್ಯಾಹ್ನಿಕಂ ಸ್ಮೃತಂ ॥ ೧೨ ॥

ಕೃಷ್ಣಂ ತೃತೀಯಂ ಸಾಯಾಹ್ನೇ ಸಾಮ್ನೋ ರೂಪಂ ತು ತತ್ಸ್ಮೃತಂ ।
ಪ್ರಥಮಂ ರಾಜಸಂ ದೇವ ದ್ವಿತೀಯಂ ಸಾತ್ತ್ವಿಕಂ ಸ್ಮೃತಂ ॥ ೧೩ ॥

ತೃತೀಯಂ ತಾಮಸಂ ರೂಪಂ ತ್ರೈಗುಣ್ಯಂ ತಸ್ಯ ಕಲ್ಪಿತಂ ।
ತ್ರಯಾಣಾಂ ವ್ಯತಿರೇಕೇಣ ಚತುರ್ಥಂ ಸೂರ್ಯಮಂಡಲಂ ॥ ೧೪ ॥

ಜ್ಯೋತಿಃಪ್ರಕಾಶಕಂ ಸೂಕ್ಷ್ಮಂ ಪ್ರೋಕ್ತಂ ದೇವನಿರಂಜನಂ ।
ಚತುರ್ಥಂ ತು ವೇದವಿದಃ ಸೂರ್ಯಸಿದ್ಧಾಂತವೇದಿನಃ ॥ ೧೫ ॥

ಓಂ ಕಾರಪ್ರಣವೈರ್ಯುಕ್ತಾ ಧ್ಯಾನನಿರ್ಧೂತಕಲ್ಮಷಾಃ ।
ಸ್ಥಿತಾಃ ಪದ್ಮಾಸನೇ ವೀರಾ ನಾಭಿಸನ್ನ್ಯಸ್ತಪಾಣಯಃ ॥ ೧೬ ॥

---

೧೨. ಪೂರ್ವಾಹ್ನದಲ್ಲಿ ಮೊದಲನೆಯದೆನಿಸಿದ ಋಗ್ವೇದಸ್ವರೂಪವಾದ ಕೆಂಪಾದ ರೂಪವೂ, ಮಧ್ಯಾಹ್ನದಲ್ಲಿ ಎರಡನೆಯದೆನಿಸಿದ ಯಜುರ್ವೇದಮಯವಾದ ಶುಭ್ರ ರೂಪವೂ, ಸಾಯಾಹ್ನದಲ್ಲಿ ಮೂರನೆಯದೆನಿಸಿದ ಸಾಮವೇದಮಯವಾದ ಕಪ್ಪು ರೂಪವೂ ಇರುವುದು.

೧೩. ಮೊದಲನೆಯದು ರಾಜಸರೂಪ, ಎರಡನೆಯದು ಸಾತ್ವಿಕರೂಪ, ಮೂರನೆಯದು ತಾಮಸರೂಪ ಎಂದು ಅದಕ್ಕೆ ತ್ರೈಗುಣ್ಯವೂ ಕಲ್ಪಿತವಾಗಿದೆ.

೧೪. ಎಲೈ ವಾಸುದೇವನೇ! ಈ ಮೂರನ್ನೂ ಬಿಟ್ಟರೆ ನಾಲ್ಕನೆಯದೇ ಸೂರ್ಯ ಮಂಡಲವು. ಅದು ಜ್ಯೋತಿಸ್ಸಿನಿಂದ ಪ್ರಕಾಶಕವೂ, ಸೂಕ್ಷ್ಮವೂ, ನಿರಂಜನವೂ ಎಂದು ಹೇಳಲ್ಪಟ್ಟಿದೆ.

೧೫. ನಾಲ್ಕನೆಯದನ್ನು ವೇದಜ್ಞರೂ, ಸೂರ್ಯಾರಾಧನೆಯನ್ನು ಬಲ್ಲವರೂ, ಓಂಕಾರ ಪ್ರಣವಜಪಗಳಿಂದ ಕೂಡಿದವರೂ

೧೬-೧೭. ಮತ್ತು ಧ್ಯಾನದಿಂದ ಪಾಪವನ್ನು ಕಳೆದುಕೊಂಡವರೂ, ಪದ್ಮಾಸನ ದಲ್ಲಿ ವೀರರಾಗಿ ಕುಳಿತು ನಾಭಿಯಲ್ಲಿ ಹಸ್ತವನ್ನಿಟ್ಟುಕೊಂಡು ಸುಷುಮ್ನಾನಾಡಿಯ

ಸುಷುಮ್ನಾನಾಡಿಕಾಮಾರ್ಗಂ ಕುಂಭರೇಚಕಪೂರಕೈಃ ।
ತ್ರಿಭಿಃ ಸಂಶೋಧ್ಯ ತಾನ್ಪಂಚ ಮರುತೋ ದೇಹಮಧ್ಯಗಾನ್ ॥ ೧೭ ॥

ಪದಾಂಗುಷ್ಠಾನ್ವಿತಃ ಭಿನ್ನಮೂರ್ಧ್ವಮುತ್ಕ್ಷೇಪಯೇತ್ಕ್ರಮಾತ್ ।
ನಾಭಿದೇಶೇ ತು ತಂ ದೃಷ್ಟ್ವಾ ದೇವಮಗ್ನಿಮನಾಮಯಂ ॥ ೧೮ ॥

ಸೋಮಂ ಚ ಹೃದಯೇ ದೃಷ್ಟ್ವಾ ಮೂರ್ಧ್ನಿವಾಗ್ನಿಶಿಖಾಂ ತತಃ ।
ವಾತರಶ್ಮಿಭಿರಾಸಾಧ್ಯ ತಂ ಭಿತ್ವಾ ಮಂಡಲಂ ಪರಂ ॥ ೧೯ ॥

ತತಃ ಪರಂ ತು ಯೋ ಗಚ್ಛೇದ್ಯೋಗಸ್ಥಃ ಸೂರ್ಯಮಂಡಲಂ ।
ಯತ್ರ ಗತ್ವಾ ನ ಶೋಚಂತಿ ತತ್ ಸೌರಂ ಪರಮಂ ಪದಂ ॥ ೨೦ ॥

ದೇವಾರ್ಚನಂ ಮಹಾಬಾಹೋ ಕೀರ್ತಿತಂ ಕೇಶಿಸೂದನ ।
ಪ್ರಥಮಂ ಹೃದಯಂ ಸ್ಥಾನಂ ದ್ವಿತೀಯಂ ಚಾಗ್ನಿಮಾಶ್ರಿತಂ ॥ ೨೧ ॥

---

ಮಾರ್ಗವಾಗಿ ಕುಂಭಕ ರೇಚಕ ಪೂರಕಗಳೆಂಬ ಮೂರರಿಂದ ದೇಹಮಧ್ಯದಲ್ಲಿರುವ ಪ್ರಾಣಾದಿ ಪಂಚವಾಯುಗಳನ್ನು ಶೋಧನಮಾಡುವವರೂ ಸಹ ತಿಳಿಯುವರು.

೧೮. ಇವರುಗಳು ಕ್ಲೇಶವನ್ನು ಸಹಿಸಿಕೊಂಡು ಪಾದಾಂಗುಷ್ಠದಿಂದ ಕ್ರಮವಾಗಿ ಮೇಲಕ್ಕೆ ಏರಿಸುತ್ತಾ ನಾಭಿಪ್ರದೇಶದಲ್ಲಿ ಆಮಯರಹಿತನಾದ ಅಗ್ನಿದೇವನನ್ನು ಕಾಣುವರು.

೧೯. ಮತ್ತು ಹೃದಯದಲ್ಲಿ ಸೋಮನನ್ನೂ, ಆ ಮೇಲೆ ತಲೆಯಲ್ಲಿ ಅಗ್ನಿಶಿಖೆಯನ್ನೂ, ನೋಡಿ ವಾತರಶ್ಮಿಗಳಿಂದ ಆ ಶ್ರೇಷ್ಠವಾದ ಆ ಸ್ಥಳವನ್ನು ಭೇದಿಸಿಕೊಂಡು

೨೦. ಅನಂತರ ಅಲ್ಲಿಂದಾಚೆಗೆ ಯೋಗಯುಕ್ತರಾಗಿ ಸೂರ್ಯಮಂಡಲವನ್ನು ಸೇರಿ ಅಲ್ಲಿ ದುಃಖವಿಲ್ಲದೆ ಇರುವುದೇ ಸೂರ್ಯಸಂಬಂಧವಾದ ಪರಮಪದವು. ಅವರು ಅವರು ಇದನ್ನು ಹೊಂದುವರು.

೨೧. ಎಲೈ ಕೇಶಿದೈತ್ಯನಾಶಕನಾದ ಮಹಾಬಾಹುವೇ! ದೇವಾರ್ಚನವನ್ನು ಹೇಳಿದುದಾಯಿತು. ಮೊದಲನೆಯ ಸ್ಥಾನವು ಹೃದಯ.

ತೃತೀಯಂ ನಾಭಿಸಂಸ್ಥಂ ಚ ಚತುರ್ಥಂ ಸೂರ್ಯಮಂಡಲಂ । ॥ ೨೨ ॥

ಸ್ಥಾನಂ ಪರಂ ವೈ ಪರಮಾತ್ಮಸಂಸ್ಥಂ ।
ಭಾನೋಃ ಸುರೇಶಸ್ಯ ವದಂತಿ ತಜ್ಜ್ಞಾಃ ॥
ಜ್ಞೇಯಃ ಸ ಮೋಕ್ಷಶ್ಚ ನೃಣಾಂ ಸ ಏವ ।
ಸಂಸಾರವಿಚ್ಛಿತ್ತಿಕರಂ ಪದಂ ತತಃ ॥ ೨೩ ॥

ಇದಮಮೃತಸಮಂ ಪರಸ್ಯ ವೇದ್ಯಂ ।
ಕಿರಣಸಹಸ್ರಮೃತೋಹಿತಂ ಜನಾನಾಂ ॥
ಋಷಿಚರಿತಮವೇತ್ಯ ತತ್ವಸಾರಂ ।
ವ್ಯಪಗತಮೋಹಧಿಯಃ ಪ್ರಯಾಂತಿ ಮೋಕ್ಷಂ ॥ ೨೪ ॥

ಇದಂ ಮಗಾನಾಂ ಚರಿತಂ ಮಯಾ ತೇ ।
ಪ್ರಖ್ಯಾಪಿತಂ ಯಾನವರೇಣ ಯುಕ್ತಂ ॥
ಜ್ಞಾತ್ವಾತ್ವಿಮಂ ಮೋಕ್ಷವಿದೋ ವದಂತಿ ।
ಸಿದ್ಧಾಶ್ಚ ತತ್ಸ್ಥಾನಮವಾಪ್ನುವಂತಿ ॥ ೨೫ ॥

---

೨೨. ಎರಡನೆಯಸ್ಥಾನವು ಅಗ್ನಿಯನ್ನು ಆಶ್ರಯಿಸಿರುವುದು. ಮೂರನೆಯದು ನಾಭಿಯಲ್ಲಿರುವುದು. ನಾಲ್ಕನೆಯದು ಸೂರ್ಯಮಂಡಲವು.

೨೩. ಸುರೇಶ್ವರನಾದ ಭಾನುವಿನ ಶ್ರೇಷ್ಠವಾದ ಸ್ಥಾನವು ಪರಮಾತ್ಮನಲ್ಲಿರುವುದೆಂದು ತಿಳಿದವರು ಹೇಳುತ್ತಾರೆ. ಅದನ್ನೇ ಮನುಷ್ಯರು ಮೋಕ್ಷ ಎನ್ನುವರು. ಅದೇ ಸಂಸಾರನಾಶಕರವಾದ ಸ್ಥಾನ ಎಂದು ತಿಳಿಯತಕ್ಕದ್ದು.

೨೪. ಇದು ಋತವೆಂದೂ, ಹಿತವೆಂದೂ, ಊಹಿಸಲ್ಪಟ್ಟ ಕಿರಣಸಹಸ್ರವು; ನಿಜವಾಗಿ ಅದರಲ್ಲೇ ಆಸಕ್ತರಾದ ಜನರಿಗೆ ವೇದ್ಯವಾಗುವುದು. ಅಂಥವರು ಶ್ರೇಷ್ಠವಾದ ಋಷಿಗಳ ಆಚರಣೆಯನ್ನು ತಿಳಿದು, ಬುದ್ಧಿಯ ಅಜ್ಞಾನವನ್ನು ಹೋಗಲಾಡಿಸಿಕೊಂಡು ಮುಕ್ತಿಯನ್ನು ಹೊಂದುತ್ತಾರೆ.

೨೫. ಶ್ರೇಷ್ಠವಾದ ಯಾನದಿಂದ ಯುಕ್ತರಾದ ಮಗರ ಚರಿತವನ್ನು ನಿನಗೆ ವ್ಯಕ್ತವಾಗಿ ತಿಳಿಯಪಡಿಸಿದುದಾಯಿತು. ಮೋಕ್ಷ ಹೊಂದುವವರು ಇದನ್ನು ತಿಳಿದಿರಬೇಕೆಂದು ಹೇಳುತ್ತಾರೆ. ಸಿದ್ಧರೂ ಅಂಥ ಸ್ಥಾನವನ್ನು ಹೊಂದುತ್ತಾರೆ.

**ಯನ್ಮಯೋಕ್ತಮಿದಂ ಜ್ಞಾನಂ ದೇಯಂ ಶ್ರದ್ಧಾವತಾಂ ನೃಣಾಂ ।**
**ನಾಸ್ತಿಕಾನಾಮಬುದ್ಧೀನಾಂ ನ ದೇಯಂ ಭೂತಿಮಿಚ್ಛತಾ ॥ ೨೬ ॥**

**॥ ಸುಮಂತುರುವಾಚ ॥**

**ಇತ್ಯುಕ್ತ್ವಾ ಭಗವಾನ್ ವ್ಯಾಸೋ ಭೋಜಕಜ್ಞಾನಮುತ್ತಮಂ ।**
**ನಾರಾಯಣಂ ಮಹಾಬಾಹೋ ಜಗಮಾಯತನಂ ಹರೇಃ ॥ ೨೭ ॥**

**ಖ್ಯಾತೋ ಯಸ್ತ್ರಿಷು ಲೋಕೇಷು ಗಂಗಯಾ ಪರಿತೋಷಕಃ ।**
**ಬದರ್ಯಾ ಮಂಡಿತೋ ವೀರ ನರನಾರಾಯಣಾಶ್ರಮಃ ॥ ೨೮ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ ಭೋಜಕಜ್ಞಾನವರ್ಣನಂ ನಾಮ ಪಂಚಚತ್ವಾರಿಂಶದುತ್ತರ ಶತತಮೋಽಧ್ಯಾಯಃ.**



೨೬. ನಾನು ಹೇಳಿರುವ ಈ ಜ್ಞಾನವನ್ನು ಶ್ರದ್ಧೆಯುಳ್ಳ ಮನುಷ್ಯರಿಗೆ ಮಾತ್ರ ಉಪದೇಶಮಾಡಬೇಕು. ಸಂಪತ್ತನ್ನು ಅಪೇಕ್ಷಿಸುವವನು ನಾಸ್ತಿಕರಿಗೂ, ಬುದ್ಧಿಶೂನ್ಯರಿಗೂ, ಉಪದೇಶಮಾಡಬಾರದು ಎಂದನು.

೨೭. ಸುಮಂತುಮುನಿವರ್ಯರು ಹೇಳುತ್ತಾರೆ—ಅಯ್ಯಾ ರಾಜನೇ! ಹೀಗೆ ಭಗವಂತನಾದ ವ್ಯಾಸನು ಭೋಜಕಜ್ಞಾನ ವಿಚಾರವನ್ನು ಹೇಳಿ, ಹರಿಯ ಸಾನ್ನಿಧ್ಯವಾದ ನರನಾರಾಯಣಾಶ್ರಮಕ್ಕೆ ಹೊರಟುಹೋದನು.

೨೮. ಗಂಗಾಸಾಮೀಪ್ಯದಿಂದ ಆನಂದಕರವಾಗಿ ಬದರೀವೃಕ್ಷದಿಂದ ಅಲಂಕೃತವಾಗಿರುವ ನರನಾರಾಯಣಾಶ್ರಮವು ಹರಿಸಾನ್ನಿಧ್ಯವಿಚಾರಕ್ಕೆ ಮೂರುಲೋಕಗಳಲ್ಲೂ ಪ್ರಖ್ಯಾತವಾದುದು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದಲ್ಲಿ ಭೋಜಕ ಜ್ಞಾನವರ್ಣನವೆಂಬ ನೂರನಲವತ್ತೈದನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಷಟ್ತ್ರಿಂಶದುತ್ತರಶತತಮೋಽಧ್ಯಾಯಃ

॥ ಶತಾನೀಕ ಉವಾಚ ॥

ಯ ಏತೇ ಭೋಜಕಾ ಪ್ರೋಕ್ತಾಃ ದೇವದೇವಸ್ಯ ಪೂಜಕಾಃ ।
ನಾನ್ಯೇ ಭೋಜ್ಯಾಹ್ಯಥೈತೇಷಾಂ ಬ್ರಾಹ್ಮಣೈಶ್ಚ ಕದಾಚನ ॥ ೧ ॥

ಭಾಸ್ಕರಸ್ಯ ಪ್ರಿಯಾಹ್ಯೇತೇ ಪೂಜ್ಯತ್ವಂ ಚ ತಥಾ ಗತಾಃ ।
ದಿವ್ಯಾಶ್ಚೈತೇ ಸ್ಮೃತಾ ವಿಪ್ರಾ ಆದಿತ್ಯಾಬ್ಧಿಸಮುದ್ಭವಾಃ ॥ ೨ ॥

ಅಭೋಜ್ಯತ್ವಂ ಕಥಂ ಯಾತಾ ಭೋಜಕಾಸ್ತದ್ವದಸ್ವ ಮೇ ।
ಕಿಂಕುರ್ವಾಣಾಸ್ತಥಾ ಕರ್ಮ ಭೋಜ್ಯತಾಂ ಯಾಂತಿ ಮೇ ವದ ॥ ೩ ॥

---

### ನೂರನಲವತ್ತಾರನೆಯ ಅಧ್ಯಾಯ

೧. ಶತಾನೀಕರಾಜನು ಹೇಳುತ್ತಾನೆ—ದೇವದೇವನಾದ ಸೂರ್ಯನನ್ನು ಪೂಜಿಸುತ್ತಿರುವ ಈ ಭೋಜಕರನ್ನು ಬಿಟ್ಟು ಮಿಕ್ಕ, ಭೋಜಕಜಾತಿಯ ಜನರನ್ನು ಬ್ರಾಹ್ಮಣರ ಸಂಗಡ ಕೂರಿಸಿ ಯಾವಾಗಲೂ ಭೋಜನಮಾಡಿಸಬಾರದು ಎನ್ನುವರು.

೨. ಈ ಭೋಜಕರು ಸೂರ್ಯನಿಗೆ ಪ್ರಿಯರಾದವರು. ಮತ್ತು ಪೂಜತೆಯನ್ನು ಹೊಂದುತ್ತಾರೆ. ಈ ಬ್ರಾಹ್ಮಣರು ಸೂರ್ಯನೆಂಬ ಸಮುದ್ರದಲ್ಲಿ ಹುಟ್ಟಿದವರಾಗಿ ದಿವ್ಯಸಂಜ್ಞಕರೆಂದು ಭಾವಿಸಲ್ಪಟ್ಟಿದ್ದಾರೆ.

೩. ಹೀಗೆ ಸಾಕ್ಷಾತ್ತಾಗಿ ಸೂರ್ಯನಿಂದ ಹುಟ್ಟಿದಾಗ್ಯೂ ಈ ಸಾಮಾನ್ಯ ಭೋಜಕರು ಸಹಪಂಕ್ತಿಗೆ ಅನರ್ಹತೆಯನ್ನು ಹೇಗೆ ಹೊಂದಿದರು ? ಎಂಬುದನ್ನೂ, ಇವರು ಯಾವ ಕರ್ಮವನ್ನು ಮಾಡಿದರೆ ಸಹಪಂಕ್ತಿಭೋಜನಾರ್ಹತೆಯನ್ನು ಹೊಂದುವರು ಎಂಬುದನ್ನೂ ನನಗೆ ಹೇಳು ಎಂದನು.

॥ ಸುಮಂತುರುವಾಚ ॥

ಇಮಮರ್ಥಂ ಪುರಾ ಪೃಷ್ಟೋ ವಾಸುದೇವೋ ಮಹೀಪತೇ ।
ಕೃತವರ್ಮಣಾ ಪುರಾ ರಾಜಥಾ ಸಾಂಬೋ ಮಹಾಬಲಃ ॥ ೪ ॥

ಗತೌ ಸಾಂಬಪುರೀಂ ವೀರ ತಥಾ ನಾರದಪರ್ವತೌ ।
ಭುಕ್ತವಂತೌ ಗೃಹೇ ಸರ್ವೇ ಭೋಜಕಸ್ಯ ಮಹಾತ್ಮನಃ ॥ ೫ ॥

ಆದಿತ್ಯಕರ್ಮಣೋ ಲೋಕೇ ದೇವಾನ್ನಖ್ಯಾತಿಮಾಗತಾಃ ।
ತೇನ ತೇ ಪೂಜಿತಾಃ ಸರ್ವೇ ಭಕ್ತ್ಯಾ ಭೋಜ್ಯೈರನೇಕಶಃ ॥ ೬ ॥

ಆಗತಾಸ್ತೇ ಪುರೀಂ ವೀರ ಪುಣ್ಯಾಂ ದ್ವಾರವತೀಂ ವಿಭೋಃ ।
ತಾವೃಷೀ ದಿವಮಾರೂಢೌ ರಾಜನ್ ನಾರದಪರ್ವತೌ ॥ ೭ ॥

ವಾಸುದೇವಂ ಮಹಾತೇಜಾ ಹಾರ್ದಿಕ್ಯೋ ವಾಕ್ಯಮಬ್ರವೀತ್ ।
ಯ ಏತೇ ಭೋಜಕಾ ವಿಪ್ರ ಪೂಜಕಾ ಭಾಸ್ಕರಸ್ಯ ತು ॥ ೮ ॥

---

೪. ಎಲೈ ಭೂಪತಿಯಾದ ರಾಜನೇ! ಪೂರ್ವದಲ್ಲಿ ಈ ವಿಚಾರವನ್ನು ಕುರಿತು ಕೃತವರ್ಮನು ಕೃಷ್ಣನನ್ನು ಕೇಳಿದ್ದಾನೆ. ಮಹಾಬಲಶಾಲಿಯಾದ ಸಾಂಬನೂ ಹಾಗೆಯೇ ಕೇಳಿದ್ದಾನೆ.

೫. ಎಲೈ ವೀರನೇ! ಹಿಂದೆ ಒಂದು ದಿನ ನಾರದಪರ್ವತರೆಂಬ ಇಬ್ಬರು ಋಷಿಗಳು ಸಾಂಬಪುರಿಗೆ ಹೋದರು. ಈ ಇಬ್ಬರೂ ಅಲ್ಲಿ ಮಹಾತ್ಮನಾದ ಭೋಜಕನ ಮನೆಯಲ್ಲಿ ಭೋಜನಮಾಡಿದರು.

೬. ಆದಿತ್ಯ ಪೂಜಾರೂಪವಾದ ಕರ್ಮವುಳ್ಳವನಿಗಿಂತ ದೇವತೆಗಳು (ಯಾವ ವಿಚಾರದಲ್ಲಿಯೂ) ಪ್ರಸಿದ್ಧಿ ಹೊಂದಿದವರೇನೂ ಅಲ್ಲ. ಆದುದರಿಂದ ಭಕ್ತಿಯಿಂದ ಬಹುಪ್ರಕಾರವಾಗಿ ಭೋಜ್ಯವಸ್ತುಗಳನ್ನು ಸಮರ್ಪಿಸಿ ಅವರನ್ನು ಸತ್ಕರಿಸಿದರು.

೭. ಎಲೈ ವೀರನೇ ! ಅವರು ಅಲ್ಲಿಂದ ಕೃಷ್ಣಪರಮಾತ್ಮನ ಪುಣ್ಯನಗರಿಯಾದ ದ್ವಾರಕೆಗೆ ಬಂದರು. ಎಲೈ ರಾಜನೇ ! ಕೃಷ್ಣದರ್ಶನಾನಂತರ ಆ ನಾರದ ಪರ್ವತ ಋಷಿಗಳಿಬ್ಬರೂ ಸ್ವರ್ಗಕ್ಕೆ ತೆರಳಿದರು ಎಂದನು.

೮=೯. ಮಹಾತೇಜಸ್ವಿಯಾದ (ಹಾರ್ದಿಕ್ಯನು) ಕೃತಕರ್ಮನು ವಾಸುದೇವನನ್ನು ಕುರಿತು ಈರೀತಿ ಕೇಳುತ್ತಾನೆ—ಅಯ್ಯಾ ಜನಾರ್ದನನೇ ! ದೇವರ್ಷಿಗಳೆಂದು

ಅನ್ನಮೇಷಾಂ ಕಥಂ ವಿಪ್ರೌ ಭುಕ್ತವಂತೌ ಜನಾರ್ದನ ।
ತಾವೃಷೀ ದಿವ್ಯತಾಖ್ಯಾತೌ ಯೌ ತೌ ನಾರದಪರ್ವತೌ ।
ಅಭೋಜ್ಯಾಃ ಕಿಲ ಏತೇ ವೈ ಬ್ರಾಹ್ಮಣಾನಾಂ ಜನಾರ್ದನ ॥ ೯ ॥

॥ ವಾಸುದೇವ ಉವಾಚ ॥

ನ ತೇ ಭೋಜ್ಯಾ ಮಹಾಬಾಹೋ ಭೋಜ್ಯಾ ಭೋಜಾಶ್ಚ ಸರ್ವದಾ ।
ಅಭಿವಾದ್ಯಾಃ ಪ್ರಯತ್ನೇನ ಯಥಾದಿತ್ಯೋ ಮಹಾಮತೇ ॥ ೧೦ ॥

ಆಚರಂತಶ್ಚ ತತ್ಕರ್ಮ ಭೋಜ್ಯತ್ವಂ ಪ್ರವ್ರಜಂತಿ ತೇ ।
ತಚ್ಛ್ರೂಯತಾಂ ಯದುಶ್ರೇಷ್ಠ ಯತ್ಕಾರ್ಯಂ ಚಾಪಿ ತೈರ್ವಿಭೋ ॥
ಯತ್ನಮಾನೈರ್ಮಹಾಬಾಹೋ ತದಿಹೈಕಮನಾ ಶೃಣು ॥ ೧೧ ॥

ವೃಷಲೀ ತಸ್ಯ ವೈ ಭಾರ್ಯಾ ಯಶ್ಚಾವ್ಯಂಗಂ ನ ಧಾರಯೇತ್
ಅಭೋಜ್ಯಃ ಸ ತು ವಿಜ್ಞೇಯೋ ಭೋಜಕೋ ನಾತ್ರ ಸಂಶಯಃ ॥ ೨೨ ॥

---

ಪ್ರಖ್ಯಾತರಾದ ಆ ನಾರದ ಪರ್ವತ ಎಂಬ ಇಬ್ಬರು ಋಷಿಗಳೂ, ಭಾಸ್ಕರಪೂಜಕನೂ ಭೋಜಕನೂ ಆದ ಆ ವಿಪ್ರಾನ್ನವನ್ನು ಹೇಗೆ ಭೋಜನಮಾಡಿದರು? ಅಯ್ಯಾ ಜನಾರ್ದನಾ! ಇವರ ಮನೆಯಲ್ಲಿ ಬ್ರಾಹ್ಮಣರು ಭೋಜನ ಮಾಡಬಾರದಲ್ಲವೇ? ಎಂದನು.

೧೦. ವಾಸುದೇವನು ಹೇಳುತ್ತಾನೆ—ಮಹಾಬಾಹುವೇ! ಅವರು ಭೋಜ್ಯರಲ್ಲ. ಭೋಜಕರೇ ಸರ್ವದಾ ಭೋಜನಕ್ಕೆ ಕರೆಯಲು ಅರ್ಹರು. (ಭೋಜ್ಯರು.) ಅಯ್ಯಾ ಮಹಾಮತಿಯೇ! ಆದಿತ್ಯನು ಹೇಗೆ ಪ್ರಯತ್ನದಿಂದ ನಮಸ್ಕರಿಸಲು ಅರ್ಹನೋ ಹಾಗೆಯೇ ಇವರೂ ನಮಸ್ಕಾರಕ್ಕೆ ಅರ್ಹರು.

೧೧. ಅವರು (ಸೂರ್ಯಪೂಜಾರೂಪವಾದ) ಆ ಕರ್ಮವನ್ನು ಮಾಡುತ್ತಿದ್ದರೆ ಭೋಜ್ಯತ್ವವನ್ನು ಪಡೆಯುತ್ತಾರೆ. ಎಲೈ ಮಹಾಬಾಹುವಾದ ಯದುಶ್ರೇಷ್ಠನೇ! ಅವರು ಪ್ರಯತ್ನದಿಂದ ಮಾಡಬೇಕಾದುದೇನೆಂಬುದನ್ನು ಏಕಾಗ್ರಚಿತ್ತದಿಂದ ಕೇಳು.

೧೨. ಯಾವನು ಅವ್ಯಂಗವನ್ನು ಧರಿಸದೆ ಇರುವನೋ ಅವನ ಪತ್ನಿಯು ವೃಷಲೀ ಎನಿಸುವಳು. ಅಂಥಾ ಭೋಜಕನು ವಿಪ್ರೋತ್ತಮರಿಗೆ ಭೋಜನಮಾಡಿಸಲು ಅರ್ಹನಲ್ಲ. (ಅಪಾಂಕ್ತೇಯನು) ಎಂದು ತಿಳಿಯಬೇಕು.

**ಅಸ್ನಾತಃ ಪೂಜಯೇದ್ಯಸ್ತು ತಥಾಭ್ಯಂಗವಿವರ್ಜಿತಃ ।**
**ಆದಿತ್ಯಂ ಯದುಶಾರ್ದೂಲ ತಥಾ ಚ ವಿಧಿನಾ ವಿಭೋ　　॥ ೧೩ ॥**

**ಸೇವಕೋ ಭೋಜಕೋ ಯಸ್ತು ಶೂದ್ರಾನ್ನಂ ಯೇನ ಭುಜ್ಯತೇ ।**
**ಕೃಷಿಂ ಚ ಕುರುತೇ ಯಸ್ತು ದೇವಾರ್ಚಾಮಪಿ ವರ್ಜಯೇತ್　　॥ ೧೪ ॥**

**ಜಾತಕರ್ಮಾದಯೋ ಯಸ್ಯ ನ ಸಂಸ್ಕಾರಾಃ ಕೃತಾ ವಿಭೋ ।**
**ಆರುಣೇಯೈಶ್ಚ ಮಂತ್ರೈಶ್ಚ ಸಾವಿತ್ರೀಂ ನ ಚ ವೈ ಪಠೇತ್ ।**
**ತಸ್ಯ ಗೇಹೇ ದ್ವಿಜೋ ಭುಕ್ತ್ವಾ ಕೃಚ್ಛ್ರಪಾದೇನ ಶುಧ್ಯತಿ　　॥ ೧೫ ॥**

**ಪಿತೃದೇವಮನುಷ್ಯಾಣಾಂ ಭೂತಾನಾಂ ಭಾಸ್ಕರಸ್ಯ ತು ।**
**ಅಕೃತ್ವಾ ವಿಧಿವತ್ಪೂಜಾಂ ಯಸ್ತು ಭುಂಕ್ತೇ ಸ ಧರ್ಮಹಾ　　॥ ೧೬ ॥**

**ಅಭ್ಯಂಗೇನ ವಿಹೀನೋ ಯಃ ಶಂಖಹೀನಸ್ತಥೈವ ಚ ।**
**ಶಿರಸಾ ಧಾರಯೇತ್ಕೇಶಾನ್ ಸಜ್ಞೇಯೋ ಭೋಜಕಾಧಮಃ　　॥ ೧೭ ॥**

---

೧೩-೧೪. ಅಯ್ಯಾ ಯದುಶ್ರೇಷ್ಠನೇ! ಯಾವನು ಸ್ನಾನಮಾಡದೆಯೋ, ಅಥವಾ ಅಭ್ಯಂಗಮಾಡದೆಯೋ, ಅಥವಾ ವಿಧಿವಿಧಾನವಿಲ್ಲದೆಯೋ, ಸೂರ್ಯನನ್ನು ಪೂಜಿಸುವನೋ, ಮತ್ತು ಯಾವ ಭೋಜಕನು ಶೂದ್ರಾನ್ನವನ್ನು ಭೋಜನಮಾಡುವನೋ, ಯಾವನು ಕೃಷಿಕರ್ಮನಿರತನಾಗಿ ದೇವತಾರ್ಚನೆಯನ್ನು ಪರಿತ್ಯಾಗಮಾಡಿರುವನೋ

೧೫. ಯಾವನಿಗೆ ಜಾತಕರ್ಮ ಮೊದಲಾದ ಬ್ರಾಹ್ಮಣಕರ್ಮ ರೂಪವಾದ ಸಂಸ್ಕಾರಗಳು ನಡೆಸಲ್ಪಟ್ಟಿಲ್ಲವೋ, ಯಾವನು ಅರುಣಸಂಬಂಧ ಮಂತ್ರಗಳನ್ನೂ ಮತ್ತು ಗಾಯತ್ರೀ ಮಂತ್ರವನ್ನೂ ಜಪಮಾಡುವುದಿಲ್ಲವೋ ಅಂಥವನ ಮನೆಯಲ್ಲಿ ಬ್ರಾಹ್ಮಣನು ಭೋಜನ ಮಾಡಿದ್ದೇ ಆದರೆ ಪಾದಕೃಚ್ಛ್ರ (ದಾನರೂಪವಾದ ಪ್ರಾಯಶ್ಚಿತ) ದಿಂದ ಅವನು ಶುದ್ಧನಾಗುತ್ತಾನೆ.

೧೬. ಪಿತೃಗಳು, ದೇವತೆಗಳು, ಮನುಷ್ಯರು, ಭೂತಗಳು ಸೂರ್ಯ ಇವರುಗಳನ್ನು ವಿಧಿವತ್ತಾಗಿ ಪೂಜಿಸದೆ ಯಾವನು ಭೋಜನ ಮಾಡುವನೋ ಅವನು ಧರ್ಮಘಾತುಕನೆನಿಸುವನು.

೧೭. ಯಾವ ಭೋಜಕನು ಅಭ್ಯಂಗವಿಹೀನವಾಗಿ ಕೈಯಲ್ಲಿ ಶಂಖವನ್ನೂ ಧರಿಸದೇ ತಲೆಯಲ್ಲಿ ಕೂದಲಿಟ್ಟುಕೊಂಡಿರುವನೋ ಅಂಥವನನ್ನು ಭೋಜಕಾಧಮನೆಂದು ತಿಳಿಯಬೇಕು.

ದೇವಾರ್ಚನಂ ತಥಾ ಹೋಮಂ ಸ್ನಾನಂ ತರ್ಪಣಮೇವ ಚ ।
ದಾನಂ ಬ್ರಾಹ್ಮಣಪೂಜಾಂ ಚ ಕುರ್ವತೋ ಭೋಜಕಸ್ಯ ತು ।
ಅಭ್ಯಂಗೇನ ವಿಹೀನಸ್ಯ ಸರ್ವಂ ಭವತಿ ನಿಷ್ಫಲಂ ॥ ೧೮ ॥

ಸರ್ವದೇವಮಯೋ ಹ್ಯೇಷ ಸರ್ವವೇದಮಯಸ್ತಥಾ ।
ಅಭ್ಯಂಗೋ ಯದುಶಾರ್ದೂಲ ಪವಿತ್ರಃ ಪರಮಃ ಸ್ಮೃತಃ ॥ ೧೯ ॥

ಭೋಜಕಾನಾಂ ಯದುಶ್ರೇಷ್ಠ ತೇಷಾಂ ಮೂಲೇ ಸ್ಥಿತೋ ಹರಿಃ ।
ಮಧ್ಯೇ ಬ್ರಹ್ಮಾ ಮಹಾತೇಜಾ ಅಗ್ರೇ ಗೋಶ್ರುತಿಭೂಷಣಃ ॥ ೨೦ ॥

ಋಗ್ವೇದೋ ಯಸ್ಯ ಮೂಲಸ್ಥೋ ಮಧ್ಯೇ ಸಾಮಾನಿ ಕೃತ್ಸ್ನಶಃ ।
ಯಜುರ್ವೇದಸ್ತಥಾ ಶ್ರೇಷ್ಠಶ್ಚಾಥರ್ವಸಹಿತಃ ಸ್ಥಿತಃ ॥ ೨೧ ॥

ತ್ರಯೋಽಗ್ನಯಸ್ತಥಾ ರಾಜಂಸ್ತ್ರಯೋ ಲೋಕಾಃ ಸ್ಥಿತಾಃ ಕ್ರಮಾತ್ ।
ಏವಮೇಷ ಪವಿತ್ರಸ್ತು ಅವ್ಯಂಗೋ ಭೋಜಕಸ್ಯ ತು ॥ ೨೨ ॥

---

೧೮. ಯಾವ ಭೋಜಕನು ಅಭ್ಯಂಗ ಮಾಡಿಕೊಳ್ಳದೆ ದೇವತಾರ್ಚನೆ, ಹೋಮ, ಸ್ನಾನ, ತರ್ಪಣ, ದಾನ, ಬ್ರಾಹ್ಮಣಪೂಜೆ ಇವುಗಳನ್ನು ಆಚರಿಸುವನೋ (ಮಾಡುವನೋ) ಅವನು ಮಾಡಿದ ದೇವತಾರ್ಚನಾದಿಗಳೆಲ್ಲವೂ ನಿಷ್ಫಲ.

೧೯. ಅಯ್ಯಾ ಯದುಶಾರ್ದೂಲನೇ! ಇವನು ಸರ್ವದೇವಮಯನೂ ಸರ್ವವೇದಮಯನೂ ಆಗಿದ್ದಾನೆ. ಅಭ್ಯಂಗವು ಪರಮಪವಿತ್ರವೆಂದು ತಿಳಿಯಬೇಕು.

೨೦. ಅಯ್ಯಾ ಯದುಶ್ರೇಷ್ಠನೇ! ಆ ಭೋಜಕರ ಮೂಲದಲ್ಲಿ ವಿಷ್ಣುವೂ, ಮಧ್ಯದಲ್ಲಿ ಬ್ರಹ್ಮನೂ, ತುದಿಯಲ್ಲಿ ಸರ್ಪಭೂಷಣನಾದ ಶಿವನೂ, ಇರುವರು.

೨೧. ಆ ಭೋಜಕರ ದೇಹದ ಮೂಲದಲ್ಲಿ ಋಗ್ವೇದವೂ, ಮಧ್ಯದಲ್ಲಿ ಸಾಮವೇದವೂ, ತುದಿಯಲ್ಲಿ ಅಥರ್ವಣವೇದಸಹಿತವಾಗಿ ಯಜುರ್ವೇದವೂ ಇದೆ ಎಂದು ಹೇಳಿದೆ.

೨೨. ಎಲೈ ರಾಜನೇ! ಹೀಗೆಯೇ ಅವರ ಮೂಲ, ಮಧ್ಯ, ಅಗ್ರ ಈ ಮೂರುಭಾಗಗಳಲ್ಲೂ ಕ್ರಮವಾಗಿ ಮೂರು ಅಗ್ನಿಗಳೂ, ಮೂರುಲೋಕಗಳೂ, ಇವೆಯೆಂದು ಪ್ರಸಿದ್ಧವಾಗಿದೆ. ಹೀಗೆಯೇ ಅವ್ಯಂಗಧಾರಣವು ಭೋಜಕನಿಗೆ ಪವಿತ್ರಕರವಾದುದು.

ಯಸ್ತ್ವನೇನ ವಿಹೀನಸ್ತು ಭೋಜಕೋ ಭೋಜಕಾಧಮಃ ।
ಅಭೋಜ್ಯಃ ಸತು ವಿಜ್ಞೇಯಃ ಸೋಽಶುಚಿರ್ನಾತ್ರ ಸಂಶಯಃ ॥ ೨೩ ॥

ನಿರ್ಮಾಲ್ಯಮಥ ನೈವೇದ್ಯಂ ಕುಂಕುಮಂ ದೇವಹೇಲಿನಾಂ ।
ಯೇ ಪ್ರಯಚ್ಛಂತಿ ಶೂದ್ರಾಣಾಂ ವಿಕ್ರೀಣಂತಿ ಚ ಭೋಜಕಾಃ ।
ತೇಽಧಮಾ ಭೋಜಕಾ ಜ್ಞೇಯಾ ಯೇ ಚ ದೇವಸ್ವಹಾರಿಣಃ ॥ ೨೪ ॥

ನ ಪೂಜಯಂತಿ ದೇವೇಶಂ ದೇವಸ್ವಂ ಕ್ಷಪಯಂತಿ ಚ ।
ನ ತೇ ದೇವಪ್ರಿಯಾಸ್ತಾತ ವಿಜ್ಞೇಯಾ ಭೋಜಕಾಧಮಾಃ ॥ ೨೫ ॥

ಯಸ್ಮಿನ್ನ ಭುಕ್ತೇ ನೈವೇದ್ಯೇ ಭೋಜಕೋಽಶ್ನಾತಿ ಮಾನದ ।
ತದನ್ನಂ ಭುಂಜತಸ್ತಸ್ಯ ನರಕಾಯ ನ ಶಾಂತಯೇ ॥ ೨೬ ॥

---

೨೩. ಯಾವ ಭೋಜಕನು ಈ ಅವ್ಯಂಗವನ್ನು ಧರಿಸದೆ ಇರುವನೋ ಅವನು ಭೋಜಕಾಧಮನು. ಮತ್ತು ಅವನು ಅಭೋಜ್ಯನೆಂದು ತಿಳಿಯಬೇಕು. ಅಂಥವನು ಅಪರಿಶುದ್ಧನೆಂಬುದರಲ್ಲಿ ಸಂಶಯವಿಲ್ಲ.

೨೪. ಯಾರು ದೇವರ ಮತ್ತು ಸೂರ್ಯನ ನಿರ್ಮಾಲ್ಯವನ್ನೂ, ನೈವೇದ್ಯಾನ್ನವನ್ನೂ, ಕುಂಕುಮವನ್ನೂ, ಅನರ್ಹರಿಗೆ ಕೊಡುತ್ತಾರೋ ಅಥವಾ ಮಾರುತ್ತಾರೋ ಮತ್ತು ಯಾರು ದೇವರ ಸ್ವತ್ತನ್ನು ಅಪಹರಿಸುತ್ತಾರೋ ಅಂತಹ ಭೋಜಕರು ಭೋಜಕಾಧಮರೆಂದು ತಿಳಿಯಬೇಕು.

೨೫. ಅವರು ಮಾಡಿದ ಪೂಜೆಯು ದೇವೇಶನಾದ ಸೂರ್ಯನಿಗೆ ಪ್ರಿಯವಾಗುವುದಿಲ್ಲ. ಅವರು ದೇವರ ಸ್ವತ್ತನ್ನು ಹಾಳುಮಾಡುವವರು. ಅವರು ದೇವನಿಗೆ ಪ್ರಿಯರಲ್ಲ. ಅಂಥವರನ್ನು ಭೋಜಕಾಧಮರೆಂದು ತಿಳಿಯಬೇಕು.

೨೬. ಎಲೈ ಮಾನದನೇ! ನೈವೇದ್ಯವನ್ನು ದೇವರಿಗೆ ಸಮರ್ಪಣೆ ಮಾಡದೆ ಯಾವ ಭೋಜಕನು ಭೋಜನ ಮಾಡುವನೋ, ಅವನು ಹಾಗೆ ತಿಂದ ಅನ್ನವು ಅವನಿಗೆ ನರಕಪ್ರಾಪ್ತಿಯನ್ನುಂಟುಮಾಡುವುದೇ ವಿನಾ ಶಾಂತಿಪ್ರದವಲ್ಲ.

ನೈವೇದ್ಯಂ ಭೋಜಯೇತ್ತಸ್ಮಾದ್ಭಾಸ್ಕರಸ್ಯ ನರಃ ಸದಾ ।
ಪ್ರಥಮಂ ಯದುಶಾರ್ದೂಲ ತಚ್ಚ ದೇಹವಿಶೋಧನಂ ॥ ೨೭ ॥

ಬ್ರಾಹ್ಮಣಾನಾಂ ಪುರೋಡಾಶೋ ಯಥಾಕಾಯವಿಶೋಧನಃ ।
ಭೋಜಕಾನಾಂ ತಥಾ ವೀರ ನೈವೇದ್ಯಂ ಕಾಯಶೋಧನಂ ॥ ೨೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಸಾಂಬೋಪಾಖ್ಯಾನೇ ಭೋಜಕವರ್ಣನಂ ನಾಮ ಷಟ್‌ಚತ್ವಾರಿಂಶ ದುತ್ತರ ಶತತಮೋಽಧ್ಯಾಯಃ.



---

೨೭. ಆದುದರಿಂದ ಭೋಜಕನು ಸದಾ ಭಾಸ್ಕರನಿಗೆ ನೈವೇದ್ಯವನ್ನು ಸಮರ್ಪಿಸಿದ ಮೇಲೆಯೇ ಅದನ್ನು ಸೇವಿಸಬೇಕು. ಎಲೈ ಯದುವಂಶಶ್ರೇಷ್ಠನೇ! ನೈವೇದ್ಯವಾದ ಅನ್ನವು ದೇಹಶೋಧಕ ವಸ್ತುಗಳಲ್ಲಿ ಮುಖ್ಯವಾದುದು.

೨೮ ಅಯ್ಯಾ ವೀರನೇ! ಬ್ರಾಹ್ಮಣರಿಗೆ ಪುರೋಡಾಶವು ಹೇಗೆ ದೇಹಶೋಧಕವಾದುದೋ ಹಾಗೆಯೇ ಭೋಜಕರಿಗೆ ಸೂರ್ಯನೈವೇದ್ಯವಾದ ವಸ್ತುವು ಕಾಯಶೋಧಕವಾದುದು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಸಾಂಬೋಪಾಖ್ಯಾನದಲ್ಲಿ ಭೋಜಕವರ್ಣನೆಯೆಂಬ ನೂರನಲವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಸಪ್ತಚತ್ವಾರಿಂಶದುತ್ತರಶತತಮೋಽಧ್ಯಾಯಃ

---

॥ ವಾಸುದೇವ ಉವಾಚ ॥

ಅತ್ರ ಪೃಷ್ಟೋ ಯಥಾ ದೇವೋ ಭಾಸ್ಕರೋ ದೇವಪೂಜಿತಃ ।
ಅರುಣೇನ ಮಹಾಬಾಹೋ ಕೇ ಪ್ರಿಯಾ ಭೋಜಕಾಸ್ತಥಾ ॥ ೧ ॥

ಪೂಜಾಯಾಂ ತವ ಕೇ ಯೋಗ್ಯಾಃ ಕೇನ ಯೋಗ್ಯಾ ಭವಂತಿ ಚ ।
ಇತಿ ಪೃಷ್ಟಃ ಸ ಭಗವಾನರುಣೇನ ದಿವಾಕರಃ ।
ಯದುವಾಚ ಮಹಾಬಾಹೋ ತದಿಹೈಕಮನಾಃ ಶೃಣು ॥ ೨ ॥

---

## ನೂರನಲವತ್ತೇಳನೆಯ ಅಧ್ಯಾಯ

೧. ವಾಸುದೇವನು ಹೇಳುತ್ತಾನೆ—ಪ್ರಕಾಶಮಾನನೂ, ದೇವಪೂಜಿತನೂ ಆದ ಭಾಸ್ಕರನನ್ನು ಕುರಿತು ಅರುಣನು ಎಲೈ ಮಹಾಬಾಹುವೇ ! ನಿನಗೆ ಪ್ರಿಯರಾದ ಭೋಜಕರು ಯಾರು ?

೨. ನಿನ್ನ ಪೂಜೆಗೆ ಯಾರು ಯೋಗ್ಯರು ? ಯಾರು ಯೋಗ್ಯರಲ್ಲ? ಅದನ್ನು ಹೇಳು ಎಂಬದಾಗಿ ಕೇಳಿದನು. ಎಲೈ ಮಹಾಬಾಹುವೇ! ಹಾಗೆ ಕೇಳಿದಾಗ ಅವನು ಏನು ಹೇಳಿದನೋ ಅದನ್ನು ನಿನಗೆ ಹೇಳುವೆನು ಒಂದೇ ಮನಸ್ಸಿನಿಂದ ಕೇಳು.

॥ ಭಾಸ್ಕರ ಉವಾಚ ॥

ಪರದಾರಾರ್ ಪರದ್ರವ್ಯಂ ಯೇ ನ ಹಿಂಸಂತಿ ಭೋಜಕಾಃ ।
ತೇ ಪ್ರಿಯಾ ಮಮ ವೈ ನಿತ್ಯಂ ಯೇ ನ ನಿಂದಂತಿ ದೇವತಾಃ ॥ ೩ ॥

ವಾಣಿಜ್ಯಂ ಕೃಷಿ ಸೇವಾಂ ತು ವೇದಾನಾಂ ನಿಂದನಂ ಚ ಯೇ ।
ಕುರ್ವಂತಿ ಭೋಜಕಾ ಜ್ಞೇಯಾಃ ಸರ್ವೇ ತೇ ಮಮ ವೈರಿಣಃ ॥ ೪ ॥

ಯೇಷಾಂ ಭಾರ್ಯಾಸಂಗ್ರಹಣಂ ಕರ್ಷಣಂ ಯೇ ಪ್ರಕುರ್ವತೇ ।
ನೃಪಸೇವಾಂ ಖಗಶ್ರೇಷ್ಠ ವಿಜ್ಞೇಯಾಃ ಪತಿತಾಸ್ತು ತೇ ।
ಭುಂಜಂತೇ ಯೇ ಚ ಶೂದ್ರಾನ್ನಂ ಜ್ಞೇಯಾಸ್ತೇ ಶತ್ರವೋ ಮಮ ॥ ೫ ॥

ಪೂಜಾ ಕೃತಾ ತು ಯಾ ತೈಸ್ತು ತಥಾರ್ಘ್ಯಂ ಚ ಖಗೋತ್ತಮ ।
ಪೂಜಾಂ ತಾಮಥ ಚಾಪ್ಯರ್ಘ್ಯಂ ನಾಹಂ ಗೃಹ್ಣಾಮಿ ಖೇಚರ ॥ ೬ ॥

---

೩. ಭಾಸ್ಕರನು ಹೇಳುತ್ತಾನೆ—ಪರಸ್ತ್ರೀಯರಿಗೂ, ಪರದ್ರವ್ಯಕ್ಕೂ ಯಾವ ಭೋಜಕನು ಆಶೆಪಡುವುದಿಲ್ಲವೋ, ಯಾರು ದೇವತೆಗಳನ್ನು ನಿಂದಿಸುವುದಿಲ್ಲವೋ ಅವರು ಯಾವಾಗಲೂ ನನಗೆ ಪ್ರಿಯರು.

೪. ಯಾವ ಭೋಜಕರು ವ್ಯಾಪಾರದ ಕೆಲಸವನ್ನು ಸೇವಾವೃತ್ತಿಯನ್ನೂ ದೇವನಿಂದೆಯನ್ನೂ ಮಾಡುವರೋ ಅವರೆಲ್ಲರೂ ನನ್ನ ವೈರಿಗಳೆಂದು ತಿಳಿಯಬೇಕು.

೫. ಎಲೈ ಖಗಶ್ರೇಷ್ಠನೇ! ಯಾರು ಭಾರ್ಯಾಸಂಗ್ರಹಣ ಮಾಡಿರುವರೋ, ಯಾರು ಕೃಷಿಕರ್ಮವನ್ನು ಮಾಡುವರೋ, ಯಾರು ರಾಜಸೇವೆಯನ್ನು ಮಾಡುತ್ತಾರೋ, ಅವರು ಪತಿತರೆಂದೂ, ಯಾರು ಶೂದ್ರಾನ್ನವನ್ನು ಭೋಜನ ಮಾಡುತ್ತಾರೋ ಅವರು ನನ್ನ ಶತ್ರುಗಳು ಎಂದೂ ತಿಳಿಯಬೇಕು.

೬. ಎಲೈ ಖಗೋತ್ತಮನೇ! ಅವರು ಯಾವ ಪೂಜೆಯನ್ನು ಮಾಡುತ್ತಾರೋ ಆ ಪೂಜೆಯನ್ನೂ, ಯಾವ ಅರ್ಘ್ಯವನ್ನು ಕೊಡುತ್ತಾರೋ ಆ ಅರ್ಘ್ಯವನ್ನೂ ನಾನು ಸ್ವೀಕರಿಸುವುದಿಲ್ಲ.

ಯ ಏತೇ ಕಥಿತಾ ವೀರ ಯೇ ಚ ಶಂಖವಿವರ್ಜಿತಾಃ ।
ನಿರ್ಮಾಲ್ಯಂ ಯೇ ಮದೀಯಂ ತು ನೈವೇದ್ಯಂ ಕುಂಕುಮಂ ತಥಾ ॥ ೭ ॥

ಶೂದ್ರಾಯ ಯೇ ಪ್ರಯಚ್ಛಂತಿ ವಿಕ್ರೀಣಂತಿ ಚ ಯೇ ಖಗ ।
ಯಚ್ಛಂತಿ ಯೇ ಚ ವೈಶ್ಯಾಯ ಭೋಜಕಾ ಮೇ ನ ತೇ ಪ್ರಿಯಾಃ ॥ ೮ ॥

ಯಜಂತೇ ಯೇ ಚ ಸಾವಿತ್ರೀಂ ಮಹಾಶ್ವೇತಾಂ ಚ ಗೋಪತೇಃ ।
ಯೇ ನ ಜಾನಂತಿ ಮೇ ಮುದ್ರಾಂ ಕಿಂಕರಾಣಾಂ ಚ ನಾಮತಃ ॥ ೯ ॥

ಯ ಏತೇ ಕಥಿತಾ ವೀರ ಭೋಜಕಾಸ್ತೇ ಮಯಾ ಖಗ ।
ನೈತೇ ಪೂಜಯಿತುಂ ಶಕ್ತಾ ಯೇ ಪ್ರಿಯಾ ಮಮ ಭೋಜಕಾಃ ।
ತಾನ್ ಶೃಣುಷ್ವ ಖಗಶ್ರೇಷ್ಠ ಭೂತ್ವಾ ಚೈಕಾಗ್ರಮಾನಸಃ ॥ ೧೦ ॥

ದೇವದ್ವಿಜಮನುಷ್ಯಾಣಾಂ ಪಿತೄಣಾಂ ಚಾಪಿ ಪೂಜಕಾಃ ।
ತೇ ಪ್ರಿಯಾ ಮಮ ವೈ ನಿತ್ಯಂ ಶಕ್ತ್ಯಾಃ ಪೂಜಯಿತುಂ ರವಿಂ ॥ ೧೧ ॥

---

೭. ಈಗ ಹೇಳಿದ ಪ್ರಕಾರದವರಲ್ಲದೆ ಯಾರು ಕೈಯ್ಯಲ್ಲಿ ಶಂಖವನ್ನು ಹಿಡಿದಿರುವುದಿಲ್ಲವೋ, ಯಾರು ನನ್ನ ನಿರ್ಮಾಲ್ಯ, ನನ್ನ ನೈವೇದ್ಯ, ಮತ್ತು ಕುಂಕುಮ

೮. ಇವೇ ಮೊದಲಾದುವನ್ನು ಅನಧಿಕಾರಿಗಳಿಗೆ ಕೊಡುತ್ತಾರೋ ಅಥವಾ ಆ ಪ್ರಸಾದವನ್ನು ಯಾರು ವ್ಯಾಪಾರಿಗಳಿಗೆ ಬೆಲೆಗೆ ಮಾರುತ್ತಾರೋ ಆ ಭೋಜಕರು ನನಗೆ ಪ್ರಿಯರಲ್ಲ.

೯. ಗಾಯತ್ರಿಯನ್ನು ಪೂಜಿಸುತ್ತಿದ್ದರೂ ಮತ್ತು ಸೂರ್ಯನ ತ್ರಿಚಮಂತ್ರವನ್ನು ಜಪಿಸುತ್ತಿದ್ದರೂ ಸೂರ್ಯಮುದ್ರೆಯನ್ನೂ, ಸೂರ್ಯಕಿಂಕರ ಮುದ್ರೆಯನ್ನೂ, ಯಾರು ತಿಳಿದಿಲ್ಲವೋ ಅವರೂ, ನಾಮಮಾತ್ರಕ್ಕೆ ಭೋಜಕರೆನಿಸಿಕೊಂಡು ತದ್ಧರ್ಮಾಚರಣೆ ಮಾಡದೆ ಇರುವವರಾಗಿ ಇವರು ಪೂಜಾರ್ಹರಲ್ಲ.

೧೦. ನನಗೆ ಪ್ರಿಯರಾದ ಭೋಜಕರ ಲಕ್ಷಣವನ್ನು ಹೇಳುತ್ತೇನೆ ಏಕಾಗ್ರಚಿತ್ತನಾಗಿ ಕೇಳು.

೧೧. ನಿತ್ಯವೂ ದೇವತೆಗಳನ್ನೂ, ದ್ವಿಜರೇ ಮೊದಲಾದವರನ್ನೂ, ಪಿತೃಗಳನ್ನೂ, ಪೂಜಿಸತಕ್ಕವರು ಎಂದರೆ (ಪಂಚಯಜ್ಞಗಳನ್ನು ಮಾಡುವವರೂ) ಮತ್ತು ಸೂರ್ಯನನ್ನು ಪೂಜಿಸಲು ಶಕ್ತರಾದವರೂ ನನಗೆ ಯಾವಾಗಲೂ ಪ್ರಿಯರು.

ಯೇಷಾಂ ಮುಂಡಂ ಶಿರೋ ನಿತ್ಯಂ ಯೇಚಾಭ್ಯಂಗ ಸಮನ್ವಿತಾಃ ।
ವಾದಯಂತಿ ಚ ಯೇ ಶಂಖಂ ದಿವ್ಯಾಸ್ತೇ ಭೋಜಕಾ ಮತಾಃ ॥ ೧೨ ॥

ತ್ರಿಕಾಲಂ ಯೇ ಚ ಮಾಂ ನಿತ್ಯಂ ಸುಸ್ನಾತಾಃ ಕ್ರೋಧವರ್ಜಿತಾಃ ।
ಪೂಜಯಂತಿ ಖಗಶ್ರೇಷ್ಠ ತೇ ಪ್ರಿಯಾ ಮಮ ಭೋಜಕಾಃ ॥ ೧೩ ॥

ವಾರೇ ಮದೀಯೇ ನಕ್ತಂ ತು ಷಷ್ಠ್ಯಾಂ ಯೇ ಚ ಪ್ರಕುರ್ವತೇ ।
ಸಪ್ತಮ್ಯಾಮುಪವಾಸಂ ತು ತಥಾ ಸಂಕ್ರಮಣೇ ಮಮ ॥ ೧೪ ॥

ದಿವ್ಯಾಸ್ತೇ ಬ್ರಾಹ್ಮಣಾ ಜ್ಞೇಯಾಃ ಭೋಜಕಾ ಮಮ ಪೂಜಕಾಃ ।
ಪೂಜಯಂತಿ ಚ ಯೇ ವಿಪ್ರಾನ್ ಮದ್ಭಕ್ತಾ ಮತ್ಪರಾಯಣಾಃ ।
ತೇ ಪ್ರಿಯಾಃ ಸತತಂ ಮಹ್ಯಂ ಭೋಜಕಾ ಗರುಡಧ್ವಜ ॥ ೧೫ ॥

ಮಯಿ ಭಕ್ತಿಂ ನ ಕುರ್ವಂತಿ ಬ್ರಾಹ್ಮಣಾನ್ ಪೂಜಯಂತಿ ನೋ ।
ನ ತೇ ಪೂಜ್ಯಾ ನ ವಂದ್ಯಾಶ್ಚ ಯೇ ದ್ವಿಷಂತಿ ಚ ಮಾಂ ಸದಾ ॥ ೧೬ ॥

---

೧೨. ತಲೆಯನ್ನು ಯಾವಾಗಲೂ ಮುಂಡನ ಮಾಡಿಸಿಕೊಂಡವರೂ, ನಿತ್ಯವೂ ಅಭ್ಯಂಗವನ್ನು ಮಾಡಿಕೊಳ್ಳುವವರೂ, ಶಂಖವನ್ನು ವಾದನ ಮಾಡುವವರೂ ದಿವ್ಯ ಭೋಜಕರೆನಿಸುವರು.

೧೩. ಎಲೈ ಪಕ್ಷಿಶ್ರೇಷ್ಠನೇ! ನಿತ್ಯವೂ ತ್ರಿಕಾಲಗಳಲ್ಲೂ ಸ್ನಾನಮಾಡಿ ಕ್ರೋಧ ರಹಿತರಾಗಿ ನನ್ನನ್ನು ಪೂಜಿಸಿದವರು ನನಗೆ ಪ್ರಿಯರಾದ ಭೋಜಕರು.

೧೪. ಭಾನುವಾರದದಿನ ನಕ್ತಭೋಜನ ಮಾಡುತ್ತಾ ಷಷ್ಠಿ ಸಪ್ತಮಿ ಮತ್ತು ಸಂಕ್ರಮಣಗಳಲ್ಲಿ ಉಪವಾಸಮಾಡುತ್ತಾ ನನ್ನ ಪೂಜಾನಿರತರಾದವರು ದಿವ್ಯ ಬ್ರಾಹ್ಮಣರು.

೧೫. ಎಲೈ ಗರುಡಧ್ವಜನೇ! ಯಾರು ನನ್ನ ಭಕ್ತರೂ ನನ್ನಲ್ಲಿ ಆಸಕ್ತರೂ ಆಗಿ ದ್ವಿಜರನ್ನು ಪೂಜಿಸುತ್ತಾರೋ ಅಂಥಾ ಭೋಜಕರು ಯಾವಾಗಲೂ ನನಗೆ ಪ್ರಿಯರು.

೧೬. ಯಾರು ನನ್ನಲ್ಲಿ ಭಕ್ತಿಯನ್ನು ಮಾಡುವುದಿಲ್ಲವೋ, ವಿಪ್ರರನ್ನೂ ಪೂಜಿಸುವುದಿಲ್ಲವೋ, ಯಾರು ನನ್ನನ್ನು ಸದಾ ದ್ವೇಷಿಸುತ್ತಾರೋ ಅವರು ಪೂಜ್ಯರೂ ಅಲ್ಲ ವಂದನಾರ್ಹರೂ ಅಲ್ಲ.

ಯೇ ಕುರ್ವಂತಿ ಮಹಾಯಜ್ಞಾನ್ ಭೋಜಕಾ ಗರುಡಾಗ್ರಜ ।
ಪಿತೃದೇವಮನುಷ್ಯಾಣಾಂ ಪೂಜಾರ್ಥಂ ಸತತಂ ಖಗ ॥ ೧೭ ॥

ಪ್ರಿಯಾಸ್ತೇ ಸತತಂ ವೀರ ಭೋಜಕಾನಾಂ ತಥೋತ್ತಮಾಃ ।
ತಸ್ಮಾತ್ಸರ್ವಪ್ರಯತ್ನೇನ ಪಂಚಯಜ್ಞಾನ್ ಪ್ರವರ್ತಯೇತ್ ॥ ೧೮ ॥

ಏಕಭುಕ್ತೇನ ಯೇ ನಿತ್ಯಂ ವರ್ತಂತೇ ಕಶ್ಯಪಾತ್ಮಜ ।
ಭುಂಜತೇ ನ ಚ ಯೋ ರಾತ್ರೌ ಭೋಜಕಾಸ್ತೇ ಪ್ರಿಯಾ ಮಮ ॥ ೧೯ ॥

ಮಮ ವಾರೇ ಚ ಯೇ ವೀರ ತಥಾ ಷಷ್ಠ್ಯಾಂ ಚ ಕೇಶವ ।
ನ ರಾತ್ರೌ ಭುಂಜತೇ ಪ್ರಾಜ್ಞಾಃ ಮತ್ಪ್ರಿಯಾಸ್ತೇ ಮಗಾಃ ಖಗ ॥ ೨೦ ॥

ಪ್ರತಿಸಂವತ್ಸರಂ ಯೇ ತು ಭೋಜಕಾ ಗರುಡಾಗ್ರಜ ।
ನ ಯಚ್ಛಂತಿ ಪಿತುರ್ಮಾತುಃ ದಿವಸೇ ತೇ ನ ಮೇ ಪ್ರಿಯಾಃ ॥ ೨೧ ॥

---

೧೭. ಎಲೈ ಗರುಡಾಗ್ರಜನೇ! ಯಾವ ಭೋಜಕರು ಪಿತೃಯಜ್ಞ, ದೇವಯಜ್ಞ, ಮನುಷ್ಯಯಜ್ಞ,ಮುಂತಾದ ಮಹಾಯಜ್ಞಗಳನ್ನು ಮಾಡುತ್ತಾರೋ ಅವರು ಯಾವಾಗಲೂ ಭೋಜಕೋತ್ತಮರು ಮತ್ತು ನನಗೆ ಪ್ರಿಯರು ಎನಿಸುವರು.

೧೮. ಆದುದರಿಂದ ಭೋಜಕರು ಸರ್ವಪ್ರಯತ್ನದಿಂದಲೂ ಪಂಚಯಜ್ಞಗಳನ್ನು ನಡೆಯಿಸಬೇಕು.

೧೯. ಯಾರು ಯಾವಾಗಲೂ ಏಕಭುಕ್ತವ್ರತವನ್ನು ಮಾಡುತ್ತಾರೋ ಯಾರು ರಾತ್ರಿಭೋಜನಮಾಡುವುದಿಲ್ಲವೋ ಅಂಥ ಭೋಜಕರು ನನಗೆ ಪರಮಪ್ರಿಯರು.

೨೦. ಎಲೈ ವೀರನಾದ ಖಗನೇ! ಯಾರು ಆದಿತ್ಯವಾರದಲ್ಲಿ ಮತ್ತು ಷಷ್ಠಿಯಲ್ಲಿ ರಾತ್ರಿಭೋಜನ ಮಾಡುವುದಿಲ್ಲವೋ ಅವರು ನನಗೆ ಪ್ರಿಯರು.

೨೧. ಎಲೈ ಗರುಡಾಗ್ರಜನೇ! ಯಾವ ಭೋಜಕರು ಪ್ರತಿವರ್ಷವೂ ತಂದೆತಾಯಿಗಳಿಗೆ ಅವರ ಮೃತತಿಥಿಯಲ್ಲಿ ಸತ್ಕಾರವನ್ನು ಕೊಡುವುದಿಲ್ಲವೋ ಅವರು ನನಗೆ ಪ್ರಿಯರಲ್ಲ.

ಇತ್ಥಂಭೂತಾ ಭೋಜಕಾ ಯೇ ಮಾಘಮಾಸೇ ಚ ಸಪ್ತಮೀ ।
ಪುಷ್ಪಾಣಾಂ ಕರವೀರಾಣಿ ತಥಾ ರಕ್ತಂ ಚ ಚಂದನಂ ॥ ೨೨ ॥

ವಾಚಕೋ ಬ್ರಾಹ್ಮಣಾನಾಂ ತು ನೈವೇದ್ಯಂ ಮೋದಕಾಸ್ತಥಾ ।
ಘೃತಾಹುತ್ಯೋ ಗುಗ್ಗುಳಶ್ಚ ಕ್ಷೀರೇಣ ಸ್ನಪನಂ ತಥಾ ॥ ೨೩ ॥

ವಾದ್ಯಾನಾಂ ಶಂಖಶಬ್ದಶ್ಚ ನೃತ್ಯಂ ನಾಟ್ಯಂ ಮತಂ ಮಮ ।
ಪಂಚವರ್ಣಾಃ ಪತಾಕಾಸ್ತು ಶ್ವೇತಂ ಛತ್ರಂ ಚ ಮೇ ಪ್ರಿಯಂ ॥ ೨೪ ॥

ನಾನ್ಯವರ್ಣೈಃ ಕೃತಾ ಪೂಜಾ ತಥಾ ಪ್ರೀಣಾತಿ ವೈ ಖಗಂ ।
ಯಥಾಕೃತಾ ಭೋಜಕೇನ ಪೂಜಾ ಪ್ರೀಣಾತಿ ಮಾಂ ಸದಾ
ನಾನ್ಯದೇವಪ್ರತಿಷ್ಠಾ ತು ಕರ್ತವ್ಯಾ ಭೋಜಕೇನ ತು । ॥ ೨೫ ॥

॥ ವಾಸುದೇವ ಉವಾಚ ॥

ಇತ್ಯುಕ್ತ್ವಾ ಭಗವಾನ್ ದೇವಶ್ಚಾರುಣಾಯ ಪುರಾನಘ
ಲಕ್ಷಣಂ ಭೋಜಕಾನಾಂ ತು ತತೋ ಮೇರುಮಥಾಕ್ರಮತ್ । ॥ ೨೬ ॥

---

೨೨. ಮಾಘಮಾಸದಲ್ಲಿ ಸಪ್ತಮಿಯು ಹೇಗೆ ಉತ್ತಮತಿಥಿಯೋ, ಪುಷ್ಪಗಳಲ್ಲಿ ಕಣಿಗಿಲೆ ಹೂವುಗಳು ಹೇಗೆ ಉತ್ತಮವೋ, ಗಂಧದಲ್ಲಿ ರಕ್ತಚಂದನವು ಸೂರ್ಯಪೂಜೆಗೆ ಹೇಗೆ ಉತ್ತಮವೋ, ಹಾಗೆಯೇ ಬ್ರಾಹ್ಮಣರಲ್ಲಿ ಈ ನಡವಳಿಕೆಯುಳ್ಳ ಭೋಜಕರು ಉತ್ತಮರು.

೨೩. ನೈವೇದ್ಯವಸ್ತುಗಳಲ್ಲಿ ಮೋದಕಗಳು, ಆಹುತಿಗಳಲ್ಲಿ ಆಜ್ಯಾಹುತಿಗಳು, ಧೂಪದಲ್ಲಿ ಗುಗ್ಗುಳಧೂಪ, ಅಭಿಷೇಕದಲ್ಲಿ ಕ್ಷೀರದಿಂದ ಅಭಿಷೇಕಮಾಡುವುದು ಇವು ಶ್ರೇಷ್ಠ.

೨೪. ವಾದ್ಯಗಳಲ್ಲಿ ಶಂಖಧ್ವನಿಯೂ ನೃತ್ಯಗಳಲ್ಲಿ ನಾಟ್ಯವೂ ನನಗೆ ಇಷ್ಟವು ಮತ್ತು ಐದುಬಣ್ಣದ ಬಾವುಟಗಳೂ ಶ್ವೇತಚ್ಛತ್ರಿಯೂ ನನಗೆ ಪ್ರಿಯವಾದುವು.

೨೫. ಎಲೈ ಖಗನೇ! ಭೋಜಕನು ಮಾಡಿದ ಪೂಜೆಯಿಂದ ನಾನು ತೃಪ್ತನಾಗುವ ಮಟ್ಟಿಗೆ ಬೇರೆಯವರು ಮಾಡಿದ ಪೂಜೆಯಿಂದ ನನಗೆ ತೃಪ್ತಿಯಾಗುವುದಿಲ್ಲ. ಭೋಜಕನು ಸೂರ್ಯದೇವನ ವಿನಾ ಬೇರೆ ದೇವರ ಪ್ರತಿಷ್ಠೆಯನ್ನೂ ಮಾಡಬಾರದು ಎಂದನು.

೨೬. ವಾಸುದೇವನು ಹೇಳುತ್ತಾನೆ—ಎಲೈ ನಿರ್ದೋಷಿಯಾದ ಕೃತವರ್ಮನೇ! ಭಗವಂತನಾದ ಸೂರ್ಯದೇವನು ಪೂರ್ವದಲ್ಲಿ ಅರುಣನಿಗೆ ಹೀಗೆ ಭೋಜಕರ ಲಕ್ಷಣವನ್ನು ಹೇಳಿ ಆ ಮೇಲೆ ಮೇರುವನ್ನಾಕ್ರಮಿಸಿದನು.

ಏವಂ ಭೋಜ್ಯಾಃ ಭೋಜಕಾಸ್ತು ನ ಚಾಭೋಜ್ಯಾಃ ಕದಾಚನ ।
ಅನುಷ್ಠಾನವಿಹೀನಾ ಯೇ ನ ತೇ ಭೋಜ್ಯಾಸ್ತು ಭೋಜಕಾಃ ॥ ೨೭ ॥

ಭೌಮಾಸ್ತು ಬ್ರಾಹ್ಮಣಾ ಯೇ ತು ಅನುಷ್ಠಾನವಿವರ್ಜಿತಾಃ ।
ತೇಪ್ಯಭೋಜ್ಯಾ ಭವಂತೀಹ ವಿಕರ್ಮಸ್ಥಾ ವಿಶೇಷತಃ ॥ ೨೮ ॥

ನಾಸ್ತಿಪೂಜ್ಯತಮಂ ಕಿಂಚಿತ್ ಮಾಂಗಲ್ಯಂ ಪಾವನಂ ತಥಾ ।
ಚತುರ್ಣಾಮಿಹ ವರ್ಣಾನಾಂ ಮುಕ್ತ್ವಾ ಭೋಜಕಮುತ್ತಮಂ ॥ ೨೯ ॥

ಪೂಜಿತೇ ಭೋಜಕೇ ವೀರ ಆದಿತ್ಯಃ ಪೂಜಿತೋ ಭವೇತ್ ।
ಭುಂಜತೇ ಯಸ್ಯ ವೈ ಗೇಹೇ ಭೋಜಕಾ ಯದುನಂದನ ।
ತಸ್ಯ ಭುಂಕ್ತೇ ಸ್ವಯಂ ಭಾನುಃ ಬ್ರಹ್ಮವಿಷ್ಣುಸ್ತಥಾಶಿವ ॥ ೩೦ ॥

ಯಥೇಹ ಸರ್ವಸತ್ವಾನಾಂ ಪ್ರಧಾನತ್ವೇ ಸ್ಥಿತೋ ರವಿಃ ।
ತಥೇಹ ಸರ್ವಪೂಜ್ಯಾನಾಂ ಭೋಜಕಃ ಪೂಜ್ಯ ಉಚ್ಯತೇ ॥ ೩೧ ॥

---

೨೭–೨೮. ಇದನ್ನೆಲ್ಲಾ ಪರಿಶೀಲಿಸಿ ಸರಿಯಾದ ಭೋಜಕರಿಗೆ ಭೋಜನ ಮಾಡಿಸಬೇಕು ಒಂದು ಬಾರಿಯೂ ಇದನ್ನು ಅತಿಕ್ರಮಿಸಬಾರದು. ಈ ಅನುಷ್ಠಾನರಹಿತರಾದ ಇತರ ಬ್ರಾಹ್ಮಣರು ಭೋಜ್ಯಾರ್ಹರಲ್ಲ. ಅನುಷ್ಠಾನದಿಂದ ವಿವರ್ಜಿತರಾದವರೂ, ಮತ್ತು ಭೌಮಬ್ರಾಹ್ಮಣರೂ ಭೋಜ್ಯರಾಗಲು ಅರ್ಹರಲ್ಲ. ಅವರಲ್ಲೂ ಕರ್ಮಾನುಷ್ಠಾನರಹಿತರು, ಮತ್ತು ವಿರುದ್ಧ ಕರ್ಮಾಚರಣ ಮಾಡುವರು ಶುದ್ಧಾಂಗವಾಗಿ ಅಭೋಜ್ಯರು

೨೯. ನಾಲ್ಕುವರ್ಣದವರಲ್ಲೂ ಮಂಗಳಕರನೂ, ಪಾವನನೂ ಆದ ಉತ್ತಮ ಭೋಜಕನನ್ನು ಬಿಟ್ಟರೆ ಪೂಜ್ಯತಮರು ಬೇರೆ ಯಾರೂ ಇಲ್ಲ.

೩೦. ಎಲೈ ವೀರನೇ! ಭೋಜಕನಿಗೆ ಪೂಜೆಮಾಡಿದರೆ ಸೂರ್ಯನಿಗೇ ಪೂಜೆ ಮಾಡಿದ ಹಾಗಾಯಿತು. ಯಾರ ಮನೆಯಲ್ಲಿ ಭೋಜಕರು ಭೋಜನಮಾಡುತ್ತಾರೋ ಅವರ ಮನೆಯಲ್ಲಿ ಸೂರ್ಯನೇ ಸಾಕ್ಷಾತ್ತಾಗಿ ಭೋಜನಮಾಡಿದಂತೆ ಭಾವಿಸಬೇಕು. ಬ್ರಹ್ಮ, ವಿಷ್ಣು, ಶಿವ ಇವರೂ ಭುಜಿಸಿದಂತೆಯೇ ಆಗುವುದು.

೩೧. ಸೂರ್ಯನು ಹೇಗೆ ಸರ್ವಸತ್ವಗಳಿಗೂ ಪ್ರಧಾನನಾಗಿದ್ದಾನೋ ಹಾಗೆ ಭೋಜಕನು ಪೂಜ್ಯರಲ್ಲೆಲ್ಲಾ ಪೂಜ್ಯನೆನಿಸುತ್ತಾನೆ.

ತೀರ್ಥಾನಾಂ ತು ಕುರುಕ್ಷೇತ್ರಂ ಸರಸಾಂ ಸಾಗರೋ ಯಥಾ ।
ತಥಾ ಪೂಜ್ಯತಮೋ ಜ್ಞೇಯಃ ಪೂಜ್ಯಾನಾಂ ಭೋಜಕೋ ವಿಭೋ ।
ವಿಶೇಷೇಣ ಚ ಸೌರಾಣಾಂ ಭೋಜಕಃ ಪೂಜ್ಯ ಉಚ್ಯತೇ ॥ ೩೨ ॥

ಭರ್ತಾ ಪೂಜ್ಯೋ ಯಥಾ ಸ್ತ್ರೀಣಾಂ ಶಿಷ್ಯಾಣಾಂ ಚ ಯಥಾ ಗುರುಃ ।
ಭೋಜಕಸ್ತು ತಥಾ ಪೂಜ್ಯಃ ಸುರಾಣಾಂ ಹೃದಿಕಾತ್ಮಜ ॥ ೩೩ ॥

ಯಸ್ಯ ಭುಂಕ್ತೇ ಭೋಜಕಸ್ತು ಗಂಧಪುಷ್ಪಾದಿನಾರ್ಚಿತಃ ।
ತಸ್ಯ ಭುಂಕ್ತೇ ಸ್ವಯಂ ಭಾನುಃ ಪಿತರೋ ದೇವತಾಸ್ತದಾ ॥ ೩೪ ॥

ಏವಂ ಪೂಜ್ಯಾಸ್ತಥಾ ಭೋಜ್ಯಂ ಭೋಜಕಾ ಹೃದಿಕಾತ್ಮಜ ।
ಯೇ ಸೌರಾ ಭೋಜಕಸ್ಯಾನ್ನಂ ಭುಂಜತೇ ನಿರ್ವಿಕಲ್ಪಿತಃ ।
ತೇ ಸರ್ವೇ ಪಾಪನಿರ್ಮುಕ್ತಾ ಯಾಂತಿ ಸೂರ್ಯಸಲೋಕತಾಂ ॥ ೩೫ ॥

---

೩೨. ತೀರ್ಥಗಳಲ್ಲಿ ಕುರುಕ್ಷೇತ್ರವು ಹೇಗೋ, ಸರಸ್ಸುಗಳಲ್ಲಿ ಸಾಗರವು ಹೇಗೋ, ಹಾಗೆ ಭೋಜಕನು ಪೂಜ್ಯರಲ್ಲಿ ಪೂಜ್ಯತಮನಾಗಿರುವನು.

೩೩. ಸೂರ್ಯಭಕ್ತರಿಗೆ ಭೋಜಕನು ವಿಶೇಷವಾಗಿ ಪೂಜ್ಯನೆನಿಸುವನು. ಸ್ತ್ರೀಯರಿಗೆ ಪತಿಯು ಹೇಗೆ ಪೂಜ್ಯನೋ, ಶಿಷ್ಯರಿಗೆ ಗುರು ಹೇಗೆ ಪೂಜ್ಯನೋ ಹಾಗೆ ಭೋಜಕನು ಸೌರರಿಗೆ ಪೂಜ್ಯನು.

೩೪. ಅಯ್ಯಾ ಕೃತವರ್ಮ! ಭೋಜಕನು ಯಾವನ ಮನೆಯಲ್ಲಿ ಗಂಧಪುಷ್ಪಾದಿಗಳಿಂದ ಅಭ್ಯರ್ಚಿತನಾಗಿ ಭುಜಿಸುತ್ತಾನೋ ಅವನ ಮನೆಯಲ್ಲಿ ಸೂರ್ಯನೇ ಭುಜಿಸುವನಲ್ಲದೆ ಪಿತೃಗಳು ದೇವತೆಗಳೂ ಭುಜಿಸಿದಂತೆ ಆಗುವುದು.

೩೫. ಅಯ್ಯಾ ಕೃತವರ್ಮನೇ! ಈ ರೀತಿ ಭೋಜಕರೂ ಅವರಿಗೆ ಭೋಜನ ಮಾಡಿಸಿದವರೂ ಇಬ್ಬರೂ ಪೂಜ್ಯರೇ. ಭೋಜಕರು ಕೊಟ್ಟ ಅನ್ನವನ್ನು ಹಿಂಜರಿಯದೆ ಸೇವಿಸಿದ ಸೌರರೂ ಪೂಜ್ಯರು. ಇವರೆಲ್ಲರೂ ಪಾಪದಿಂದ ಬಿಡುಗಡೆ ಹೊಂದಿ ಸೂರ್ಯಲೋಕಕ್ಕೆ ಹೋಗುವರು.

**ಕಥಿತೋ ಯತ್ರ ಯೋ ಭೋಜ್ಯೋ ಯಥಾ ಭೋಜ್ಯಃ ಸ ವರ್ಜಿತಾ ।**
**ಅಥ ಕಿಂ ಬಹುನೋಕ್ತೇನ ಶ್ರೂಯತಾಂ ವಚನಂ ಮಮ ॥ ೩೬ ॥**

**ನಾಸ್ತಿ ವೇದಾತ್ಪರಂ ಶಾಸ್ತ್ರಂ ನಾಸ್ತಿ ಗಂಗಾಸಮಾ ಸರಿತ್ ।**
**ಅಶ್ವಮೇಧಸಮಂ ಪುಣ್ಯಂ ನಾಸ್ತಿಪುತ್ರಸಮಂ ಸುಖಂ ॥ ೩೭ ॥**

**ನಾಸ್ತಿ ಭಾನುಸಮೋದೇವೋ ನಾಸ್ತಿ ಮಾತೃಸಮಾ ಗತಿಃ ।**
**ಯಥೈತಾನಿ ಸಮಸ್ತಾನಿ ಉತ್ತಮಾನಿ ಯದೂತ್ತಮ ।**
**ತಥೋತ್ತಮೋ ಭೋಜಕಸ್ತು ಸಂಪ್ರೋಕ್ತೋ ಭಾಸ್ಕರೇಣ ತು ॥ ೩೮ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಭೋಜಕಲಕ್ಷಣ ವಣನಂ ನಾಮಸಪ್ತಚತ್ವಾರಿಂಶದುತ್ತರ ಶತತಮೋಽಧ್ಯಾಯಃ.**



೩೬. ಯಾರು ಯಾರಲ್ಲಿ ಭೋಜನಮಾಡಬಹುದು? ಇನ್ನು ಯಾರಿಗೆ ಭೋಜನಮಾಡಬಾರದು ಎಂಬುದನ್ನು ಹೇಳಿಆಯಿತು. ಹೆಚ್ಚಾಗಿ ಹೇಳುವುದೇನು! ಒಟ್ಟಿನಲ್ಲಿ ನನ್ನ ಮಾತನ್ನು ಲಾಲಿಸು.

೩೭. ವೇದಕ್ಕಿಂತ ಮಿಗಿಲಾದ ಶಾಸ್ತ್ರವಿಲ್ಲ, ಗಂಗೆಗಿಂತ ಪವಿತ್ರವಾದ ನದಿಯಿಲ್ಲ ಅಶ್ವಮೇಧಯಜ್ಞದಿಂದ ಲಭಿಸುವ ಪುಣ್ಯಕ್ಕೆ ಸಮನಾದ ಪುಣ್ಯವಿಲ್ಲ, ಪುತ್ರಮುಖಾವಲೋಕನಕ್ಕಿಂತ ಹೆಚ್ಚು ಸುಖವಿಲ್ಲ, ತಾಯಿಗೆ ಸಮನಾದ ಹಿತವರಿಲ್ಲ.

೩೮. ಸೂರ್ಯನಿಗೆ ಸಮನಾದ ದೇವರಿಲ್ಲ. ಅಯ್ಯಾ ಯದುಶ್ರೇಷ್ಠನೇ ! ಈಗ ನಿರೂಪಿಸಿದ ಎಲ್ಲವೂ ಆವರ್ಗದಲ್ಲಿ ಉತ್ತಮವಾದುವುಗಳೇ! ಹಾಗೆಯೇ ಭೋಜಕನೂ ಶ್ರೇಷ್ಠನು ಎಂಬದಾಗಿ ಸೂರ್ಯದೇವನೇ ನಿರೂಪಿಸಿದ್ದಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಬ್ರಾಹ್ಮಪರ್ವದಲ್ಲಿ ಭೋಜಕ ಲಕ್ಷಣವನ್ನು ತಿಳಿಸುವ ನೂರನಲವತ್ತೇಳನೆಯ ಅಧ್ಯಾಯ ಮುಗಿದುದು.

